॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



॥ ಶ್ರೀ ರೇಣುಕ ಗೀತಾಮೃತಂ ಪೀತ್ವಾ । ಪುನರ್ಜನ್ಮ ನ ವಿದ್ಯತೇ ॥

॥ ಸತ್ಯಮೇವೋದ್ಧರಾಮ್ಯಹಂ ॥

# ಶ್ರೀ ಸಿದ್ಧಾಂತಶಿಖಾಮಣಿ

**ಶ್ರೀ ವೇದಾಗಮೋಕ್ತ**

ಶಿವಾದ್ವೈತ ಸಿದ್ಧಾಂತದ ಹೃದಯ ತರಂಗವೆಂಬ ದಿವ್ಯ ಕೃತಿರತ್ನ

ಈ ಕೃತಿಯಿಂದ ಆಯ್ದ ಕೆಲವು ಶ್ಲೋಕಗಳಿಗೆ ಸರಳ, ಸುಂದರ, ಅರ್ಥಗರ್ಭಿತ, ಕನ್ನಡ ಸಂಕ್ಷಿಪ್ತ ವ್ಯಾಖ್ಯಾನ ಸಹಿತ

ವಿರಚಿತ :

ರೋರತ್ನ ಟಿ. ಬಿ. ಬಸವರಾಜಯ್ಯ

ಂಗಳೂರು ೫೬೦ ೦೦೫



ಮುಖ್ಯ ನಿಲಯಂ । ಹೃದ್ಯಂ ಪ್ರಪದ್ಯೇಽನಿಶಂ ॥
ಭವೇಲ್ಲಿಂಗಂ । ಲಿಂಗ ಮಧ್ಯೇ ಭವೇನ್ಮಂತ್ರಂ ॥
ಮಂತ್ರಲಿಂಗ ದ್ವಯೋ ರೈಕ್ಯಂ । ಇಷ್ಟ ಲಿಂಗಂತು ಶಾಂಕರೀ ॥

ಮುದ್ರಕರು :

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

1992-93

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



॥ ಶ್ರೀ ರೇಣುಕ ಗೀತಾಮೃತಂ ಪೀತ್ವಾ । ಪುನರ್ಜನ್ಮ ನ ವಿದ್ಯತೇ ॥

# ಶ್ರೀ ಸಿದ್ಧಾಂತಶಿಖಾಮಣಿ

ಶ್ರೀ ವೇದಾಗಮೋಕ್ತ

ಶಿವಾದ್ವೈತ ಸಿದ್ಧಾಂತದ ಹೃದಯ ತರಂಗವೆಂಬ ದಿವ್ಯ ಕೃತಿರತ್ನ

ಈ ಕೃತಿಯಿಂದ ಆಯ್ದ ಕೆಲವು ಶ್ಲೋಕಗಳಿಗೆ ಸರಳ, ಸುಂದರ, ಅರ್ಥಗರ್ಭಿತ, ಸಂಕ್ಷಿಪ್ತ ಕನ್ನಡ ವ್ಯಾಖ್ಯಾನ ಸಹಿತ


ವಿರಚಿತ :

ಆಧ್ಯಾತ್ಮಿಕ ಶಿರೋರತ್ನ ಟಿ. ಬಿ. ಬಸವರಾಜಯ್ಯ

ಬೆಂಗಳೂರು-೫೬೦ ೦೦೫


ಶ್ರೀ ಲಿಂಗಂ ಶಿವತತ್ವ ಮುಖ್ಯ ನಿಲಯಂ । ಹೃದ್ಯಂ ಪ್ರಪದ್ಯೇನಿಶಂ ॥

ಮಂತ್ರ ಮಧ್ಯೇ ಭವೇಲ್ಲಿಂಗಂ । ಲಿಂಗ ಮಧ್ಯೇ ಭವೇನ್ಮಂತ್ರಂ ॥

ಮಂತ್ರಲಿಂಗ ದ್ವಯೋ ರೈಕ್ಯಂ । ಇಷ್ಟ ಲಿಂಗಂತು ಶಾಂಕರೀ ॥


ಮುದ್ರಕರು :

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

1992-93

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



॥ ನಮಾಮಿ ಶ್ರೀ ವಿಘ್ನೇಶ್ವರ ಪಾದ ಪಂಕಜಂ ॥

# ಶ್ರೀ ವೇದಾಗಮೋಕ್ತ
# ಶ್ರೀ ಸಿದ್ಧಾಂತ ಶಿಖಾಮಣಿ

## (ಶ್ರೀ ರೇಣುಕ ಗೀತೆ)

ವಿಶ್ವಧರ್ಮ ಪ್ರತಿಪಾದಕ ಶಿವಾದ್ವೈತ ಸಿದ್ಧಾಂತದ ಹೃದಯ ತರಂಗ

# SRI SIDDHANTHA SHIKHAMANI

Profoundly propounds the quint essence of
Shivadwaitha Philosophy, Viswa Dharma.

ವಿರಚಿತ :

ಆಧ್ಯಾತ್ಮಿಕ ಶಿರೋರತ್ನ ಟಿ. ಬಿ. ಬಸವರಾಜಯ್ಯ,
ನಂ. ೩೮, ನೇತಾಜಿ ರೋಡ್, ಪುಲಿಕೇಶಿ ನಗರ, (ಫ್ರೇಜರ್ ಟವನ್,)
ಬೆಂಗಳೂರು–೫೬೦ ೦೦೫

1992-93

॥ ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ ! ॥

ಬೆಲೆ : ರೂ. 50-00

|| ಶ್ರೀಜಗದ್ಗುರುಪಂಚಾಚಾರ್ಯಾಃ ಪ್ರಸೀದಂತು ||



ಅಧ್ಯಾತ್ಮವಿದ್ಯಾಮಯಳಾದ ಶ್ರೀಶಾರದಾಂಬಾಯೈ ನಮಃ ||

ಲಿಂಗಾರ್ಚನ ಪರೌ ಹಸ್ತೌ । ಸ ರುದ್ರೋ ನಾತ್ರ ಸಂಶಯಃ ||

ಶಿವನೇ ನಿನ್ನ ಶ್ರೀಪಾದವ ನಿತ್ಯ ಭಕ್ತಿಯಿಂ ಮುಟ್ಟದ ಮನ।
ಈ ದೇಹದಲ್ಲಿದ್ದೇನು ಫಲ, ಏನು ಫಲ ಶಿವನೇ ||

## RELIGIQN DHARMA

"RELIGION (DHARMA)" : What treasure untold rasides in that heavenly word. More preciouȩs than silver, gold and diamonds or all that this Earth can afford. Religion is the manifestation of "DIVINITY" already hidden in man. Religion implies "THOU ART THAT". (ತ್ವಂ ತದಸಿ). Dharma (Religion) is that invincible power of Nature which upholds the existence it maintains evolution and forms the very basis of "COSMIC" life. Dharma is that which promotes wordly prosperity and spiritual freedom **Moksha**.

"ಧರ್ಮೋ ಜಗತಃ ಪ್ರತಿಷ್ಠಾ ।
ಧರ್ಮೋ ಲಿಂಗಾರ್ಚನಾತ್ಮಕಃ ||"

Devotion is the Ladder to claimb up the Abode cf Perfection.

"ಲಿಂಗದೊಳ್ ಪ್ರಾಣವ ನಿಲ್ಲಿಸಿ, ಪ್ರಾಣದೊಳ್ ಲಿಂಗವ ಧರಿಸಿ ಪೂಜಿಸುವುದು ನಿಜ ಧರ್ಮ ವಿರುತ್ತೆ".

"ಶ್ರುತಿ ಭಗವಂತನನ್ನು" "ಧರ್ಮಧ್ವಮಃ" ಎಂದು ಘೋಷಿಸುತ್ತಲಿದೆ.

|| ಶಿವ ||

## ಶ್ರೀಗುರು ಸ್ತುತಿ

ಆರು ವರಗುರು ಸತ್ಕಟಾಕ್ಷದ ।
ಭೂರಿ ದೀಪ್ತಿಯೋಳ್ಳಿದೆ ತತ್ವ ।
ವಿಚಾರವನು ತಿಳಿಯುತ್ತೆ ಮುಕ್ತಿ ।
ಯು ನೆಳಸಿ ಬಾಳ್ದಪರೋ ।
ಧಾರಿಣಿಯೋಳವರಲ್ತೆ ಧನ್ಯರು ॥

ತೋರುವಾ ಗುರುವಿಂದ ಮಧಿಕವು ।
ಬೇರೆ ಯಾವುದುವಿಲ್ಲವಲ್ತೆ ।
ಮುಮುಕ್ಷು ಸಂತತಿಗೆ ॥ ॥೧॥

ಯಸ್ಯ ಸ್ಮರಣಮಾತ್ರೇಣ ।
ನೃಣಾಂ ಮುಕ್ತಿಃ ಕರಸ್ಥಿತಂ ॥
ತಂ ವಂದೇ ಜಗದಾಧಾರಂ ।
ರೇಣುಕಾರ್ಯಂ ಜಗದ್ಗುರುಂ ॥ ॥೨॥

ಸಚ್ಚಿದಾನಂದ ರೂಪಸ್ಯ ।
ಶಿವಸ್ಯಾಸ್ಯ ಸಮುದ್ಭವಂ ॥
ಭೂಲೋಕೇ ಶ್ರೀ ಸೋಮನಾಥಸ್ಯ ।
ಗರ್ಭಾವಿರ್ಭೂತ ಮೀಶ್ವರಂ ॥೩॥

ಶಿವಾಗಮಗಳು ಮತ್ತು ಶ್ರೀ ಸಿದ್ಧಾಂತಶಿಖಾಮಣಿ



ಓಂ ನಮೋ ಶ್ರೀ ಜ|| ರೇಣುಕಾಚಾರ್ಯಾಯ



ಶ್ರೀಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ
ಶ್ರೀ ಆದಿ ಜಗದ್ಗುರು ರೇಣುಕಾಚಾರ್ಯರು
ತೇಜೋಮಯರಾಗಿ ಆವಿರ್ಭವಿಸುತ್ತಲಿದ್ದಾರೆ.
"ಶೈವಾಗಮಾಂಬುಜ ಭಾಸ್ಕರರು ಮತ್ತು ಗುರೂಣಾಂ ಗುರುಃ"
ಶ್ರೀ ಜ|| ರೇಣುಕಾದಿ ಪಂಚಾಚಾರ್ಯರು.

ಶಿವಾಗಮಗಳು ಮತ್ತು ಶ್ರೀ ಸಿದ್ಧಾಂತಶಿಖಾಮಣಿ





ಕುಂಭೋದ್ಭವ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳ ಪ್ರಾರ್ಥನಾನುಸಾರ
ಅವರ ಮಲಯಾಚಲ ಪುಣ್ಯಾಶ್ರಮದಲ್ಲಿ ಶಿವಲಿಂಗೋದ್ಭವ
ಶ್ರೀ ಜಗದ್ಗುರು ರೇಣುಕಾಚಾರ್ಯರು, "ತತ್ವಾನಾಂ ಮಹದಾದೀನಾಂ"
ಎಂದು ಸುಪ್ರಸಿದ್ಧವಾದ ಶಿವಾದ್ವೈತ ಸಿದ್ಧಾಂತದ ಸಾರಾಮೃತವನ್ನು
ಹೃದಯಂಗಮವಾಗಿ ಬೋಧಿಸುತ್ತಲಿರುವುದು.

ಶಿವಾಗಮಗಳು ಮತ್ತು ಶ್ರೀ ಸಿದ್ಧಾಂತಶಿಖಾಮಣಿ

ಓಂ

ಧರ್ಮಕ್ಕಾಗಿ ಏಳಿರಿ, ಧರ್ಮಕ್ಕಾಗಿ ಬಾಳಿರಿ, ಧರ್ಮಕ್ಕಾಗಿ ತಾಳಿರಿ

ಧರ್ಮದಿಂದಲೇ ವಿಶ್ವಕ್ಕೆ ಶಾಂತಿ

ಮಾನವ ಧರ್ಮಕ್ಕೆ ಜಯವಾಗಲಿ



ಶ್ರೀ ರಂಭಾಪುರೀ ವೀರ ಸಿಂಹಾಸನದ ಉಭಯ ಶ್ರೀ ಜಗದ್ಗುರುಗಳವರ ಮಧ್ಯೇ ವಿರಾಜಿಸುವ ಜ|| ಪಂಚಮಹಾಚಾರ್ಯರ ಸೇವಾ ನಿರತ, ಪ್ರಸಿದ್ಧ ವರ್ತಕರೂ, ದಾನಿಗಳೂ,

" ಶಿವಮಂಗಳ ಧರ್ಮ ಸಂಸ್ಥೆಯ ಸ್ಥಾಪಕರೂ " ಆದ

ಶ್ರೀ ಎಸ್. ಜಿ. ಶಿವಶಂಕರಯ್ಯನವರು, ಭದ್ರಾವತಿ

ಶಿವಾಗಮಗಳು ಮತ್ತು ಶ್ರೀ ಸಿದ್ಧಾಂತಶಿಖಾಮಣಿ

ಓಂ



ಶ್ರೀ ರಂಭಾಪುರೀ ವೀರ ಸಿಂಹಾಸನಾಧೀಶ್ವರ ೧೧೦ಲ ಶ್ರೀ ಜಗದ್ಗುರು
ಲಿಂ॥ ಶ್ರೀ ಶ್ರೀ ಶ್ರೀ ಪ್ರಸನ್ನ ರೇಣುಕ ವೀರ ರುದ್ರಮುನಿದೇವ ರಾಜ ದೇಶಿಕೇಂದ್ರ
ಶಿವಾಚಾರ್ಯ ಮಹಾ ಸ್ವಾಮಿಗಳವರು

**"ಗುರು ಸಾಕ್ಷಾತ್ಪರಬ್ರಹ್ಮ । ತಸ್ಮೈ ಶ್ರೀಗುರವೇ ನಮಃ"**

ಓಂ



ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು
ಶ್ರೀ ಶ್ರೀ ಶ್ರೀ ಪ್ರಸನ್ನರೇಣುಕ ವೀರ ಸೋಮೇಶ್ವರ ರಾಜದೇಶಿಕೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳವರು.

"ಮೋಕ್ಷಮೂಲಂ । ಗುರೋಃ ಕೃಪಾ"

"ನಾಸ್ತಿ ತತ್ತ್ವಂ ಗುರೋಃ ಪರಂ ॥"

|| ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

## ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ
## ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ
# ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ
# ಮಹಾಸ್ವಾಮಿನಾಂ ದಿವ್ಯ ಕೃಪಾಸನ್ನಿಧಾನೇನ
# ಶುಭಾಶೀರ್ವಾದ ಸಂದೇಶ

ಶ್ರೀ ಜಗದ್ಗುರು ರೇಣುಕಾಚಾರ್ಯರಿಂದ ಮಹಾಮುನಿ ಅಗಸ್ತ್ಯರಿಗೆ ಬೋಧಿಸಿದ **"ಸಿದ್ಧಾಂತಶಿಖಾಮಣಿ"** ಧರ್ಮಗ್ರಂಥ ಇದೊಂದು ಅಮೂಲ್ಯರತ್ನ, ಆದರ್ಶ ಕೃತಿ. ಶಿವಾಗಮಗಳ ಸಾರವನ್ನು ಮೈಗೂಡಿಸಿಕೊಂಡು ಸಮಗ್ರವಾದ ನೂರೊಂದು ಸ್ಥಲಗಳ ಮಹಿಮೆಯನ್ನು ಇದರಲ್ಲಿ ಕಾಣಬಹುದು. ಈ ಕೃತಿಯ ತುಂಬೆಲ್ಲ ಅಮೂಲ್ಯ ತತ್ವಗಳನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ. ಸಂಶೋಧನೆ ಮಾಡು ಮಾಡುತ್ತಾ ಹೋದಂತೆ ಹೆಚ್ಚು ಹೆಚ್ಚು ಸಂತೋಷವನ್ನು ತುಂಬಿ ತರುವುದು. ವೀರಶೈವ ಸಿದ್ಧಾಂತದ ವಿಚಾರಗಳನ್ನು ತಿಳಿದುಕೊಳ್ಳುವ ಧರ್ಮವಂತರಿಗೆ ಇದು ಮೂಲ ಮತ್ತು ಆಗರ ಗ್ರಂಥವಾಗಿದೆ. ಇದು ಎಲ್ಲರಿಗೂ ಬೇಕಾಗಿರುವ ಸಿರಿಯ ಶಿಖಾಮಣಿಯಾಗಿದೆ. ಇದರ ಬಗೆಗೆ ಎಷ್ಟು ಹೇಳಿದರೂ ಕಮ್ಮಿಯೇ ಆಗಿದೆ.

ವಯೋವೃದ್ಧರಾದ ಹಾಗೂ ಶ್ರೀ ಪೀಠಾಭಿಮಾನಿಗಳಾದ ಶ್ರೀ ಟಿ. ಬಿ. ಬಸವರಾಜಯ್ಯನವರು ಬಹಳ ಪ್ರಯತ್ನಪೂರ್ವಕ ಈ ಆದರ್ಶ ಕೃತಿಯಲ್ಲಿರುವ ಮಹತ್ವಪೂರ್ಣ ಶ್ಲೋಕಗಳನ್ನು ಆಯ್ದು ಅವುಗಳನ್ನು ಒಂದೆಡೆ ಸೇರಿಸಿ ಧರ್ಮಾಭಿಮಾನಿಗಳ ಕೈಗೆ ಕೊಡುತ್ತಿರುವುದು ಅತೀ ಹೆಮ್ಮೆಯ ಸಂಗತಿ. ಇದರಲ್ಲಿ ಉಕ್ತವಾಗಿರುವ ವಿಚಾರ ಧಾರೆಗಳನ್ನು ಪ್ರತಿಯೊಬ್ಬರೂ ತಿಳಿದುಕೊಂಡರೆ ಲೇಖಕರ ಶ್ರಮ-ಸಾಧನೆ ಸಾರ್ಥಕವಾಗುವುದು.

ಪರಮದಯಾಳು ಶ್ರೀ ಪಾರ್ವತೀ ಪರಮೇಶ್ವರರೂ ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಸದ್ಬುದ್ಧಿಯನ್ನಿತ್ತು ಯಥಾರ್ಥ ವಿಚಾರಗಳನ್ನು ತಿಳಿದುಕೊಳ್ಳುವ ಮಂಗಲ ಮಹಾ ಪರಂಪರೆಯನ್ನು ಅನುಗ್ರಹಿಸಲಿ.

ತಾ|| 15-9-92 ಇತ್ಯಾನಂತಶಿವಾಶಿಷಃ.

ಓಂ



ಶ್ರೀ ಕಾಶಿ ಶ್ರೀ ಜ|| ವಿಶ್ವಾರಾಧ್ಯ ಜ್ಞಾನಸಿಂಹಾಸನಾಧೀಶ್ವರ,
ಶ್ರೀ ೧೦೦೮ ಜ|| ಶ್ರೀ ಶ್ರೀ ಶ್ರೀ ಡಾ|| ಚಂದ್ರಶೇಖರ ಶಿವಾಚಾರ್ಯ ದೇಶಿಕೇಂದ್ರ
ಮಹಾಸ್ವಾಮಿಗಳವರು.

" ಶಿವಜ್ಞಾನ ಮಹಾಸಿಂಧೌ । ಮಜ್ಜನಾದ್ವೈಕ್ಯ ಮುಚ್ಯತೆ "

॥ ಶ್ರೀಜಗದ್ಗುರು ವಿಶ್ವಾರಾಧ್ಯಃ ಪ್ರಸೀದತು ॥



## ಶ್ರೀ ವೀರಶೈವ ಮಹಾ ಮತಸ್ಥಾಪನಾಚಾರ್ಯ
## ಶ್ರೀ ಜಗದ್ಗುರು ವಿಶ್ವಾರಾಧ್ಯ ಪರಂಪರಾಗತ ಶ್ರೀಮತ್ ಕಾಶೀ
## ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು
## ಡಾ. ಚಂದ್ರಶೇಖರಶಿವಾಚಾರ್ಯಮಹಾಸ್ವಾಮಿಗಳ
## ಶುಭಾಶೀರ್ವಚನ.

ಭಾರತೀಯ ಅನೇಕ ಧರ್ಮ ದರ್ಶನಗಳಲ್ಲಿ ವೀರಶೈವ ಧರ್ಮ ದರ್ಶನದ ಪಾತ್ರವು ಪ್ರಮುಖವಾಗಿದೆ. ಶ್ರೀ ಜಗದ್ಗುರು ಪಂಚಾಚಾರ್ಯರಿಂದ ಸಂಸ್ಥಾಪಿತವಾದ ಈ ಧರ್ಮದರ್ಶನವು ಸಮಸ್ತ ಮಾನವ ಸಮಾಜವನ್ನು ಸುಧಾರಿಸುವ ವಿಶ್ವಮಾನವನ ತತ್ತ್ವಗಳನ್ನು ಹೊಂದಿರುತ್ತದೆ. ಇದರ ತತ್ತ್ವಗಳಾದ ಅಷ್ಟಾವರಣ, ಪಂಚಾಚಾರ ಹಾಗೂ ಷಟ್‌ಸ್ಥಲಗಳು ವೇದ, ಆಗಮ, ಉಪನಿಷತ್ತು ಮತ್ತು ಶೈವಪುರಾಣಾದಿಗಳಲ್ಲಿ ಅಲ್ಲಲ್ಲಿ ಪ್ರಸಂಗಾನುಸಾರವಾಗಿ ಪ್ರತಿಪಾದಿಸಲ್ಪಟ್ಟಿವೆ. ಶ್ರೀಶಿವಯೋಗಿಶಿವಾಚಾರ್ಯರೆಂಬ ಉದ್ದಾಮ ವಿದ್ವಾಂಸರು ಕ್ರಿ.ಶ. ೮ನೇ ಶತಮಾನ ಅಂದರೆ ಇಂದಿಗೆ ಸುಮಾರು ೧೨ನೂರು ವರ್ಷಗಳ ಪೂರ್ವದಲ್ಲಿ ಒಂದು ದಿವ್ಯ ಗ್ರಂಥ ರತ್ನವನ್ನು ರಚಿಸಿದರು. ಅದುವೇ **"ಶ್ರೀ ಸಿದ್ಧಾಂತಶಿಖಾಮಣಿ"** ಯು. ಇದು ಶ್ರೀ ಜಗದ್ಗುರು ರೇಣುಕರ ಹಾಗೂ ಅಗಸ್ತ್ಯಮಹರ್ಷಿಗಳ ಸಂವಾದರೂಪವಾಗಿದೆ. ಅತ್ಯಂತ ಪ್ರಾಚೀನವಾದ " **ಶ್ರೀ ರೇಣುಕಾಗಸ್ತ್ಯ**

**ಸಂವಾದ**"ಎಂಬ ಗ್ರಂಥದ ಆಧಾರದಮೇಲೆ ಶ್ರೀ ಸಿದ್ಧಾಂತಶಿಖಾಮಣಿಯು ತಯಾರಿಸಲ್ಪಟ್ಟಿದೆ. ಇದನ್ನು ರಚಿಸುವಾಗ ಶ್ರೀ ಶಿವಯೋಗಿಶಿವಾಚಾರ್ಯರು ವೇದ, ಆಗಮ, ಉಪನಿಷತ್ತು ಹಾಗೂ ಶೈವಪುರಾಣಗಳಲ್ಲಿ ಬರುವ ವೀರಶೈವ ತತ್ತ್ವಗಳನ್ನು ಈ ಗ್ರಂಥದಲ್ಲಿ ಕ್ರಮಬದ್ಧವಾಗಿ ಜೋಡಿಸಿ ಒಂದು ದಿವ್ಯ ಕೃತಿ ರತ್ನವನ್ನು ಸಿದ್ಧಪಡಿಸಿದರು. ಆ ಕೃತಿರತ್ನವಾದ ಶ್ರೀ ಸಿದ್ಧಾಂತ ಶಿಖಾಮಣಿಯು ಎಲ್ಲ ಸಿದ್ಧಾಂತಗಳ ಶಿಖಾಮಣಿಯಂತೆ ರಾರಾಜಿಸುತ್ತಿದೆ.

ಇದರಲ್ಲಿ ಅಷ್ಟಾವರಣ ಮತ್ತು ಪಂಚಾಚಾರಗಳ ವಿವೇಚನೆಯು ಸಮರ್ಥ ವಾಗಿ ಮೂಡಿಬಂದಿದೆಯಲ್ಲದೇ ಷಟ್‌ಸ್ಥಲಗಳನ್ನು ತಿಳಿ ತಿಳಿಯಾಗಿ ನೂರೊಂದು ಅವಾಂತರದ **ಸ್ಥ**ಲಗಳಲ್ಲಿ ವಿಶ್ಲೇಷಿಸಲಾಗಿದೆ. ವೀರಶೈವರ ಏಕೋತ್ತರಶತಸ್ಥಲದ ವಿಚಾರವನ್ನು ಪ್ರಥಮ ಬಾರಿಗೆ ಇದೇ ಗ್ರಂಥದಲ್ಲಿ ಕಾಣಬಹುದಾಗಿದೆ. ನಂತರದ ಕನ್ನಡ ನಾಡಿನ ಅನೇಕ ಕವಿಗಳು ಶರಣರು ಇದರ ಆಧಾರದಲ್ಲಿಯೇ ನೂರೊಂದು ಸ್ಥಲಕಟ್ಟಿನ ವಚನ ಸಾಹಿತ್ಯವನ್ನು ರಚಿಸಿ ಕನ್ನಡಿಗರಿಗೆ ಆ ತತ್ತ್ವ ಗಳನ್ನು ತಿಳಿಸಲೋಸುಗ ಪ್ರಯತ್ನಿಸಿದ್ದುಂಟು. ಅಂತೆಯೇ ಶ್ರೀ ಸಿದ್ಧಾಂತ ಶಿಖಾಮಣಿಯು **"ವೀರಶೈವ ಧರ್ಮಗ್ರಂಥ"** ಎಂಬ ಖ್ಯಾತಿಯನ್ನು ಪಡೆದುಕೊಂಡಿದೆ. ಇದಕ್ಕೆ ಕೇವಲ ವೀರಶೈವ ಧರ್ಮಗ್ರಂಥ ಅನ್ನುವದಕ್ಕಿಂತ **"ಮಾನವ ಧರ್ಮ ಮಹಾನ್ ಗ್ರಂಥ"** ಎನ್ನುವದು ಇನ್ನೂ ಸೂಕ್ತವಾಗಿ ತೋರುತ್ತದೆ. ಇದರಲ್ಲಿ ಬಂದಿರುವ ಸಿದ್ಧಾಂತ ಸಮನ್ವಯಾತ್ಮಕವಾದದು. ಭೇದ ದೃಷ್ಟಿಯನ್ನು ತ್ಯಜಿಸಿ ಸಮನ್ವಯದೃಷ್ಟಿಯನ್ನು ಅಳವಡಿಸಿಕೊಂಡಾಗಲೇ ಮಾನವ ಸಮಾಜಕ್ಕೆ ಸುಖ-ಶಾಂತಿಗಳು ಲಭಿಸಬಲ್ಲವು.

ಕ್ರಿ. ಶ. ೧೧೬೦ ರಲ್ಲಿ ಆಗಿಹೋದ ಶ್ರೀಪತಿಪಂಡಿತಾರಾಧ್ಯರು ತಮ್ಮ ಶ್ರೀಕರಭಾಷ್ಯದಲ್ಲಿ ಶ್ರೀ ಸಿದ್ಧಾಂತಶಿಖಾಮಣಿಯನ್ನು ಹಾಗೂ ಅದರಲ್ಲಿ ಪ್ರಮಾಣ ಶ್ಲೋಕಗಳನ್ನು ಅತ್ಯಂತ ಆದರದಿಂದ ಉದಾಹರಿಸಿದ್ದನ್ನು ಕಾಣು ತ್ತೇವೆ. ಕ್ರಿ. ಶ. ೧೭ ನೇ ಶತಮಾನದ ಶ್ರೀ ಮರಿತೋಂಟದಾರ್ಯರೆಂಬ ವಿದ್ವಾಂಸ ವಿರಕ್ತ ಸ್ವಾಮಿಗಳು ಈ ಗ್ರಂಥಕ್ಕೆ **"ತತ್ತ್ವಪ್ರದೀಪಿಕಾ"** ಎಂಬ ಹೆಸರಿನ ಒಂದು ಸಂಸ್ಕೃತ ವ್ಯಾಖ್ಯಾನವನ್ನು ಬರೆದಿದ್ದಾರೆ. ಅದು ಗ್ರಂಥದ ಮೂಲಾರ್ಥವನ್ನು ತಿಳಿದುಕೊಳ್ಳಲು ಅತ್ಯಂತ ಸಹಾಯಕಾರಿಯಾಗಿದೆ.

ಮೂಲ ಸಂಸ್ಕೃತ ಭಾಷೆಯಲ್ಲಿಯ ಈ ಗ್ರಂಥ ಹಾಗೂ ವ್ಯಾಖ್ಯಾನವನ್ನು ವಿಭಿನ್ನ ಪ್ರಾಂತೀಯ ಲಿಪಿಗಳಲ್ಲಿ ತರ್ಜುಮೆಗೊಳಿಸಿ ಅದಕ್ಕೆ ಪ್ರಾಂತೀಯ ಭಾಷೆಗಳಲ್ಲಿ ಅನುವಾದವನ್ನು ಅನೇಕರು ಮಾಡಿದ್ದಾರೆ. ಕ್ರಿ.ಶ. ೧೮೮೦ರಲ್ಲಿ ಪಿ. ಆರ್. ಕರಿಬಸವಶಾಸ್ತ್ರಿಗಳು ಈ ಗ್ರಂಥವನ್ನು ತೆಲಗು ಲಿಪಿಯಲ್ಲಿ ಸಂಪಾದಿಸಿದರು, ಅದು ಮೈಸೂರಿನ ಯಜಮಾನ ವೀರ ಸಂಗಪ್ಪನವರಿಂದ ೧೮೮೭ಲ್ಲಿ ಪ್ರಕಾಶನಗೊಳಿಸಲ್ಪಟ್ಟಿತು. ಅದಾದನಂತರ ಸೊಲ್ಲಾಪುರದ ವಾರದ ಮಲ್ಲಪ್ಪನವರು ಕ್ರಿ.ಶ. ೧೯೦೫ರಲ್ಲಿ ದೇವನಾಗರಿ ಲಿಪಿಯಲ್ಲಿ ಮರಾಠಿ ಭಾವಾರ್ಥದೊಂದಿಗೆ ಪ್ರಕಟಗೊಳಿಸಿದರು. ಮುಂದೆ ಕ್ರಿ.ಶ. ೧೯೨೧ರಲ್ಲಿ ಇ. ಎನ್. ಆರ್. ಕರಿಬಸವಶಾಸ್ತ್ರಿಗಳು, ಮರಿತೋಂಟದಾರ್ಯರ ಸಂಸ್ಕೃತ ವ್ಯಾಖ್ಯಾನವನ್ನು ಕನ್ನಡಕ್ಕೆ ಅನುವಾದಿಸಿ ಅದಕ್ಕೆ "**ತಾತ್ಪರ್ಯದೀಪಿಕೆ**"ಎಂಬುದಾಗಿ ಹೆಸರಿಸಿ ಕನ್ನಡ ಲಿಪಿಯಲ್ಲಿ ಪ್ರಕಟಪಡಿಸಿದರು. ಇದೇ ಪ್ರಕಾರ ಮೈಸೂರಿನ ಎಂ. ಎಲ್. ನಾಗಣ್ಣ ಇವರೂ ಕನ್ನಡ ಲಿಪಿಯಲ್ಲಿ ಕ್ರಿ.ಶ. ೧೯೫೯ರಲ್ಲಿ ಪ್ರಕಾಶನಗೊಳಿಸಿದರು. ಅದರಂತೆ ಮೈಸೂರಿನ ವೇ. ಪಂ. ಕಾಶಿನಾಥಶಾಸ್ತ್ರಿಗಳೂ ಕನ್ನಡದಲ್ಲಿ ಭಾವಾರ್ಥ ಪ್ರಕಾಶವೆಂಬ ವ್ಯಾಖ್ಯಾನದೊಂದಿಗೆ ಪ್ರಕಟಗೊಳಿಸಿದ್ದಾರೆ. ಹೀಗೆ ಅನೇಕರು ಅನೇಕ ವಿಧವಾಗಿ ಕನ್ನಡ ಟೀಕೆಯೊಂದಿಗೆ ಶ್ರೀ ಸಿದ್ಧಾಂತಶಿಖಾಮಣಿಯನ್ನು ಪ್ರಕಾಶನಗೊಳಿಸಿದ್ದಾರೆ.

ಪ್ರಕೃತದಲ್ಲಿ "ಆಧ್ಯಾತ್ಮಿಕ ಶಿರೋರತ್ನ" ಶ್ರೀ ಟಿ. ಬಿ. ಬಸವರಾಜಯ್ಯನವರು "**ಶ್ರೀ ಶಿವಾಗಮಗಳು ಮತ್ತು ಶ್ರೀ ಸಿದ್ಧಾಂತಶಿಖಾಮಣಿ**"ಎಂಬ ಶಿರೋನಾಮೆಯ [ಲೇಖನಮಾಲೆಯನ್ನು ಮೈಸೂರಿನ ಪಂಚಾಚಾರ್ಯಪ್ರಭಾ ಪತ್ರಿಕೆಯಲ್ಲಿ ಬಹುದಿನಗಳಿಂದ ಪ್ರಕಟಗೊಳಿಸುತ್ತ ಬಂದರು. ಶ್ರೀ ಸಿದ್ಧಾಂತಶಿಖಾಮಣಿಯ ನೂರೊಂದು ಸ್ಥಲಗಳಲ್ಲಿ ಬರುವ ಪ್ರಮುಖ ಶ್ಲೋಕಗಳ ಮೇಲೆ ವಿಶೇಷ ಅನುಭವಪೂರ್ಣವಾದ ವ್ಯಾಖ್ಯಾನವನ್ನು ಬರೆದು ಮೇಲೆ ಹೇಳಿದ 'ಲೇಖನಮಾಲೆಯಿಂದ ಜನಾನುರಾಗವನ್ನು ಪಡೆದ, ಅವರು ಜನರ ಅಪೇಕ್ಷೆಯ ಮೇರಿಗೆ ಸದ್ಯ ಅವೆಲ್ಲವನ್ನು ಸಂಗ್ರಹಿಸಿ ಗ್ರಂಥರೂಪದಲ್ಲಿ ಹೊರಡಿಸಿದ್ದನ್ನು ನೋಡಿ ಸಂತೋಷವಾಯಿತು.

**ಇವರ ವ್ಯಾಖ್ಯಾನವು ಪ್ರಮಾಣಪೂರ್ಣವೂ ಅನುಭಾವಪೂರ್ಣವೂ ಆಗಿದೆ.** ಸಾಮಾನ್ಯ ವಾಚಕರಿಗೂ ಸರಳವಾಗಿ ಅರ್ಥವಾಗು

ನಂತಿದೆ. ಇದರಲ್ಲಿ ಶ್ರೀ ಸಿದ್ಧಾಂತಶಿಖಾಮಣಿಯ ಸಮಗ್ರ ಶ್ಲೋಕಗಳ ವ್ಯಾಖ್ಯಾನ ವಿರದಿದ್ದರೂ, ಸಿದ್ಧಾಂತ ಬೋಧೆಯಲ್ಲಿ ಯಾವ ವ್ಯತ್ಯಾಸವೂ ಉಂಟಾಗುವದಿಲ್ಲ. ಅತಿ ವೃದ್ಧಾಪ್ಯದಲ್ಲಿ ಮಾಡಿದ ಇವರ ಪ್ರಯತ್ನ ನಿಜ ವಾಗಿಯೂ ಶ್ಲಾಘನೀಯವಾದುದು. ಇವರ ಈ ಪ್ರಯತ್ನದಿಂದ ಶ್ರೀ ಸಿದ್ಧಾಂತ ಶಿಖಾಮಣಿಯ ಬಗ್ಗೆ ಇವರಿಗಿರುವ ಗೌರವ ಭಾವನೆ ವ್ಯಕ್ತವಾಗುತ್ತದೆ. ಈ ಗ್ರಂಥದ ಮುದ್ರಣಕ್ಕೆ ಬೆಂಗಳೂರಿನ ಶ್ರೀ ಆರ್. ವಿ. ವಿಜಯಕುಮಾರ್ ಮತ್ತು ಭದ್ರಾವತಿಯ "ಮಹಾಚಾರ್ಯ ಸೇವಾಧುರೀಣ" ಶ್ರೀ ಎಸ್. ಜಿ. ಶಿವಶಂಕರಯ್ಯನವರು ಇವರೇ ಮೊದಲಾದವರು ಧನ ಸಹಾಯ ಮಾಡಿದ್ದಾರೆ.

ಭಕ್ತ ಮುಮುಕ್ಷುಗಳಿಗೆ ಅತ್ಯಂತ ಉಪಯುಕ್ತವಾದ ಈ ಗ್ರಂಥವನ್ನು ಎಲ್ಲರೂ ಖರೀದಿಸಿ ಓದಿ ಆನಂದಿಸಬೇಕು. ವಾಚಕರಿಗಾದ ಸಂತೋಷವೇ ಲೇಖಕನಿಗೆ ನಿಜವಾದ ಸಮಾಧಾನವನ್ನು ಕೊಡಬಲ್ಲದು ಈ ಗ್ರಂಥ ಲೇಖಕರಿಗೆ ಪ್ರಕಾಶಕರಿಗೆ ದಾನಿಗಳಿಗೆ ಹಾಗೂ ವಾಚಕರಿಗೆ ಶ್ರೀ ಜಗದ್ಗುರು ಪಂಚಾ ಚಾರ್ಯರು ಅನಂತ ಮಂಗಲ ಪರಂಪರೆಯನ್ನು ಕೊಟ್ಟು ಕಾಪಾಡಲೆಂಬುದಾಗಿ ಆಶೀರ್ವದಿಸಲಾಗಿದೆ.

ಕ್ಯಾಂಪ :
ಅಮರೇಶ್ವರ ಮಠ,
ಗುಳೇದಗುಡ್ಡ.
೧೭-೧೧-೯೨

ಇತ್ಯಾಶಿಷಃ.



॥ ಓಂ ನಮೋ ಮಹಾ ರುದ್ರಾಯ ನಮಃ ॥



## ವೇ॥ ಶ್ರೀ ಎನ್. ಆರ್. ಜಗದೀಶಾರಾಧ್ಯರು

**ಪ್ರಸಿದ್ಧ ಕೈಗಾರಿಕೋಧ್ಯಮಿಗಳು ಹಾಗೂ**

**"ಸಿದ್ಧಗಂಗಾ ಆಯಿಲ್ ಎಕ್ಸಟ್ರಾಕ್ಷನ್ಸ್ (ಪ್ರೈವೇಟ್ ಲಿಮಿಟೆಡ್.)"**

ಸಂಸ್ಥೆಯ ವ್ಯವಸ್ಥಾಪಕರು ಹಾಗೂ ಪ್ರಧಾನ ನಿರ್ದೇಶಕರು,

ಬಿ.ಹೆಚ್. ರೋಡ್, ತುಮಕೂರು–570103

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||



"ಪುಟ್ಟಿದನೋರ್ವನೇ ಧ್ರುವಂ ।
ಉಡುವ್ರಜವ ನಡೆಯಿಪ್ಪ ಕಾರಣಂ ।
ಪುಟ್ಟಿದನೋರ್ವನೇ ಕಮಠ ನುರ್ವಿಯನಾಂತ ಕಾರಣಂ ।
ಪುಟ್ಟಿದರೇಂ ಪರೋಪಕೃತಿಗೈಯದೆ ಸತ್ತವರ್ ।
ಪುಟ್ಟವೇ ಸಾಯವೇ ಜಗದೊಳತ್ತಿಯ ಪಣ್ಣೊಳ್ ।
ಎನಿತ್ತೋ ಜಂತುಗಳ್ ||

|| ಓಂ ||

ವೇ|| ಬ್ರ|| ಶ್ರೀ ಎನ್. ಆರ್. ಜಗದೀಶಾರಾಧ್ಯರು ಮತ್ತೂ ಇವರ ಸಹೋದರರಾದ ವೇ|| ಬ್ರ|| ಶ್ರೀ ಎನ್.ಆರ್. ಪಂಡಿತಾರಾಧ್ಯರೂ, ನಂದಿಗುಡಿ ಧರ್ಮಪ್ರಕಾಶ ಲಿಂ|| ವೇ|| ಬ್ರ|| ಶ್ರೀ ಎನ್. ರುದ್ರಯ್ಯನವರ ಮತ್ತು ಲಿಂ|| ಶ್ರೀಮತಿ ಎನ್. ರುದ್ರಮ್ಮನವರ ಸುಪುತ್ರರುಗಳು. ಕೀರ್ತಿಶೇಷರಾದ ಪೂಜ್ಯ ತಂದೆಯವರಂತೆ ಈ ಸಹೋದರರು, ಔದ್ಯೋಗಿಕ, ವಾಣಿಜ್ಯ, ಸಣ್ಣ ಕುಶಲ ಕೈಗಾರಿಕಾ, ಶೈಕ್ಷಣಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಉಭಯತ್ರರೂ, ಸಾಕಷ್ಟು ಹಿಂಜರಿಯದ ರೀತಿಯಲ್ಲಿ ಯಶಸ್ವಿಗಳಾಗಿ ನಿಷ್ಠೆಯಿಂದ ದುಡಿದು, ದುಡಿಯುತ್ತಲೂ ಇರುವ ಕ್ರಿಯಾವಂತ ಸಂಪನ್ನರು. ನೀರಿನಲ್ಲಿ ಹುಟ್ಟಿ ಅಲ್ಲೇ ಬೆಳೆಯುವ ಸಣ್ಣ ಮೀಸುಗಳಿಗೆ ಈಜುವ ಶಕ್ತಿ ಹೇಗೆಸಹಜ

ವಿರುತ್ತೇ, ಅದರಂತೆ ಆಜನ್ಮಸಿದ್ಧವಾದ ಹಾಗೂ ಪೂಜ್ಯ ತಂದೆಯವರಿಂದ ಆಚರಿಸಿ ತೋರಿಸಿ ಮಾರ್ಗದರ್ಶನ ನೀಡಿದ ರಾಜಮಾರ್ಗದಲ್ಲೇ ಬೆಳೆದು ಪ್ರಬುದ್ಧರಾದ ಉಭಯ ಸಹೋದರರು, ಬಹು ಮುಖ ಪ್ರತಿಭಾಸಂಪನ್ನರಾದ ಪೂಜ್ಯ ತಂದೆಯವರಂತೆ ಸರ್ವ ಕ್ಷೇತ್ರಗಳಲ್ಲೂ ದುಡಿಯುತ್ತಾ ಜನಾನುರಾಗವನ್ನು ಗಳಿಸಿ ಶ್ರೇಯೋಮಾರ್ಗದತ್ತ ಮುಂದುವರಿಯುತ್ತಲಿದ್ದಾರೆಂಬ ಅಂಶ ಸ್ತುತ್ಯವಿರುತ್ತೆ.

2. ಶ್ರೀ ಎನ್. ಆರ್. ಜಗದೀಶಾರಾಧ್ಯರು ಹಮ್ಮಿಕೊಂಡಿರುವ ಕಾರ್ಯ ಬಾಹುಳ್ಯದಿಂದಾಗಿ, ಎಲ್ಲಾ ರಂಗಗಳಲ್ಲೂ ನುರಿತ ಅನುಭವಿಗಳಾಗಿ ಸಹನಶೀಲರಿರುವರು. ಇವರು ಇತ್ತೀಚೆಗೆ ಸ್ವತಃ ತುಮಕೂರಿನಲ್ಲಿ **"ಸಿದ್ಧ ಗಂಗಾ ಆಯಿಲ್ ಎಕ್ಸಟ್ರಾಕ್ಷನ್ ಪ್ರೈವೇಟ್ ಲಿಮಿಟೆಡ್"** ಯೆಂಬ ಬೃಹದ್ ಸಂಸ್ಥೆಯೊಂದನ್ನು ದಿಟ್ಟತನದಿಂದ ಅಪಾರ ಹಣದ ವೆಚ್ಚದಲ್ಲಿ ಬಂಧುರವಾಗಿ ಸ್ಥಾಪಿಸಿ, ಇದರ ಪ್ರಧಾನ ನಿರ್ದೇಶಿಕರಾಗಿ, ಕುಶಲತೆಯಿಂದ ಲಾಭಧಾಯಕವಾಗಿ ಮುನ್ನಡೆಸುತ್ತಾ ; ಅನೇಕ ಬಡ ಕಾರ್ಮಿಕ ಕುಟುಂಬಿಗಳ ಜೀವನಾಧಾರಕ್ಕೆ ಮೂಲಸ್ಥಂಬಾಯಮಾನರಾಗಿದ್ದಾರೆ. **"ಉದ್ಯೋಗಿನಾಂ ಪುರುಷ ಸಿಂಹಮುಪೈತಿ ಲಕ್ಷ್ಮೀಃ"**ಎಂಬ ಸುಭಾಷಿತದಂತೆ, ಸದಾ ಉದ್ಯೋಗನಿರತರನ್ನು **"ಶ್ರೀಲಕ್ಷ್ಮಿ"** ನಲಿದೊಲಿದು ಪ್ರೇರಕಶಕ್ತಿಯಾಗಿ ಅಲ್ಲಿ ನೆಲೆಸಿ ಶೋಭಿಸುವಳೆಂದು ಕಂಡುಬಂದಿದೆ.

3 ಶ್ರೀ ಎನ್. ಆರ್. ಪಂಡಿತಾರಾಧ್ಯರು. ತಮ್ಮ ಪೂಜ್ಯ ತಂದೆಯವರಿಂದ ಮೈಸೂರು ರೋಡು, ಬೆಂಗಳೂರಲ್ಲಿ ಸ್ಥಾಪಿಸಿರುವ, ವರ್ಕ್‌ಷಾಪಿನ ಕಾರ್ಯಾಗಾರದಲ್ಲಿ, ಬೃಹದ್ ಕೈಗಾರಿಕೋದ್ಯಮ, ಅಂದರೆ–**"ಬೆಂಗಳೂರು ಬಾಡಿ ಬಿಲ್ಡರ್ಸ್, ಪ್ರೈವೇಟ್ ಲಿಮಿಟೆಡ್"** ಯೆಂಬ ಸಂಸ್ಥೆಯೊಂದರ ಮೆನೇಜಿಂಗ್ ಡೈರೆಕ್ಟರ್‌ರಾಗಿ, ಸರ್ವ ವಿಧದಿಂದಲೂ ದಕ್ಷತೆಯಿಂದ ಅಭ್ಯುದಯದತ್ತ ಧೈರ್ಯವಾಗಿ ಯೆಲ್ಲಾ ಆಢಳಿತ ಕಾರ್ಯವನ್ನು ವಿಚಕ್ಷಣೆಯಿಂದ ನಿರ್ವಹಿಸುತ್ತ, ಸಹನ ಶೀಲರೆನಿಸಿರುವರು. **"ಧೈರ್ಯಂ ಸರ್ವತ್ರ ಸಾಧನಂ"** ಯೆಂಬ ಧೀರೋದ್ಧಾರ ಭಾವವಿವರದು. **"ಧೈರ್ಯಂ ಲಕ್ಷ್ಮಿ:"** ಧೈರ್ಯವೇ ಲಕ್ಷ್ಮಿ ಯೆಂಬಂತೆ, ಧೀರೋದ್ಧಾರ ಭಾವದಿಂದ ಸಿರಿಸಂಪತ್ತುಗಳ ಇತೋಪ್ಯತಿಶಯವಾದ ಅಭ್ಯುದಯಕ್ಕೆ ನಾಂದಿ.

4. ಉಭಯ ಸಹೋದರರು ನಾಡಿನ ಕೆಲವು ಪ್ರಮುಖ ಸಂಘ ಮಹಾ ಸಂಸ್ಥೆಗಳಲ್ಲಿ ಅವುಗಳ ಉತ್ಕರ್ಷೆಗಳಿಗಾಗಿ, ವಿಶೇಷತಃ ಶೈಕ್ಷಣಿಕ, ಧಾರ್ಮಿಕ

ಕ್ಷೇತ್ರಗಳಲ್ಲಿ ಸುದೀರ್ಘ ಕಾಲದಿಂದ ಉಚಿತ ಮಡಿಯುವುದರೊಂದಿಗೆ, ಸಮಯೋಚಿತವಾಗಿ ಉದಾರ ಧನ ಸಹಾಯವನ್ನು ಯಥಾಶಕ್ತಿ ನೀಡುತ್ತ, ಜನಸೇವೆ ಜನಾರ್ಧನನ ಸೇವೆಯೆಂಬ ನಿಸ್ಪೃಹ ಭಾವದಿಂದ ಮುನ್ನಡೆಯುತ್ತಲಿದ್ದಾರೆ. **"ಧರ್ಮೇಣ ಲಭತೇ ಸರ್ವಂ"** ಯೆಂಬ ವೇದೋಕ್ತಿಯಂತೆ ವಿವಿಧ, ಧರ್ಮ ಕಾರ್ಯಗಳಿಗೆ ಧನ ಸಹಾಯದೊಂದಿಗೆ ಬೆಂಬಲ ಪ್ರೋತ್ಸಾಹಾದಿಗಳನ್ನು ಮನಃಪೂರ್ವಕ ಸಲ್ಲಿಸುತ್ತಲಿದ್ದಾರೆ. **"ಕಾಯಕವೇ ಕೈಲಾಸ"**ವೆಂಬ ಭಾವನೆಯಿಂದ ವರ್ತಿಸುತ್ತಾ ಕರ್ಮಯೋಗಿಗಳೆನಿಸಿರುವರು.

5. ಸನಾತನವೂ, ವೇದಾಗಮೋಕ್ತ ಸ್ತುತ್ಯವಿರುವ ಪ್ರಸಿದ್ಧ ಜಗದಾದಿ ಶ್ರೀ ಜ|| ಪಂಚಮಹಾ ಪೀಠಗಳ ಹಾಗೂ ಶ್ರೀ ಜ|| ಪಂಚಾಚಾರ್ಯರ ಶ್ರೀಪಾದ ಸೇವಾ ನಿರತರಾಗಿ, ಇವರ ಪೂಜ್ಯ ಮಾತಾಪಿತೃಗಳಂತೆ, ತ್ಯಾಗ ಮನೋಭಾವ ಹಾಗೂ ಭಕ್ತಿಪೂರ್ವಕ ಅನನ್ಯ ಸೇವೆ ಸಲ್ಲಿಸುತ್ತಾ, ಯಥಾಶಕ್ತಿ ಧನ ಸಹಾಯದೊಂದಿಗೆ ಮಹಾ ಧರ್ಮಪೀಠಗಳ ಪುನರೋದ್ಧಾರಾರ್ಥ ಕಂಕಣಬದ್ಧರಾಗಿರುವುದನ್ನು ಕಂಡರೆ, ಶ್ರೀ ಗುರುಸೇವಾ ಭಾವ ಇವರಲ್ಲಿ ರಕ್ತಗತವಾಗಿರುವುದೆಂದು ಕಂಡುಬಂದಿದೆ. ಹೀಗೆ ಹೇಳುವುದರಲ್ಲಿ ಕಿಂಚಿತ್ತೂ ಉತ್ಪ್ರೇಕ್ಷೆ ಏನೂ ಇಲ್ಲ. ಶ್ರೀ ಜ|| ಪಂಚಪೀಠಾಚಾರ್ಯರಲ್ಲಿಟ್ಟಿರುವಂತೆ, ಯೆಲ್ಲಾ ಶ್ರೀ ಶ್ರೀ ಹರ–ಗುರು ಚರಮೂರ್ತಿಗಳಲ್ಲೂ ಶ್ರೀ ವಿರಕ್ತ ಮಹಾ ಗುರುವರ್ಗದವರಲ್ಲೂ ಇವರು ಅನನ್ಯ ಭಕ್ತಿಭಾವದಿಂದ ಸೇವೆ ಸಲ್ಲಿಸುತ್ತಿರುವುದು ಜನಜನಿತವಾಗಿ ಸರ್ವವಿದಿತವಿರುತ್ತೆ.

ದಯಾಮಯರಾದ ಶ್ರೀ ಉಮಾಮಹೇಶ್ವರರೂ ಹಾಗೂ ಜಗದಾದಿ ಶ್ರೀ ಪರಮ ಪೂಜ್ಯ ಜಗದ್ಗುರು ಸಾರ್ವಭೌಮರಾದ ಶ್ರೀ ರೇಣುಕಾದಿ ಪಂಚಾಚಾರ್ಯರು, ಇವರಿಗೂ ಇವರ ಸಮಸ್ತ ಕುಟುಂಬವರ್ಗದವರಿಗೂ ಇತೋಪ್ಯತಿಶಯವಾದ ಸುದೀರ್ಘಾಯುರಾರೋಗ್ಯ, ಸಂಪತ್ಸೌಖ್ಯಾದಿ ಭಾಗ್ಯಗಳನ್ನು ನೀಡಿ ಮೇಲಿಂದ ಮೇಲೆ ಅನುಗ್ರಹಿಸುವಂಥಾಗಲೆಂದು ಹಾರೈಸುತ್ತೇನೆ.

**"ಶಿವಂ ಶಾಂತಂ".**

ಬೆಂಗಳೂರು–5

ತಾ|| 30–11–1992 **ಟಿ. ಬಿ. ಬಸವರಾಜಯ್ಯ.**

**"ಶಿವಂ ಭೂಯಾತ್"**

॥ ಓಂ ನಮೋ ವೀರಭದ್ರಾಯ ನಮಃ ॥



**ವೇ॥ ಶ್ರೀ ಎನ್. ಆರ್. ಪಂಡಿತಾರಾಧ್ಯರು**

**ಮ್ಯಾನೇಜಿಂಗ್ ಡೈರೆಕ್ಟರ್,**

**"ಬೆಂಗಳೂರು ಬಾಡಿ ಬಿಲ್ಡರ್ಸ್ (ಪ್ರೈವೇಟ್ ಲಿಮಿಟೆಡ್.)"**

ಮತ್ತು ಪ್ರಸಿದ್ಧ ಕೈಗಾರಿಕಾ ಉದ್ಯಮಿಗಳು,

**145, ಮೈಸೂರು ರಸ್ತೆ, ಬೆಂಗಳೂರು-560 018**

# N. R. PANDIT ARADHYA

S/o Late Sri Dharmaprakasha N- Rudraiah

Managing Director

BANGALORE BODY BUILDERS (P) LTD.,

BANGALORE-560 018

Born in the family of well known business and Industrialist Late revered Dharmaprakasha Sri N.Rudraiah and Late Smt. N. Rudramma.

After passing Diploma in Mechanical Engineering, he had taken up the responsibility of already established his Father's Industries for improvement and expansion of the same. Thus he is well known in the industries circles of Bangalore.

He was the Ex. President of Bangalore South Jaycees and had been awarded by International Jayces for the Involvement in Jaycees.

He is associated with the following flourishing Institutions and Organisations and is serving in them in various capacities :—

## Educational Institutions :

(1) Trustee :
Rashtreeya Sikshana Samithi Trust, Bangalore.

(2) President :
Karnataka Veerashaiva Vidyabhivridhi Nidhi Samsthe, Bangalore.

(3) Joint Secretary :

Sheshadripuram Education Society, Bangalore.

(4) Executive Committee Member :

Sri Jagadguru Renukacharya Education Society, Bangalore.

(5) Professional Bodies Ex President :

Karnataka Small Scale Industries Association, Bangalore.

(6) Vice-President :

KASSIA Centre for Quality Development and Research, Bangalore.

(7) Governing Council Member :

K.L.N. Foundation, KASSIA, Bangalore.

(8) Ex-Member :

All India Small Scale Industries Board, New Delhi.

(9) Ex-Member :

Karnataka Small Industries Advisory Board, Bangalore.

## Religious and Social Organisations :

(10) General Secretary :

Sri Mahanthara Math Trust, Chickpet, Bangalore.

(11) Joint Secretary :

Sri Sarpabhushana Shivayogeeswara Math, Trust, Bangalore-9.

(12) Managing Trustee :
Viswa Veerashaiva Parishat, Bangalore.

(13) Director :
Sri Eswara Seva Mandali, Bangalore.

(14) Managing Trustee :
Sri Nandi Veerabhadraswamy Seva Trust,
Sri Nandi Kshetra.

(15) Past Convenor, Present Member :
Sri Pralayakalada Rudradevara Swamy Temple,
Gavipura, Guttahally, Bangalore.



ಓಂ



ದಾನಿಗಳಾದ ಶ್ರೀ ಆರ್. ವಿ. ವಿಜಯಕುಮಾರ್‌ರವರು
ತಮ್ಮ ಧರ್ಮಪತ್ನಿಯವರೊಂದಿಗೆ
"ರೇಣುಕ ಏಜೆನ್ಸೀಸ್", ಶ್ರೀ ಜ|| ಪಂಚಾಚಾರ್ಯ ನಿಲಯ
ಹೊಸಹಳ್ಳಿ, ವಿಜಯನಗರ, ಬೆಂಗಳೂರು-೪೦

"ಓಂ ಅಂಬಿಕಾ ಪತಯೇ ಪಶುಪತಯೇ ಶ್ರೀ ಉಮಾಪತಯೇ
ನಮೋ ನಮಃ"

||ಶ್ರೀ ಜಗದಾದಿ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು||

**ಆರ್. ವಿ. ವಿಜಯ ಕುಮಾರ್,** "ಶ್ರೀ ಜ|| ಪಂಚಾಚಾರ್ಯ ನಿಲಯ"
ದೂರವಾಣಿ : ಕಛೇರಿ ೬೮೯೨೨೭ ನಂ. ೭, ೭ನೇ ಅಡ್ಡರಸ್ತೆ, ಹೊಸಹಳ್ಳಿ
ನಿವಾಸ ೩೫೭೮೮೨೮ (ಜೆ. ೯ನೇ ಮುಖ್ಯ ರಸ್ತೆ)
ವಿಜಯನಗರ, ಬೆಂಗಳೂರು-೪೦

ಶ್ರೀ ಟಿ. ಬಿ. ಬಸವರಾಜಯ್ಯನವರು, ತಾ. ೧೦-೭-೯೯೧
ನಂ. ೩೮, ನೇತಾಜಿ ರಸ್ತೆ, ಫ್ರೇಜರ್ ಟೌನ್,
ಬೆಂಗಳೂರು-೫

ಶ್ರೀ ಟಿ. ಬಿ. ಬಸವರಾಜಯ್ಯನವರಿಗೆ ಪ್ರೇಮಪೂರ್ವಕ ತಿಳಿಸುವುದೇನೆಂದರೆ, ನೀವು ಕನ್ನಡ ವ್ಯಾಖ್ಯಾನದೊಂದಿಗೆ ಸಿದ್ಧಾಂತ ಶಿಖಾಮಣಿಯನ್ನು ಮುದ್ರಣಗೊಳಿಸುವ ವಿಷಯ ತಿಳಿದು ಬಹಳ ಸಂತೋಷವಾಯಿತು.

ವೀರಶೈವ ಧರ್ಮಗ್ರಂಥವಾದ "ಸಿದ್ಧಾಂತ ಶಿಖಾಮಣಿ"ಯನ್ನು ಸಾಮಾನ್ಯ ಜನರ ಮನಸ್ಸಿನಲ್ಲಿಯೂ ನೆಲೆಗೊಳಿಸುವಂತೆ ಮಾಡುವುದು ಪಂಡಿತರ ಕರ್ತವ್ಯವಾಗಿದೆ. ಅನುಭವಿಗಳೂ, ವಯೋವೃದ್ಧರೂ, ಶಿವಾಗಮಗಳ ಪರಿಜ್ಞಾನವುಳ್ಳವರೂ, ವೀರಶೈವ ಮಹಾಚಾರ್ಯರಲ್ಲಿ ಅತ್ಯಂತ ಭಕ್ತಿ, ಗೌರವವುಳ್ಳವರೂ ಆದ ನೀವು ಈಗಾಗಲೇ ಅನೇಕ ಗ್ರಂಥಗಳನ್ನು ಬರೆದು ಖ್ಯಾತನಾಮರಾಗಿದ್ದೀರಿ.

ಸದ್ಯಃ ಸಿದ್ಧಾಂತ ಶಿಖಾಮಣಿ ಮುದ್ರಣಕ್ಕಾಗಿ ನಿಮಗೆ ಪೀಠಾಚಾರ್ಯರು, ಶಿವಾಚಾರ್ಯರು ಅನೇಕ ಸಂಘ ಸಂಸ್ಥೆಯವರು ಆರ್ಥಿಕ ನೆರವನ್ನು ನೀಡಿದ ವಿಷಯ ತಿಳಿದುಬಂದಿದೆ. ಈ ಕಾರ್ಯದಲ್ಲಿ ನಮ್ಮದು ಒಂದು ಅಳಿಲು ಸೇವೆ ಸಲ್ಲಬೇಕೆಂಬ ಉದ್ದೇಶದಿಂದ ಶ್ರೀ ರಂಭಾಪುರಿ, ಶ್ರೀ ಉಜ್ಜಯಿನಿ, ಶ್ರೀ ಕೇದಾರ ಶ್ರೀ ಶ್ರೀಶೈಲ ಮತ್ತು ಶ್ರೀ ಕಾಶಿ ಜಗದ್ಗುರುಗಳವರ ಹೆಸರಿನಲ್ಲಿ ರೂ. ೧೦೦೮ಗಳಂತೆ ಒಟ್ಟು ರೂ. ೫,೦೪೦-೦೦ (ಐದು ಸಾವಿರದ ನಲವತ್ತು) ರೂಪಾಯಿಗಳನ್ನು ನಗದಾಗಿ ಕೊಡುತ್ತೇನೆ. ಶ್ರೀ ಜಗದ್ಗುರು ಪಂಚಾಚಾರ್ಯರ ಅನುಗ್ರಹ ನಮ್ಮ ಹಾಗೂ ನಿಮ್ಮ ಮೇಲೆ ಸದಾ ಇರಲೆಂದು ಅತ್ಯಂತ ಭಕ್ತಿಪೂರ್ವಕ ಪ್ರಣಾಮಗಳೊಂದಿಗೆ ಪೀಠಾಚಾರ್ಯರಲ್ಲಿ ಪ್ರಾರ್ಥಿಸುತ್ತೇನೆ.

ಇಂತಿ,
ಶ್ರೀ ಜಗದ್ಗುರು ಪಂಚಾಚಾರ್ಯರ ಶ್ರೀಪಾದ ಸೇವಕ,
ಆರ್. ವಿ. ವಿಜಯ ಕುಮಾರ್

## ಧ್ಯಾನ

|| ತ್ರೈಲೋಕ್ಯ ಸಂಪದಾಲೇಖ್ಯ ||
ಸಮುಲ್ಲೇಖನ ಭಿತ್ತಯೇ |
ಸಚ್ಚಿದಾನಂದ ರೂಪಾಯ |
ಶಿವಾಯ ಬ್ರಹ್ಮಣೇ ನಮಃ ||೧||

ಅಮೃತಾರ್ಥಂ ಪ್ರಸನ್ನಾನಾಂ |
ಯಾ ಸುವಿದ್ಯಾ ಪ್ರದಾಯಿನೀ |
ಅಹರ್ನಿಶ ಮಹಂ ವಂದೇ |
ತಾಮೀಶಾನ ಮನೋರಮಾಂ ||೨||

ನಮೋಸ್ತುತೇ ಶ್ರೀ ಶಿವಯೋಗಿ
ಶಿವಾಚಾರ್ಯ ವಿಶಾಲ ಬುದ್ಧೇ |
ಫುಲ್ಲಾರವಿಂದಾಯ ತಪತ್ರನೇತ್ರ |
ಯೇನ ತ್ವಯಾ ವೀರ ಶೈವ
ಘೃತ ಪೂರ್ಣಃ ಪ್ರಜ್ವಾಲಿತೋ
ಜ್ಞಾನಮಯಃ ಪ್ರದೀಪಃ ||೩||

**ಶಿವ ಶಿವೇತಿ ಶಿವೇತಿ** ಕೂಜಂತಂ |
ಮಧುರಂ ಮಧುರಾಕ್ಷರಂ ||
ಆರುಹ್ಯ ಕವಿತಾ ಶಾಖಾಂ |
ವಂದೇ **ತಂ ಶಿವಯೋಗಿ ಶಿವಾಚಾರ್ಯ ಕೋಕಿಲಂ** ||೪||

|| ಸ್ಥಾಪಕಾಯ ಚ ಧರ್ಮಸ್ಯ | ಸರ್ವ ಧರ್ಮಸ್ವರೂಪಿಣೇ |
ಅವತಾರ ವರಿಷ್ಠಾಯ | ರೇಣುಕಾಚಾರ್ಯಾಯ ತೇ ನಮಃ ||೫||

॥ ಶ್ರೀ ಗಿರಿಜಾ ಸಮೇತ ಶ್ರೀ ವಿರೂಪಾಕ್ಷೇಶ್ವರಾಯ ನಮಃ ॥

॥ ಓಂ ॥



# ಸಂಸ್ಮರಣೀಯಃ

ಆಧ್ಯಾತ್ಮ ಶಿರೋರತ್ನ ಶ್ರೀ ಟಿ. ಬಿ. ಬಸವರಾಜಯ್ಯನವರು ನಿಜಕ್ಕೂ ಸನ್ಮಾನಾರ್ಹರು. ರೇಣುಕಾದಿ ಪಂಚಾಚಾರ್ಯರಿಂದ ಸ್ಥಾಪಿತವಾದ ವೀರಶೈವ ಧರ್ಮ ಸಾಹಿತ್ಯಕ್ಕೆ ತಮ್ಮ ಅಧ್ಯಯನದ ಕೊಡುಗೆಯನ್ನು ನೀಡಿರುವುದು, ಅವರ ಧರ್ಮ ಶ್ರದ್ಧೆಯನ್ನು, ಅನನ್ಯ ತ್ಯಾಗವನ್ನು ತಿಳಿಸುತ್ತದೆ. ಎಂಭತ್ತೆಂಟರ ಇಳಿಯ ವಯಸ್ಸಿನಲ್ಲಿಯೂ ಸಾರಸ್ವತ ವ್ಯವಸಾಯದಿಂದ ವಿರಮಿಸಿರುವದಿಲ್ಲ ದಿರುವುದು ನಮ್ಮೆಲರ ಸುದೈವ. ಇಂತಹ ಅಪರ ವಯಸ್ಸಿನಲ್ಲಿ "ಶ್ರೀ ಸಿದ್ಧಾಂತ ಶಿಖಾಮಣಿಗೆ" ಕನ್ನಡ ವ್ಯಾಖ್ಯಾನವನ್ನು ರಚಿಸಿರುವುದು ಅಭಿನಂದನಾರ್ಹ ವಾದುದು.

ವೀರಶೈವ ಧರ್ಮವು ಭಾರತೀಯ ಸನಾತನ ಧರ್ಮಗಳಲ್ಲಿ ಒಂದು. ಈ ಧರ್ಮ ತತ್ವಗಳು ವೇದ, ಆಗಮ, ಉಪನಿಷತ್ತು, ಪುರಾಣಾದಿಗಳಲ್ಲಿ ಪ್ರೋಕ್ತವಾಗಿದೆ. ವೀರಶೈವ ಧರ್ಮದರ್ಶನಗಳ ಸಮಗ್ರ ತತ್ವಗಳನ್ನು ಒಂದೇ ಗ್ರಂಥದಲ್ಲಿ ಅವಲೋಕನ ಮಾಡಬೇಕಾದರೆ, **ಸಿದ್ಧಾಂತಶಿಖಾಮಣಿಯ** ಹೊರತು ಬೇರೊಂದು ಗ್ರಂಥವಿಲ್ಲ. ಅಂತೆಯೇ ಇದು ವೀರಶೈವ ಧರ್ಮಗ್ರಂಥ ವೆಂದು ಪ್ರಸಿದ್ಧಿಯನ್ನು ಪಡೆದಿದೆ. **ಶ್ರೀ ಶಿವಯೋಗಿಶಿವಾಚಾರ್ಯರಿಂದ** ರಚಿತವಾದ ಈ ಗ್ರಂಥವನ್ನು ವೀರಶೈವ ಧರ್ಮ ಸಂಹಿತೆ ಮತ್ತು ತತ್ವ

ಸಿದ್ಧಾಂತಗಳನ್ನು ಸಕಲ ಸುಂದರ ಸಂಸ್ಕೃತ ಭಾಷೆಯಲ್ಲಿ ನಿರೂಪಿಸುವ ಪರಮ ಪವಿತ್ರ ಗ್ರಂಥ. ಹನ್ನೊಂದನೆಯ ಶತಮಾನದಿಂದೀಚೆಗೆ ರಚಿತವಾದ ಎಲ್ಲಾ ವೀರಶೈವ ಸಿದ್ಧಾಂತಗಳಲ್ಲಿ ಇದು ಪ್ರಮಾಣಗ್ರಂಥವಾಗಿ ಉಲ್ಲೇಖಿಸಲ್ಪಡುವುದರಿಂದ ಆ ಕಾಲಕ್ಕಿಂತಲೂ ಪೂರ್ವದ್ದೆಂಬುದಂತೂ ಸ್ಪಷ್ಟ.

ವೀರಶೈವಮತಸ್ಥಾಪಕರಾದ ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಿಸಿದ ಷಟ್ಸ್ಥಲ ಸಿದ್ಧಾಂತವು ಈ ಗ್ರಂಥದ ವಿಷಯ. ಶಿವಜೀವೈಕ್ಯರೂಪ ಲಿಂಗಾಂಗಸಾಮರಸ್ಯವನ್ನು ಬೋಧಿಸುವುದೇ ಈ ಸಿದ್ಧಾಂತದ ರಹಸ್ಯ. ಜೀವನು ಶಿವರೂಪ ಮುಕ್ತಿಮಂದಿರವನ್ನೇರಲು ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂಬ ಆರು ಸೋಪಾನಗಳು ರಚಿಸಲ್ಪಟ್ಟಿರುವುವು. ಇವೇ ಷಟ್‌ಸ್ಥಲಗಳೆಂದು ಪ್ರಸಿದ್ಧವಾಗಿರುವುವು. ಪರಬ್ರಹ್ಮವು ಸ್ಥಲ ಶಬ್ಧದಿಂದ ಪ್ರತಿಪಾದಿತವಾಗಿರುವುದು. ಈ ಸ್ಥಲವು ಅಂಗಸ್ಥಲ, ಲಿಂಗಸ್ಥಲ, ಭೇದದಿಂದ ಎರಡು ಪ್ರಕಾರವಾಗಿದ್ದು, ಅಂಗಸ್ಥಲವು ನಲವತ್ತನಾಲ್ಕು ವಿಧವಾಗಿಯೂ, ಲಿಂಗಸ್ಥಲವು ಐವತ್ತೇಳು ವಿಧವಾಗಿಯೂ ವಿಭಾಗವನ್ನು ಹೊಂದಿ ಒಟ್ಟು ನೂರೊಂದು ಸ್ಥಲಗಳಾಗಿರುವುವು. ಇವುಗಳಲ್ಲಿ ಅಷ್ಟಾವರಣ, ಪಂಚಾಚಾರ, ಶಿವ, ಜೀವ, ಶಕ್ತಿ, ಜಗತ್ಸತ್ಯತ್ವ, ಲಿಂಗಾಂಗ ಸಾಮರಸ್ಯಾತ್ಮಕ, ಶಿವಯೋಗಾದಿಗಳು ಹೃದಯಂಗಮವಾಗಿ ನಿರೂಪಿತವಾಗಿವೆ. ಹೀಗೆ ಏಕೋತ್ತರ ಶತಸ್ಥಲಾತ್ಮಕವಾದ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಈ ಮಹಾ ಗ್ರಂಥವು ಮಾನವರ ಅಮೃತಾರ್ಥಕ್ಕೆ ಸಹಕಾರಿಯಾಗಿದೆ.

ಪ್ರಸ್ತುತ ಕೃತಿಯಲ್ಲಿ ಗ್ರಂಥಕರ್ತರು ಸಿದ್ಧಾಂತಶಿಖಾಮಣಿಯ ಸಂಪೂರ್ಣ ಶ್ಲೋಕಗಳಿಗೆ ವ್ಯಾಖ್ಯಾನವನ್ನು ಮಾಡದಿದ್ದರೂ, ಪಿಂಡಾದಿ-ಜ್ಞಾನಶೂನ್ಯಂತ ಸ್ಥಲಗಳಲ್ಲಿ ಶೀರ್ಷಿಕೆಯೊಂದಿಗೆ ನೂರೊಂದು ಸ್ಥಲಗಳಿಗೆ ತತ್ತ್ವಸ್ಥಲಾಂತರ್ಗತವಾದ ಆಯ್ದ ಕೆಲವು ಮುಖ್ಯ ಶ್ಲೋಕಗಳಿಗೆ ಸಂಕ್ಷಿಪ್ತ ವ್ಯಾಖ್ಯಾನವನ್ನು ಮಾಡಿದ್ದಾರೆ. ಐದುನೂರು ಪುಟಗಳ ಗಾತ್ರವುಳ್ಳ ಈ ಕೃತಿಯಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧಗಳೆಂಬ ಎರಡು ಭಾಗಗಳಿದ್ದು ಅವುಗಳಲ್ಲಿ ಕ್ರಮವಾಗಿ ನಲವತ್ತನಾಲ್ಕು ಅಂಗಸ್ಥಲಗಳ ಮತ್ತು ಐವತ್ತೇಳು ಲಿಂಗಸ್ಥಲಗಳ, ವಿವರಣೆಯು ಸರ್ವಾಂಗ ಸುಂದರವಾಗಿ ಮೂಡಿಬಂದಿದೆ.

ಶ್ರೀಯುತರು ಅಲ್ಲಲ್ಲಿ ವೇದ, ಆಗಮ, ಉಪನಿಷತ್ತು, ಬ್ರಹ್ಮಸೂತ್ರ, ಗೀತೆ, ಇವುಗಳ ಉದ್ಗ್ರಂಥ ವ್ಯಾಖ್ಯಾನಗಳಿಂದ ಪ್ರಮಾಣೀಕರಿಸುವುದರ ಮೂಲಕ ತಮ್ಮ ವ್ಯಾಖ್ಯಾನದ ಪ್ರಾಮಾಣ್ಯವನ್ನು ವ್ಯಕ್ತಪಡಿಸಿದ್ದಾರೆ. ಪೂರ್ವಸೂರಿಗಳ ಮತ್ತು ವಚನವಾಙ್ಮಯದ ನೆರವನ್ನು ಪಡೆದ ವ್ಯಾಖ್ಯಾನಕಾರರು ತಮ್ಮ ಸ್ವತಂತ್ರ ವಿಚಾರ ಪ್ರವೃತ್ತಿಯನ್ನು ನಿರಾತಂಕವಾಗಿ ಹರಿಯಬಿಟ್ಟಿದ್ದಾರೆ. ಜಟಿಲ ಮತ್ತು ಸಂದಿಗ್ಧ ಸಂಗತಿಗಳನ್ನು ಶ್ರೀಸಾಮಾನ್ಯರಿಗೂ ಮನಮುಟ್ಟುವಂತೆ ಮಾಡಲು ಅಲ್ಲಲ್ಲಿ ಲೌಕಿಕ ದೃಷ್ಟಾಂತಗಳಿಂದ ಕೂಡಿಕೊಂಡಿರುವ ವ್ಯಾಖ್ಯಾನದ ಶೈಲಿಯು ಅತ್ಯಂತ ಸರಳವಾಗಿದೆ. ಲೇಖಕರು ಮನಸ್ಸು ಮಾಡಿದಲ್ಲಿ ಕೃತಿಯ ಗಾತ್ರವನ್ನು ಗಮನಾರ್ಹ ಪ್ರಮಾಣದಲ್ಲಿ ತಗ್ಗಿಸ ಬಹುದಾಗಿತ್ತೆಂಬ ಅನಿಸಿಕೆಯು ವಿಮರ್ಶಕರ ಮತ್ತು ಓದುಗರ ಮನಸ್ಸಿಗೆ ಬರದಿರಲಾಗದು. ಅಂತೂ ವ್ಯಾಖ್ಯಾನವು ವೇದ, ಆಗಮ ವಚನೋಪನಿಷತ್ತುಗಳಲ್ಲಿ ಇವರಿಗಿರುವ ಪರಿಶ್ರಮ ಸ್ವಾಧ್ಯಾಯಶೀಲತೆ. ಸ್ವಾನುಭವಗಳನ್ನು ಎತ್ತಿ ತೋರಿಸುತ್ತದೆ.

ಒಟ್ಟಿನಲ್ಲಿ ಕೃತಿಕಾರರ ಪಾಂಡಿತ್ಯಾನುಭವಗಳು ಪರಿಪಕ್ವವಾದ ಕಾಲದಲ್ಲಿ ರಚಿತವಾದ ಈ ವ್ಯಾಖ್ಯಾನವು ಹೃದಯಂಗಮವಾಗಿದೆ. ಜಿಜ್ಞಾಸುಗಳ ವಾಚನೀಯ ಗ್ರಂಥವಾದ ಇದನ್ನು ಸರ್ವರೂ ಸಂಗ್ರಹಿಸಿ ಅಭ್ಯಸಿ ಸಾಧ್ಯವಾದಷ್ಟು ತತ್ವಪ್ರಚಾರ ಮಾಡಿದಲ್ಲಿ ಕೃತಿಕರ್ತರ ಪರಿಶ್ರಮವು ಸಾರ್ಥಕವಾಗುವುದು. ವೀರಶೈವ ಧರ್ಮ ತತ್ವವನ್ನು ಬಿತ್ತರಿಸುವಲ್ಲಿ ತಮ್ಮ ಬದುಕನ್ನೇ ಅರ್ಪಿಸಿಕೊಂಡಿರುತ್ತಾರೆ. ಶ್ರೀಯುತರ ಪರಿಶ್ರಮ ಸಾರ್ಥಕವಾಗಿದೆ.

ತಮ್ಮ ವಿಶ್ವಾಸಿಗಳು,
ಟ್ರಸ್ಟಿಗಳು
ಶ್ರೀ ಮಹಾಂತರ ಮಠ
ಮತ್ತು ಶ್ರೀ.ಜ.ರೇ. ಪಂ.ಉ.ವಿ.ನಿ.
ಬೆಂಗಳೂರು.

|| ಶ್ರೀಃ ||

## ಟ್ರಸ್ಟಿಗಳು



|| ಶ್ರೀರಸ್ತು ||

ಓಂ

"ಶ್ರೀ ಉಮಾ ಮಹೇಶ್ವರೇಭ್ಯೋ ನಮಃ"



ಆಧ್ಯಾತ್ಮಿಕ ಶಿರೋರತ್ನ ಶ್ರೀ ಟಿ. ಬಿ. ಬಸವರಾಜಯ್ಯನವರು, ಗ್ರಂಥಕರ್ತರು,
ಬೆಂಗಳೂರು–೫

"ಧರ್ಮೇಣ ಲಭತೇ ಸರ್ವಂ । ಧರ್ಮಸಾರ ಮಿದಂ ಜಗತ್
ಧರ್ಮೋ ರಕ್ಷತಿ ರಕ್ಷಿತಃ"

॥ ಬೋದ್ಧಾರೋ ಮತ್ಸರಗ್ರಸ್ತಃ । ಪ್ರಭವಃ ಸ್ಮಯಧೂಷಿತಃ ॥
ಅಭೋ ದೋಪಿ ಹತಾಶ್ಚಾಂಗೇ । ಜೀರ್ಣಮಂಗೇ ವಿಶೇಷತಃ ॥

(ಭರ್ತೃಹರಿ)

**V. S. MALIMATH,**
**CHIEF JUSTICE**

**Chief Justice's Bungalow**
**"JUDGES AVENUE"**
**Cochin-682 011**

April 29, 1991.

Dear Shri Basavarajayya,

I am in receipt of your book 'Shree Ratnagarbha Ganapati & Shree Chandramouleeshwaralinga'. I appreciate your gesture in presenting this book. I will try to read and assimilate the thoughts and ideas conveyed by you.

You have indeed covered a very important and sensitive topic-a principle chapter in the life of Shri Adishankaracharya. It is not known to the common people that the Swamiji of Shree Rambhapuri gave the Shivalinga to Adishankaracharya. You have therefore done yeomen service to the people by unfolding this important aspect in the life of Adishankaracharya.

I convey my congratulations on your producing such a good and important book.

With best wishes,

Yours Sincerely
(Sd.)

Shri T. B. Basavarajayya,
38, Netaji Road,
Frazer Town,
Bangalore-560 005

V.S. MALIMATH,
CHIEF JUSTICE

Chief Justice's Bungalow
"JUDGES AVENUE"
Cochin-682 011

May 26, 1991

Dear Shri Basavarajayya,

I thank you for sending me with your compliments your book "Essentials of Spiritualism". It is a mighty contribution of yours on such a difficult subject. Without vast reading and scholarship, it is not easy to produce a book on the subject of spiritualism. I congratulate you on the wonderful efferts you have put in, in writing the book for the benefit of the people at large. I hope it will be a great source of information and encouragement to all those who are in the quest of the knowledge of spiritualism.

With best wishes,

Yours sincerely,
(Sd.)

Shri. T. B. Basavarajayya,
No. 38, Netaji Road,
Frazer Town,
Pulikeshi Nagar,
Bangalore-560 005

## ಶ್ರೀ ವೀರಭದ್ರ ಶ್ರೀ ಭದ್ರಕಾಳಿ ದೇವಿ ಭ್ಯೋ ನಮಃ

"ನಮಾಮಿ ವೀರ ಭದ್ರಂ ತಂ ಅಸಮಾನ ಪರಾಕ್ರಮಂ ।
ವೀರಶೈವ ಮತಂ ಸ್ಥಾಪ್ಯ । ವರ್ಧಯನ್ ಯೋ ಪುರಾ ಭುವಿ ॥
(ಸ್ಕಾಂದ ಪುರಾಣ)

" ವೀರಭದ್ರೋ ಮಹಾತೇಜಾ। ಹಿಮ ಕುಂದೇಂದು ಸನ್ನಿಭಃ ।
ಭದ್ರಕಾಳೀ ಪ್ರಿಯೋ ನಿತ್ಯಂ । ಮಾತೃಣಾ ಮಭಿ ರಕ್ಷಕಃ ।
ರುದ್ರಸ್ಯ ತನ ಯೋ ರೌದ್ರಃ । ಶೂಲಾಸಕ್ತ ಮಹಾಕರಃ ।
ಸಹಸ್ರಭಾಹುಃ ಸರ್ವಜ್ಞೋ । ಸರ್ವಾಯುಧಧರಃ ಸ್ವಯಂ ।
ತ್ರೇತಾಗ್ನಿ ನಾಶಕೋ ದೇವ। ಸ್ತ್ರೈಲೋಕ್ಯಾಭಯದಃ ಪ್ರಭುಃ ।
ತ್ರೈಲೋಕ್ಯ ನಮಿತಃ ಶ್ರೀಮಾನ್ । ಶಿವಪಾದಾರ್ಚನೇ ರತಃ ॥
(ಲಿಂಗ ಪುರಾಣ)

ಶ್ರೀ ಭದ್ರಾಕಾಳೀ ಪತಿ ಶ್ರೀ ವೀರಭದ್ರ ಸ್ವಾಮಿ, ಮಹಾ ತೇಜಸ್ಸಂಪನ್ನ ಅತುಲ ಪರಾಕ್ರಮಿ, ಹಿಮಜಲದ ಮುತ್ತಿನಂತೆ ಪ್ರಜ್ವಲಿಸುವ ಧಾವಳ್ಯಕರ! ಸ್ಫಟಿಕದಂತೆ, ಶುಭ್ರವಾದ ಮಲ್ಲಿಗೆಯಂತೆ, ಚಂದ್ರನ ಅಮೃತ ಕಿರಣಗಳಂತೆ, ಶುಭ್ರಮಯನೂ, ಶ್ರೀ ಭದ್ರಕಾಳೀ ಪ್ರಿಯನೂ, ಸಪ್ತಮಾತೃಕಾ ದೇವಿಯರ ಪೋಷಕನೂ ; ಮಹಾ ರುದ್ರ ರುದ್ರಾಣಿಯರ ಮಗನೂ, ಈ ಕಾರಣದಿಂದ, ವೀರೇಶನು ರೌದ್ರನೆಂಬ ಹೆಸರಿನಿಂದ ಪ್ರಸಿದ್ಧನಿರುವನು. ಶೂಲ ಹಸ್ತ, ಸರ್ವಜ್ಞ, ಸಹಸ್ರಕರಗಳುಳ್ಳ ಪ್ರಭು. ನಷ್ಟಾತ್ಮಕ, ಹಿಂಸಾತ್ಮಕ, ಅಥರ್ವಣ ಯುತ ಯಜ್ಞಗಳ ತ್ರೇತಾಗ್ನಿಗಳನ್ನು ಆರಿಸುವವನು, ಮೂರು ಲೋಕದ ಭಕ್ತರಿಗೆ ಅಭಯ ನೀಡುವ ಮಹಾಪ್ರಭು, ತ್ರಿಲೋಕ ವಂದ್ಯ, ಶ್ರೀಮಂತ ಹಾಗೂ ಶಿವಾರಾಧಕ ವ್ರತಶೀಲ, ನಿನ್ನ ಶ್ರೀ ಪಾದಂಗಳಿಗೆ ನಮೋ ನಮೋ ಯೆಂಬೆ.

ಆದಿ ಶ್ರೀ ವೀರೇಶನ ವೀರಸಿಂಹಾಸನಾರೂಢರಾಗಿ, ಶಿವೋಕ್ತಿಯಂತೆ, ಶ್ರೀ ಸದ್ಯೋಜಾತ ಮುಖ ಸಂಭವರಾದ ಆದಿ ಶ್ರೀ ಜ॥ ರೇಣುಕಾಚಾರ್ಯರು,

ಶ್ರೀ ಮದ್ರಂಭಾಪುರೀ ಮಹಾ ವೀರಪೀಠಾಧ್ಯಕ್ಷರಾಗಿ, ಆದಿ ಜಗದ್ಗುರುಗಳಾಗಿ ವಿರಾಜಿತರಾಗಿರುವರು.

"ಜಯ ಶ್ರೀ ರೇಣುಕಾಚಾರ್ಯ। ಜಯ ಶ್ರೀ ಶಂಕರ ಪ್ರಿಯ॥
ಜಯ ಶ್ರೀ ಸೋಮೇಶ ಸಂಭೂತ । ಜಯಾ ಪ್ರಾಕೃತ ವೈಭವ॥
ಜಯ ಯೋಗಿವರ ಸ್ತುತ್ಯ । ಜಯ ಭಕ್ತಾಮರ ಧ್ರುಮ ॥
ಜಯ ಜ್ಞಾನ ಮಹಾ ಸಿಂಧೋ । ಜಯ ಸರ್ವ ಜಗದ್ಗುರೋ ॥
ಜಯ ಸಿದ್ಧಕುಲಾಧ್ಯಕ್ಷ । ಜಯ ಸಜ್ಜನ ರಕ್ಷಕ ॥
ಜಯ ಪಾವನ ಚಾರಿತ್ರ । ಜಯ ಮಂಗಲ ವಿಗ್ರಹ ॥
ನಮಃ ಕಲ್ಯಾಣ ರೂಪಾಯ । ವಿಶ್ವ ಕಲ್ಯಾಣ ದಾಯಿನೇ ॥
ತುಭ್ಯಂ ಶ್ರೀ ಶಂಭು ಪುತ್ರಾಯ । ಸಿದ್ಧನಾಥಾಯ ರೇಣುಕ ॥
(ಶಿವಾಧಿಕ್ಯ ಶಿಖಾಮಣಿ)

ಭಗವತ್ಪಾದ ಶ್ರೀ ಜಗದಾದಿ ಜಗದ್ಗುರು ಶ್ರೀ ರೇಣುಕಾಚಾರ್ಯರು ಶಿವಸ್ಕಂದ ಸಂಪ್ರದಾಯದವರು. ಶ್ರೀ ವೀರೇಶನ ವೀರಸಿಂಹಾಸನವನ್ನೇರಿದ-ವೀರ ರೇಣುಕರ ಸಂಬಂಧ ಅಪೂರ್ವ ಹಾಗೂ ಅಮೋಘವಿರುತ್ತೆ. ಶ್ರೀ ವೀರಭದ್ರನ ದಿವ್ಯ ಪರಂಪರೆಗೆ ಸೇರಿದ ಮಹಾ ಮಹಿಮರು ಶ್ರೀ ರೇಣುಕರು. ಶ್ರೀ ವೀರೇಶನ ಪರಂಪರೆಯನ್ನು ಉಳಿಸಿ, ಬೆಳಸಿದವರಲ್ಲಿ ಶ್ರೀ ಜ॥ ರೇಣುಕಾಚಾರ್ಯರು, ಪ್ರಪ್ರಥಮ ಮಹಾಚಾರ್ಯರು. ಇವರ ಪ್ರಭಾವ ಮೂರು ಲೋಕಗಳಲ್ಲೂ, ಶ್ರೀ ವೀರೇಶನಂತೆ ಪ್ರಮುಖವೆನಿಸಿ ಸ್ತುತ್ಯವಿರುತ್ತೆ.

ಇಂತಪ್ಪ ಮಹಾಚಾರ್ಯರ ಶ್ರೀ ಪಾದಂಗಳಲ್ಲಿ ನಮೋ ನಮೋ ಯೆಂಬೆ

ಟಿ. ಬಿ. ಬಸವರಾಜಯ್ಯ



S. R. Somasekhara Sarma, M.A., LL.B.,
Advocate, Sahitya Siromani,
President
VIRASAIVA SANGHA

2nd Line, 9th Cross
Brodipet, GUNTUR
Andhra Pradesh
11-4-66

Dear Sir,

I am glad to receive and read your Brochure "Sri Renuka's Incarnation and His Philosophy" kindly sent by you under Book Post to me. The way in which you presented the matter is very interesting and impressive. I hope you will continue your work on this subject so that the community will be benefitted.

If possible please request the publishers of your Brochure to publish English Translation of "Siddhantha Sikhamani" of Sivayogi Sivacharya (entire book) by next Jayanthi celebration of SRI RENUKACHARYA.

Thanking you

Your's Sincerely
S. R. Somasekhara Sarma

To,

T. B. Basavarajayya
Bangalore-2

# GOVERNMENT OF KARNATAKA

S. Shankarappa, M.A., B. T., Office of
PRINCIPAL
Sree Chamarajendra Sanskrit College
Bangalore-18

Sri. T. B. Basavarajayya, 3-8-68

I feel extremely grateful to the efforts made by Sri T. B. Basavarajayya of Bangalore in bringing out a very useful work on the life and doings of the Great Acharyas of Veerasaiva Panth, particularly in Karnataka and in Bharath as a whole. His writing is one of the intuition bestowed to him by the Aeharyas as such, the research works deserve the attention of all the Veerasaivas and the philosophical minded persons of India.

I wish the writer a long life to bring out the hidden Treasure of Veerasaiva Philosopey.

S. SHANKARAPPA,
Sree Chamarajendra Samskrita College
Bangalore-18

|| ಶ್ರೀ ಉಮಾ ಮಹೇಶ್ವರಾಯ ನಮಃ ||

# ಶ್ರೀ ಸಿದ್ಧಾಂತಶಿಖಾಮಣಿಯ ದಿವ್ಯ ಸಂದೇಶ

**|| ಜೀವತ್ವಂ ದುಃಖ ಸರ್ವಸ್ವಂ | ತದಿದಂ ಮಲಕಲ್ಪಿತಂ |**

**ನಿರಸ್ಯತೇ ಗುರೋ ರ್ಭೋಧಾತ್ | ಜ್ಞಾನ ಶಕ್ತಿಃ ಪ್ರಕಾಶತೇ ||**

(ಸಿ. ಶಿ. ಪರಿ. ೧೮. ಶ್ಲೋ ೧೭)

**|| ಜಂತೂನಾಂ ನರಜನ್ಮ ದುರ್ಲಭಂ ||** ಮತ್ತು **|| ದುರ್ಲಭೋ ಮಾನುಷೋ ದೇಹಃ | ದೇಹಿ ನಾ ಕ್ಷಣ ಭಂಗುರಃ ||**

ಎಂಬ ಉಕ್ತಿಗಳಿಂದ ಮಾನವ ಜನ್ಮ ಅತ್ಯಂತ ದುರ್ಲಭವಿರುತ್ತೆ. ಮಾನವ ಜನ್ಮ ಅತ್ಯಂತ ಉತ್ಕೃಷ್ಟವಿರುತ್ತೆ. ದೇವತೆಗಳೂ ಸಹ ಮಾನವರಾಗಿ ಭುವಿಯಲ್ಲಿ ಜನಿಸಲು ಆಶಿಸುತ್ತಾರೆಂದು ಹೇಳಲಾಗಿದೆ. ಜೀವಾತ್ಮನು ಜನನ ಮರಣ ಸ್ಥಂ ಕಲೆಯಿಂದ ಪಾರಾಗಿ, ಮೋಕ್ಷಾನಂದವನ್ನು ಹೊಂದಲು ಮಾನವ ದೇಹ ಪ್ರಮುಖವೆನಿಸಿದೆ. ಈ ಕಾರಣದಿಂದ **"ಶರೀರಂ ಭದ್ರಾಣಿ ಪಶ್ಯಂತು"** ಎಂದೂ **"ಇದಂ ಶರೀರಂ ಕೌಂತೇಯ | ಕ್ಷೇತ್ರಮಿತ್ಯಭಿಧೀಯತೇ ||** ಎಂದೂ **|| ಶರೀರ ಮಾದ್ಯಂ ಖಲು ಧರ್ಮ ಸಾಧನಂ ||** ಮತ್ತು **ದೇಹೋ ದೇವಾಲಯ ಪ್ರೋಕ್ತಃ| ಜೀವೋ ದೇವಃ ಸನಾತನಃ ||** ಯೆಂದೆಲ್ಲಾ ಸ್ತುತ್ಯವಿರುತ್ತೆ. ದುರ್ಲಭವಾದ ಯಿಂತಪ್ಪ ಮಾನವ ದೇಹ ಇರುವಾಗಲೇ, **"ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಗಾಗಿ"** ಶ್ರಮಿಸ ಬೇಕು. ಇಲ್ಲವಾದರೆ ಕೋಟಿ ಕ್ಷುದ್ರ ಜನ್ಮಗಳಲ್ಲಿ ಹುಟ್ಟುತ್ತಾ ಸಾಯುತಾ,

**ಚಕ್ರವತ್ಪರಿವರ್ತಂತೇ | ಸುಖಾ ನಿ ಚ ದುಃಖಾ ನಿ ಚ ||**

ಚಕ್ರಾಕಾರವಾಗಿ ಜನನ ಮರಣವೆಂಬ ರೋಗದಲ್ಲಿ ಬಳಲುತ್ತಿರಬೇಕು.

**ಶರೀರಂ ಸುಖ ದುಃಖಾ ನಾಂ | ಆಯತ ನ ಮುಚ್ಯತೇ ||**

ಎಂದು ಶಾಸ್ತ್ರ ನಮ್ಮನ್ನು ಎಚ್ಚರಿಸುತ್ತಲಿದೆ. ನೀರ್ಗುಳ್ಳೆಯಂತೆ ಕ್ಷಣಿಕವಾದೀ ಮಾನವ ದೇಹ, ಕ್ಷಣಿಕ ಸುಖ ದುಃಖಗಳಿಗೆ ತೌರುಮನೆಯಂತಿದೆ. ಹುಟ್ಟಿಂದಿನಿಂದ ಮರಣ ಪರ್ಯಂತ ಎಲ್ಲಾ ಅವಸ್ಥೆಗಳಲ್ಲೂ ಮಾನವನು

ಅನಂತ ದುಃಖಕ್ಕೀಡಾಗಿಹನು. ಇಂತಪ್ಪ ದುಃಖಕ್ಕೆ ಮೂಲ ಕಾರಣವೇನೆಂಬು ದನ್ನು ಎಚ್ಚತ್ತು ಮಾನವ ಶ್ರೀ ಗುರು ಮುಖದಿಂದ ಅರಿಯ ಬೇಕು. ಅರಿತು ಸಕಾಲದಲ್ಲಿ ಜಾಗೃತನಾಗಬೇಕು. **ಅಸಹನೀಯವಾದ ಇಂತಪ್ಪ ದುಃಖಕ್ಕೆ ಮೂಲ ಕಾರಣವಾವುದೆಂದು ಅರಿಯಬೇಕು.**

**ಜೀವತ್ವಂ ದುಃಖ ಸರ್ವಸ್ವಂ । ತದಿದಂ ಮಲಕಲ್ಪಿತಂ ॥**

ಎಂದು ಶ್ರೀ ಜ|| ರೇಣುಕಾಚಾರ್ಯರು ಅಪ್ಪಣೆ ಕೊಡಿಸಿದ್ದಾರೆ, ಇದ ರಿಂದ ಕಂಡು ಬರುವುದೇನೆಂದರೆ, ಜೀವಾತ್ಮನ ಅನಂತ ದುಃಖ ದುಮ್ಮಾನಗಳಿಗೆ ಆಣವಾದಿ ಮಲತ್ರಯಗಳ ದೋಷವೇ ಮೂಲ ಕಾರಣವೆಂಬುದು ಸ್ಪಷ್ಟ ಪಡುತ್ತೆ.

**ಮಲವೆಂದರೇನು ?**

ಇದು ಪರಮಾತ್ಮನ ದಿವ್ಯ ಶಕ್ತಿಯ ಸಂಕೋಚ

ಆಣವಮಲ, ಮಾಯೀಯ ಮಲ, ಕಾರ್ಮಿಕಮಲವೆಂದು ಮೂರು ಬಗೆಯಾಗಿದೆ. "**ಆಣವ**"ವೆಂಬುದು ಇಚ್ಛಾಶಕ್ತಿಯ ಸಂಕೋಚ. ಇದು ಅತ್ಯಂತ ಪ್ರಬಲವಾದುದು. ಇದರಿಂದ ನಮ್ಮಲ್ಲಿ ಅಣುತ್ವ ಭಾವನೆ ಅಂದರೆ ನಾನೊಬ್ಬ ಅಲ್ಪಜ್ಞ, ಅಲ್ಪಶಕ್ತಿಮಾನ್, ಅಲ್ಪತಾ ಬುದ್ಧಿ ಹಾಗೂ ಸಂಕುಚಿತ ವರ್ತನೆ, ಸ್ವಾರ್ಥಪರತೆ ಇವು ಆಣವಮಲದಿಂದ ವುಂಟಾಗುವ ದೋಷಗಳು "**ಮಾಯೀಯ**" ವೆಂಬುದು ಜ್ಞಾನ ಶಕ್ತಿಯ ಸಂಕೋಚ. ಇದರಿಂದ ನಮಗೆ ಎಲ್ಲಾ ಸದ್ಗುಣಗಳು ದೂರವಾಗಿ, ಮಮಕಾರ, ವ್ಯಾಮೋಹ, ಚಪಲತೆ, ಸಂದೇಹ ಮೊದಲಾದ ದುರ್ಗುಣಗಳು ಅಧಿಕವಾಗುವುವು. "**ಕಾರ್ಮಿಕಮಲ**" ವೆಂದರೆ ಕ್ರಿಯಾ ಶಕ್ತಿಯ ಸಂಕೋಚ. ಇದರಿಂದ ನಮ್ಮಲ್ಲಿ ಅಹಂಕಾರ, ಕೋಪ ತಾಪಗಳು, ಮತ್ಸರ, ಅಭಿಮಾನ, ಅಭಿನಿವೇಷಾದಿಗಳು ಅಂಕುರಿಸುವುವು.

ನಮ್ಮಲ್ಲಿನ "ಸತ್ವ", ಸತ್ಸ್ವರೂಪವನ್ನೂ ಜ್ಞಾನಸ್ವರೂಪವನ್ನೂ; ರಜೋ ಗುಣ, ಆನಂದ ಸ್ವರೂಪವನ್ನೂ ಆವರಿಸಿರುವುದರಿಂದ ನಮಗೆ ಜೀವನದಲ್ಲಿ ಸತತ ಜಂಜಾಟ ತಪ್ಪಿದ್ದಲ್ಲಾ, ಇದೆಲ್ಲ ಮಲದ ದುಷ್ಪರಿಣಾಮವೇ ಆಗಿದೆ.

ಇದನ್ನು ನಾವು ಸಂಪೂರ್ಣವಾಗಿ ತೊಲಗಿಸಬೇಕಾದರೆ ನಮಗೆ ಶ್ರೀಗುರು ಬೋಧಾಮೃತವೇ ದಿವ್ಯೌಷಧ ಮತ್ತದುವೆ ದಿವ್ಯಾಮೃತ. ಗುರುವು ಭವರೋಗ

ವೈಧ್ಯನಾಗಿ ದಿವ್ಯ ಸಂಜೀವಿನಿಯಂತಿರುವನು. ಇದರೊಂದಿಗೆ ಶ್ರೀ ಗುರು ಶಿಕ್ಷಾ ಗುರು ದೀಕ್ಷಾಗುರು ಮತ್ತೂ ಮೋಕ್ಷ ಗುರುವೂ ಆಗಿರುವನು. ಶಿವದೀಕ್ಷಾ ಪ್ರಭಾವದಿಂದ ತ್ರಿಮಲಗಳ ದುಷ್ಪ್ರಭಾವ ಪೂರ್ಣವಾಗಿ ನಾಶ ಗೊಳ್ಳುವುವು. ಹೀಗೆ ಮಲತ್ರಯಗಳು ನಿವಾರಣೆಯಾದ ಬಳಿಕ, ಮಾನವನಲ್ಲಿ ಸಹಜವಾಗಿರುವ ದಿವ್ಯ ಜ್ಞಾನ ಶಕ್ತಿ ತಾನೇ ತಾನಾಗಿ ಪ್ರಜ್ವಲಿಸುವುದು. **ಇದುವೇ ನಮ್ಮ ಪ್ರಣವಮಯ ಸ್ವ ಸ್ವರೂಪ.** ನಿಜಸ್ವರೂಪ. ಅರಿವೇ ಜ್ಞಾನವೆನಿಸಿದೆ. TRUTH IS GOD ಮುಮ್ಮಲಗಳ ವೈಖರಿಯಿಂದ ಇಂತಪ್ಪ ಜ್ಞಾನವು,

**ಅಜ್ಞಾನೇ ನಾ ವೃತಂ ಜ್ಞಾನಂ । ತೇನ ಮುಹ್ಯಂತಿ ಜಂತವಃ ॥**

ಸೂರ್ಯ ಪ್ರಕಾಶವು ದಟ್ಟವಾದ ಕಾರ್ಮೋಡಗಳ ಅವರಣದಿಂದ ಕಾಣಿ ಸದಂತಿರುವಂತೆ, ಅಜ್ಞಾನವೆಂಬ ತ್ರಿಮಲ ರೂಪ ಕಾರ್ಗತ್ತಲು, ಜ್ಞಾನಮಯ ನಮ್ಮ ಸ್ವ ಸ್ವರೂಪವನ್ನು ಕಾಣಗೊಡದೆ ಮುಚ್ಚಿದೆ. ಕೆಂಡವನ್ನು ಬೂದಿ ಮುಚ್ಚಿರುವಂತೆ ಅಜ್ಞಾನವೆಂಬ ಕತ್ತಲು ಜ್ಞಾನವನ್ನು ಆವರಿಸಿದೆ. ಅನಾದಿ ಕಾಲದಿಂದ ಜೀವಾತ್ಮನನ್ನು ಅಜ್ಞಾನವು ಕರಡಿಹಿಡಿತದಂತೆ, ಕಪಿಮುಷ್ಟಿಯಂತೆ ಹಿಡಿದಿದೆ ಇಂತಪ್ಪ ಹಿಡಿತವನ್ನು ಶಿವ ದೀಕ್ಷಾತ್ರಯಗಳಿಂದ ಶ್ರೀ ಗುರು ಸಿಡಿಲ ಗೊಳಿಸಿ ಧ್ವಂಸಗೊಳಿಸುವನು. ಅದರಿಂದ ನಾವು ಮುಕ್ತರಾಗುವೆವು.

**ಗುರೋಃ ಕಟಾಕ್ಷ ಸಂಸಿದ್ಧೇ। ಕೋವಾಲೋಕೇಷು ದುರ್ಲಭಃ॥**

ಜಗತ್ತನ್ನು ಆವರಿಸಿರುವ ಕತ್ತಲನ್ನು ಸೂರ್ಯನು ಹಗಲಿನಲ್ಲಿ ಮಾತ್ರ ನಾಶ ಗೊಳಿಸುವನು. ಆದರೆ ಜ್ಞಾನ ಸೂರ್ಯನಂತಿರುವ ಶ್ರೀ ಗುರುವಿನಿಂದ ಅನುಗ್ರಹೀತವಾದ ವೇಧಾ ದೀಕ್ಷೆ, ಮಂತ್ರದೀಕ್ಷೆ, ಕ್ರಿಯಾ ದೀಕ್ಷೆಗಳ ಪ್ರಭಾವ ದಿಂದ, ಹೃದಯದ ಅಜ್ಞಾನ ಗ್ರಂಥಿಗಳು ನಾಶವಾಗುವುವು.

**ಶಿವ ದೀಕ್ಷಾ ಪ್ರಭಾವೇನ । ಶಿವತ್ವಂ ಲಭತೇ ನರಃ ॥**
**ವೀರಮಾಹೇಶ್ವರಾಣಾಂಚ ದೀಕ್ಷಾಂ। ಮೋಕ್ಷಾರ್ಥ ಸಾಧಕಾಂ।**
**ಕಾಂಕ್ಷಂತಿ ಪ್ರಮಥಾಃ ಸರ್ವೇ। ನ ಕಾಂಕ್ಷಂತಿ ಜನಾಧಮಾಃ ॥**

(ವೀರಾಗಮ)

ಅಂದರೆ, ಪ್ರಜ್ಞಾನವಂತರಾದ ಪ್ರಮಥಾಧೀಶ್ವರರು ತ್ರಿವಿಧ ಶಿವದೀಕ್ಷೆಯನ್ನು ಕಾಂಕ್ಷಿಸುತ್ತಾರೆ (ಬಯಸುತ್ತಾರೆ). ಇದರ ಸ್ವರೂಪ ಪ್ರಜ್ಞೆಯಿಲ್ಲದ ಸಾಮಾನ್ಯ ಜನರು ಶಿವದೀಕ್ಷೆಯನ್ನು ಬಯಸರು. ಭವ ಬಂಧನದಿಂದ ಮುಕ್ತರಾಗಲು ಬಯಸುವುದಿಲ್ಲ. ಮುಕ್ತರಾಗುವುದೇ ಮಾನವಜನ್ಮದ ಗುರಿ.

ಮಾನವನ ಹೃದಯದಲ್ಲಿ ಅನೇಕ ಜನ್ಮಗಳಲ್ಲಿ ಮಾಡಿದ ಬಹುಕೃತ ಪಾಪರಾಶಿಗಳು ಅಜ್ಞಾನ ಗ್ರಂಥಿಗಳ ರೂಪದಲ್ಲಿ ಸೂಕ್ಷ್ಮಾತಿಸೂಕ್ಷ್ಮವಾಗಿ ವಾಸನಾ ರೂಪದಲ್ಲಿ ಅಡಗಿರುವುದರಿಂದ, ಈ ಕಪ್ಪು ತೆರೆಗಳು ತನ್ನ ಸ್ವರೂಪ ದರ್ಶನಕ್ಕೆ ಅನಾದಿ ಕಾಲದಿಂದ ಪ್ರತಿಬಂಧಕವಾಗಿವೆ. ವೀರ ಮಾಹೇಶ್ವರ ವರ್ಗದ ಮಹಾಗುರುವಿನ ಹಸ್ತ ಮಸ್ತಕ ಸಂಯೋಗ ದೀಕ್ಷೆ ಹಾಗೂ ಕಟಾಕ್ಷ ದೀಕ್ಷಾತ್ರಯಗಳಿಂದ ಮಲತ್ರಯಗಳು, ಸೂರ್ಯನನ್ನು ಕಂಡ ಮಂಜು ಕಣ್ಮರೆಯಾಗುವಂತೆ ಆಣವಾದಿ ಮಲತ್ರಯಗಳು ಸಂಪೂರ್ಣ ನಾಶಗೊಳ್ಳುವವು.

**ದೀಯತೇ ಚ ಶಿವಜ್ಞಾನಂ | ಕ್ಷೀಯತೇ ಪಾಶ ಬಂಧನಂ ||**

ಎಂದು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ರೇಣುಕರು ಅಪ್ಪಣೆ ಕೊಡಿಸಿದ್ದಾರೆ. ಶಿವಜ್ಞಾನ, ಅಜ್ಞಾನ ತೆರೆಗಳಿಂದ ಮುಚ್ಚಲ್ಪಟ್ಟಿರುವುದು. ಇದು ಶ್ರೀಗುರು ಬೋಧನೆಂಬ ಜ್ಞಾನ ಸೂರ್ಯನ ಪ್ರಕಾಶದಿಂದ ತೊಲಗಿ, ಮಾನವನ ಶಿವಜ್ಞಾನಮಯ ಸ್ವ ಸ್ವರೂಪವು ಅಖಂಡವಾಗಿ ವಿಸ್ತರಿಸಿ, ಅಖಿಲ ಲೋಕ ಕಲ್ಯಾಣಕ್ಕಾಗಿ ಪರಿ ಶೋಭಿಸ ತೊಡಗುವುದು. ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯುಂಟಾಗುವುದು. ಇದುವೇ ಮಾನವ ಜೀವನದ ಧ್ಯೇಯ ಅಂತಿಮ ಗುರಿ. ಇಂತಹ **ವಿಶ್ವಪ್ರೇಮದ ದಿವ್ಯ ತತ್ವವೇ ಶ್ರೀರೇಣುಕ ಗೀತೆಯ ಪರಮ ಸಂದೇಶ.** ಶಿವಂ.

**ಟಿ ಬಿ. ಬಸವರಾಜಯ್ಯ**

ಶ್ರೀ ಜಗದ್ಗುರು ಪಂಚಾಚಾರ್ಯರ್ಾಃ ಪ್ರಸೀದಂತು



॥ ಯೇನ ರಕ್ಷಾವತೀ ಜಾತಾ ।
ಶಿವಭಕ್ತಿಃ ಸನಾತನೀ ॥
ಬೌದ್ಧಾದಿ ಪ್ರತಿಸಿದ್ಧಾಂತ ॥
ಮಹಾ ದ್ವಾಂತಾಂಶು ಮಾಲಿನಾ ॥

(ಸಿ. ಶಿ. ಪರಿ ೧ ಶ್ಲೋ ೨೩)

ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರು, ಬೌದ್ಧ ಮತ ಸ್ರರ್ವತ್ರ ವ್ಯಾಪಕವಾಗಿ ಹರಡಿರುವ ಕಾಲದಲ್ಲಿದ್ದ ಮಹನೀಯರು.

ಶ್ರೀ ಬುದ್ಧ (ಸಿದ್ಧಾರ್ಥ) ಕಿ. ಪೂ. ೫೬೩ ರಲ್ಲಿ ಜನಿಸಿ ೮೦ ವರ್ಷ ಕಾಲ ಅಂದರೆ, ಕ್ರಿ. ಪೂ. ೪೮೩ ರ ವರವಿಗೂ ಭುವಿಯಲ್ಲಿದ್ದ. ಶ್ರೀ ಶಿವಯೋಗಿ ಶಿವಾಚಾರ್ಯರಿದ್ದ ಕಾಲವಿದೆಂದು ಪರಿಗಣಿಸಲಾಗಿದೆ. ಬೌದ್ಧಮತ ಶ್ರೀ ವೇದಾಗಮೋಪನಿಷದಾದಿ ಧರ್ಮಕ್ಕೆ ವಿರುದ್ಧವಿತ್ತು. ನಿರೀಶ್ವರವಾದದ ತಳಹದಿಯ ಮೇಲೆ ಸ್ಥಾಪಿತವಾಗಿ, ಜೀವಕಾರುಣ್ಯವನ್ನೇ ಪ್ರಧಾನವಾಗಿ ಎತ್ತಿ ಹಿಡಿದಿದ್ದ ಮತವದು. ಇದನ್ನು ಕಂಡ ಶ್ರೀ ಶಿವಯೋಗಿ ಶಿವಾಚಾರ್ಯರು ಸನಾತನವಾದ ಶಿವಭಕ್ತಿ, ಶಿವಾರ್ಚನೆ, ಶಿವಜ್ಞಾನಾದಿ ಶ್ರೀ ಷಟ್ಸ್ಥಲ ಮಹಾ ಸಿದ್ಧಾಂತವನ್ನು "ರಕ್ಷಾವತೀಜಾತಾ" ರಕ್ಷಿಸುವುದಕ್ಕಾಗಿ, ॥ **ಬೌದ್ಧಾದಿ ಪ್ರತಿ ಸಿದ್ಧಾಂತ। ಮಹಾದ್ವಾಂತಾಂಶುಮಾಲಿನಾ॥** ಆನೆಯ ಕುಂಭ ಸ್ಥಳವನ್ನು ಕಂಡ ಸಿಂಹ, ಗಜೇಂದ್ರನ ಮೇಲೆ ಹೌ ಹಾರಿ ಬೀಳುವಂತೆ, ಬೌದ್ಧ ಧರ್ಮವನ್ನು ಹಿಮ್ಮೆಟ್ಟಿಸಲು ಶ್ರಮಿಸಿರುವರು, ಪ್ರತಿಭಟಿಸಿರುವರು. ಮೇಲಿನ ಶ್ಲೋಕದಿಂದ ಇದು ಕಂಡು ಬರುತ್ತೆ. ಈ ಆಧಾರದ ಮೇಲೆ ಮುಂದಿನ ಪುಟಗಳಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರ ಕಾಲದ ಬಗೆಗೆ ನಿಖರವಾಗಿ ಕಾಣಬಹುದು.

## ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರು

ಆದಿ ಶ್ರೀ ಶಿವಯೋಗಿ ಶಿವಾಚಾರ್ಯರು ಇದ್ದ ಕಾಲ ಸ್ಪಷ್ಟವಾಗಿ ತಿಳಿದು ಬಂದಿಲ್ಲ. **"ಲೋಕೋ ಭಿನ್ನರುಚಿಃ"** ಎಂಬಂತೆ, ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದು ಸರಿಯಷ್ಟೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಕರ್ತರು ಕ್ರಿ. ಶ. ಎಂಟನೇ ಶತಮಾನದಲ್ಲಿದ್ದರೆಂದು ಕೆಲವರು ಅಭಿಪ್ರಾಯ ಪಟ್ಟಿರುತ್ತಾರೆ. ಇದರಿಂದಾಗಿ ಶ್ರೀ ಶಿವಯೋಗಿ ಶಿವಾಚಾರ್ಯರ ದ್ವಾದಶ ಶತಮಾನೋತ್ಸವವನ್ನು ಕೊಂಡಾಡುತ್ತಲಿದ್ದಾರೆ. ಇದು ಸಂತೋಷದ ವಿಷಯ. ಆದರೆ ಇವರೇ ಶ್ರೀ ಸಿದ್ಧಾಂತ ಶಿಖಾಮಣಿ ರಚಿಸಿದವರೆಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಯಾಕೆಂದರೆ ಕ್ರಿ.ಶ. ೯ ನೇ ಶತಮಾನದಲ್ಲಿದ್ದ **ಶ್ರೀನಿಲಕಂಠಭಾಷ್ಯ** ಕರ್ತರಾದ ಶ್ರೀ ನೀಲಕಂಠ ಶಿವಾಚಾರ್ಯರಾಗಲಿ, ಕ್ರಿ.ಶ. ೧೦ನೇ ಶತಮಾನದಲ್ಲಿದ್ದ ಭಾಷ್ಯ ಕರ್ತರಾದ ಶ್ರೀ ಶ್ರೀಕಂಠಶಿವಾಚಾರ್ಯರಾಗಲಿ, ಅಥವಾ ಕ್ರಿ. ಶ. ೧೧ನೇ ಶತಮಾನದಲ್ಲಿದ್ದ **ಶ್ರೀಕರಭಾಷ್ಯ** ಕರ್ತರಾದ ಶ್ರೀ ಶ್ರೀಪತಿಪಂಡಿತಾರಾಧ್ಯರು ಸಹ, ಸಿದ್ಧಾಂತ ಶಿಖಾಮಣಿ ಗ್ರಂಥ ಕರ್ತರಾದ ಶ್ರೀ ಶಿವಯೋಗಿ ಶಿವಾಚಾರ್ಯರು, ಕ್ರಿ. ಶ. ೮ ನೇ ಶತಮಾನದಲ್ಲಿದ್ದರೆಂಬ ಬಗೆಗೆ ಏನೂ ಹೇಳಿಲ್ಲ. ಎಂಟನೆ ಶತಮಾನದಲ್ಲಿದ್ದ ಶ್ರೀ ಶಿವಯೋಗಿ ಶಿವಾಚಾರ್ಯರು ಅಂದಿನ ಸುಮಾರು ೫೦೦ ಶಿಷ್ಯರಿಗೆ ಬೋಧಕರಾಗಿದ್ದರೂ, ಇವರುಗಳಲ್ಲಿ ಯಾರೂ ತಮ್ಮ ಗುರುಗಳೇ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ರಚಿಸಿದ ಆದಿಗುರುವೆಂದು ತಮ್ಮ ಕೃತಿಗಳಲ್ಲಿ ಸ್ಥಾಪಿಸಿಲ್ಲ. ಮತ್ತು ಇವರ ಜನನ ಸ್ಥಲ, ತಾಯಿ ತಂದೆಯರು ಯಾರು ? ಎಂಬ ಬಗೆಗೆ ಏನನ್ನೂ ತಿಳಿಸಿಲ್ಲ. ಆದ್ದರಿಂದ ಇವರು ೮ನೇ ಶತಮಾನದಲ್ಲಿದ್ದರೆಂದು ಹೇಳುವ ಮಹನೀಯರು ಬಹುಶಃ **"ಅಭಿನವ ಶ್ರೀ ಶಿವಯೋಗಿ ಶಿವಾಚಾರ್ಯರೆಂದು ಧೃಢ ಪಡುತ್ತೆ".** ದ್ವಾಪರ ಯುಗಾರಂಭಕಾಲದಲ್ಲಿ ಜರುಗಿದ "ಶ್ರೀ ರೇಣುಕಾಗಸ್ತ್ಯ ಸಂವಾದ" ವೆಂಬ ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಅಂದರೆ ದ್ವಾಪರ ಯುಗ ಪುರುಷನ ೮,೬೪,೦೦೦ ವರ್ಷಗಳು ಗತಿಸಿ, ಕಲಿಯುಗದಲ್ಲಿ ಅಂದರೆ ಕ್ರಿ. ಶ. ೮೦೦ ವರ್ಷಗಳ ಅಂತರದಲ್ಲಿದ್ದ ಒಬ್ಬ ಶ್ರೀ ಶಿವಯೋಗಿ ಶಿವಾಚಾರ್ಯ ನಾಮಕ ಪಂಡಿತರು ಶ್ರೀ ರೇಣುಕಾಗಸ್ತ್ಯ ಸಂವಾದವೆಂಬ ಮಂಗಳ ಘಟ್ಟವನ್ನು

ಅದರ ಅನಂತ ಮುಖಗಳ ಅನುವಾದವನ್ನೂ ಹಚ್ಚ ಹಸಿರಾಗಿ ಜೀವಂತ ಕಳೆಯಿಂದ, ಲೋಪ ದೋಷಗಳಿಲ್ಲದ ರೀತಿಯಲ್ಲಿ ಪ್ರಶ್ನೋತ್ತರ ರೂಪದಲ್ಲಿ ಬರೆಯಲು ಹೇಗೆ ಸಾಧ್ಯವಾದೀತು ? ಅಂದ ಬಳಿಕ, ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಸಾಕ್ಷಾತ್ತಾಗಿ ರಚಿಸಿದ ಆದಿ ಶಿವಯೋಗಿ ಶಿವಾಚಾರ್ಯರಿದ್ದ ಕಾಲವಾವುದು ?

ಈ ಮಹದಂಶವನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಾಧಾರದಿಂದಲೇ ನಿರ್ಣಯಿಸ ಬೇಕಾಗಿದೆ. ಅನ್ಯಥಾ ಮಾರ್ಗವಿಲ್ಲ. ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರಥಮ ಪರಿಚ್ಛೇದದ, ಗ್ರಂಥ ಕರ್ತೃವಿನ ವಂಶ ವರ್ಣನೆಯ ೧೫ ನೇ ಶ್ಲೋಕದಲ್ಲಿ "**ತಸ್ಯ ವಂಶೇ ಸಮುತ್ಪನ್ನೋ । ಮುಕ್ತಾಮಣಿರಿವಾಮಲಃ । ಮುದ್ದದೇವಾಭಿಧಾಚಾರ್ಯೋ । ಮೂರ್ಧನ್ಯಃ ಶಿವಯೋಗಿನಾಂ ॥** ಎಂಬ ಖ್ಯಾತಿಯುಳ್ಳ ಪರಮ ಮುದ್ದ ದೇವ ಶಿವಾಚಾರ್ಯರ ಆತ್ಮಜ, ತಸ್ಯಾಸೀನ್ನಂದನಃ ಶಾಂತಃ ಸಿದ್ಧನಾಥಾಭಿಧಃ ಶುಚಿಃ । ಶಿವಸಿದ್ಧಾಂತನಿರ್ಣೇತಾ । ಶಿವಾಚಾರ್ಯಃ ಶಿವಾತ್ಮಕಃ ॥ ಯಾವಜ್ಜೀವವೂ ಪರಮ ಶಾಂತನೂ, ಶಿವಾದ್ವೈತ ಸಿದ್ಧಾಂತದ ರಸಾಯನದಲ್ಲಿ ಅಭಿರುಚಿಯುಳ್ಳವನೂ ಆದ ಶ್ರೀ ಸಿದ್ಧನಾಥ ಶಿವಾಚಾರ್ಯರ ಸುಪುತ್ರ ಅಂದರೆ ಶ್ರೀ ಮುದ್ದದೇವ ಶಿವಾಚಾರ್ಯರರ ಮೊಮ್ಮಗ ॥ ವೀರಶೈವಶಿಖಾರತ್ನಂ। ವಿಶಿಷ್ಟಾಚಾರಸಂಪದಂ । **ಶಿವಜ್ಞಾನಮಹಾಸಿಂಧುಂ । ಯಂ ಪ್ರಶಂಸಂತಿ ದೇಶಿಕಾಃ ॥** ಅಂದರೆ ಪರಮ ವೀರ ಶೈವಾಚಾರ್ಯ ಕುಲಸಂಭೂತ ವೀರಶೈವಾಚಾರ ರತ್ನ **॥ ಅಭವತ್‌ಶಿವ ಯೋಗೀತಿ । ಸಿಂಧೋರಿವ ಸುಧಾಕರಃ ॥** ಮಹಾಸಾಗರದ ಪೂರ್ವ ಗರ್ಭಾಂಬುಧಿಯಿಂದ ಮನೋಹರವಾಗಿ ಉದಯಿಸುವ ಪೂರ್ಣಚಂದ್ರನಂತೆ ಶ್ರೀ ಸಿದ್ಧನಾಥ ಶಿವಾಚಾರ್ಯರ ಸುಪುತ್ರ **ಶ್ರೀ ಶಿವಯೋಗಿ ಶಿವಾಚಾರ್ಯ ನಾಮಕ ಪುತ್ರರತ್ನ ಜ್ಞಾನ ಸೂರ್ಯ ಪ್ರಭೆಯೊಂದಿಗೆ ಉದಿಸಿದರು. ಇವರೇ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಕರ್ತರು ॥ ಅನೇಕ ಜನ್ಮಾರ್ಜಿತ ಶಿವಪೂಜಾದಿ ಸತ್ಕರ್ಮ ಮಹಿಮ್ನಾ । ಸಂಪ್ರಾಪ್ತಾ, ಶಮ-ದಮಾದಿ ಸಾಧನ ಸಂಪನ್ನಸ್ಯಾಧಿಕಾರಿಣಃ । ಮೋಕ್ಷವಿಷಯಕಾತ್ಯುತ್ಕಟೇಚ್ಛಾ ॥ ಶಕ್ತ್ಯಾ ವಿರ್ಭಾವಾನಂತರಂ । ಅತಃ । ಅಥಾತೋ ಬ್ರಹ್ಮಜಿಜ್ಞಾಸಾ ॥** ಯೆಂಬ ವೀರಶೈವ

ಸಿದ್ಧಾಂತಕ್ಕನುಗುಣವಾಗಿ ಈ ಪುತ್ರ ರತ್ನ ಎಳೆಯ ವಯಸ್ಸಿನಲ್ಲೇ ಲೋಕೋತ್ತರ ಮಹಾ ಪುರುಷನಾಗುವ, ದೈವೀ ಸಂಪದ್ಭರಿತ ಸುಜ್ಞಾನ ಲಕ್ಷಣಗಳಿಂದ ಪರಿಶೋಭಿಸಿದರು. ತತ್ಫಲವಾಗಿ ಅಂದಿನ **ಶಿವಲಿಂಗೋದ್ಭವ ಮಂಗಳ ಮೂರ್ತಿ ಶ್ರೀ ಆದಿ ಜಗದ್ಗುರು ರೇವಣ ಸಿದ್ಧ ಶಿವಾಚಾರ್ಯ ಮಹೋದಯರ** ಕೃಪಾಲಬ್ಧದಿವ್ಯಾನುಗ್ರಹಕ್ಕೆ ಬಾಲ್ಯದಲ್ಲೇ ಪಾತ್ರರಾದ ಮಹೋದಯರಿವರು. ಆದಿ ಶ್ರೀ ಶಿವಯೋಗಿ ಶಿವಾಚಾರ್ಯರು ಶಿವಪ್ರಸಾದದಿಂದ ಭೂಮಿಯಲ್ಲಿ ಕ್ರಿ. ಪೂ. ಕಾಲಾವಧಿಯಲ್ಲಿ–ಅಂದರೆ, ಶ್ರೀ ಜ|| ರೇವಣಸಿದ್ಧ ಶಿವಾಚಾರ್ಯರಿದ್ದ ೧೪೦೦ವರ್ಷಗಳ ಕಾಲಾಂತ್ಯದ, ಸಂಧಿ ಕಾಲದಲ್ಲಿದ್ದು, ಮಹಾಚಾರ್ಯರ ದಿವ್ಯ ಕೃಪಾಕಟಾಕ್ಷಕ್ಕೆ ಪಾತ್ರರಾಗಿದ್ದ ಕಾಲವದು. ಶಿವಲಿಂಗ ಮುಖದಿಂದ ಮಾನವ ದೇಹ ಉದಿಸಿತೆಂದರೆ ನಂಬಲು ಹೇಗೆ ಸಾಧ್ಯ ? ಎಂಬುದಾಗಿ ಲಿಂಗಾಂಗಿಗಳಲ್ಲೇ ಕೆಲವು ಜನ ಪ್ರಾಜ್ಞರು ಪ್ರಶ್ನಿಸುತ್ತಲಿದ್ದಾರೆ. ಇಂಥವರು ಅಪ್ರಾಕೃತ ಸ್ಥಿತಿಯ ವೈಭವೋಪೇತ ನಿತ್ಯ ಸತ್ಯ ಸುಂದರ ರಹಸ್ಯವನ್ನು ಇವರೆಂತು ಅರಿಯಲು ಸಾಧ್ಯ ?

**ಅವಜಾನಂತಿ ಮಾಂ ಮೂಢಾಃ। ಮಾನುಷೀಂ ತನುಮಾಶ್ರಿತಂ ।**
**ಪರಂಭಾವಮಜಾನಂತೋ । ಮಮ ಭೂತಮಹೇಶ್ವರಂ ॥**

(ಗೀ. ಅ. ೯ ಶ್ಲೋ ೧೧) ಈಶ್ವರನ ಅವತಾರ ಲೀಲಾರಹಸ್ಯವನ್ನೂ, ದೈವೀ ರಹಸ್ಯವನ್ನೂ ಅಧೋಮುಖಗಾಮಿಗಳಾದ ಲೌಕಿಕರು ಎಷ್ಟೇ ಪ್ರೌಢ ವಿದ್ಯಾವಂತರಾದರೂ ಸಹ, ಅರಿಯಲಾರರು. **ತದ್ವಿಜ್ಞಾನಾರ್ಥಂ|ಸ ಗುರುಮೇವಾಭಿಗಚ್ಛೇತ್ । ಕ್ರಿಯಾವಂತ ಸಮಿತ್ಪಾಣಿಃ ಶ್ರೋತ್ರಿಯಬ್ರಹ್ಮನಿಷ್ಠಂ||**

ಇದಕ್ಕಾಗಿ ಸುಜ್ಞಾನಿ, ಆತ್ಮಾನಾತ್ಮ ವಿಷಯಗಳನ್ನರಿಯಲು ಲಿಂಗಾಂಗಿ ಕ್ರಿಯಾವಂತ ಶ್ರೋತ್ರೀಯ ಬ್ರಹ್ಮನಿಷ್ಠಾಗರಿಷ್ಠನಾದ, ಹಸ್ತದಲ್ಲಿ ಸಮಿತ್ಪಾಣಿಯಾದ, ಶ್ರೀ ದಕ್ಷಿಣಾ ಮೂರ್ತಿ ಸದೃಶನಾದ ಪರಮಾಚಾರ್ಯನೆನಿಸಿದ, ವೀರಮಾಹೇಶ್ವರ ಗೋತ್ರ ಸಂಪನ್ನನಾದ ಶ್ರೀ ಗುರುವಿನ ಶ್ರೀ ಪಾದವನ್ನಾಶ್ರಯಿಸ ಬೇಕು. ಯಾಕೆಂದರೆ– **||ಯಥಾ ಜಾತಾಂಧಸ್ಯ ಸ್ವರೂಪಜ್ಞಾನಂ ನ ವಿದ್ಯತೇ । ತಥಾ ಗುರೂಪದೇಶೇನ ವಿನಾ । ಕೋಟಿಕಲ್ಪಶತೈರಪಿ । ತತ್ತ್ವಜ್ಞಾನಂ ನ ಜಾಯತೇ||** (ಮಹಾ ನಾರಾಯಣೋ

ಪನಿಷತ್). ಶ್ರೀ ಗುರು ಭಕ್ತಿಪರಾಯಣರಲ್ಲದ ಸಾಂಸಾರಿಕ ಮಡುವಿನಲ್ಲಿ ಬಿದ್ದು ಮಲಿನ ಚಿತ್ತವುಳ್ಳ ಜನರು ಗುರೂಪದೇಶವಿಲ್ಲದೆ ತತ್ವವನ್ನು ತಿಳಿಯಲಾರರು. ಶಿವಲಿಂಗ, ಜೋತಿರ್ಲಿಂಗ ಮುಖದಿಂದ ಪ್ರಥಮತಃ ಒಂದು ಅದೃಶ್ಯ ಚಿತ್ಕಳೆ ಹೊರ ಹೊಮ್ಮಿ, ತಕ್ಷಣ ಸ್ವಶಕ್ತಿ ಶಿವಯೋಗದಿಂದ ಅದು ದೃಷ್ಟಿ ಗೋಚರವಾಗಿ, ದೇದೀಪ್ಯಮಾನವಾಗಿ ಬೆಳಗಿ ಆ ಜ್ಯೋತಿರ್ವಲಯದ ಮಧ್ಯೇ ಪುರುಷಾಕಾರದಿಂದ ಹೊರಹೊಮ್ಮಿದ ಮಹಾಚಾರ್ಯರೇ **ಶ್ರೀ ಜ|| ರೇವಣಸಿದ್ಧರು.** ಕೊಲ್ಲಿ ಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಸ್ವಯಂಭುವಷ್ಟೆ! ಶಿವಶಕ್ತಿ ಸಂಪುಟಯುಕ್ತ ಈ ಮಹಾಲಿಂಗದ ಮುಖದಿಂದ, ಈಶೋಕ್ತಿಯಂತೆ ಪ್ರಥಮತಃ ಶ್ರೀ ಜ|| ರೇವಣ ಸಿದ್ಧಶಿವಾಚಾರ್ಯರು, ಅದೃಶ್ಯ ಚಿತ್ಕಳಾ ರೂಪದಲ್ಲಿ ಹೊರ ಹೊಮ್ಮಿ. ಕ್ಷಣಾರ್ಧದಲ್ಲಿ ಅತ್ಯಂತ ಪ್ರಕಾಶಿತ ಹೊಂಬೆಳಕಿನಿಂದ ವಿರಾಜಿಸಿ, ಬಯಲೇ ರೂಪಗೊಂಡಂತೆ ಅಭೂತಪೂರ್ವ ದಿವ್ಯಮಾನವಾಕಾರ ರೂಪದಿಂದ ಜಾಜ್ವಲ್ಯಮಾನ ಅಖಂಡ ಶಿವತೇಜಸ್ಸಿನಿಂದ, ಧರ್ಮೋದ್ಧಾರಾರ್ಥ ಭಕ್ತರ ಮಧ್ಯೇ ಕಾಣಿಸಿ, ಅಮೃತ ಅಭಯ ಹಸ್ತವನ್ನು ಮೇಲೆತ್ತಿ ಸಮಸ್ತರನ್ನೂ ಆಶೀರ್ವದಿಸುತ್ತಾ ಲಿಂಗ ರೂಪಿ ಪರಶಿವನ ಅಗಣಿತ ಮಹಿಮೆಯನ್ನು ಸ್ವಲ್ಪ ವರ್ಣಿಸಿ ಹರಸಿದರು. ಇವರೇ ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ಆದಿ ಜ|| ರೇವಣ ಸಿದ್ಧ ಶಿವಾಚಾರ್ಯ ದೇಶಿ ಕೇಂದ್ರ ಮಹೋದಯರು. ಜಗದಾದಿಯಲ್ಲಿ ಶಿವೋಕ್ತ ಘನಲಿಂಗ ತತ್ವದಿಂದ ಜಗಜ್ಜಗಿಸುವ, ಶ್ರೀ ಷಟ್ಸ್ಥಲ ಸಿದ್ಧಾಂತದ ಏಕೋತ್ತರ ಶತಸ್ಥಲಗಳ ವಿದ್ಯಮಾನವನ್ನು ಸವಿಸ್ತಾರವಾಗಿ ಪ್ರಥಮತಃ ಭೂಮಿಯಲ್ಲಿ ಮಾನವರ ಉದ್ಧಾರಾರ್ಥ ಸ್ವತಃ ಆಚರಿಸಿ, ತೋರಿಸಿ, ಬಂಧುರವಾಗಿ ಸ್ಥಾಪಿಸಿ, ಆ ಸುಧಾರಸವನ್ನು ಸುಕೃತ ಶಾಲಿಗಳಿಗೆ ಕರುಣೆಯಿಂದ ಉಣ ಬಡಿಸಿದ, ಜಗನ್ಮೋಹನಕರ ದಿವಾಕರ ಕಲ್ಯಾಣ ಮೂರ್ತಿಗಳು ಶ್ರೀ ಜ|| ರೇವಣ ಸಿದ್ಧ ಶಿವಾಚಾರ್ಯರು.

ಆದಿ ಶ್ರೀ ಜ|| ರೇವಣ ಸಿದ್ಧರು ಸುಮಾರು ಕ್ರಿ.ಪೂ. ೪೮೫ ರ ವರವಿಗೂ ಇದ್ದು ತಮ್ಮನ್ನು ಸಂಧಿಸಿದ ಆದಿ ಶ್ರೀ ಶಿವಯೋಗಿ ಶಿವಾಚಾರ್ಯರಿಗೆ ಕೃಪಯಾ ಶ್ರೀ ರೇಣುಕ ಗೀತಾ, ಅರ್ಥಾತ್, ಸಿದ್ಧಾಂತ ಶಿಖಾಮಣಿಯ ತತ್ವಾಮೃತವನ್ನು ಪ್ರದೀಪ್ತಿಯಿಂದ ಬೋಧಿಸಿ, ಇದರ ಸಾರಾಮೃತವನ್ನು ತಾವು ಸ್ವಾತ್ಮದಲ್ಲಿ ಕಂಡನುಭವಿಸಿ, ಜಗತ್ತಿನ ಮಾನವ ಕುಲೋದ್ಧಾರಾರ್ಥ ಕೃತಿ ರತ್ನವನ್ನು ರಚಿಸ ಬೇಕೆಂದು ಆಜ್ಞಾಪಿಸಿದರು.

ಶ್ರೀ ಜ॥ ರೇವಣ ಸಿದ್ಧರ ಕೃಪಾದೀಕ್ಷೆಯಿಂದ ಪ್ರದೀಪ್ತರಾದ ಶ್ರೀ ಶಿವ ಯೋಗಿ ಶಿವಾಚಾರ್ಯರು, ಪರಮ ಶಿವಾಚಾರ್ಯ ಕುಲ ಸಂಜಾತರಾದ್ದರಿಂದ, **॥ಚಿದಾನಂದ ಪರಾಕಾಶ । ಶಿವಾನುಭವಯೋಗತಃ ॥ ಹಾಗೂ ॥ಶಿವಾಗಮ ಪರಿಜ್ಞಾನ । ಪರಿಪಾಕ ಸುಗಂಧಿನಾ ॥** ಎಂಬಂತೆ, ಶಿವಾದ್ವೈತ ಶಾಸ್ತ್ರ ಕೋವಿದರಾಗಿ **॥ಯದೀಯ ಕೀರ್ತಿ ಪುಷ್ಪೇಣ। ವಾಸಿತಂಹರಿತಾಂ ಮುಖಂ॥** ಅಂದರೆ ಶಿವಾದ್ವೈತ ಶಾಸ್ತ್ರದ ತತ್ತ್ವಾರ್ಥಗಳನ್ನು ಸ್ವಾನುಭೂತಿಯಲ್ಲಿ ಆಳವಾಗಿ ಕಂಡುಂಡನುಭವಿಸಿ, ಚಿದಾನಂದ ಪರಾಕಾಶ ಶಿವಾನುಭಾವದ ಆಗರವಾಗಿ ಪರಿಶೋಭಿಸಿ, ಜಿಜ್ಞಾಸುಗಳಿಗೆ, ಮುಮುಕ್ಷುಗಳಿಗೆ ಈ ಸುಧಾರಸದ ಪಾಠ, ಪ್ರವಚನಗಳನ್ನು ಪ್ರಭಾವಾನ್ವಿತವಾಗಿ ಬೋಧಿಸುವ ಶಕ್ತಿಯುತರಾಗಿ**॥ಯದೀಯಕೀರ್ತಿ ಪುಷ್ಪೇಣ। ವಾಸಿತಂ ಹರಿತಾಂ ಮುಖಂ॥** ಸುವಾಸನೆ ಭರಿತವಾದ ಪುಷ್ಪದ ಕಾಂತಿ ಸೌರಭದಂಥಾ ಕೀರ್ತಿಶರೀರದಿಂದ ಪರಿಶೋಭಿಸಿದರು. ಮಾನವನಾಗಿ ಜನ್ಮ ತಾಳಿದ ನಂತರ ಪ್ರತಿಯೊಬ್ಬರೂ ಈ ರೀತಿ ಕೀರ್ತಿವಂತರಾಗಿ ಶಿವನ ಕೃಪೆಗೆ ಪಾತ್ರರಾಗಬೇಕಲ್ಲವೆ ? ಕ್ಷಮಾ ವಿಭೂಷಿತರೂ ಕರುಣಾ ಸಾಗರರೂ ಆದ ಶ್ರೀ ಜಗದಾಚಾರ್ಯ ರೇವಣ ಸಿದ್ಧ ಶಿವಾಚಾರ್ಯರು ಶ್ರೀ ಶಿವಯೋಗಿ ಶಿವಾಚಾರ್ಯರಿಗೆ **" ದಿವ್ಯ ಜ್ಞಾನ ದೃಷ್ಟಿ "**ಯನ್ನು ಅನುಗ್ರಹಿಸಿದ ಫಲವಾಗಿ, ಈ ಶಿವಯೋಗಿ ಶಿವಾಚಾರ್ಯ ಮಹೋದಯರು ದ್ವಾಪರ ಯುಗಾರಂಭ ಕಾಲದಲ್ಲಿ, ಶ್ರೀ ಜ॥ ರೇಣುಕಾಚಾರ್ಯರು ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ **"ಶ್ರೀ ರೇಣುಕಾಗಸ್ತ್ಯ ಸಂವಾದ"** ವೆಂಬ ಶ್ರೀ ರೇಣುಕ ಗೀತೆಯನ್ನು (ಸಿದ್ಧಾಂತ ಶಿಖಾಮಣಿಯನ್ನು) ಕೂಲಂಕಷವಾಗಿ ಪ್ರಶ್ನೋತ್ತರ ರೂಪದಲ್ಲಿ ಸುಮಾರು ಕ್ರಿ. ಪೂ. ೪೮೭ ರ ಸರಹದ್ದಿನಲ್ಲಿ ರಚಿಸಿರುವರೆಂಬುದು ಸ್ಪಷ್ಟವಿರುತ್ತೆ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಆದಿ ಶಿವಯೋಗಿ ಶಿವಾಚಾರ್ಯರು, ಶ್ರೀ ಶೃಂಗೇರಿ ಆದಿಶಂಕರಾಚಾರ್ಯರಿಗೆ, ಶ್ರೀ ರಂಭಾಪುರೀ ವೀರ ಸಿಂಹಾಸನಾಧೀಶ್ವರ ಜ॥ ರೇವಣಸಿದ್ಧರು ಶ್ರೀ ರತ್ನ ಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗ ಪ್ರದಾನದ ವಿಷಯವನ್ನು ಕುರಿತು ಬರೆಯದೆ ಇರುವುದರಿಂದ, ಚಂದ್ರಮೌಳೀಶ್ವರ ಲಿಂಗ ಪ್ರದಾನ ಮಂಗಳ ಘಟನೆ, ತದನಂತರ ಜರುಗಿದುದಾಗಿ ಸ್ಪಷ್ಟ ಪಡುತ್ತೆ.

ಶ್ರೀ ಆದಿ ಜ|| ರೇವಣ ಸಿದ್ಧರು ಕ್ರಿ. ಪೂ. ೧೮೮೫ ರಿಂದ ೧೪೦೦ ವರ್ಷ ಭೂಮಿಯಲ್ಲಿದ್ದು ಕ್ರಿ. ಪೂ. ೪೮೫ ರ ಕಾಲಾವಧಿಯವರೆವಿಗೂ ಇದ್ದರೆಂಬುದು ಸ್ಮರಣೀಯವಿರುತ್ತೆ. ಶ್ರೀ ಜ|| ರೇವಣ ಸಿದ್ಧ ಶಿವಾಚಾರ್ಯರು ಕ್ರಿ. ಪೂ. ೪೮೫ ರ ಮಧ್ಯಕಾಲಾವಧಿಯಲ್ಲಿ ಅರ್ಥಾತ್ ತಮ್ಮ ಅವತಾರಾಂತ್ಯದ, ಸುಮು ಹೂರ್ತದಲ್ಲಿ ಶ್ರೀ ಶಂಕರಾಚಾರ್ಯರ ಪ್ರಾರ್ಥನೆಯಂತೆ ಹಾಗೂ ಶ್ರೀ ಶೈಲಗಿರಿ ಮಲ್ಲಿಕಾರ್ಜುನನ ಆದೇಶದಂತೆ ಶ್ರೀ ಶೃಂಗೇರಿ ಶ್ರೀ ಜ|| ಆದಿ ಶಂಕರಾಚಾರ್ಯ ರಿಗೆ ಶ್ರೀ ರತ್ನಗರ್ಭಗಣಪತಿಯನ್ನೂ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನೂ ಕೃಪಯಾ ಅನುಗ್ರಹಿಸಿ ಆಶೀರ್ವದಿಸಿರುವರು ; ಇದು ನಿತ್ಯ ಸತ್ಯ ಸುಂದರ ವಿಷಯವಿರುತ್ತೆ. ಈ ಅಂಶವನ್ನು ಶಂಕರ ಮಠಗಳ ಪುರಾತನ ಪ್ರಧಾನ ಗ್ರಂಥಾ ಧಾರಗಳಿಂದ ನಿರ್ಣಯಿಸಲಾಗಿದೆ. ಶ್ರೀ ಶೃಂಗೇರಿ ಮಠಾಧೀಶ ಶ್ರೀ ಜ|| ವಿದ್ಯಾ ರಣ್ಯರ ಪಿತಾಮಹ ಸಂಹಿತೆಯಲ್ಲಿ (ಕ್ರಿ. ಶ. ೧೩೮೦-೯೦ ರ ಸಮಯದಲ್ಲಿ) **|| ತತಃ ಸ ರೇವಣ ಸಿದ್ಧ ಸಂಪ್ರದಾಯಪ್ರವರ್ತಿನಾಂ ಶಂಕರಾ ಚಾರ್ಯವರ್ಯಾಣಾಂ । ಪಾರಂಪರ್ಯಕ್ರಮಾಗತಂ ||** ಎಂದು ಘೋಷಿಸಿರುವ ಅಂಶವನ್ನು, **ಶಿವ ತತ್ವ ರತ್ನಾ**ಕರ ವೆಂಬ ಸಂಸ್ಕೃತ ಮಹಾ ಕೃತಿಯಲ್ಲಿ ನಾಲ್ಕನೇ ಕಲ್ಲೋಲದ ಹನ್ನೆರಡನೆ ತರಂಗದಲ್ಲಿ ಮಹಾ ವಿದ್ವಾನ್ ಅರಸು, ಶ್ರೀ ಬಸವಪ್ಪ ನಾಯಕ ಅಧಿಕೃತವಾಗಿ ಉಲ್ಲೇಖಿಸಿರುವರು. ಇಲ್ಲಿ ನಮಗೆ ಬೇಕಾದುದು, ಆದಿ ಶ್ರೀ ಶಂಕರಾಚಾರ್ಯರಿದ್ದ ಕಾಲ ಯಾವುದು? ಈ ವಿಷಯ ಜಟಿಲವಿರುತ್ತೆ. ಯಾಕೆಂದರೆ, ಶ್ರೀ ಶಂಕರರು ಸ್ಥಾಪಿಸಿದ ಚತು ರಾಮ್ನಾಯ ಮತ್ತು ಶ್ರೀ ಶಿವಕಂಚಿ ಶ್ರೀ ಕಾಮ ಕೋಟಿ ಮಠಾಧೀಶ್ವರರಲ್ಲೇ ಭಿನ್ನಾಭಿಪ್ರಾಯಗಳು ಬಗೆ ಹರಿಯದೆ, ಡೋಲಾಯಮಾನವಾಗಿವೆ. ಆದಿ ಶ್ರೀ ಶಂಕರಾಚಾರ್ಯರುಕ್ರಿ.ಶ. ೮ನೇ ಶತಮಾನದಲ್ಲಿದ್ದರೆಂದು ದಕ್ಷಿಣಾಮ್ನಾಯ ಮಠಾಧೀಶರು ಅಭಿಪ್ರಾಯ ಪಟ್ಟರೆ, ಶ್ರೀ ಶಿವ ಕಂಚಿ ಕಾಮಕೋಟಿ ಶಂಕರ ಮಠಾಧೀಶರು ಆದಿ ಶ್ರೀ ಶಂಕರರು ಕ್ರಿ. ಪೂ. ೫೦೯ ರಲ್ಲಿ ಜನಿಸಿ ಕ್ರಿ. ಪೂ. ೪೭೭ ರಲ್ಲಿ ತಮ್ಮ ೩೨ ನೇ ವಯಸ್ಸಿನಲ್ಲಿ ಬ್ರಹ್ಮೀ ಭೂತರಾದರೆಂದು ನಿರ್ಣಯಿ ಸಿದ್ದಾರೆ. ಆದಿ ಶ್ರೀ ಶಂಕರಾಚಾರ್ಯರು ಶಿವಕಂಚಿಯ ಕಾಮ ಕೋಟಿ ಮಠ ವನ್ನು ಕ್ರಿ. ಪೂ. ೪೮೩. ರಲ್ಲಿ ಸ್ಥಾಪಿಸಿ, ಅಲ್ಲಿಂದ ಆರು ವರ್ಷ ತಾವೇ ಅಧಿಪತಿ ಗಳಾಗಿದ್ದು, ನಂತರ ಶ್ರೀ ಸುರೇಶ್ವರಾಚಾರ್ಯರಿಗೆ ಪಟ್ಟಾಧಿಕಾರವನ್ನು ವಹಿಸಿ,

ತಮ್ಮ ೩೨ ನೇ ವಯಸ್ಸಿನಲ್ಲಿ ಅಂದರೆ, ಕ್ರಿ.ಪೂ. ೪೭೭ ರಲ್ಲಿ ಬ್ರಹ್ಮೀಭೂತರಾದ ರೆಂದು ಅಧಿಕೃತವಾಗಿ ಘೋಷಿಸಿರುವರು. ಈ ಅಂಶವನ್ನು ಚತುರಾಮ್ನಾಯ ಮಠಾಧೀಶರು ಒಪ್ಪದೆಯಿದ್ದರೂ, ಖಂಡಿಸಿಲ್ಲ. ಇತ್ಯಾದಿ ಕಾರಣಗಳಿಂದ, ಆದಿ ಶ್ರೀ ಶಂಕರಾಚಾರ್ಯರು ಕ್ರಿ. ಪೂ. ೫೦೯ ರಿಂದ ಕ್ರಿ. ಪೂ. ೪೭೭ ರ ಕಾಲಾವಧಿಯಲ್ಲಿದ್ದರೆಂಬುದು ಖಚಿತವಿರುತ್ತೆ. ಕ್ರಿ.ಶ. ೮ ನೇ ಶತಮಾನದಲ್ಲಿದ್ದ ಶಂಕರರು **ಅಭಿನವ ಶಂಕರಾಚಾರ್ಯರಿರುವರು.**

ಶ್ರೀ ಆದಿ ಶಂಕರಾಚಾರ್ಯರು ಕ್ರಿ. ಪೂ. ೫೦೯ ರಲ್ಲಿ ಜನಿಸಿ ೩೨ ವರ್ಷ ಭೂಮಿಯಲ್ಲಿದ್ದರು. ತಮ್ಮ ೨೪ ನೇ ವಯಸ್ಸಿನಲ್ಲಿ ಅಂದರೆ, ಕ್ರಿ. ಪೂ. ೪೮೫ ರ ಮಧ್ಯ ಕಾಲದಲ್ಲಿ ಶ್ರೀ ಶೈಲ ಗಿರಿಮಲ್ಲಿಕಾರ್ಜುನನ ಆದೇಶದಂತೆ ಅಲ್ಲಿಂದ ಶ್ರೀ ರಂಭಾಪುರಿಗೆ ಆಕಾಶ ಮಾರ್ಗದಲ್ಲಿ ದಯಮಾಡಿಸಿ, ಶ್ರೀ ಜ॥ ರೇವಣ ಸಿದ್ಧ ಶಿವಾಚಾರ್ಯರ ಕೃಪಾಶೀರ್ವಾದದಿಂದ ಶ್ರೀ ರತ್ನಗರ್ಭ ಗಣಪತಿಯನ್ನೂ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನೂ ಪಡೆದು, ತಾವು ಧನ್ಯರಾದರೆಂದು ಶರಣಾ ಗತಿ ಭಾವದಿಂದ ಮಹಾಚಾರ್ಯ ಶ್ರೀ ರೇವಣ ಸಿದ್ಧರನ್ನು ಭಕ್ತ್ಯಾ ಸ್ತುತಿಸಿರು ವರು. ಇದರಿಂದಾಗಿ ಶ್ರೀ ಆದಿ ಜ॥ ರೇವಣ ಸಿದ್ಧರು ಕ್ರಿ.ಪೂ. ೪೮೫ ರ ಅಂತ್ಯ ಸಮಯಕ್ಕೆ ತಮ್ಮ ಕಾಲವಾಯಿತೆಂದು ಶ್ರೀ ರಂಭಾಪುರೀ ವೀರ ಸಿಂಹಾಸನ ಮಹಾ ಪೀಠಕ್ಕೆ ಭೂಜಾತ ಶ್ರೀ ರುದ್ರಮುನಿ ಶಿವಾಚಾರ್ಯರಿಗೆ ಪಟ್ಟಾಧಿಕಾರ ವನ್ನು ವಹಿಸಿ ಕೊಟ್ಟು, ಅಲ್ಲಿಂದ ಶ್ರೀ ಕೊಲ್ಲಿ ಪಾಕಿ ಸೋಮನಾಥ ಲಿಂಗದಲ್ಲಿ ಚಿಜ್ಜ್ಯೋತಿ ರೂಪದಲ್ಲಿ ಪರಂಜ್ಯೋತಿಯಲ್ಲಿ ವಿಲೀನರಾದರು.

ಶ್ರೀ ಶಂಕರಾಚಾರ್ಯರು ಅಲ್ಲಿಂದಾಚೆಗೆ ಕ್ರಿ. ಪೂ. ೪೭೭ ರಲ್ಲಿ ಬ್ರಹ್ಮೀ ಭೂತರಾಗಿರುವರು. ಶ್ರೀ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗಾ ನುಗ್ರಹಮಂಗಳ ಘಟನೆ ವಿಷಯವನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ನಿರೂಪಿಸಿಲ್ಲವಾದ್ದರಿಂದ, ಶ್ರೀ ಶಿವಯೋಗಿ ಶಿವಾಚಾರ್ಯರು ಈ ಘಟನೆ ಜರು ಗಿದ ಕಾಲಕ್ಕೆ ಮುಂಚಿತವಾಗಿಯೇ ಅಂದರೆ ಪ್ರಾಯಶಃ ಕ್ರಿ.ಪೂ. ೪೮೮-೪೮೭ರ ಕಾಲಾವಧಿಯಲ್ಲಿ ಶ್ರೀ ಜ॥ ರೇವಣ ಸಿದ್ಧ ಶಿವಾಚಾರ್ಯರ ಕೃಪಾ ಬಲದಿಂದ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ರಚಿಸಿರುವರೆಂಬುದು ಖಚಿತ ಪಡುತ್ತೆ.

ಮೇಲೆ ಉಕ್ತವಾದ ಮಹದಂಶಗಳಿಂದ ಕಂಡು ಬರುವುದೇನೆಂದರೆ, ಶ್ರೀ ರೇವಣಸಿದ್ಧ ಶಿವಾಚಾರ್ಯರು ಭೂಮಿಯಲ್ಲಿ ಅವತರಿಸಿದ ಕ್ರಿ. ಪೂ. ೧೮೮೫

ರಿಂದ ೧೪೦೦ ವರ್ಷಗಳ ಅಂತ್ಯ ಕಾಲಾವಧಿಯ ಮಧ್ಯೆ ಸುಮಾರು, ಕ್ರಿ.ಪೂರ್ವ ೫೦೯ ರಿಂದ ೪೮೫ ರ ವರೆವಿಗೆ ಶ್ರೀ ಶಿವಯೋಗಿ ಶಿವಾಚಾರ್ಯರು ಮತ್ತು ಶ್ರೀ ಆದಿ ಶಂಕರಾಚಾರ್ಯರು, ಶ್ರೀ ಜ|| ರೇವಣ ಸಿದ್ಧರ, ಸಮಕಾಲೀನರೆಂದು ಕಂಡು ಬರುತ್ತೆ. ಸಂಶಯಕ್ಕೆ ಅವಕಾಶವಿಲ್ಲ. ಶ್ರೀ ಆದಿ ಜ|| ರೇವಣ ಸಿದ್ಧ ಶಿವಾಚಾರ್ಯರು, ತಮ್ಮ ಅಂತ್ಯ ಕಾಲಾವಧಿಯ ಕ್ರಿ. ಪೂ. ೫ ನೇ ಶತಮಾನ ದಲ್ಲಿ ಜಗನ್ಮಂಗಳಾರ್ಥ ಹಾಗೂ ಧರ್ಮೋದ್ಧಾರಾರ್ಥ ಶ್ರೀ ಶಿವಯೋಗಿ ಶಿವಾ ಚಾರ್ಯರಿಗೆ ಜ್ಞಾನ ನೇತ್ರವನ್ನು ಅನುಗ್ರಹಿಸಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ರಚನೆಗೆ ಆಜ್ಞಾಪಿಸಿರುವರು. ತದನಂತರ ಎರಡನೆಯದಾಗಿ ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಅವರ ಪ್ರಾರ್ಥನಾನುಸಾರ ಶ್ರೀ ರತ್ನ ಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಕೃಪಯಾ ಅನುಗ್ರಹಿಸಿ, ಶಿವ ಶಕ್ತಿ ಸಂಪುಟವ ರಹಸ್ಯವನ್ನೂ ಹಾಗೂ "**ಶೈವಾಗಮಾಂಬುಜಭಾಸ್ಕರರು**" ಯೆಂಬ ಅದ್ವಿತೀಯ ಖ್ಯಾತಿ ಪಡೆದ ಶ್ರೀ ಜಗದ್ಗುರು ಪಂಚಾಚಾರ್ಯರ ಶಿವ ಲಿಂಗೋದ್ಭವ ಮಂಗಳ ಲೀಲಾ ವಿಭೂತಿಯೋಗದ ಪ್ರವರಗಳನ್ನೂ ಬೋಧಿಸಿ, ಈ ಎರಡೂ ಪವಾಡಗಳನ್ನು ಲೋಕವರಿಯುವಂತೆ ನೆರವೇರಿಸಿರುವರು. ಈ ಕಾರಣದಿಂದ ನಾವು ಮಹಾತ್ಮ ಶ್ರೀ ಶಿವಯೋಗಿ ಶಿವಾಚಾರ್ಯರ **ಪಂಚ ವಿಂಶತಿ ಶತಮಾನೋತ್ಸವವನ್ನು** ಪ್ರತಿ ವರ್ಷ ಭಕ್ತ್ಯಾ ಆಚರಿಸಿ, ಕೊಂಡಾಡ ಬೇಕು. ಇದು ಕರ್ತವ್ಯವಿರುತ್ತೆ.



## ಶ್ರೀ ರತ್ನಗರ್ಭಗಣಪತಿ

ರಜತ ಗಿರಿ ನಿವಾಸಿನಿ, ಜಗನ್ಮಾತೆ ಶ್ರೀ ಪಾರ್ವತೀದೇವಿ, ತನ್ನ ಬೆರಳುಗಳಿಂದ ಲಲಾಟವನ್ನುಜ್ಜಲು ಅಲ್ಲಿಂದ ಚಿನ್ಮಿಮ್ರಿದ ಚಿನ್ಮಯ ಕಾಂತಿಯೊಂದು ತಕ್ಷಣ ೫ ವರುಷದ ಸುಂದರ ಕುವರನಾಗಿ ದೇವಿ ಎದುರಲ್ಲಿ ನಮಸ್ಕರಿಸಿ ನಿಂತು, ಅಮ್ಮಾ! "ನನ್ನನ್ನು ಸೃಷ್ಟಿ ಸಿದ್ದ್ಯಾರ್ಥಕೆಂದು ಕೇಳಿದನು". ಆಗ ದೇವಿ ಹಸನ್ಮುಖಳಾಗಿ ಮಗನೇ ನಾನೀಗ ಸ್ನಾನ ಮಾಡಲಿಕ್ಕಾಗಿ ತೆರಳುತ್ತಿದ್ದೇನೆ. ನೀನು ಈಗ ಕೈಲಾಸ ಮಂದಿರದ ಮಹಾದ್ವಾರದಲ್ಲಿ ಕಾವಲಿದ್ದು ಯಾರನ್ನೂ ಒಳಗೆ ಬಿಡಬೇಡೆಂವೆದು ಆಜ್ಞಾಪಿಸಿ, ಸ್ನಾನಕ್ಕೆ ತೆರಳಿದಳು. ಸ್ವಲ್ಪ ಹೊತ್ತಿನಲ್ಲಿ ಶ್ರೀಗೌರೀ ರಮಣ ಶಿವನು ಬಾಗಿಲ ಹತ್ತಿರ ಬರುವಲ್ಲಿ, ಬಾಲಕ ಶಿವನನ್ನು ತಡೆದು ಒಳಗೆ ಹೋಗಲು ಅಡ್ಡಿ ಮಾಡಿದನು. ಕುಪಿತನಾದ ಶಿವನು ಆ ತರುಣನ ಶಿರಶ್ಛೇದನ ಮಾಡಿ ಒಳಗೆ ಹೋಗುವಷ್ಟರಲ್ಲಿ ಸ್ನಾನದ ಮನೆಯಿಂದ ಹೊರಬಂದ ದೇವಿ, ವೃತ್ತಾಂತವನ್ನು ಕೇಳಿ ಬಿಸುಸುಯ್ದು, "ಹಾ ! ನನ್ನ ಕಂದಾ ಹೋದೆಯಾ!" ಎಂದು ಪ್ರಲಾಪಿಸಿದ್ದನ್ನು ಕಂಡ ಶಿವನು, ಚಾರರನ್ನು ಕಳಿಸಲು, ಉತ್ತರ ದಿಕ್ಕಿಗೆ ತಲೆ ಚಾಚಿ ಮಲಗಿದ್ದ ಆನೆಯ ಶಿರಸ್ಸನ್ನು ಕತ್ತರಿಸಿ ತಂದು ಅವರು ಶಿವನಿಗೆ ಅರ್ಪಿಸಿದರು. ಆ ಗಜಮುಖವನ್ನು ಸಂಸ್ಕರಿಸಿ ಶಿವನು ಬಾಲಕನನ್ನು ಅನುಗ್ರಹಿಸಿ ಅವನ ಮುಂಡದ ಮೇಲಿಟ್ಟು ತನ್ನ ಅಮೃತ ಹಸ್ತದಿಂದ ಸವರಿ ಮಂಗಳಾಶೀರ್ವಾದ ಮಾಡುತ್ತಿದ್ದಂತೆ, ಎಡಮಗ್ಗುಲು ಕಡೆ ತಿರುಗಿ ಮಲಗಿದ್ದವ ಏಳುವಂತೆ ಮೇಲೆದ್ದು, ತಾಯಿ ಕಡೆ ಓಡಿ ಅಮ್ಮಾಯೆಂದು ಶ್ರೀ ದೇವಿಯನ್ನು ನಮಸ್ಕರಿಸುತ್ತಿದಂತೆ, ಶಿವನೋಡುತ್ತಿರಲು ಕುವರನನ್ನೆತ್ತಿ ಕೊಂಡು ಮುದ್ದಾಡಿದಳು. ಮಗನು ಬದುಕಿದನಲ್ಲಾಯೆಂಬ ಆನಂದ ಸಂತೋಷ ಭರಿತಳಾಗಿ ತನ್ನ ಶಿರಸ್ಸಿನಲ್ಲಿ ಅಲಂಕೃತವಾಗಿದ್ದ ನವರತ್ನ ಖಚಿತ ದಿವ್ಯಾಭರಣದಿಂದ ಅಮೂಲ್ಯತರ, ಥಳ ಥಳನೆ ಹೊಳೆಯುವ ಸುಂದರವಾದ ಮಾಣಿಕ್ಯದ ರತ್ನವನ್ನು ಹೊರ ತೆಗೆದು, ತನ್ನ ಮುದ್ದು ಕುವರನ ಪುಟ್ಟ ಹೊಟ್ಟೆಯ ನಾಭಿ ಕಮಲದಲ್ಲಿ ದೇವಿ ಸ್ಥಾಪಿಸಿ, ನೋಡಿ ಚಕಿತಳಾಗಿ ಕೊಂಡಾಡುವುದನ್ನು ಕಂಡ ಶಿವನು, ತಮ್ಮ ಜೇಷ್ಠ ಕುಮಾರನನ್ನು ನೋಡಿ ತಾನೂ ಆನಂದಿಸಿ, **"ಇಂದಿನಿಂದ ಕಂದಾ! ನೀನು "ರತ್ನ ಗರ್ಭ ಗಣಪತಿ"ಯೆಂದು ನಾಮಕರಣ** ಮಾಡಿದನು. ಆಗ ದೇವಿಯೇ ಆದಿಯಾಗಿ ಸಮಸ್ತ ಭಕ್ತವೃಂದ ಮೊಕ್ಕೊರಳೆ

ನಿಂದ "ರತ್ನ ಗರ್ಭ ಗಣಪತಿ" ಎಂದು ಕರೆದು ಪುಷ್ಪವೃಷ್ಟಿಗೈದು ಆನಂದದಿಂದ ಗಜಮುಖನನ್ನು ಸ್ತುತಿಸಿ ಕೊಂಡಾಡಿದರು.

|| ಗಜಾನನಂ ಭೂತಗಣಾಧಿ ಸೇವಿತಂ ।
ಕಪಿತ್ಥಜಂಬೂಫಲ ಸಾರಭಕ್ಷಿತಂ ।
ಉಮಾಸುತಂ ಶೋಕ ವಿನಾಶ ಕಾರಣಂ ।
ನಮಾಮಿ ವಿಘ್ನೇಶ್ವರ ಪಾದಪಂಕಜಂ ||

ಟಿ. ಬಿ. ಬಸವರಾಜಯ್ಯ

|| ಶಿವಂ ಭೂಯಾತ್ ||



## ಶಿವ ತಾಂಡವ ಲೀಲೆ (ನೃತ್ಯ)

ಸೃಷ್ಟಿಯ ಸುಂದರ ವಿಶ್ವದ ರಂಗದಿ ।
ಶಿವತಾಂಡವ ಮೊದಲಾಗುತಿದೆ ।
ಲೀಲಾಲೋಲನು ಆ ನಟರಾಜನ ।
ಆತ್ಮಾನಂದವು ಚಿಮ್ಮುತಿದೆ ॥೧॥

"ರವಿ ಶಶಿ ತಾರಾಗಣಗಳು ಹಿಗ್ಗಿ ।
ಹೆಜ್ಜೆಗೆ ಹೆಜ್ಜೆಯ ಹಾಕುತಿವೆ ।
ಗ್ರಹಗತಿಗಳ ಸ್ವರ ಸಮ್ಮೇಳನದೊಳು ।
ಜಡದಲಿ ಚೇತನ ಮೂಡುತಿದೆ ॥೨॥

"ಹೆಜ್ಜೆಯ ತುಳಿತಕೆ ಹಳೆಯದು ಅಳಿದು ।
ಹೊಸ ಬಾಳಿನ ಹೂ ಮರಳುತಿದೆ ।
ಗೆಜ್ಜೆಯ ಮೆಲುದನಿ ಗಗನವ ತುಂಬಿರೆ ।
ಶಿವಭಾವದಿ ಜಗ ಮೆರೆಯುತಿದೆ ॥೩॥

"ಸುರಾ ಸುರ ಸಕಲಾತ್ಮರುಗಳು ಎಲ್ಲಾ ।
ಈ ಕುಣಿತಕೆ ಅಣಿಯಾಗುತಿರೆ ।
ಶಿವಶಕ್ತಿಯ ಈ ನೃತ್ಯೋನ್ಮಾದದಿ ।
ವಿಶ್ವವೆ ಭಕ್ತಿಗೆ ಕರಗುತಿದೆ ॥೪॥

"ಕ್ರೀಡಾಶೇಖರ ನೃತ್ಯಭಯಂಕರ ।
ಕರುಣಿಸು ವಿಶ್ವಕೆ ಶಾಂತಿಯನು ।
ಭವಹರ ಶಂಕರ ಶುಭಕರ ಶ್ರೀ ಗುರು ।
ತೊಲಗಿಸು ಬಾಳಿನ ಭ್ರಾಂತಿಯನು ॥೫॥

॥ ಶಿವಧ್ಯಾನಂ ತು ಸಂಸಾರ ತಮಸ ಶ್ಚಂಡಭಾಸ್ಕರಃ॥

॥ ಶಿವಂ ಭೂಯಾತ್ ॥

|| ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||



ಪಂಚಾಸ್ಯ ವದನೋದ್ಭೂತಾ । ಪಂಚ ತತ್ವಾಧಿನಾಯಕಾ ।
ಪಂಚ ಬ್ರಹ್ಮಮಯಾನ್ಸ್ವಾಮಿ । ಪಂಚಾಚಾರ್ಯಾನ್ ಜಗದ್ಗುರೂ||

# ಶಿವಾಗಮಗಳು ಮತ್ತು ಶ್ರೀ ಸಿದ್ಧಾಂತಶಿಖಾಮಣಿ

ದ್ವಾಪರ ಯುಗಾರಂಭದ ಪೂರ್ವಕಾಲದಲ್ಲಿ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ, ಶಿವೋಕ್ತಿಯಂತೆ, ಸ್ವೇಚ್ಛಾರಾಜಿತ ದಿವ್ಯ ಮಂಗಳ ಮಂತ್ರಮಯ ವಿಗ್ರಹ ರೂಪದಲ್ಲಿ ಅವತರಿಸಿದ ಆಚಾರ್ಯವರೇಣ್ಯರೆ ಶ್ರೀ ಆದಿ ಜ|| ರೇಣುಕಾಚಾರ್ಯರೆಂದು ಶಿವಾಗಮಗಳು ಮುಕ್ತ ಕಂಠದಿಂದ ಘೋಶಿಸುತ್ತಲಿರುವುವು. ತತ್ಪೂರ್ವ ಶ್ರೀಮತ್ ಕೈಲಾಸದಲ್ಲಿ ಶ್ರೀ ಸದಾಶಿವನ ಸದ್ಯೋಜಾತ ಮುಖದಿಂದ ಚಿತ್ಕಳಾ ರೂಪದಲ್ಲಿ ಆವಿರ್ಭವಿಸಿ, ಶಿವನ ಒಡ್ಡೋಲಗದಲ್ಲಿನ, ಪಂಚವ್ಯೂಹ ಮೂರ್ತಿಗಳಲ್ಲಿ ಅಗ್ರಗಣ್ಯರಾಗಿ ವಿರಾಜಿತರಾಗಿದ್ದರು. ತ್ರಿ)ತ್ರಿಲಿಂಗ ರಾಜ್ಯವೆಂದು ವಿಖ್ಯಾತವಾದ ಆಂಧ್ರದ ಕೊಲ್ಲಿಪಾಕಿ, ಶಿವಕ್ಷೇತ್ರದಲ್ಲಿ ಅವತರಿಸಿದ ಮಹಾಚಾರ್ಯರು, ಕರ್ನಾಟಕ ದೇಶದ ಜನತೆಯ ಭಾಗ್ಯವೋ ಎಂಬಂತೆ, ಚಿಕ್ಕಮಗಳೂರು ಜಿಲ್ಲಾ, ಬಾಳೇಹೊನ್ನೂರು, ಭದ್ರಾತೀರ ವಿರಾಜಮಾನ ಶ್ರೀಮದ್ರಂಭಾಪುರಿ ಕ್ಷೇತ್ರದಲ್ಲಿ ತಮ್ಮ 'ವೀರಸಿಂಹಾಸನ' ಮಹಾಧರ್ಮ ಪೀಠವನ್ನು ಸ್ಥಾಪಿಸಿ, ಪ್ರಥಮ ೭೦೦ವರ್ಷ ಕಾಲ ಅಂತರ್ಮುಖಿಗಳಾಗಿ ಧ್ಯಾನ ಯೋಗದಲ್ಲಿ ಪೂರ್ಣ ಮಗ್ನರಾಗಿದ್ದರು. ಇದರಿಂದ ಕಂಡು

ಬರುವುದೇನೆಂದರೆ, ಧರ್ಮಪ್ರಚಾರಕರು ಪ್ರಥಮತಃ ತಾವೂ ಸಮಾಧಿಯೋಗಾಭ್ಯಾಸದಿಂದ ಕ್ವಚಿತ್ ಸಿದ್ಧಿಯನ್ನು ಪಡೆದಿದ್ದರೆ ಮಾತ್ರ, ಜನತೆಯ ಮೇಲೆ ಪ್ರಭಾವವನ್ನು ಬೀರುವಂಥಾ, ಕಾರ್ಯಾಚರಣೆಗಳನ್ನು ಸತತ ಸರ್ವತ್ರ ಯಶಸ್ವಿಯಾಗಿ ನೆರವೇರಿಸಲು ಸಾಧ್ಯವೆಂಬುದು ಅನುಭವಕ್ಕೆ ಬಂದಂತಾಗುವುದು. ಜಗತ್ಸೃಷ್ಟಿಗೆ ಆದಿಯಲ್ಲಿ ಶಿವನೂ ಸಹ ಉಜ್ವಲ ತಪಸ್ಸನ್ನು ಆಚರಿಸಿ, ವಿಜೃಂಭಿತನಾಗಿ, ತಂದನಂತರ, ವಿಶ್ವೋತ್ತರೋತ್ತರ ವಿಚಿತ್ರ ವಾದೀ, ಭುವನಾಂಡ ಕೋಟಿಗಳನ್ನು ಸೃಜಿಸಿದನೆಂದು **"ತಪಸಾ ಚೀಯತೇ ಬ್ರಹ್ಮ"** ಎಂಬ ಋಗ್ವೇದಾಂತರ್ಗತ ನಾಸದೀಯ ಸೂಕ್ತದಿಂದ ಕಂಡು ಬರುತ್ತೆ. **"ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೇ ಜನಾಃ"** ಎಂಬ ಗೀತೋಕ್ತಿ ಇದಕ್ಕೆ ಪೂರಕವೆನಿಸಿದೆ. ಇಂತಪ್ಪ ಪದ್ಧತಿಯಿಂದ ಧರ್ಮಬೋಧಕರಲ್ಲಿ, ನಿಕೃಷ್ಟವಾದ ದ್ವೇಷಾಸೂಯಗಳಿಗೆ ಅವಕಾಶವಿರುವುದಿಲ್ಲ. ಸಹನೆ, ಸಹಕಾರ, ಸಂಯಮಾದಿ ಸತ್ಸಂಪ್ರದಾಯಗಳು, ಉಜ್ವಲವಾಗಿ, ಸದಾ ಸಂವರ್ಧಿಸಲು ಅವಕಾಶವಿರುತ್ತೆ.

೩) ಅಜಂಗಮ ಶಿವಲಿಂಗಮುಖದಿಂದ, ಭಗವತ್ಪಾದ ಭುವನಾಚಾರ್ಯ ಶ್ರೀ ರೇಣುಕಾಚಾರ್ಯರು ಹೇಗೆ ಉದ್ಭವಿಸಲು ಸಾಧ್ಯ? ಎಂಬ ಪ್ರಶ್ನೆಯಿದ್ದಿದೆ. ಸ್ಥೂಲಬುದ್ಧಿಗೆ, ಭಗವಂತನ ಲೀಲಾ ವಿಭೂತಿಯೋಗದ ರಹಸ್ಯ ಅಗೋಚರವೆಂಬುದು ಜಗತ್ತಿಗೆ ತಿಳಿದ ವಿಷಯ **"ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ"** ತ್ರಿಗುಣಗಳ ಪ್ರಭಾವಕ್ಕೊಳಗಾದವರಿಗೆ ಅಪ್ರಾಕೃತ ದೈವಲೀಲೆಯ ರಹಸ್ಯ ತಕ್ಷಣ ಅರ್ಥವಾಗುವುದಿಲ್ಲ. ಲಿಂಗ, ಶಿವನ ಕಾಣುವ ದೇಹವೆಂದು ಪೂಜನೀಯವೆನಿಸಿದೆ. ಸ್ವಯಂಭುಲಿಂಗ ಜ್ಯೋತಿರ್ಮಯ ಇಂತಪ್ಪ ಶಿವಲಿಂಗದಿಂದ ಜ್ಯೋತಿರ್ಮಯ ದಿವ್ಯ ಕಳೆಗಳು "ನಿತ್ಯೋದಿತಃ ಕ್ಷಣ ಕ್ಷಣಕ್ಕೂ ಉದಿಸುತ್ತಲಿರುವವು. ಈ ಚಿತ್ಕಳೆಗಳು ಅತ್ಯಂತ ಸೂಕ್ಷ್ಮವಾದ್ದರಿಂದ ಸ್ಥೂಲದೃಷ್ಟಿಗೆ ಅಗೋಚರ. ಉತ್ತರ ಕ್ಷಣದಲ್ಲೇ ಒಂದು ಚಿತ್ಕಳಾಂಶ ಪ್ರಕಾಶಿತವಾಗಿ, ಅದರಿಂದ ಶಿವ ಚೈತನ್ಯ ಮಂತ್ರಮಯ ದಿವ್ಯ ದೇಹ ಗುರು ರೂಪದಿಂದ ಪ್ರಕಾಶಿತವಾಗುವುದು. ಸೂರ್ಯ ಮಂಡಲದಿಂದ ಹೊರಹೊಮ್ಮುವ ಅನಂತ ಕಿರಣಗಳಲ್ಲಿ ಒಂದು ಕಿರಣ ಅತ್ಯಂತ ಪ್ರಕಾಶಿತವಾಗಿ, ಶ್ರೀ ಸೂರ್ಯನಾರಾಯಣನ ರೂಪದಲ್ಲಿ ಕೇವಲ ಎಂಟು ವರ್ಷದ ಕುಮಾರಿ ಕುಂತಿಗೆ ದರ್ಶನವಿತ್ತ ಫಲವಾಗಿ, ಕರ್ಣನ ಉದಯಕ್ಕೆ

ಕಾರಣವಾದ ಮಂಗಳ ಘಟನೆ, ಶ್ರೀ ವೇದ ವ್ಯಾಸರಿಂದ ಪ್ರೋಕ್ತವಾದ ಮಹಾ ಭಾರತದಿಂದ ವೇದ್ಯವಿರುತ್ತೆ.

ಳ)ಶಿವನಿಚ್ಛೆಯಿದ್ದಲ್ಲಿ **ಅಘಟಿತ ಘಟಿತಾನಿ ಘಟಯಂತಿ ದುರ್ಘಟೀಕುರಂತೇ** ಎಂಬಂತೆ, ಜ್ಯೋತಿರ್ಲಿಂಗ ಮುಖದಿಂದ ಹೊರಹೊಮ್ಮಿದ ಅನಂತ ತರಂಗಗಳಲ್ಲಿ ಒಂದು ಚಿತ್ಕಳೆ, ಉದ್ದೀಪನಗೊಂಡು, ಮಂತ್ರಮಯ ಅಪ್ರಾಕೃತ ದಿವ್ಯ ಶ್ರೀ ಜ|| ರೇಣುಕಾಚಾರ್ಯರ ರೂಪದಲ್ಲಿ ಅವತರಿಸಿ ಲೋಕಾನುಗ್ರಹ ಮಂಗಳ ಮೂರ್ತಿಯಾಗಿ ಬೆಳಗಿತು. ಶ್ರೀ ಜ|| ರೇಣುಕಾದಿ ಪಂಚಾಚಾರ್ಯರ ಶಿವಲಿಂಗಾವ ತಾರದ ಘಟನೆ ಅಪರಂತೆ ಆಗಿರುತ್ತೆ. ವೇದಾಗಮಗಳ ಪ್ರತಿಪಾದನೆ ಅದಕ್ಕೆ ಸಾಕಷ್ಟು ಬೆಂಬಲವೀಯುತ್ತಿದೆ ಶಿವಯೋಗಿಗಳೂ ಅನಂತ ಶಿವಶರಣರೂ ಮೇಲುಕ್ತವಾದ ಸತ್ಯಾಂಶಗಳನ್ನೇ ಮನಗಂಡು, ಮುಕ್ಕೋಟಿನಿಂದ ಹಾಗೂ ಅವ್ಯಭಿಚಾರಿಣಿ ಭಕ್ತಿ ಭಾವದಿಂದ, ಅನನ್ಯ ಭಾವೇನ ಅಖಂಡವಾಗಿ ಸ್ತುತಿ ಸುತ್ತಾ ಬಂದಿದ್ದಾರೆ.

**ಏತೇ ಯುಗಚತುಷ್ಕೇ ತು । ಪಂಚಾರಾಧ್ಯಾ ಯಥಾವಿಧಿಃ ।**
**ಮಮ ಲಿಂಗಮುಖೋದ್ಭೂತಾಃ । ಲೋಕವಿಶ್ರುತ ಕೀರ್ತಯಃ ॥**

**|| ಭೋ ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ । ರಕ್ಷ ಮಾಂ ಭವರೋಗಿಣಂ॥**

ಕಾಮಿಕಾದಿ ವಾತುಲ ಪರ್ಯಂತವಿರುವ ೨೮ **ಶಿವಾಗಮಗಳು** ಶಿವನ ದಿವ್ಯ ಮುಖಕಮಲ, ಈಶಾನ ಮುಖದಿಂದ ಮನೋಹರವಾಗಿ ಅರ್ಥಗರ್ಭಿತ ವಾಗಿ ಹೊರಹೊಮ್ಮಿ, ಸಕಲ ನಿಗಮಾಗಮಗಳ ಸಮನ್ವಯ ಧರ್ಮವನ್ನು ಸಮೀ ಚೀನವಾಗಿ ಪ್ರತಿಪಾದಿಸುವ **"ವಿಶ್ವಧರ್ಮವೆನಿಸಿವೆ"** ಇಂತಹ ಅನಂತ ನಿಗಮಾ ಗಮಗಳ ಸಾರಾಮೃತವನ್ನು ಒಟ್ಟಿ ಇಳಿಸಿ, ಸರ್ವಧರ್ಮಸಹಿಷ್ಣುತಾ ಭಾವದಿಂದ ಹಾಗೂ ಶೃತಿ ಸಮನ್ವಯಾರ್ಥವನ್ನು ಹೊರಸೂಸುವಂತೆ, ಶ್ರೀಮಜ್ಜಗದ್ಗುರು ರೇಣುಕಾಚಾರ್ಯರು ಸುಪ್ರಸನ್ನ ಭಾವದಿಂದ ಅಖಂಡವಾಗಿ ಪ್ರತಿಪಾದಿಸಿದ ಜೀವಂತವಾದ ಸಿದ್ಧಾಂತ, **"ಶ್ರೀ ಸಿದ್ಧಾಂತ ಶಿಖಾಮಣಿ"**.

ಙ) **|| ಸರ್ವಾಗಮೋಪನಿಷದೋ ಗಾವೋ । ದೋಗ್ಧಾ ಶ್ರೀಜಗದ್ಗುರು ರೇಣುಕೇಂದ್ರಃ। ಆದಿ ಅಗಸ್ತ್ಯೋವತ್ಸಃ, ಸುಧೀರ್ಭೋಕ್ತಾ। ದುಗ್ಧಂ, ಶ್ರೀ ರೇಣುಕಗೀತಾಮೃತಂ ಮಹತ್॥**

ಅಂದರೆ ೧೦೮ ಉಪನಿಷತ್ತುಗಳೂ ಹಾಗೂ ೨೮ ಶಿವಾಗಮಗಳೆಂಬ ಕಾಮಧೇನುಸದೃಶವಾದ ಗೋವುಗಳನ್ನು, ಶಿವಜ್ಞಾನ ಮಹೋದಧಿಯೆನಿಸಿದ, ಶ್ರೀ ಮಜ್ಜಗದಾಚಾರ್ಯ ರೇಣುಕರು, ವಾತ್ಸಲ್ಯಭಾವದಿಂದ, ಆದಿ ಅಗಸ್ತ್ಯರೆಂಬ ಕರುವನ್ನು ಮೊಲೆಯುಣಲು ಮುಂದೆ ಬಿಟ್ಟು, ತುಂಬಿದ ಕೆಚ್ಚಲುಗಳ ಮೊಲೆಹಾಲನ್ನು ಧಾರಾಕಾರವಾಗಿ ಕರೆಯಲು, ಶುದ್ಧ ಬ್ರಹ್ಮ ಪರಾತ್ಪರ ವಸ್ತು ಸದೃಶ, ದಿವ್ಯ ಕ್ಷೀರಜ್ಞಾನಾಮೃತವನ್ನು ಅಂದರೆ, ಶ್ರೀ ರೇಣುಕಗೀತಾಮೃತ ವನ್ನು '**ಸುಧೀಭಿರ್ಲೋಕತ್ರಾ**' ಅಂದರೆ, ಸುಜ್ಞಾನಿಗಳೂ, ತತ್ವವೇತ್ತರೂ, ಶಿವ ಯೋಗಿಗಳೂ, ಪ್ರಸ್ಥಾನತ್ರಯ ಭಾಷ್ಯಕರ್ತೃಗಳೂ, ಅನೇಕಾನೇಕ ಶಿವ ಶರಣರೂ, ವಿಚಾರ ಪರಿಪ್ಲುತಭಾವದಿಂದ ಕುಡಿದು ಪ್ರಜ್ಞಾನಾನಂದ ಘನ ಜ್ಞಾನಮಯರಾಗಿ, ಲಿಂಗಾಂಗಸಾಮರಸ್ಯದ (ಜೀವಬ್ರಹ್ಮೈಕ್ಯಾನಂದದ) ಅನುಸಂಧಾನದಿಂದ ಪ್ರದೀಪ್ತರಾಗಿರುವರು.

ಇದರಿಂದಾಗಿ "**ಶ್ರೀ ರೇಣುಕ ಗೀತೆ**" ಎಂಬ ಶ್ರೀ ಸಿದ್ಧಾಂತಶಿಖಾಮಣಿ, ಸಕಲಾಗಮೋಪನಿಷದಾದಿಗಳ ಸಮನ್ವಯಾರ್ಥಗರ್ಭಿತವಾದ, ಏಕೋತ್ತರ ಶತ ಸ್ಥಲಗಳ ರೂಪು ರೇಖೆಗಳನ್ನು ಎಳೆ ಯೆಳೆಗಳಾಗಿ ಹೊರಹೊಮ್ಮಿಸಿ, ಸಾಧಕರ ಸ್ವಾನುಭೂತಿಗೆ ವೇದ್ಯವಾಗುವಂತೆ, ತಪಃ ಸಿದ್ಧ ಮನೋರಥನಾದ ಚಿರಂಜೀವಿ ಯೆನಿಸಿದ, ಆದಿ ಅಗಸ್ತ್ಯರನ್ನು ವ್ಯಾಜವನ್ನಾಗಿ ಅಯಸ್ಕಾಂತದಂತೆ ಮುಂದಿರಿಸಿ ಕೊಂಡು, ಮಾನವರ, ಮುಮುಕ್ಷುಗಳ, ಮುನಿಗಳ ಮೋಕ್ಷಾರ್ಥ, ಅರ್ಥಾತ್ ಅವರವರ ಆತ್ಮಸಾಕ್ಷಾತ್ಕಾರಾರ್ಥ ಬೋಧಿಸಿದ ವಿಶ್ವಧರ್ಮ ಇದೆಂದು ಕರವೆತ್ತಿ ಸಾರಬಹುದು.

೬) ಅಖಿಲ ದೇವ ದಾನವ ಮಾನವರ ಉದ್ಧಾರಾರ್ಥ, ಭುವನಾಚಾರ್ಯವ ರೇಣ್ಯರು ಅಂದರೆ ಸಾಕ್ಷಾತ್ ಶಿವನೇ ಆದ, ಶಿವಲಿಂಗಸಂಭವರೆನಿಸಿ, ಜಗದಾದಿ ಯಿಂದಲೂ ಸ್ತುತ್ಯರೂ ವಂದ್ಯರೂ ಪ್ರಾತಃಸ್ಮರಣೀಯರೂ ಆದ, ಶ್ರೀರೇಣು ಕಾದಿ ಪಂಚಾಚಾರ್ಯರು, ತ್ರಿಭುವನಂಗಳ ಉದ್ಧಾರಾರ್ಥ, ತಾವು ಪ್ರಥಮತಃ ಆಚರಿಸಿ, ತೋರಿಸಿ, ಬೋಧಿಸಿದ ಧರ್ಮ ಭಾನುಕೋಟಿ ಪ್ರಕಾಶ ಮಾನವಾಗಿ, ಆಸ್ತಿಕರ ಸನ್‌ಹೃದಯಮಂಡಲದಲ್ಲಿ '**ಸನ್‌ಹೃದಯ ಪ್ರಕಾಶಃ**' ಎಂಬ ಶೃತಿ ವಾಣಿಯಂತೆ ಹಚ್ಚ ಹಸುರಾಗಿ ರಾರಾಜಿತವಾಗಿದೆ. ಈ ಸತ್ಯಾಂಶದ ನಿದರ್ಶನ ದಂತೆ ಶ್ರೀಮದ್ರಂಭಾಪುರೀ ವೀರಸಿಂಹಾಸನದ, ಶಿವಯೋಗ ದಂಡದ ಅಗ್ರಭಾಗ

ಹಸರು ಬಣ್ಣದ ಕಂತೆಯಿಂದ ವಿಭೂಷಿತವಾಗಿದೆ ಸರಿಯಷ್ಟೆ. ಭೂಮಾತೆಯ ಉಡುಗೆ (ಪೀತಾಂಬರ) ಹಸರು ಆಹ್ಲಾದಕರ ಜೀವನಾಧಾರ. ಉದ್ಭಿಜವರ್ಗದ ೨೧ ಲಕ್ಷ ಜೀವಕೋಟಿಗಳಿಗೆ ಹಸರು, ಆಹಾರ, ಪ್ರಾಣಾಧಾರವೆನಿಸಿದೆ ಹುಲ್ಲು ಗಿಡ ಮರಗಳೂ ; ಹೂ ಹಣ್ಣುಗಳೂ, ದವಸಧಾನ್ಯಗಳೂ, ಸಪ್ತಧಾತುಗಳೂ ಭೂಗರ್ಭದಿಂದ ಉದಿಸುವ ಬೆಳೆಯಿಂದಾಗಿ ಉಜ್ಜೀವಿಸುತ್ತಲಿವೆ. ಇದರ ಘನ ಗಂಭೀರವಾದ ಸಂಕೇತವೇ ಶ್ರೀಮದ್ರಂಭಾಪುರೀ ವೀರಸಿಂಹಾಸನದ ಹಸಿರುಕಂತೆ ಈ ಅಶ್ವತ್ಥ (ಅರಳಿ) ದಂಡದ ಅಗ್ರಸ್ಥಾನವನ್ನು ಅಲಂಕರಿಸಿ, ಉದ್ಭಿಜವರ್ಗದ, ಇಪ್ಪತ್ತೊಂದು ಲಕ್ಷ ಜೀವ ಕೋಟಿಗಳಿಗೆ ಆಶ್ರಯ ಸ್ಥಾನವೆನಿಸಿ ಕಂಗೊಳಿಸು ತ್ತಲಿರುವುದು. ಈ ಪರಮೋತ್ಕೃಷ್ಟವಾದ ಹಸಿರು ಸಂಕೇತ, ಪ್ರಕೃತಿ ತತ್ವ ವನ್ನುಂಡು ಮತ್ತೆ ಪ್ರಕೃತಿಯ ಅಭ್ಯುದಯಕ್ಕೆ ಆವಾಸಸ್ಥಾನವೆನಿಸಿರುವುದು. ಹಚ್ಚಹಸಿರುತನವನ್ನು ತನ್ನ ಗರ್ಭದಲ್ಲಿರಿಸಿಕೊಂಡು ವಿರಾಜಿಸುವ ಪ್ರಕೃತಿ ದೇವಿಗೆ ಪರಮಾಧಾರ ಸ್ತಂಭದಂತೆ ಪೃಥ್ವೀಲಿಂಗ ತಳಪಾಯವಾಗಿದೆ. ಇದು ಶಿವಪಂಚಾಕ್ಷರೀ ಮಹಾಮಂತ್ರದ **"ನಕಾರ ಬೀಜಾಕ್ಷರ"** ಇದುವೇ ಪೃಥ್ವಿ ಲಿಂಗ. ಸದಾಶಿವನ ಸದ್ಯೋಜಾತಮುಖ "ನಕಾರ ಬೀಜಾಕ್ಷರ ಮಹಾ ಮಂತ್ರ"ದ ಸಂಕೇತ. ಶ್ರೀ ಜಗದಾದಿ ಪರಮ ಜಗದ್ಗುರು ಶ್ರೀರೇಣುಕಾಚಾ ರ್ಯರು ಶಿವಾಗಮಗಳ ಉಕ್ತಿಯಂತೆ ಸದಾಶಿವನ ಸದ್ಯೋಜಾತ ಮುಖಸಂಭ ವರು. ಇವರನ್ನು ಶೃತಿಮಾತೆಯು **"ಸದ್ಯೋಜಾತಾದಯಃ"** ಎಂದು ಮುಕ್ತ ಕಂಠದಿಂದ ಸ್ತುತಿಸಿರುವಳು. ಪೃಥ್ವೀಲಿಂಗ "ನಕಾರ ಬೀಜಾಕ್ಷರ ಮಹಾ ಮಂತ್ರ" ವೆನಿಸಿ ಪೃಥ್ವೀತತ್ವಕ್ಕೆ ತಾಯ್ಮನೆಯೆನಿಸಿರುವುದು. ಕೊಲ್ಲಿಪಾಕಿ ಶ್ರೀ ಸೋಮನಾಥಲಿಂಗವೆಂದು ಶೃತಿ ಘೋಷಿಸುತ್ತಲಿದೆ. ಇಂತಪ್ಪ ಪೃಥ್ವೀಲಿಂಗದ ಗರ್ಭಾಂಬುಧಿಯಲ್ಲಿ, ಸತತ ಸ್ವಯಂ ಚಿತ್ಸ್ವರೂಪದಿಂದ ಪ್ರಾದುರ್ಭವಿಸಿದ ಮಂತ್ರಮಯ ಅಖಂಡ ದಿವ್ಯ ತೇಜಸ್ಸೇ ಶ್ರೀ ಆದಿ ಜ॥ರೇಣುಕಪರಂಜ್ಯೋತಿ". ಈ ಕಾರಣದಿಂದಾಗಿ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರನ್ನು, ಪರಮೇ ಶ್ವರನು "ಜಗದ್ಗುರು ಸಾರ್ವಭೌಮ"ರೆಂದು ಭುವನಾಂಡಕೋಟಿಗಳಿಗೆ ಕೇಳಿಸು ವಂತೆ ಸಮುದ್ರದ ಅಲೆಗಳ ಘೋಷದಂತೆ ಘೋಷಿಸಿರುವನು. ಇದರಿಂದಾಗಿ, ಇಡೀ ಪೃಥ್ವೀತತ್ವಕ್ಕೆ ಶ್ರೀ ರೇಣುಕಾಚಾರ್ಯರು ಏಕೈಕ ಜಗದ್ಗುರು ಸಾರ್ವ ಭೌಮರಿರುವರು. ಇಪ್ಪತ್ತೊಂದು ಲಕ್ಷ ಉದ್ಭಿಜದ ಜೀವಕೋಟಿಗಳಿಗೆ ಸತತ

ಅನ್ನವೀಯುವ ಶ್ರೀಮದ್ರಂಭಾಪುರೀ ವೀರಸಿಂಹಾಸನದ ಹಸಿರು ಕಂತೆಯು ಯೋಗದಂಡ ಅಭಯಪ್ರದಾನ. ಸಕಲ ಜೀವವರ್ಗಕ್ಕೆ ಅನ್ನದಿಂದ ವೀರ್ಯವೇರ್ಪ ಡುವುದರಿಂದ ಈ ಮಹಾಪೀಠವು ವೀರಸಿಂಹಾಸನವೆಂದು ಆಗಮ ಇತ್ಯಾದಿ ಗಳಲ್ಲಿ ಸ್ತುತ್ಯವಿರುತ್ತೆ. "ಅನ್ನಂ ಬ್ರಹ್ಮೇತಿ ವ್ಯಜಾನಾತ್". ಅನ್ನದ ಪ್ರತೀಕವೇ ವೀರ ಸಿಂಹಾಸನ. ಪೃಥ್ವೀತತ್ವವೇ ವೀರಸಿಂಹಾಸನವಾಗಿ ರೂಪಗೊಂಡಿದೆ. ಅನ್ನ ಗತ ಪ್ರಾಣವುಳ್ಳ ಜಗತ್ತಿಗೆ ಆದಿ ಜ|| ಶ್ರೀ ರೇಣುಕ ಭಗವತ್ಪಾದಾಚಾ ರ್ಯರೇ ಪ್ರಪ್ರಥಮಾಚಾರ್ಯರೆಂದು ಶೃತಿ ಸಾರುತ್ತಲಿದೆ.

**ಪಂಚ ಪೀಠಾಧಿದೇವಾನಾಂ । ಯೇಽಚಾಸಂತಿ ಸಮಾನತಾಂ ।**
**ತೇ ಗರ್ಭಾಶ್ಚ ಸಂಪ್ರೋಕ್ತಾಃ । ಜ್ಞಾನಶೂನ್ಯತ್ವತಃ ಶಿವೇ ॥**
**ಭೋ ! ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷ ಮಾಂ ಭವರೋಗಿಣಂ ॥**

ಓಂ ಸದಾಶಿವನ ಸದ್ಯೋಜಾತಾದಿ ಪಂಚಮುಖ ಕಮಲಗಳಿಂದ ಚಿಮ್ಮಿದ ಚಿನ್ಮಯಾತ್ಮಕ ಕಿರಣಗಳು. ತರಂಗಗಳೋಪಾದಿಯಲ್ಲಿ ಹೊರ ಹೊಮ್ಮಿ "ನಿತ್ಯೋದಿತಃ" ವೆಂದೆನಿಸಿರುವುವು. ಭೌತಿಕ ಸೂರ್ಯ ಮಂಡಲ ದಿಂದ ಸಹಸ್ರಾರು ಕಿರಣಗಳು ಹೊರಹೊಮ್ಮುವಂತೆ, ಸದಾಶಿವನ (ಪಂಚಾನನನ) ಪಂಚಮುಖಗಳಿಂದ ಹೊರಹೊಮ್ಮಿದ ಚಿತ್ಕಳೆಗಳು, "ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ" ಎಂಬಂತೆ ಪಂಚಾಚಾರ್ಯರ ರೂಪದಲ್ಲಿ ಅವತರಿಸಿ ಶಿವನ ಓಡ್ಡೋಲಗ ದಲ್ಲಿ ಶಿವನ ಸುತ್ತಲೂ ಪಂಚವ್ಯೂಹ ಮೂರ್ತಿಗಳಾಗಿ ಅಲಂಕೃತರಾಗಿ ಶೋಭಿ ಸಿದರು.

೭) ಮಾನವರ ಮನೋಮಂಡಲದಲ್ಲಿ ಧರ್ಮಭಾವ ಕಳೆಗುಂದಿ ಜನತೆಯಲ್ಲಿ ಅಧರ್ಮ ಎದ್ದು ಎಲ್ಲೆಲ್ಲೂ ತಾಂಡವವಾಡುವ ಕಾಲದಲ್ಲಿ ನಾನು ಮಾನವ ರೂಪದಲ್ಲಿ ಅವತರಿಸುತ್ತೆನೆಯೆಂಬುದು ಭಗವದ್ವಾಣಿ.

**"ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನ ಮಧರ್ಮಸ್ಯ । ತದಾತ್ಮಾನಂ ಸೃಜಾಮ್ಯಹಂ ॥ ಪರಿತ್ರಾಣಾಯ ಸಾಧೂನಾಂ । ವಿನಾಶಾಯ ಚ ದುಷ್ಕೃತಾಂ । ಧರ್ಮಸಂಸ್ಥಾಪನಾ ರ್ಥಾಯ । ಸಂಭವಾಮಿ ಯುಗೇ ಯುಗೇ ॥"**

ಎಂಬ ಭಗವದ್ವಾಣಿಯಂತೆ, ಶ್ರೀ ಆದಿ ಜ| ರೇಣುಕಾದಿ ಪಂಚಾಚಾರ್ಯರು ಭೂಮಿಯಲ್ಲಿ ಪಂಚ ಜ್ಯೋತಿರ್ಲಿಂಗ ಮುಖಗಳಿಂದ ಚಿತ್ಕಳಾರೂಪದಲ್ಲಿ ಹೊರಹೊಮ್ಮಿ ಉತ್ತರ ಕ್ಷಣದಲ್ಲಿ, ಸರ್ವತಂತ್ರ ಸ್ವತಂತ್ರ ಶಕ್ತಿಮಾನ್ ಮಂತ್ರಮಯ ದಿವ್ಯ ಭುವನಾಚಾರ್ಯ ರೂಪದಲ್ಲಿ ಜಗತ್ತಿಗೆ ಪ್ರಥಮತಃ ಕಾಣಿಸಿ ಕೊಂಡರು. ವೀರ, ನಂದಿ, ಭೃಂಗಿ, ವೃಷಭ, ಸ್ಕಂದಾದಿ ಗೋತ್ರ ಪುರುಷರ ಕೋರಿಕೆಯಂತೆ, ಸಂಸ್ಥಾಪಿಸಲು, ಪರಶಿವನು, ತನ್ನ "ಅತ್ಮ ಸಮ ಪ್ರಭಾನ್" ಅಂದರೆ, ತನ್ನ ಸಾಕ್ಷಾತ್ ಅಪರಾವತಾರಿಗಳಾದ ಶ್ರೀ ರೇಣುಕಾದಿ ಪಂಚಾಚಾರ್ಯರುಗಳನ್ನು ಭೂಮಿಯಲ್ಲಿ ತನ್ನ ಸ್ವರೂಪವೆನಿಸಿದ ಪಂಚಶಿವಲಿಂಗಗಳಿಂದ ಲೀಲಾಜಾಲವಾಗಿ ಅವತರಿಸಿ ಧರ್ಮೋದ್ಧಾರ ಕಾರ್ಯವನ್ನು ಮಾಡುವುದೆಂದು ಅಜ್ಞಾಪಿದನು. ಶ್ರೀ ರೇಣುಕಾಚಾರ್ಯರನ್ನುದ್ದೇಶಿಸಿ, ರೇಣುಕ ! ನೀನು ಈಗ ಶ್ರೀಕೊಲ್ಲಿಪಾಕಿ ಕ್ಷೇತ್ರದಲ್ಲಿ ವಿರಾಜಿಸುವ ನನ್ನ

ಸೋಮೇಶ್ವರಾಭಿಧಾನಸ್ಯ ತತ್ರ ವಾಸವತೋ ಮಮ ।
ಅಸ್ಪೃಶನ್ಮಾನುಷಂ ಭಾವಂ ಲಿಂಗಾತ್ ಪ್ರಾದುರ್ಭವಿಷ್ಯಸಿ॥

ಎಂದು ಅಜ್ಞಾಪಿಸಲು ಶಿವೋಕ್ತಿಯಂತೆ ಶ್ರೀ ಜಗದಾಚಾರ್ಯ ರೇಣುಕರು, ಜಗಜಗನೆ ಜಗಿಯುತ್ತಾ

ಸೋಮೇಶ್ವರಮಹಾಲಿಂಗಾತ್ ಪ್ರಾದುರಾಸೀತ್ ಸ ರೇಣುಕಃ॥

"ಪ್ರಾದುರ್ಭೂತಂ ತಮಾಲೋಕ್ಯ। ಶಿವಲಿಂಗಾತ್ರಿಲಿಂಗಜಾಃ ।
ವಿಸ್ಮಿತಾಃ ಪ್ರಾಣಿನಃ ಸರ್ವೇ । ಬಭೂವು ರತಿತೇಜಸಂ॥"

ಕೋಟಿಸೂರ್ಯ ಪ್ರಕಾಶಮಾನರಾಗಿ ಶ್ರೀ ಸೋಮನಾಥ ಲಿಂಗದ ಮುಖದಿಂದ ದಿವ್ಯ ತೇಜಸ್ ಸಂಪನ್ನರಾಗಿ ಆವಿರ್ಭವಿಸಿದರು. ಚತುರ್ಯುಗಾರಂಭದ ಪರ್ವಕಾಲಗಳಲ್ಲಿ ಪಂಚಲಿಂಗ ಮುಖಗಳಿಂದ ಶಿವನಾಣತಿಯಂತೆ, ತಾವೇ ತಾವಾಗಿ ಆಶ್ಚರ್ಯಕರವಾಗಿ ಪಂಚಾಚಾರ್ಯರು ಅವತರಿಸುವರೆಂಬ ಮಹದಂಶವನ್ನು ಪ್ರಮುಖ ಶಿವಾಗಮಗಳು ಪೊಕ್ಕೊರಳಿನಿಂದ, ಝೇಂಕರಿಸುತ್ತಾ,

ಏತೇ ಯುಗ ಚತುಷ್ಕೇ ತು । ಪಂಚಾರಾಧ್ಯಾ ಯಥಾವಿಧಿಃ ।

**ಹುಮ ಲಿಂಗ ಮುಖೋದ್ಭೂತಾಃ । ಲೋಕ ವಿಶ್ರುತ ಕೀರ್ತಯಃ ॥"**
ಎಂದು ಸ್ತುತಿಸುತ್ತಲಿವೆ.

೮) ಶ್ರೀ ಜ||ರೇಣುಕರು **"ಅಭಯಂ ಸರ್ವಭೂತೇಭ್ಯೋ। ದಧಾಮ್ಯೇತದ್ ವ್ರತಂ ಮಮ"** ಅಂದರೆ, ೮೪ಲಕ್ಷ ಜೀವ ವರ್ಗಗಳಿಗೆ ಅನವರತ ಅಭಯವನ್ನೀಡುವ ವ್ರತ ತಮ್ಮದೆಂದು ವಿಶ್ವಕ್ಕೆ ವಿಶ್ವಸನೀಯವಾಗಿ ಅಭಯವನ್ನಿತ್ತಿರುವರು. ಬ್ರಹ್ಮನ ಸೃಷ್ಟಿಗೊಳಪಟ್ಟ, ಚತುರ್ವಿಧ ಸೃಷ್ಟಿಗಳಲ್ಲಿ ಪಿಂಡಜದ ೨೧ಲಕ್ಷ ಜೀವ ವರ್ಗಗಳಲ್ಲಿ ಅತ್ಯಧಿಕವೆನಿಸಿದ ಅಖಿಲ ಮಾನವ ಕುಲೋದ್ಧಾರಾರ್ಥ, ಮಾನವ ಧರ್ಮವನ್ನು ಸರಳವಾಗಿ ಬೋಧಿಸುತ್ತಾ–

**"ಆಲಿಸುವುದೆಲೆ ಭಕ್ತವರ್ಯರೆ ॥ ನೀಲಕಂಧರನೊಲವು ನಿಮ್ಮಲಿ । ಮೇಳಿಸಿರ್ಪುದು ಬಂದೆನದರಿಂದಾತನಾಣತಿಯು ತಾಳಿ ತಲೆಯೊಳು ಜಗದೆ ಶಿವ ಮತ । ದೇಳಿಗೆಯು ಮೆರೆಯುವುದು ಶರಣರ ಜಾಲ ಮಾಂಪುದು । ಮುಕ್ತಿ ಸಂಪತ್ಸುಖವ ನಿನ್ನೆಂದ ॥ ಮೊಡುವುದು ಶಿವ ಪೂಜೆಯನು । ಸಲೆಪಾಡುವುದು ಶಿವನಾಮವನು। ಕೊಂಡಾಡುವುದು ಶಿವಭಕ್ತಿ ಭರಿತ। ಸ್ವಾಂತಸಂತತಿಯಂ। ಸೂಡುವುದು ಶಿವಮಾಲ್ಯವನು। ಮಾತಾಡುವುದು ಶಿವ ತತ್ವವಿದರಲಿ । ನೀಡುವುದು ಶಿವಯೋಗಿಗಳ್ಗಿದೆ ಧರ್ಮತಾನೆಂಬಾ॥ ಉತ್ತಮಾಂಗದೆ ಲಿಂಗವನು ತಳೆಯುತ್ತೆ । ಮಂತ್ರ ಪವಿತ್ರ ಭಸ್ಮವ ಮೆತ್ತಿ ಮೆಯ್ಯೊಳು । ವಿಮಲ ಪಂಚಾಕ್ಷರಿಯ ಜಪಿಸುತಲಿ । ಮತ್ತೆ ಮೆರೆವ ಶಿವಾಗಮೋಪನಿಷತ್ತುಗಳ । ಪುರುಳರಿದು ಭಕ್ತಿಯ ಭಿತ್ತರಿಪುದಲೆ । ಧರ್ಮ ಕರ್ಮವು ಮರ್ಮವಿದೆಯೆಂದ ॥**

ಭಗವತ್ಪಾದ ಶ್ರೀ ಆದಿಜಗದ್ಗುರು ರೇಣುಕಾಚಾರ್ಯರು ದಯಾಮಯರಾದುದರಿಂದ ಮೇಲುಕ್ತವಾದ ವಿಶ್ವಧರ್ಮವೆನಿಸಿದ ವೀರಶೈವಧರ್ಮದ ತಿರುಳನ್ನು ಅಖಂಡ ಮಾನವ ಕುಲೋದ್ಧಾರಕ್ಕಾಗಿ ಕರುಣೆಯಿಂದ ಇತ್ತ ದಿವ್ಯ ಸಂದೇಶವಿದು. ಶ್ರೀ ಅಗಸ್ತ್ಯರು ರೇಣುಕರನ್ನು ಸ್ತುತಿಸುತ್ತಾ.

**"ಭೋ ! ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ । ರಕ್ಷ ಮಾಂ ಭವರೋಗಿಣಂ॥**

ಎಂದು ಪ್ರಾರ್ಥಿಸಿರುವರು. **(ಸಿ.ಶಿ.ಪರಿ. ೬ಶ್ಲೋ. ೯)**

## ಶ್ರೀ ಸಿದ್ಧಾಂತ ಶಿಖಾಮಣಿಯ ಸಾಮೂಹಿಕ ನಿತ್ಯ ಪಾರಾಯಣದ ಅವಶ್ಯಕತೆ :

೧) ಉದಾರಚರಿತರಾದ ಸಮಸ್ತ ಮತೀಯರಿಗೂ ಶ್ರೀ ಸಿದ್ಧಾಂತ ಶಿಖಾಮಣಿ ಸರ್ವಾದರಣೀಯ ಮಹಾಕೃತಿಯೆಂದು ಪೂಜನೀಯವೆನಿಸಿರುವುದು. ವಿಶೇಷತಃ ಅಖಿಲ ಲಿಂಗಾಗಿ ಪರಮ ವೀರಶೈವರಿಗೆ ಇದು ಆದಿಗಾದಿಯಾದ ಏಕೈಕ ಬಹುಪ್ರಾಚೀನ ಅಧಿಕೃತ ಬೃಹದ್ಧರ್ಮಗ್ರಂಥವೆಂದು ಪೆಸರ್ಗೊಂಡಿದೆ. ಶಿವಲಿಂಗೋದ್ಭವ ಮಂಗಳ ಮೂರ್ತಿ ಶ್ರೀ ಆದಿ ಜ| ರೇಣುಕಾಚಾರ್ಯರು, ಭುವಿಯಲ್ಲಿ ಶಿವೋಕ್ತಿಯಂತೆ ಕರುಣಾದ್ರ್ರಭಾವದಿಂದ, ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ಸರ್ವತ್ರ ಸ್ವಚ್ಛಂದವಾಗಿ ಸ್ಥಾಪಿಸಿ, ಆಸ್ತಿಕರ ಮಧ್ಯೆ ಬೋಧಿಸಿ, ಆಚರಿಸಿ, ತೋರಿಸಿ, ಅನುಷ್ಠಾನ ಪರರಾದ ಮೇಧಾವಿ ಜನರಿಗೆ, ತಾವು ಮೇಲ್ಪಂಕ್ತಿಯಾಗಿ ವರ್ತಿಸಿ ಆದರ್ಶಪ್ರಾಯರಾಗಿ ತೋರಿಸಿದ ಸನ್ಮಾರ್ಗವಿದು. ಅಖಿಲ ಮಾನವ ಸಮುದಾಯಕ್ಕೆ ಭೋಗ ಮೋಕ್ಷಗಳ ಪ್ರಾಪ್ತಿಗೆ ಸನ್ಮಾರ್ಗಪ್ರದೀಪವಿದು. ವಿಶ್ವಧರ್ಮವನ್ನು ಸಹಜವಾಗಿ ತನ್ನ ಗರ್ಭಾಂಬುಧಿಯಲ್ಲಿ ಗರ್ಭೀಕರಿಸಿ ಕೊಂಡಿರುವ ಅಖಂಡ ಶಿವಾದ್ವೈತ ಸಿದ್ಧಾಂತವನ್ನು ಲೋಕೋದ್ಧಾರಾರ್ಥ ಹಾಗೂ ಧರ್ಮೋದ್ಧಾರಾರ್ಥ ಮತ್ತು ಅಖಿಲ ದೇವ ದಾನವ ಮಾನವರ ಸರ್ವಾಂಗೀಣ ಉದ್ಧಾರಾರ್ಥ, ಮುನಿಕುಲ ತಿಲಕ, ತಪಃಸಿದ್ಧಮನೋರಥರಾದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳನ್ನು ವ್ಯಾಜವಾಗಿ ಮುಂದಿರಿಸಿಕೊಂಡು, ಭವಸಾಗರದಲ್ಲಿ ಬಿದ್ದು ಪರಿತಪಿಸುತ್ತಲಿರುವ ಅನಂತ ಕೋಟಿ ಮಾನವರ ಉದ್ಧಾರಾರ್ಥ, ಶ್ರೀಮದಾಚಾರ್ಯವರೇಣ್ಯರಾದ ಆದಿ ರೇಣುಕಾಚಾರ್ಯರು ತಮ್ಮ ಅಭಯ ಪ್ರದವಾದ ಅಮೃತ ಹಸ್ತವನ್ನು ಮೇಲೆತ್ತಿ, ತುಂಬಿದ ಹೃದಯದಿಂದ ಮುಮುಕ್ಷುಗಳ ಮೋಕ್ಷಾರ್ಥ, ಭವಜೀವಿಗಳ ನಿರಂತರದ ಅಭ್ಯುದಯಾರ್ಥ ಪ್ರಸನ್ನ ಭಾವದಿಂದ ಬೋಧಿಸಿದ, ವಿಶಾಲಾರ್ಥ ಗರ್ಭಿತವಾದ ಶಿವಜ್ಞಾನ ಚಿನ್ಮಹೋದಧಿ ಶ್ರೀ ಸಿದ್ಧಾಂತಶಿಖಾಮಣಿ. ಈ ಕಾರಣದಿಂದ ಶಿವಾದ್ವೈತಸಿದ್ಧಾಂತವನ್ನು ತತ್ವವೇತ್ತರು 'Tower of spiritualism' ಅಂದರೆ ಹಿಮಾಲಯದ ಶ್ರೀ ಗೌರೀಶಂಕರ ಶಿಖರದೆತ್ತರದಷ್ಟು ಬಹು ಉನ್ನತವಾದ ಪರಾತ್ಪರ ||ತತ್ವಾನಾಂ ಮಹದಾದೀನಾಂ|| ಎಂಬ ಘನಗಂಭೀರವಾದ ಸಿದ್ಧಾಂತ, ಶ್ರೀಸಿದ್ಧಾಂತಶಿಖಾಮಣಿ ಪ್ರೋಕ್ತಷಟ್ಸ್ಥಲ ಸಿದ್ಧಾಂತ. ಈ ಕಾರಣ

ದಿಂದ ಶ್ರೀ ವೇದವ್ಯಾಸಾಚಾರ್ಯರು ತಮ್ಮ ಘನ ಶ್ರೀ ಶಂಕರ ಸಂಹಿತೆಯಲ್ಲಿ "ಷಟ್ಸ್ಥಲಜ್ಞಾನಮಾನೇವ ಪರಮೋತ್ಕೃಷ್ಟಂಚ" ಎಂದು ಉಚ್ಚಧ್ವನಿಯಿಂದ ಘೋಷಿಸಿರುವರು. ಶ್ರೀ ರೇಣುಕಗೀತೆಯ ಮಹಾಕರ್ತೃ ಪರಮ ಪರತರ ಶ್ರೀ ಶಿವಯೋಗಿ ಶಿವಾಚಾರ್ಯರು, ಶ್ರೀ ಸಿದ್ಧಾಂತ ಶಿಖಾಮಣಿಯನ್ನು ಮುಕ್ತ ಕಂಠದಿಂದ ಪ್ರಶಂಸಿಸುತ್ತಾ

**ಶ್ರೀ ವೇದಾಗಮ ವೀರಶೈವಸರಣಿಂ । ಶ್ರೀ ಷಟ್ಸ್ಥಲೋದ್ಯನ್ಮಣಿಂ ।**
**ಶ್ರೀ ಜೀವೇಶ್ವರಯೋಗಪದ್ಮತರಣಿಂ । ಶ್ರೀ ಗೋಪ್ಯಚಿಂತಾಮಣಿಂ ।**

ಎಂದು ಮನದುಂಬಿ ಹರ್ಷೋದ್ಭಾವದಿಂದ ಕೊಂಡಾಡಿರುವರು. ಇದು ಸ್ತುತ್ಯವಿರುತ್ತೆ. ಇತ್ಯಾದಿ ಅಸದೃಶ ಕಾರಣಗಳಿಂದ ಶ್ರೀ ಸಿದ್ಧಾಂತ ಶಿಖಾಮಣಿ ಶಾಸ್ತ್ರ ಇಡೀ ವಿಶ್ವದಲ್ಲಿ ಅನೇಕ ಬೃಹದ್ ಸಿದ್ಧಾಂತಗಳ ಮಧ್ಯೇ, ಮಧ್ಯಮಣಿನ್ಯಾಯಾನುಸಾರ, ಮುಕುಟ ಪ್ರಾಯವಾದ ಶಿರೋರತ್ನ.

ಫಣಾಮಣಿಯು ಹೆಡೆಯ ಮಧ್ಯೆ ಜಾಜ್ವಲ್ಯಮಾನವಾಗಿ ಥಳಥಳಿಸುವಂಥಾ, ಅಪೂರ್ವ ನಾಗಾಮಣಿ ಶ್ರೀ ಸಿದ್ಧಾಂತ ಶಿಖಾಮಣಿ. ಮೂರು ಲೋಕಗಳಲ್ಲಿನ ದೇವ ದಾನವ ಮಾನವರಿಗೆ ಸತತ ವಿಶ್ವಧರ್ಮ ಬೋಧೆಯಿಂದ ಪ್ರಬುದ್ಧರನ್ನಾಗಿಸಿ ಬೆಳಗುವ ದಿವ್ಯದ್ಯುಮಣಿ ಶ್ರೀ ಸಿದ್ಧಾಂತಶಿಖಾಮಣಿ, ಚಿಂತಾಮಣಿ: ಮತ್ತಿದುವೇ ಜೀವಂತವಾದ ಅನರ್ಘ್ಯ ಮುಕ್ತಾಮಣಿ ಇದುವೇ ಮಾನವ ಜೀವನವು. ಕ್ರಿಯ, ಭಕ್ತಿ, ಜ್ಞಾನ, ವೈರಾಗ್ಯಾದಿ, ಕಲ್ಯಾಣ ಗುಣಗಣಗಳಿಂದ ಗರ್ಭಿತವಾದ ಬಂಗಾರದ ಅಕ್ಷಯಕರ ಗಣಿ. ಶುಭಕರ ಶ್ರೀಕರ, ಶ್ರೀ ಸಿದ್ಧಾಂತ ಶಿಖಾಮಣಿಗೆ ನಮೋ ನಮೋಯೆಂಬೆ.

**ನಿತ್ಯ ಸಾಮೂಹಿಕ ಪಾರಾಣದ ಅವಶ್ಯಕತೆ :**

೧೦) ಇಂತಪ್ಪ ಮಹೋನ್ನತವೂ, ಮೋಕ್ಷಪ್ರದವೂ ಅದ ಶ್ರೀ ಸಿದ್ಧಾಂತಶಿಖಾಮಣಿಯನ್ನು, ವಿಶೇಷತಃ ಸಮಸ್ತ ವೀರಶೈವರೂ ತಮ್ಮ ಆತ್ಮೋದ್ಧಾರಾರ್ಥ ದ್ವಿಸಂಧ್ಯಾ ಕಾಲಗಳಲ್ಲಿ ನಿತ್ಯಭಕ್ತ್ಯಾ ಪ್ರಶಾಂತ ಮನೋಭಾವದಿಂದ, ಒಂದೊಂದು ಪರಿಚ್ಛೇದವಾಗಿ ತಪ್ಪದೆ, ಸ್ವಾತ್ಮ ಪ್ರೀತಿಪುರಸ್ಸರ ಭಾವದಿಂದ ಪಾರಾಯಣ ಮಾಡುತ್ತಾ, ಯಾವಜ್ಜೀವವೂ ಶ್ರೀ ಮಹಾಗುರು ಭಕ್ತಿ ಪರಾಯಣರಾಗಿ, ಮುಂದುವರಿಯುತ್ತಿರಬೇಕು. **''ಉತ್ತಿಷ್ಠತ ಉತ್ತಿಷ್ಠತ ।**

**ಜಾಗ್ರತ ಜಾಗ್ರತ। ಪ್ರಾಪ್ಯವರಾನ್ನಿಬೋಧತ"** ಎಂಬ ಕಠೋಪನಿಷತ್ತಿನ ಘರ್ಜನೆಯಂತೆ ಶ್ರೀಸಿದ್ಧಾಂತ ಶಿಖಾಮಣಿಯ ೨೧ ಪರಿಚ್ಛೇದಗಳಲ್ಲಿನ ೧೩೩೧ ಶ್ಲೋಕಗಳನ್ನು ಮನಮುಟ್ಟುವಂತೆ ಕಂಠಪಾಠವಾಗಿಸಿ, ಕ್ರಿಯಾ, ಭಕ್ತಿ ಜ್ಞಾನ, ಶಿವಯೋಗದ, ಸಮಸಮುಚ್ಚಯ ಮತ್ತು ಅವಿಕಾರ ಪರಿಣಾಮ ವಿದ್ಯೆಯ ದಿವ್ಯಸರಣಿಯನ್ನು, ಮನಮೋಹಕವಾಗಿ ಹಾಡಿ, ಪಾಡಿ, ಪಠಿಸುತ್ತಾ ಈ ಉದಾತ್ತ ತತ್ವವನ್ನು ಪ್ರತಿಯೊಬ್ಬರೂ ರಕ್ತಗತ, ಅಸ್ತಿಗತ ಮಾಡಿಕೊಂಡು ಹೃದಯದ ತಂತುಗಳಿಂದ ಶ್ರೀ ರೇಣುಕಗೀತ ಾಮೃತದ ಸಾರಾಮೃತವನ್ನು ತಮ್ಮ ಜೀವನದುದ್ದಕ್ಕೂ ಶ್ರಾವ್ಯವಾಗಿ ನುಡಿಯುತ್ತಿರುವಂತೆ, ಶಾಶ್ವತವಾದ ಸ್ವಲಾಭದ ವೃಷ್ಟಿಯಿಂದ ಅಭ್ಯಸಿಸಿ, ಸರ್ವದುಃಖ ನಿವೃತ್ತಿ, ಪರಮಾನಂದ ಪ್ರಾಪ್ತಿಗಾಗಿ ಅಹೋರಾತ್ರಿ ಶ್ರಮಿಸುತ್ತಿರಬೇಕು. **ಇದುವೇ ಲಿಂಗಾಂಗಿ ಧರ್ಮವೆನಿಸಿರುವುದು.** ಆದ್ದರಿಂದ ನೀರ್ಗುಳ್ಳೆಯಂತೆ ಕ್ಷಣಿಕವಾದ ಮಾನವ ದೇಹ ವ್ಯರ್ಥವಾಗಿರುವಾಗಲೇ, ಮುಂಜಾಗ್ರತೆಯಿಂದ ಎಚ್ಚತ್ತು. ಮಹಾಚಾರ್ಯರ ಅಮೃತವಾಣಿಯ ಸೌರಭವನ್ನು ನಿತ್ಯ ನಮ್ಮ ವಾಣಿಯೊಂದಿಗೆ ಅಳವಡಿಸಿಕೊಂಡು, ವೈಯಕ್ತಿಕ ಹಾಗೂ ಸಾಮೂಹಿಕವಾಗಿ ನಿತ್ಯ ದ್ವಿಸಂಧ್ಯಾಕಾಲಗಳಲ್ಲಿ ವಿಜೃಂಭಿತರಾಗಿ, ಪ್ರೀತಿಯಿಂದ ಯಾವಜ್ಜೀವವೂ ಪಾರಾಯಣ ಮಾಡುತ್ತಾ ಬಂದರೆ, ಬಹು ಪೂರ್ವಕೃತ ಘೋರ ಪಾತಕರಾಶಿಗಳು, ಶಿವಜ್ಞಾನಾಗ್ನಿಯಿಂದ ಪೂರ್ಣದಗ್ಧವಾಗಿ ನಶಿಸುವುವು. ತತ್ಫಲವಾಗಿ ಅಂಗನು (ಜೀವಾತ್ಮನು) "ಶುದ್ಧಾಂತಃ ಕರುಣೋಪೇತೌ | ಪಿಂಡಶಬ್ದೇನ ಗೀಯತೇ" ಎಂಬ ಶ್ರೀ ರೇಣುಕ ಭಗವತ್ಪಾದಾಚಾರ್ಯರ ಆಶ್ವಾಸನೆಯಂತೆ ತನ್ನೊಳಗಿನ ಆತ್ಮ ಸಂದರ್ಶನಕ್ಕೆ ಅರ್ಥಾತ್, ಸ್ವಸ್ವರೂಪದರ್ಶನಕ್ಕೆ ಅರ್ಹನೆನಿಸುವನು.

ಮೇಲುಕ್ತವಾದ ಶ್ರೇಷ್ಠ ಆಚರಣೆಗಳನ್ನು ಅನೂಚಾನವಾಗಿ ನಿತ್ಯ ಶ್ರದ್ಧಾ ಭಕ್ತಿಯಿಂದ ಸ್ವಲ್ಪ ಸ್ವಲ್ಪವಾಗಿ ಅಭ್ಯಸಿಸುತ್ತಾ ಬಂದರೆ, ಜೀವಿತದ ಅಂತ್ಯ ಕಾಲದೊಳಗಾಗಿ ಶ್ರೀ ಗುರುಕರುಣೆಯಿಂದ ಏಕೋತ್ತರ ಶತಸ್ಥಲದ ರೂಪರೇಖೆಗಳನ್ನು ಕ್ವಚಿತ್ತು ಸ್ವಾನುಭೂತಿಯೊಳಗೆ ಅಳವಡಿಸಿ ಕೊಳ್ಳಲು ಸಾಧ್ಯವಾಗಬಹುದು. ಹಸಿದವನು ತಾನು ಊಟ ಮಾಡಿದರೆ ಹೊಟ್ಟೆ ತುಂಬುವಂತೆ, ಭವರೋಗದಿಂದ ಬಳಲಿ ತೊಳಲುತ್ತಿರುವಾತ, ತಾನು ಶ್ರೀ ಗುರೂಕ್ತ ಮಂತ್ರ ಮಾರ್ಗಾನುಸಾರ ನಡೆದು, ಸ್ವಧರ್ಮಾಚರಣೆಯಿಂದ ಕೃತಕೃತ್ಯನಾಗಬಹುದು.

"ಶ್ರೀ ವೀರಶೈವ ಸದ್ಧರ್ಮ ಸ್ಥಾಪಕಾ೯ ಸತತಂ ಭಜೇ ।
ಶ್ರೀ ರೇಣುಕಾದಿ ಶಿವಾಚಾರ್ಯಾನ್ನಿಗಮಾಗಮವಿತ್ತಮಾ೯॥
ಸವೇತ್ಯಾದಿ ಶೃತಿಪ್ರೋಕ್ತಾಃ । ಪುರುಷಾಸ್ಸಂತಿ ಪಂಚಧಾ ।
ತಾನೇವ ಶ್ರೀಗುರೂನ್ನೌಮಿ । ಶಿವವ್ಯೂಹಾ೯ ಸನಾತನಾನ್॥
ಭೋ ! ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ। ರಕ್ಷ ಮಾಂ ಭವರೋಗಿಣಂ॥

೧೧) ಮಹಾಮಹಿಮಾನ್ವಿತ ಶ್ರೀ ಸದಾಶಿವನ **ತತ್ಪುರುಷಮುಖೋದ್ಭೂತಂ ಸತ್ಪುರುಕ್ಷೌಘವಂದಿತಂ**'ಯೆಂಬ ತತ್ಪುರುಷ ಮುಖದಿಂದ ಉದಯಿಸಿದ ಶ್ರೀ ಜ॥ ರೇಣುಕೋಕ್ತಏಕೋತ್ತರ ಶತಸ್ಥಲ ಸಿದ್ಧಾಂತ, ಇಪ್ಪತ್ತೆಂಟು ಶಿವಾಗಮಗಳ ವ್ಯಾಪ್ತಿಗೆ ಆಗರವೆನಿಸಿದೆ. ಕಾಮಿಕಾದಿವಾತುಲಾಗಮ ಪರ್ಯಂತ ಪ್ರತಿ ಪಾದಿತವಾದ ವೀರಶೈವ ಸದ್ಧರ್ಮವನ್ನು ಭೂಮಿಯಲ್ಲಿ ಶಿವೋಕ್ತಿಯಂತೆ ಬಂಧುರವಾಗಿ ಶ್ರೀ ಜ। ರೇಣುಕಾದಿ ಪಂಚಾಚಾರ್ಯರು ಸ್ಥಾಪಿಸಿರುವರು, ಪರಮಾಚಾರ್ಯ ಶ್ರೀ ರೇಣುಕರು ಸರ್ವಜ್ಞರೂ ನಾದಬ್ರಹ್ಮ ಸ್ವರೂಪಿಗಳೂ, ಭುವನಾಚಾರ್ಯವರೇಣ್ಯರೂ ಆದ್ದರಿಂದ, ವಿಶ್ವಧರ್ಮ ವನ್ನು ಜಗದಗಲ ಆಕಾಶಮಾರ್ಗವಾಗಿ ಸಂಚರಿಸಿ, ಅಲ್ಲಲ್ಲಿಯ ಜನತೆಗೆ ಅವರವರ ಭಾಷೆಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ಸತ್ಯ, ಧರ್ಮ, ನೀತಿ ರೀತಿಗಳನ್ನು ಮನಂಬುಗುವಂತೆ, ಆಪ್ಯಾಯನಕರವಾಗಿ ಬೋಧಿಸಿ, ಮಾನವ ರನ್ನು ಆಸ್ತಿಕರನ್ನಾಗಿಸಿ, ಸನ್ಮಾರ್ಗಾವಲಂಬಿಗಳಾಗುವಂತೆ ಮಾಡಿದರು. **ಶ್ರೀ ರೇಣುಕರೆಸಗಿದ 'ತಪಃಶಕ್ತಿ'** ಪ್ರಭಾವದಿಂದ, ಧರ್ಮ ಸಂಸ್ಥಾಪನಾಕಾರ್ಯ ಯಶಸ್ವಿಯಾಗಿ ಧರಣಿಯಲ್ಲಿ ಉಳಿಯಲು ಸಾಧ್ಯವಾಯಿತು. ತ್ರಿಭುವನಾ ಚಾರ್ಯ ರೇಣುಕರಾದ್ದರಿಂದ, ಈ ಮಹಾಚಾರ್ಯರು ಸ್ವಚ್ಛಂದವಾಗಿ ಬೋಧಿ ಸಿದ ಪರಮ ವೀರಶೈವಧರ್ಮ, ಅಖಿಲದೇವ, ದಾನವ, ಮಾನವರಿಗೆಲ್ಲಾ ನಿರಂತರ ಭೋಗ ಮೋಕ್ಷಗಳ ಸ್ವಾನುಭೂತಿಗೆ ಜನ್ಮ ಸ್ಥಾನವೆನಿಸಿ ವಿರಾಜಿತವಾಗಿಹುದು. ಇದು ಕಾರಣ ವೀರಶೈವಧರ್ಮ, ಕೆಲವರು ಭಾವಿಸಿರುವಂತೆ ಒಂದು ಸಂಕುಚಿತ ಮತವಲ್ಲ. ಜಾತಿ, ಕೋಮುಗಳ ಸೂತಕ ಇದಕ್ಕಿಲ್ಲ. ಪರಮ ವೀರಶೈವವು ಅನಾದಿ ಸಂಸಿದ್ಧವಾದ, ಸಕಲ ಶೃತಿ ಸಮನ್ವಯ ಹಾಗೂ ಜಗತ್ತಿನ ಸಕಲ ಧರ್ಮಗಳ ಸಹಿಷ್ಣುತಾಭಾವದಿಂದ ಸತತ ಕಂಗೊಳಿಸುವ ನಿಗಮಾಗಮಗಳ ಕಾಲ ದಿಂದ ಜೀವಂತವಾಗಿರುವ, **"ಆಚಾರ ಪ್ರಧಾನವಾದ ವಿಶ್ವಧರ್ಮವಿದ"**

೧೨) ವೀರಶೈವದ, ಗರ್ಭಸುಧಾಂಬುಧಿಯಲ್ಲಿ ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಶೈವಧರ್ಮ ಹಾಗೂ ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತಮತಗಳ ಸಹಜವಾದ ರೂಪು ರೇಖೆಗಳನ್ನೂ, ಮಯೂರಾಂಡರಸನ್ಯಾಯಾನುಸಾರ, ಪ್ರತಿಫಲಿಸುತ್ತಿರುವದನ್ನು ಅಂತರಂಗದ ಒಳಗಣ್ಣಿನಿಂದ ಕಾಣಬಹುದಾಗಿದೆ. ನಾಲ್ಕು ವೇದಗಳಿಂದ ೧೧೦೮ ಉಪನಿಷತ್ತುಗಳಿವೆಯೆಂದು ಶ್ರೀ ವೇದವ್ಯಾಸಾಚಾರ್ಯರು ಘೋಷಿಸಿರುವರು. ಮುಂಬರುವ ಕಲಿಯುಗದಲ್ಲಿ ಜನರು ಇಷ್ಟನ್ನೂ ಸಾವಧಾನಚಿತ್ತದಿಂದ ಅಧ್ಯಯನ ಮಾಡಲಾರರೆಂಬರಿತು, ಕರುಣೆಯಿಂದ ೧೦೮ ಉಪನಿಷತ್ತುಗಳು ಪ್ರಮುಖವೆಂದು ಶ್ರೀ ವೇದವ್ಯಾಸರು ಘೋಷಿಸಿರುವರು. ಮುಂಬರುವ ಕಲಿಯುಗದಲ್ಲಿ ಜನರು, ಇಷ್ಟನ್ನೂ ಸಾವಧಾನಚಿತ್ತದಿಂದ ಅಧ್ಯಯನ ಮಾಡಲಾರರೆಂಬರಿತು, ಕುರುಣೆಯಿಂದ ೧೦೮ ಉಪನಿಷತ್ತುಗಳಲ್ಲಿ ಎಲ್ಲವನ್ನೂ ಸುಂದರವಾಗಿ ಅಳವಡಿಸಿದರು. ಶ್ರೀ ವೇದವ್ಯಾಸರು ದೀರ್ಘದರ್ಶಿಗಳಾದ್ದರಿಂದ ಮತ್ತು ವಿಷಯಾಸಕ್ತಿಗೀಡಾದ ಮಾನವರು ಚಂಚಲಗ್ರಸ್ತರಾದ್ದರಿಂದ, ಇದನ್ನೂ ಸಹ ಓದಿ ಅರ್ಥಮಾಡಿಕೊಳ್ಳಲಾರರೆಂದು, ಉದಾರಭಾವದಿಂದ ಉಪನಿಷತ್ತುಗಳ ಸಂಖ್ಯೆಯನ್ನು ೧೦ಕ್ಕಿಳಿಸಿ, ದಶೋಪನಿಷತ್ತುಗಳೆಂದು ನಾಮಕರಣ ಮಾಡಿದರು. ಎಲ್ಲೆಲ್ಲೂ ಪಾಪಾಚಾರಪರಾಯಣರಾದ ಮಾನವರೇ ವಿಶೇಷವಾಗಿರುವುದರಿಂದ ದಶೋಪನಿಷತ್ತುಗಳ ಪುರುಳರಿತು ಆ ಸುಧಾಮೃತವನ್ನು ಆಸ್ವಾದಿಸುವವರಿಲ್ಲದಿರುವುದನ್ನು ಕಂಡು, ಮನನೊಂದು, ಇವುಗಳನ್ನು ಅರ್ಥಮಾಡಿಕೊಳ್ಳುವ ಸಲುವಾಗಿ, ಶ್ರೀ ವ್ಯಾಸರು ಬ್ರಹ್ಮ ಸೂತ್ರಗಳನ್ನು ರಚಿಸಿ ಮಾರ್ಗದರ್ಶನ ನೀಡಿದರು. ಶ್ರೀ ವ್ಯಾಸಾಚಾರ್ಯರ ಕರುಣೆಗೆ ಪಾರವುಂಟೆ ? ಶ್ರೀ ವೇದವ್ಯಾಸಾಚಾರ್ಯರು, ಹಿಮವತ್ಕೇದಾರ ಪರಮ ವೈರಾಗ್ಯ ಸಿಂಹಾಸನಾಧೀಶ್ವರ ಶ್ರೀ ಆದಿ ಜ|| ಘಂಟಾಕರ್ಣಶಿವಾಚಾರ್ಯರ ಪ್ರಥಮ ಶಿಷ್ಯರಿರುವರು. ತ್ರಿಮತಾಚಾರ್ಯರಾದ ಕಲಿಯುಗದ, ಶ್ರೀಮನ್ಮಧ್ವ, ಶ್ರೀ ರಾಮಾನುಜ, ಶ್ರೀ ಶಂಕರಾಚಾರ್ಯರು, ಶ್ರೀ ವೇದವ್ಯಾಸರನ್ನು ತಮ್ಮ ಆದಿಗುರುಗಳೆಂದು ಇವರಲ್ಲಿ ಅಪಾರ ಭಕ್ತಿಭಾವದಿಂದ ಶರಣಾಗತರಾಗಿರುವರು. ಶ್ರೀ ವ್ಯಾಸರು ತಮ್ಮ ಕಾಲದಲ್ಲೇ ಸಾಮಾನ್ಯ ಜನರಿಗೂ ಉಪಯುಕ್ತವಾಗುವಂತೆ ಶೃತಿಗಳಲ್ಲಿನ ತತ್ವಾಮೃತವನ್ನು ಕಥಾರೂಪದಲ್ಲಿ ೧೮ ಪುರಾಣಗಳಾಗಿ ರಚಿಸಿ, ಇದರಲ್ಲಿ ೮ ವಿಷ್ಣು ಪುರಾಣಗಳನ್ನೂ, ೧೦ ಶಿವಪುರಾಣಗಳನ್ನೂ ರಚಿಸಿ,

ಮಹೋಪಕಾರವನ್ನು ಮಾಡಿರುವರು. ಇವರು ಶ್ರೀ ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ಶ್ರೀ ಜ|| ಘಂಟಾಕರ್ಣಶಿವಾಚಾರ್ಯರ ಶಿಷ್ಯರಾದ್ದರಿಂದ, ಶಿವ ಸರ್ವೋತ್ತಮತ್ವವನ್ನು ಗೌರೀ ಶಂಕರ ಶಿಖರದೆತ್ತರ ಎತ್ತಿಹಿಡಿದು, **"ವಿಶ್ವಾಧಿಕಂ ಶಂಕರಂ"** ಎಂದು ಉಚ್ಚಧ್ವನಿಯಿಂದ ಅಂದೇ ಸಾರಿರುವರು.

ಮೇಲುಕ್ತವಾದ ವ್ಯಾಸ ಸೂತ್ರಗಳು "ವ್ಯಾಸ ಸೂತ್ರಮಿದಂ ನೇತ್ರಂ | ವಿದುಷಾಂ ಬ್ರಹ್ಮದರ್ಶನಂ'' ಎಂದು ಸ್ತುತ್ಯವಿರುವುವು. ೧೦೮ ಉಪನಿಷತ್ತುಗಳಲ್ಲಿ ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಹಾಗೂ ಶಿವಾದ್ವೈತಗಳ ಸಿದ್ಧಾಂತಗಳನ್ನೊಳಗೊಂಡ ಮಂತ್ರಭಾಗಗಳು ವಿಪುಲವಾಗಿರುವುವು. ಆಚಾರ್ಯ ಶ್ರೀ ರೇಣುಕರು, ದ್ವಾಪರಯುಗದಲ್ಲೇ ಈ ವಿಶಿಷ್ಟ ಮಂತ್ರಗಳಿಗೆ ಸಮೀಚೀನವಾದ ಅರ್ಥಗರ್ಭಿತ ಭಾಷ್ಯಗಳನ್ನು ಗಂಭೀರವಾಗಿ ರಚಿಸಿ, ಸರ್ವ ಧರ್ಮಸಮನ್ವಯ ಹಾಗೂ ಸರ್ವ ಶೃತಿಸಮನ್ವಯಾರ್ಥಗಳನ್ನೂ ವಿಶಾಲ ಹೃದಯದಿಂದ ಸಮನ್ವಯಗೊಳಿಸಿದ್ದರಿಂದ, ದ್ವಾಪರಯುಗದಿಂದಲೂ ಪರಮ ವೀರಶೈವಸಮನ್ವಯಾತ್ಮಕ ವಿಶ್ವಧರ್ಮವೆಂದು ಖ್ಯಾತಿಪಡೆದಿದೆ. ಈ ಮಹದಂಶವನ್ನು ಶಿವನು ಶ್ರೀ ರೇಣುಕರಿಗೆ, ತನ್ನ ಒಡ್ಡೋಲಗದಲ್ಲಿ ವಿಸ್ತರಿಸಿ ಬೋಧಿಸುತ್ತಾ, "ವತ್ಸ ರೇಣುಕಾ ! ''ಮದದ್ವೈತಪರಂ ಶಾಸ್ತ್ರಂ |ವೇದವೇದಾಂತ ಸಮ್ಮತಂ | ಸ್ಥಾಪಯಿಷ್ಯಸಿ ಭೂಲೋಕೇ | ಸರ್ವೇಷಾಂ ಹಿತಕಾರಕಂ"(ಸಿ ಶಿ.) ದ್ವಾಪರ ಯುಗಾರಂಭ ಕಾಲದಲ್ಲಿ ಶ್ರೀರೇಣುಕರನ್ನು ಉದ್ದೇಶಿಸಿ ''ಮದದ್ವೈತ ಪರಂ ಶಾಸ್ತ್ರಂ" ಎಂದು ಹೇಳಿದಾಗ, ಈ ಪದಪುಂಜಕ್ಕೆ ಶಿವಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತವೆಂದೇ ಅರ್ಥಗಾಂಭೀರ್ಯವಿದೆ. ಇಲ್ಲಿ ಕಲಿಯುಗದ ಶ್ರೀ ಶಂಕರಾದ್ವೈತವಾದ ಮುಂದಿಡಲು ಅವಕಾಶವಿಲ್ಲ. ಶಿವನು ಕೈಲಾಸದಲ್ಲಿ ಪೇಳಿದ ಅದ್ವೈತ, ಅಷ್ಟಾವರಣ, ಪಂಚಾಚಾರ ಮತ್ತು ಷಟ್ಸ್ಥಲಾತ್ಮಕ ವಿಶೇಷಾದ್ವೈತವೆಂದೇ ಸ್ಪಷ್ಟಾರ್ಥ ಸ್ವಚ್ಛಂದವಾಗಿ ಗರ್ಭಿತವಾಗಿರುತ್ತೆ.

**ರೇಣುಕಾಗಸ್ತ್ಯ ಸಂವಾದ | ಶ್ರೀ ಸಿದ್ಧಾಂತಶಿಖಾಮಣಿಂ |**
**ನಿಗಮಾಗಮ ತತ್ವಾರ್ಥ | ಭೂಷಿತಂ ಭಾವಗರ್ಭಿತಂ ||**
**ಭೋ ! ಕಲ್ಯಾಣ ಮಹಾಭಾಗ | ಶಿವಜ್ಞಾನ ಮಹೋದಧೇ |**
**ಆಚಾರ್ಯವರ್ಯ ಸಂಪ್ರಾಪ್ತಂ |ರಕ್ಷ ಮಾಂ ಭವರೋಗಿಣಂ||**

**(ಸಿ.ಶಿ. ಶೆ. ೬ ಪರಿ ೯)**

೧೩) ಶಿವಗೀತೆಯ ಹೃದಯ ಶ್ರೀ ಸಿದ್ಧಾಂತ ಶಿಖಾಮಣಿ. ಶ್ರೀಮದ್ಭಗವದ್ಗೀತೆಗೆ ಶ್ರೀ ಸಿದ್ಧಾಂತ ಶಿಖಾಮಣಿ ತಾಯ್ಮನೆ. ಈ ಮೂರೂ ಜೀವಂತವಾದ ವಿಶ್ವಧರ್ಮ ಪ್ರತಿಪಾದಕ ಮಹಾನ್ ಕೃತಿ ರತ್ನಗಳು. ತ್ರೇತಾಯುಗದಲ್ಲಿ ಸಾಕ್ಷಾತ್ ಶಿವನು ಶ್ರೀ ರಾಮನಿಗೆ ಆತ್ಮ ಕಲ್ಯಾಣಾರ್ಥ ಕರುಣೆಯಿಂದ ಬೋಧಿಸಿದ, ಶಿವಾಗಮೋಪನಿಷದಾದಿಗಳ ಸಾರಾಮೃತ ಶಿವಗೀತೆಯೆನಿಸಿದೆ. ದ್ವಾಪರ ಯುಗಾರಂಭ ಕಾಲದಲ್ಲಿ ಶಿವನು ತನ್ನ ತೇಜಾಂಶಸಂಭೂತರಾದ ಶ್ರೀ ರೇಣುಕ ಪರಂಜ್ಯೋತಿಯನ್ನುದ್ದೇಶಿಸಿ, ಶಿವಗೀತೆಯ ತಿರುಳನ್ನು ಸಂಗ್ರಹವಾಗಿ ಬೋಧಿಸುತ್ತಾ, "ಮದದ್ವೈತ ಪರಂ ಶಾಸ್ತ್ರಂ ವೇದವೇದಾಂತ ಸಮ್ಮತಂ ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ" ಎಂದು ಸ್ಪಷ್ಟಪಡಿಸಿರುವರು. ಇಲ್ಲಿ "ಮದದ್ವೈತಪರಂ ಶಾಸ್ತ್ರಂ" ಎಂದು ದ್ವಾಪರಯುಗಾರಂಭದಲ್ಲಿ ಹೇಳಿದ್ದರಿಂದ ಇದು ಏಕೋತ್ತರ ಶತಸ್ಥಲಪ್ರೋಕ್ತ ಲಿಂಗಾಂಗ ಸಾಮರಸ್ಯ ಬೋಧಕ ಶಕ್ತಿವಿಶಿಷ್ಟಾದ್ವೈತ ಅರ್ಥಾತ್ ಶಿವಾದ್ವೈತ ಸಿದ್ಧಾಂತವೆಂಬುದು ಗಮನಾರ್ಹವಿರುತ್ತೆ. ತದನಂತರ ಇದೇ ದ್ವಾಪರ ಯುಗಾಂತ್ಯ ಕಾಲದಲ್ಲಿ, ಕುರುಕ್ಷೇತ್ರದ ರಣರಂಗದ ಮಧ್ಯೆ, ಸ್ವಧರ್ಮದಿಂದ ಪತಿತನಾಗಿ ಕೃಪಯಾ ಪರಯಾವಿಷ್ಟನಾಗಿ, ಕಾರ್ಪಣ್ಯ ದೋಷೋಪಹತ ಸ್ವಭಾವಕ್ಕೆ ತುತ್ತಾಗಿ, ಧರ್ಮ ಸಂಮೂಢಮನಸ್ಕನಾಗಿ, ಕಣ್ಕಂಬನಿಗಳಿಂದ, ಗಾಂಡೀವವನ್ನು ಕೆಳಗಿಳಿಸಿ, ಕ್ಷತ್ರಿಯ ಧರ್ಮಕ್ಕೆ ಅಪಯಶಸ್ಸು ತರುವ ಭಂಗಿಯಲ್ಲಿ ಶಿರಬಾಗಿನಿಂತಿರುವ ಅರ್ಜುನನನ್ನು ಶ್ರೀ ಕೃಷ್ಣನು ರಥದ ಮುಂತಟ್ಟೆಯ ಮೇಲೆ ಸಾರಥಿಯಾಗಿ ಕುಳಿತು, ಸಪ್ತಾಶ್ವಗಳ ಕಡಿವಾಣಗಳನ್ನು ತನ್ನ ಎಡಗೈಯಲ್ಲಿ ಹಿಡಿದು ಬಲಗೈನಿಂದ ಚಿನ್ಮುದ್ರೆಯ ಸಂಕೇತವನ್ನು ಹೊರಹೊಮ್ಮಿಸಿ ಬೋಧಿಸಿದ ಶ್ರೀಮದ್ಭಗವದ್ಗೀತೆ ೭೦೦ ಶ್ಲೋಕಗಳಿಂದ ವಿರಾಜಿತವಾದ ತತ್ವ. ಇದು ಶಿವಗೀತೆ, ರೇಣುಕ ಗೀತೆಗಳ ಸಹ ಸ್ವಾಂಶಗಳಲ್ಲಿ ಕೆಲವು ಅಂಶಗಳಿಂದ ಪರಿಶೋಭಿತವಾಗಿದೆ. ಪ್ರಮುಖವಾದೀ ಮೂರು ಗೀತೆಗಳು ಮುಕ್ಕಣ್ಣೇಶ್ವರನ ತೋರಿಕೊಡುವ, ಪರಮೋತ್ಕೃಷ್ಟ ಬೋಧಾಮೃತಗಳೆನಿಸಿ, ಮೂರು ಲೋಕದ ಪ್ರಾಜ್ಞರಿಗೆ, ಅಧ್ಯಾತ್ಮ ವಿದ್ಯಾ ಸ್ವರೂಪ ಸಾಕ್ಷಾತ್ಕಾರಕ್ಕೆ ದಾರಿದೀಪದ ಗುರು ಕೃತಿಗಳೆನಿಸಿವೆ.

ತ್ರೇತಾಯುಗಾಂತ್ಯ ಹಾಗೂ ದ್ವಾಪರ ಯುಗಾಂತ್ಯಗಳ ಮಧ್ಯಕಾಲಾವಧಿಯಲ್ಲಿ, ಬೆಳಕಿಗೆ ಬಂದ, ಶ್ರೀ ಶಿವಗೀತೆ–ಭಗವದ್ಗೀತೆಗಳಿಗೆ, ಮಧ್ಯಮಣಿ

ನ್ಯಾಯದಂತೆ ಶ್ರೀ ರೇಣುಕ ಗೀತೆ **ಪ್ರಜ್ವಾಲಿತೋ ಜ್ಞಾನಮಯಃಪ್ರದೀಪಃ** ಎಂಬಂತೆ ತತ್ವಚಿಂತಾಮಣಿಯಾಗಿ, ಸುಜ್ಞಾನಿಗಳ ಹೃದಯಾಂಭೋಜಗಳಲ್ಲಿ ರಂಜಿತವಾಗಿದೆ. ಈ ಮಹದಂಶವನ್ನು ಶಿವಾಗಮ ಸುಧಾಸಿಂಧುವೆನಿಸಿ, ಕೀರ್ತಿ ಶ್ರೇಷ್ಠರಾದ ಶ್ರೀ ಶಿವಯೋಗಿ ಶಿವಚಾರ್ಯರು, ಶ್ರೀ ಸಿದ್ಧಾಂತ ಶಿಖಾಮಣಿ ಶಾಸ್ತ್ರವನ್ನು ಮುಕ್ತಕಂಠದಿಂದ ಪ್ರಶಂಶಿಸುತ್ತಾ....

**"ಶ್ರೀ ವೇದಾಗಮ ವೀರಶೈವಸರಣಿಂ । ಶ್ರೀಷಟ್ಸ್ಥಲೋದ್ಯನ್ಮಣಿಂ ।**
**ಶ್ರೀ ಜೀವೇಶ್ವರ ಯೋಗಪದ್ಮತರಣಿಂ । ಶ್ರೀ ಗೋಪ್ಯಚಿಂತಾಮಣಿಂ ॥**

ಎಂದು ಭಕ್ತಿಪೂರ್ವಕ ಸಂಕೀರ್ತಿಸಿರುತ್ತಾರೆ. ಇಷ್ಟೊಂದು ಆಧ್ಯಾತ್ಮಿಕ ಶಕ್ತಿ ಸಂಪದ್ಭರಿತವಾದ ಶಿವಜ್ಞಾನ ಭಂಡಾರವನ್ನು ಸಮಸ್ತ ಮಾನವರು ಎಚ್ಚೆತ್ತು ಇದರಲ್ಲಿನ ೧೩೩೧ ಅಮೃತಮಯ ಶ್ಲೋಕಗಳನ್ನು ಯಾವಜ್ಜೀವವೂ ಪಠಿಸಿ, ಪಾರಾಯಣ, ಸಾಮೂಹಿಕ ಪಾರಾಯಣ ಪದ್ಧತಿಗಳನ್ನು ಪ್ರತಿಯೊಬ್ಬರೂ ತಮ್ಮ ಸುತ್ತ ಭಕ್ತ್ಯಾ ಹಮ್ಮಿಕೊಂಡು, ಆತ್ಮೋದ್ಧಾರ, ಧರ್ಮೋದ್ಧಾರಕ, ಶಿವಯಜ್ಞದಲ್ಲಿ ನಿರತರಾದರೆ **"ನಿಜಪದಂ ಕರಬಿಲ್ವಫಲಂ ಶಿವಾಥವ"** ಎಂಬಂತೆ ಈ ಜನ್ಮದಲ್ಲೇ ಅಮರರಾಗಲು ಅವಕಾಶವಿದೆ.

೧೪) ಅಂಗನು ಲಿಂಗವಾಗಲು, ವೀರಶೈವ ಮತದಲ್ಲಿ ಶ್ರೀ ರೇಣುಕಾಚಾರ್ಯರು, ಶ್ರೀಷಟ್ಸ್ಥಲ ಸಿದ್ಧಾಂತದ ತಿರುಳನ್ನು ಶ್ರೀ ಗುರುಮುಖದಿಂದ ಅರಿತು, ಆಚರಿಸಿ, ಸ್ವಾನುಭೂತಿಯಿಂದ ಅಂತರ್ಮುಖಿಯಾಗಬೇಕೆಂದು ಬೋಧಿಸಿರುವರು. ಇಂಥಾ ಸಮಾಧಿಯೋಗದಲ್ಲಿ ಮಗ್ನನಾಗುತ್ತಾ ಬಂದರೆ, ಕ್ರಮೇಣ ಅಜ್ಞಾನದ ತೆರೆಗಳು ಕತ್ತರಿಸಿ ಬೀಳುವುವು. ಆಗ ಪವಿತ್ರವಾದ ಹೃನ್ಮಂದಿರದಲ್ಲಿ ಸ್ವಯಮೇವ ಬೆಳಗುತ್ತಿರುವ ಚಿಜ್ಜ್ಯೋತಿ ಸ್ವರೂಪದರ್ಶನವಾಗುವುದು. **ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನಃ** ಅಂದರೆ ಶಿವಯೋಗಿಗಳೂ ; ಶಿವಶರಣರೂ ಅನಾದಿ ಕಾಲದಿಂದ ಧ್ಯಾನಗಮ್ಯನಾದ ಪರಶಿವನನ್ನು ತಮ್ಮ ಅಂತರಂಗದ ಒಳಗಣ್ಣಿನಿಂದ ಕಂಡು ಆನಂದಿಸಿರುವರು. ಮನ–ಬುದ್ಧಿ–ತತ್ವಗಳನ್ನು ಗಾಢವಾಗಿ ಆವರಿಸಿರುವ ಅವಿದ್ಯಾಮಯ ಕಪ್ಪು ತೆರೆಯನ್ನು ಕತ್ತರಿಸುವುದು ತಾನೆ ಹೇಗೆ ? **"ಜ್ಞಾನಾಂಜನ ಶಲಾಖಯಾ"** ಎಂದಿದ್ದಾರೆ ಜ್ಞಾನಿಗಳು. ಶ್ರೀ ಭಗವತ್ಪಾದ ರೇಣುಕಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ "ತಮೋ ಮೂಲಾ ಹಿ ಸಂಜಾತಾ ರಾಗದ್ವೇಶಾದಿ

ಪಾವಪಾಃ” ಎಂದಿರುವರು, ಈ ಘೋರ ಸಂಸಾರ ವಿಷವೃಕ್ಷದ ಬೇರುಗಳು, ಬಹು ಆಳವಾಗಿ ನೊಳಹೊಕ್ಕಿರುವುದರಿಂದ ರಾಗ, ದ್ವೇಷ, ಅಸೂಯೆ, ಅಸಹನೆ, ಅಹಂಕಾರಾದಿ ಬೇರುಗಳು, ಲೌಕಿಕರು ಮಾತ್ರವಲ್ಲದೆ, ಕಾವಿಧಾರಿ ಸ್ವಾಮಿಗಳ, ಸಂನ್ಯಾಸಿಗಳ ಮನೋಭೂಮಿಕೆಯಲ್ಲೂ ಆಲದ ವೃಕ್ಷದ ಬೇರುಗಳಂತೆ, ಕಾಡುವ ಮರಗಳ ಬೇರುಗಳಂತೆ ಬೆಳೆದು ನಿಂತಿವೆ. ಇಂತಪ್ಪ ದುಷ್ಟ ಪರಿಣಾಮಗಳ ವ್ಯಾಪ್ತಿಗೆ ಎಲ್ಲರೂ ಗುರಿಯಾಗಿ ತೊಳಲಿ ಬಳಲುತ್ತಲಿರುವುದರಿಂದ, ಚಿದಾದಿತ್ಯ ಸ್ವರೂಪಿಗಳಾದ ಶ್ರೀ ರೇಣುಕ ಪರಂಜ್ಯೋತಿಗಳು **“ಶಿವಜ್ಞಾನ ಕುಠಾರೇಣ ಛಿದ್ಯಂತೇ ಹಿ ನಿರಂತರಂ”** ಅಂದರೆ ಶಿವಜ್ಞಾನವೆಂಬ ಅಹರಿತವಾದ ಕೊಡಲಿ ಯಿಂದ ಸಂಸಾರದ ವಿಷವೃಕ್ಷದ ರಾಗ ದ್ವೇಷ ಅಸೂಯೆ ಅಹಂಕಾರವೆಂಬ ಇಲ್ಲದ ಹಿರಿಮೆಯನ್ನು ಸೃಷ್ಟಿಸಿ ಪ್ರಲಾಪಿಸುವಂಥಾ ಅಸಹ್ಯ ಕರವಾದ ಎಲ್ಲಾ ಪೊಳ್ಳು ಬೇರುಗಳನ್ನು ಮೂಲ ಸಹಿತ ಪೃಥಕರವಾಗಿ ಕಡಿದು, ಕತ್ತರಿಸಿ, “ಛಿದ್ಯಂತೇ” ಛಿಂಛಿಛಿಂದಿ ಮಾಡಿ ಚೂರ್ಣಪ್ರಚೂರ್ಣಗೊಳಿಸಿ, ನಾಶ ಮಾಡ ಬೇಕೆಂದು ಮಹಾಚಾರ್ಯರು ವಿಶ್ವಕ್ಕೆ ಸಂದೇಶವಿತ್ತಿರುವರು. ದ್ವಾಪರಾಂತ್ಯದಲ್ಲಿ ಗೀತಾ ಚಾರ್ಯ ಶ್ರೀಕೃಷ್ಣ ಇದೇ ಅಂಶವನ್ನು ಭಗವದ್ಗೀತೆಯ ೧೫ನೇ ಪುರುಷೋ ತ್ತಮ ಪ್ರಾಪ್ತಿಯೋಗದ ೩ ನೇ ಶ್ಲೋಕದಲ್ಲಿ “ನ ರೂಪಮಸ್ಯೇಹ ತಥೋಪಲ ಭ್ಯತೇ ನಾನ್ತೋ ನ ಚಾದಿರ್ನ ಚ ಸಂಪ್ರತಿಷ್ಠಾ” ಅಶ್ವತ್ಥಮೇನಂ “ಸುವಿರೂಢ ಮೂಲಂ ಅಸಂಘಶಸ್ತ್ರೇಣಪೃಥೇನ ಛಿತ್ವಾ” ಏನೆಂದರೆ ಗುಣತ್ರಯಾತ್ಮಕ, ವಿಷಯಾದಿಗಳಿಂದ ಆವರಿಸಲ್ಪಟ್ಟಿರುವ, ಸಂಸಾರವೆಂಬ ನಶ್ವರವಾದ ವಿಷವೃಕ್ಷದ ಬೇರುಗಳು ಭೂಮಿಯಲ್ಲಿ ಆಳವಾಗಿ ಹಬ್ಬಿ ಬೆಳೆದು ಉಳಿದಿವೆ. ಇವು ರಾಗ ದ್ವೇಷಾದಿಗಳಿಗೆ ಕಾಮಕ್ರೋಧಾದಿಗಳಿಗೆ, ಮನೋಮಂಡಲವನ್ನು ಆವಾಸ ಸ್ಥಾನವಾಗಿ ಮಾಡಿಕೊಂಡಿವೆ. ಈ ಬಲವತ್ತರವಾದ ಬೇರುಗಳನ್ನು “ಅಸಂಘ ಶಸ್ತ್ರೇಣ ಪೃಥೇನ ಛಿತ್ವಾ” ಅಂದರೆ ಈ ದುಷ್ಟಗುಣಗಳ ಸಂಪರ್ಕ ದಿಂದ ದೂರವಿದ್ದು, ವಿಮುಖನಾಗಿ, ಪರಮ ವೈರಾಗ್ಯದಿಂದ ವಿರಕ್ತಿಯೆಂಬ ಅತಿ ಹರಿತವಾದ ಕೊಡಲಿಯಿಂದ, ಮೇಲುಕ್ತವಾದ ಮನಸ್ಸಿನ ಭೂಮಿಕೆಯಲ್ಲಿ ಆವರಿಸಿರುವ ದುಷ್ಟದೂರ್ತ ಗುಣಗಳೆಂಬ ಬೇರುಗಳನ್ನು ಕಡಿದು ಹಾಕ ಬೇಕೆಂಬುದು ಗೀತಾರ್ಥ. ಅಶ್ವತ್ಥ ವೃಕ್ಷವೆಂದರೆ ಅದೃಢವಾದ ಮಿಥ್ಯಾ ಪ್ರಪಂಚ ರೂಪ ವೃಕ್ಷವೆಂದು ಶ್ರೀ ಜ|| ಆದಿಶಂಕರಾಚಾರ್ಯರು ತಮ್ಮ ಗೀತಾಭಾಷ್ಯ

ದಲ್ಲಿ ಪ್ರತಿಪಾದಿಸಿರುವರು. ಕಠೋಪನಿಷತ್ತಿನಲ್ಲಿ ಈ ಮಂತ್ರಭಾಗವನ್ನು ವಿವರಿಸುತ್ತಾ "ಅಶ್ವತ್ಥವೃಕ್ಷವೆಂದರೆ" ಶಾಶ್ವತವಾದ ಹಾಗೂ ಸದೃಢವಾದ **"ಧರ್ಮದ್ರುಮ"** ವೆಂದು ಮಹಾಚಾರ್ಯರು ಘೋಷಿಸಿರುತ್ತಾರೆ.

ಒಟ್ಟು ತಾತ್ಪರ್ಯವೇನೆಂದರೆ ; ಧೀಮಂತನಾದ ಸಂಸಾರಿಯಾಗಲಿ, ಅಥವಾ ವಿರಕ್ತನಾದ ಸ್ವಾಮಿಯಾಗಲಿ ವಿಷಯಾದಿಗಳಿಗೆ ಅಂಟಿಕೊಂಡು, ರಾಗ ದ್ವೇಷ, ಅಸೂಯ, ಕಾಮಕ್ರೋಧಾದಿಗಳಿಗೆ ಮಾನಸಿಕವಾಗಿ ಅಹುತಿಯಾಗದೆ, ಜಿತೇಂದ್ರಿಯನೂ, ದಯಾಮಯನೂ. ತ್ಯಾಗಶೀಲನೂ ಆಗಿ, ಶಾಂತಿ, ದಾಂತಿ, ಕ್ಷಮಾದಿ ಗುಣ ಸಂಪನ್ನನೂ, ನಿತ್ಯ ತೃಪ್ತನೂ ಆಗಿರಬೇಕೆಂಬುದು ಭಗವತ್ಪಾದ ಶ್ರೀ ರೇಣುಕಾಚಾರ್ಯರ ಸಂದೇಶ.

**ಜೀಯಾಚ್ಛ್ರೀ ರೇಣುಕಾಚಾರ್ಯೋ । ಶಿವಾಚಾರ್ಯ ಶಿಖಾಮಣಿಃ । ಯೋ ವಿಶ್ವವೀರಶೈವ ಸಿದ್ಧಾಂತಂ । ಸ್ಥಾಪಯಾಮಾಸ ಭೂತಲೇ ॥ ಯಸ್ಯ ಸ್ಮರಣಮಾತ್ರೇಣ । ನೃಣಾಂ ಮುಕ್ತಿಃ ಕರಸ್ಥಿತಾ । ತಂ ವಂದೇ ಜಗದಾಧಾರಂ । ರೇಣುಕಾರ್ಯಂ ಜಗದ್ಗುರುಂ । ಭೋ ! ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ। ಆಚಾರ್ಯವರ್ಯ ಸಂಪ್ರಾಪ್ತಂ। ರಕ್ಷ ಮಾಂ ಶರಣಾಗತಂ ॥**

(ಸಿ ಶಿ.ಪರಿ. ೭ ಶ್ಲೋಕ ೯)

೧೫) **ಓಂ ಇತ್ಯೇಕಾಕ್ಷರಂ ಬ್ರಹ್ಮ । ನಮಃ ಶಿವಾಯೇತಿ ಜಾಯತೇ ॥**

(ಶಿವಸೂತ್ರ)

**ಓಂ ಏಕಾಕ್ಷರಂ ಬ್ರಹ್ಮ**ವೆನಿಸಿದ ಓಂಕಾರ ಪ್ರಣವದ, ಮೊದಲಿಲ್ಲದವೊ ಮಲಿನ, ಶ್ರೀಗರ್ಭಸುಧಾಂಬುಧಿಯಿಂದ ಶಿವನಿಚ್ಛೆಯಂತೆ"ನಮಃ ಶಿವಾಯ"ವೆಂಬಪಂಚ ಮಹಾಮಂತ್ರ ಬೀಜಾಕ್ಷರಗಳು ಆದಿಯಲ್ಲಿ ಚಿತ್ಕಳಾರೂಪದಲ್ಲಿ ಆವಿರ್ಭವಿಸಿದವು ಶಿವಾಗಮೋಪನಿಷದಾದಿಗಳು ಈ ಮಹದಂಶವನ್ನು ಎತ್ತಿ ಹಿಡಿದು ಸಾರುತ್ತಲಿವೆ. ವಿವಿಧ ಸಮಸ್ತ ಮತೀಯರೂ ಓಂಕಾರ ಮಹಾಮಂತ್ರವನ್ನು ಅನನ್ಯ ಭಕ್ತಿಭಾವದಿಂದ ಸತತ ಜಪಿಸುತ್ತಾ, ಅಂತರ್ಮುಖಿಗಳಾಗಿ ಸಮಾಧಿ ಯೋಗದಲ್ಲಿ ನಿತ್ಯ ಸ್ವಲ್ಪಕಾಲ ಸ್ವಸ್ವರೂಪಾನಂದದ ಚಿಜ್ಜ್ಯೋತಿಯಲ್ಲಿ ಮಗ್ನ

ರಾಗಿ, ಶಿವಾನಂದದಲ್ಲಿ ರಂಜಿತಗೊಳ್ಳುತ್ತಲಿರುವರು. ಇದು ಶ್ರೀ ಸಿದ್ಧಾಂತ ಶಿಖಾಮಣಿ ಅಧ್ಯಯನ ಪಾಠ ಪ್ರವಚನ, ನಿತ್ಯ ಪಾರಾಯಣ ಹಾಗೂ ಸಾಮೂಹಿಕ ಪಾರಾಯಣ ಮತ್ತು ಶ್ರವಣಾದಿಗಳ ಸಂಪದ್ಭರಿತವಾದ ಸುಫಲ. ಶ್ರೀ ಅಗಸ್ತ್ಯ ಮಹರ್ಷಿಗಳು ಈ ಮಹದಂಶವನ್ನು ಹೊರಗೆಡಹುತ್ತಾ—

**ಅವತೀರ್ಣಮಿದಂ ಶಾಸ್ತ್ರಮನವದ್ಯಂ ತ್ವದಾನನಾತ್ ।**
**ಶ್ರುತ್ವಾ ಮೇ ಮೋದತೇ ಚಿತ್ತಂ ಜ್ಯೋತಿಃ ಪಶ್ಯಚ್ಛಿವಾಭಿಧಂ ॥**
**ಅದ್ಯಮೇ ಸಫಲಂ ಜನ್ಮ ಗತೋ ಮೇ ಚಿತ್ತ ವಿಭ್ರಮಃ ।**
**ಸಂಜಾತಾ ಪಾಶವಿಚ್ಛಿತ್ತಿ ಸ್ತಪಾಂಸಿ ಫಲಿ ತಾ ನಿಮೇ ॥**
(ಸಿ. ಶಿ. ಪರಿ. ೨೦ ಶ್ಲೋ. ೬೬-೬೭)

ಶ್ರೀ ರೇಣುಕರ ಶ್ರೀ ಮುಖದಿಂದ ೧೩೩೧ ಶ್ಲೋಕಗಳನ್ನು ಶ್ರವಣ ಮಾಡಿದ ಫಲವಾಗಿ, ತಾವು ತಮ್ಮ ಪ್ರಶಾಂತವಾದ ಹೃತ್ಪುಂಡರೀಕದಲ್ಲಿ-

**ವಾಲಾಗ್ರ ಶತಭಾಗೇನ । ಸದೃಶೋ ಹೃದಯೇ ಸ್ಥಿತಃ ।**
**ಅಶ್ನನ್ ಕರ್ಮಫಲಂ । ಸರ್ವಮಾತ್ಮಾ ಸ್ಫುರತಿ ದೀಪವತ್॥**
(ಸಿ. ಶಿ. ಪರಿ. ೧೪ ಶ್ಲೋ. ೬)

ಅತ್ಮ ಸ್ವರೂಪ ಚಿಜ್ಜ್ಯೋತಿಯಾಗಿ ಅಖಂಡ ರೂಪದಿಂದ ಸ್ವಯಮೇ ಪ್ರಜ್ವಲಿಸುತ್ತಿರುವುದನ್ನು ನನ್ನ ಅಂತರಂಗದ ಅರಿವೆಂಬ ಒಳಗಣ್ಣಿನಿಂದ ಕಂಡನು ಭವಿಸಿ, ಸ್ವಾನುಭೂತಿಯಲ್ಲಿ ಆನಂದತುಂದಿಲ ಹೃದಯಸ್ವಾಂತನಾಗಿರುವ ಮಹ ದಂಶವನ್ನು ಶ್ರೀಮಹಾಗುರು ಸಾರ್ವಭೌಮರಲ್ಲಿ ಮುನಿಕುಲ ಚಂದ್ರನು ನಿಸ್ಪೃಹಭಾವದಿಂದ ನಿವೇದಿಸಿಕೊಂಡಿರುವನು. ಇಂತಪ್ಪ ಸೌಭಾಗ್ಯ ಯಾವ ಬ್ರಹ್ಮಾಂಡಗಳಲ್ಲೂ ಇಲ್ಲವೆಂದರೆ ಸುಳ್ಳಾಗದು. ಈ ಅನುಭವ ಹರಿಬ್ರಹ್ಮಾದಿಗಳಿಗೂ ದುರ್ಲಭವೆನಿಸಿರುತ್ತೆ. ಲಕ್ಷಕ್ಕೊಬ್ಬ ಭಕ್ತ ಎಂಬ ಸದ್ಭಕ್ತನ ಹೃದಯಕಮಲದಲ್ಲಿ ಅತ್ಮ ಚೈತನ್ಯ । ಜ್ಯೋತಿಷಾಂ ಜ್ಯೋತಿಃ। ಚಿಜ್ಜ್ಯೋತಿ. ಚಿನ್ಮಯರೂಪ ಹೇಗೆ ಪ್ರಕಾಶಿತವಾಗಿದೆಯೆಂದರೆ—ವಾಲಾಗ್ರ ಶತಭಾಗೇನ || ಎಂದು ಮಹಾಚಾರ್ಯರು ಅಪ್ಪಣೆಕೊಡಿಸಿರುವರು. ನೀಳ

ವಾದ ತಲೆ ಕೂದಲೊಂದನ್ನು ಅದರ ಎರಡು ತುದಿಗಳನ್ನು ನೆಟ್ಟಗೆ ಹಿಡಿದು ನಿಲ್ಲಿಸಿ, ತುಂಡು ಕಬ್ಬನ್ನು ನೆಟ್ಟಗೆ ಹಿಡಿದು ನಿಲ್ಲಿಸಿ ಹಲವಾರು ಉದ್ದದ, ಕಬ್ಬು ತುಂಡುಗಳಾಗಿ ಕತ್ತಿಯಿಂದ ಸಣ್ಣಗೆ ಶೀಳುವಂತೆ ನೇರವಾಗಿ ಹಿಡಿದು ನಿಲ್ಲಿಸಿರುವ ಮೇಲುಕ್ತವಾದ ಕೂದಲನ್ನು ಹರಿತವಾದ ಭಾವನಾಮಯ ಕತ್ತಿಯಿಂದ ನೂರು ಉದ್ಧದ ಸಮ ಶೀಳುಗಳಾಗಿ ಕತ್ತರಿಸಿದೆವೆಂದು ಮಾನಸಿಕವಾಗಿ ಭಾವಿಸಿದಾಗ, ಇದರ ಒಂದು ಉದ್ದದ ಸಮ ಶೀಳು, ಎಷ್ಟು ಸೂಕ್ಷ್ಮಾತಿಸೂಕ್ಷ್ಮವಾಗಿ ಇರಬಲ್ಲದೋ, ಅದಕ್ಕಿಂತಲೂ ಸೂಕ್ಷ್ಮಸ್ಥಿತಿಯಲ್ಲಿ ಆತ್ಮಜ್ಯೋತಿ, ನಮ್ಮೆಲ್ಲರ ಹೃನ್ಮಂದಿರದಲ್ಲಿ ಕೋಟಿ ಸೂರ್ಯರ ಪ್ರಕಾಶವನ್ನು | ಮೀರಿಸುವಷ್ಟು ಹೊಂಬೆಳಕಿನಿಂದ ನಿರಂತರ ತಾನೇ ತಾನಾಗಿ ಪ್ರಜ್ವಲಿಸುತ್ತಲಿದೆ ಎಂದು ಶ್ರೀ ಜ|| ರೇಣುಕಪರಂಜ್ಯೋತಿ ಅದಿ ಆಗಸ್ತ್ಯ ಮುನಿಜಂಪ್ರನಿಗೆ ಮನಂಬುಗುವಂತೆ ಬೋಧಿಸಿರುವರು.

ಶ್ರೀಮದ್ಭಗವದ್ಗಿತೆಯ ೭೦೦ ಶ್ಲೋಕಗಳ ತತ್ವವನ್ನು ಶ್ರವಣಮಾಡಿದ ಅರ್ಜುನ ಶ್ರೀಕೃಷ್ಣನನ್ನು ವಂದಿಸಿ, ಪ್ರಭೋ ! ನಿಮ್ಮ ದಿವ್ಯೋಪದೇಶದಿಂದ ನಾನು ಚೇತರಿಸಿ ಕೊಂಡು ಸ್ವಧರ್ಮದಲ್ಲಿ ನಿಷ್ಠೆಯುಳ್ಳವನಾಗಿದ್ದೇನೆಂದು ಹರ್ಷಚಿತ್ತದಿಂದ ಶ್ರೀ ಗೀತಾಚಾರ್ಯನನ್ನು ಮನದುಂಬಿ ಸ್ತುತಿಸುತ್ತ.

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ । ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಸ್ಮಿ ಗತ ಸಂದೇಹಃ । ಕರಿಷ್ಯೇ ವಚನಂ ತವ ॥**

(ಗಿ. ಅ. ೧೮ ಶ್ಲೋ. ೭೩)

ಭೋ ! ಅಚ್ಯುತ ! ನಿನ್ನ ಅನುಗ್ರಹದಿಂದ ನನ್ನ ಎಲ್ಲಾ ಮೋಹಾದಿಗಳು ತೊಲಗಿ, ವ್ಯವಸ್ಥಿತ ಸ್ಥಿರ ಬುದ್ಧಿ ಪ್ರಾಪ್ತಿಯಾಗಿದೆ. ಸಂದೇಹವೂ ನಿವೃತ್ತಿಯಾಗಿರುವುದರಿಂದ, ಈಗ ಸ್ವಾಮಿನ್ ! "**ಕರಿಷ್ಯೇ ವಚನಂ ತವ**" ನಿನ್ನಾಜ್ಞೆಯಂತೆ ನನ್ನ ಸ್ವಧರ್ಮದ ಯುದ್ಧವನ್ನು ಮಾಡುತ್ತೇನೆಂದು ಪರಂತಪನು ತನ್ನ ಗಾಂಢೀವವನ್ನು ಹಿಡಿದೆದ್ದನು, ಅರ್ಜುನನು ಕಂಡ, ಗೀತೋಪದೇಶದ ಫಲವಿದು.

ಶಿವಾಗಮಗಳ ಉಕ್ತಿಯಂತೆ ಶ್ರೀ ರೇಣುಕಾದಿ ಪಂಚಾಚಾರ್ಯರು, "ಶೈವಾಗಮಾಂಬುಜ ಭಾಸ್ಕರರು" ಅಂದರೆ, ಶಿವಾಗಮಗಳೆಂಬ ಕಮಲಗಳನ್ನು

ಅರಳಿಸುವಂಥಾ, ದಿವ್ಯ ಶ್ರೀಪಾದ ಕಮಲಗಳುಳ್ಳ ಚಿದಾದಿತ್ಯ ಸದೃಶರು. ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರ ಸ್ವರೂಪಿಗಳು ಶ್ರೀ ರೇಣುಕಾದಿ ಪಂಚಾಚಾರ್ಯರು. ಆದಿ ಶ್ರೀ ಜ|| ರೇಣುಕ, ದಾರುಕ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಮತ್ತು ಶ್ರೀ ಜ|| ವಿಶ್ವಾರಾಧ್ಯರ ಪುಣ್ಯ ನಾಮಸ್ಮರಣೆಯೇ, ಶಿವಪಂಚಾಕ್ಷರೀ ಮೂಲ ಮಹಾಮಂತ್ರ ಬೀಜಾಕ್ಷರ, **"ನಮಃ ಶಿವಾಯ"** ವನ್ನು ಜಪಿಸಿದಷ್ಟೇ ಫಲವಿರುತ್ತೆ. ಕಾರಣ ಪ್ರಣವಸಹಿತ ಶಿವಪಂಚಾಕ್ಷರೀ ಮಹಾಮಂತ್ರಕ್ಕೆ ಅಭಿನ್ನರು ಶ್ರೀ ಪಂಚಾಚಾರ್ಯರು. ಇದು ಶಿವೋಕ್ತಿ. ಶಿವಾಗ ಮೋಕ್ತಿ. ಈ ರಹಸ್ಯವನ್ನರಿತ ಕೆಲವು ಧೀಮಂತರು ಶಿವ ಪಂಚಾಕ್ಷರೀ ಮಹಾಮಂತ್ರವನ್ನು ಚರಿಸಿದರೆ, ಶ್ರೀ ಜ|| ಪಂಚಾಚಾರ್ಯರನ್ನು ತಮ್ಮ ಪೂಜಾವೇಳೆಯಲ್ಲಿ ಜಪಿಸಿದಂತಾಗುತ್ತದೆಂದು ಭಾವಿಸಿ, ತದ್ವಿರುದ್ಧವಾದ ಬೇರೆ ಮಂತ್ರವನ್ನು ಮನಸ್ವಿಯಾಗಿ ಶಾಸ್ತ್ರ ವಿರುದ್ಧ ಜಪಿಸುತ್ತಾ ಅಡ್ಡದಾರಿ ಹಿಡಿದು, ಮುಗ್ಧ ಭಕ್ತರನ್ನೂ ಸಹ ಕೆಸರಿನತ್ತ ಸೆಳೆಯುತ್ತಲಿದ್ದಾರೆ. ಪ್ರಣವಸಹಿತ ಓಂ ನಮಃ ಶಿವಾಯವೆಂಬ ಮಹಾಮಂತ್ರವೇ ಸಾಯುಜ್ಯ ಮೋಕ್ಷಪ್ರದವಾದ ಪರ ಮೋತ್ಕೃಷ್ಟವಾದ ಮಹಾಮಂತ್ರ ಸಕಲಾಗಮೋಪನಿಷದಾದಿಗಳು, ಅನಂತ ಶಿವಶರಣರು, ಶಿವಯೋಗಿಗಳೂ, ತತ್ವವೇತ್ತರೂ, ಸಮಸ್ತ ದೇವ, ದಾನವ, ಮಾನವರು, ಜಗದಾದಿಕಾಲದಿಂದಲೂ, ಅನನ್ಯ, ಭಕ್ತಿಭಾವದಿಂದ ಶಿವ ಪಂಚಾಕ್ಷರೀ ಮಹಾ ಮಂತ್ರವನ್ನು ಪ್ರಣವ ಸಹಿತ ನಿತ್ಯ ಉಚ್ಚರಿಸುತ್ತಾ ಶಿವಸಾಯುಜ್ಯವನ್ನು ಹೊಂದಿರುವರು.

**ಓಂ ಸಚ್ಚಿದಾನಂದ ರೂಪಸ್ಯ । ಶಿವಸ್ಯಾಸ್ಯ ಸಮುದ್ಭವಂ ।**
**ಭೂಲೋಕೇ ಸೋಮನಾಥಸ್ಯ। ಗರ್ಭಾವಿರ್ಭೂತಮೀಶ್ವರಂ॥**
**ಓಂಕಾರ ಬಿಂದು ಸಂಯುಕ್ತಂ ನಿತ್ಯಂಧ್ಯಾಯಂತಿ ಯೋಗಿನಃ।**
**ಕಾಮದಂ ಮೋಕ್ಷದಂ ತಸ್ಮೈ । ಓಂಕಾರಾಯ ನಮೋ ನಮಃ**
**॥ಭೋ ! ಕಲ್ಯಾಣ ಮಹಾ ಭಾಗ । ಶಿವಜ್ಞಾನ ಮಹೋದಧೇ।**
**ಆಚಾರ್ಯವರ್ಯ ಸಂಪ್ರಾಪ್ತಂ । ರಕ್ಷಮಾಂ ಭವರೋಗಿಣಂ॥**

ಭೋ ಶಿವನೇ ನಿನ್ನ ಶ್ರೀ ಪಾದವ ನಿತ್ಯ ಸ್ಮರಿಸಿ ಭಕ್ತಿಯಿಂ ಮುಟ್ಟದ ಮನ ಈ ದೇಹವಲ್ಲಿದ್ದೇನು ಫಲ. ಮನುಷ್ಯತ್ವ ಮುಮುಕ್ಷತ್ವ ಮಹಾಪುರು

ಷರ, ಸಂಘ ಸಹವಾಸ, ಮಾನವನ ಜನ್ಮೋದ್ಧಾರಕ್ಕೆ ಅವಶ್ಯವಿರುತ್ತೆ. "ಸಾಧು ಸಂಘವ ಭಜಿಸಿ ಸುಖಿಯಾಗೆಲವೋ ಎಲೆಮಾನವ." ಸಾಧೋ ಸಂಘ ಮುಪಾಸತೇ ಹಿ ಸತತಂ" ಇತ್ಯಾದಿ ವಚನಗಳು ಜೀವಾತ್ಮನಿಗೆ ಪ್ರೇರಕ ಶಕ್ತಿ ಯಂತಿವೆ. ಆಚಾರ್ಯ ಶ್ರೀ ಶಂಕರರು **ಸತ್ಸಂಘತ್ವೇ ನಿಸ್ಸಂ ಘತ್ವಂ ನಿರ್ಮೋ ಹತ್ವೇ ನಿಶ್ಚ ಲ ತತ್ವಂ|ನಿಶ್ಚ ಲ ತತ್ವೇ|** ಜೀವನ್ಮುಕ್ತಿಯೆಂದು ಎಚ್ಚರಿಸಿರುವರು. ನಾವು ವಿವೇಕ ಸಂಪನ್ನರಾಗಿ ಶಿವಶರಣರ, ಶಿವಯೋಗಿಗಳ, ಸಂಯಮಿಗಳ, ಕ್ರಿಯಾವಂತರಾದ ಸತ್ಪುರುಷರ, ಆತ್ಮವೇತ್ತರಾದ ಶ್ರೀ ಗುರುಗಳ ಪಾದಸೇವೆ ಯನ್ನು ತ್ರಿಕರಣಗಳಿಂದ ಭಕ್ತ್ಯ ಮಾಡಿದರೆ, ಕರುಣಾಮೂರ್ತಿಗಳಾದ ಇವರು ನಮಗೆ ಸನ್ಮಾರ್ಗವನ್ನು ತೋರಿಸಿ ಹರಸುವರು"**ತದ್ವಿದ್ಧಿ ಪ್ರಣಿಪಾತೇನ ಪರಿ ಪ್ರಶ್ನೇನ ಸೇವೆಯಾ ಉಪದೇಕ್ಷ್ಯಂತಿತೇ ಜ್ಞಾನಂ ಯೋಗಿನಃ ತತ್ವ ದರ್ಶಿನಃ** (ಗೀತ) ಆದ್ದರಿಂದ ಗುಣವಂತನಾದ ಮಾನವ ಶ್ರೀ ಗುರುವಿನ ಶ್ರೀ ಶಿವ ಶರಣರ ನೆರಳಿನಲ್ಲಿ ಬದುಕಿ, ಬೆಳೆದು, ಬಾಳಿ ಮಹಾತ್ಮರ ಆಶ್ರಯಿಸಿ, ಭಕ್ತಿ ಜ್ಞಾನ ಕ್ರಿಯಾವಂತನಾಗಬೇಕು. ಈ ಮೂರಂಶಗಳಿಲ್ಲದ ಮಾನವ, ಮಾನವೀ ಯತೆಯುಳ್ಳವನಾಗಲಾರ ಬರಿ ವಿದ್ಯೆ ಬಲ, ಧನಗಳ ಬಲದಿಂದ ಮಾನವ, ಮಾನ ವನಾಗಿ ಬಾಳಲು ಸಾಧ್ಯವಿಲ್ಲ. ಯಾಕೆಂದರೆ "**ವಿದ್ಯಾ ವಿವಾದಾಯ ಧನಂ ಮದಾಯ ಶಕ್ತಿಃ ಪರೇಶಾಂ ಪರಿಪೀಡನಾಯಖಳಸ್ಯ | ಸಾಧೋರ್ವಿ ಷರೀತಮೇ ತತ್|ದಾನಾಯ ಧರ್ಮಾಯ ರಕ್ಷಣಾಯಚ**"ಎಂದಿದೆ ಗುರು ವಾಣಿ ಇದರಂತೆಯೇ ನಾವು ಸತತ ಸದ್ಗ್ರಂಥಗಳನ್ನು ಓದುತ್ತಿರಬೇಕು. ಗುರು ಬೋಧಾಮೃತ ಗ್ರಂಥಗಳನ್ನೂ, ವೇದಾಗಮೋಪನಿಷದಾದಿಗಳನ್ನೂ ಶ್ರೀ ಸಿದ್ಧಾಂಶ ಶಿಖಾಮಣಿ, ಶಿವಗೀತೆ, ಭಗವದ್ಗೀತೆ, ಶಿವಾಗಮಗಳೂ, ಶಿವನ ಪಂಚವಿಂಶತಿ ಲೀಲೆಗಳನ್ನೂ, ತ್ರಿಕಾಂಡ ಅಮರಕೋಶವನ್ನೂ, ಶ್ರೀ ಬಸವಾದಿ ಪ್ರಮಥರು ಬೋಧಿಸಿದ ಶುದ್ಧ ವಚನೋಪನಿಷತ್ತುಗಳನ್ನೂ (ಕಲಬೆರಿಕೆಯಿಲ್ಲದ) ಶರಣರ ಶುದ್ಧಾಂತಃ ಕರಣದಿಂದ, ಭಕ್ತ್ಯಹಾಲು ಉಕ್ಕಿದಂತೆ ಹೊರ ಹೊಮ್ಮಿದ, ನೈಜಭಾವವ ಹೊತ್ತ ಶಿವಾನುಭೂತಿಯಿಂದ ಹಾಗೂ ಗುಣಾತೀ ತವಾದ ವಚನ ಶಾಸ್ತ್ರಗಳನ್ನು ನಿರಂತರ ಅಕಳಂಕ ಭಾವದಿಂದ ಈಶ್ವರ ಜ್ಞಾನ ಪ್ರಾಪ್ತಿಗಾಗಿ ಸದ್ಗ್ರಂಥಗಳನ್ನು ಆರಿಸಿ ಸದಾ ಓದುತ್ತಾಖಂಡ ತತ್ವ ಸುಧಾ ರಸವನ್ನು ಆಸ್ವಾದಿಸುತ್ತಲಿರಬೇಕು. ವಿಚಾರವಂತರು, ರಾಗದ್ವೇಷಾದಿ ಗುಣ

ರಹಿತರು"ನಾನಾ ಶಾಸ್ತ್ರಜ್ಞಾನ ವಿಚಾರ **ಮಂತ್ರ ವಿಕತಿಂ ತ್ಯಕ್ತ್ವಾ ಸುದೂರೇ ಭೃಶಂ ಸಾಂಬಂ ಹಿರಣ್ಮಯ ತನುಂ ಸ್ಮರ ಹೃದಯೇ ಭ್ರಾಂತಂ ಭಜಧ್ವಂ ಬುಧಾಃ**", ಆ ಶಾಸ್ತ್ರ ಈ ಶಾಸ್ತ್ರವೆಂದು ಮನದಿ ಹಾರಾಡದೆ ಶ್ರೀ ಮಹಾ ಗುರೂಕ್ತ ಮಂತ್ರಮಾರ್ಗವನ್ನು ನೆರನಂಬಿ ಮಾರ್ಜಾಲ ಕಿಶೋರ ನ್ಯಾಯದಂತೆ **ಅನನ್ಯ ಅವ್ಯಭಿಚಾರಿಣಿ ಭಕ್ತಿ ಭಾವೇನ| "ಮಣಿಶ್ಚಿಂತಾಮಣಿ ರ್ದಿವ್ಯಃ ಕಿಮನ್ಯೈರ್ಗ್ರಂಥಕೋಟಿಭಿಃ| ಯಃ ಸ್ವಯಂ ಶ್ರೀ ರೇಣುಕೇಂದ್ರಸ್ಯ ಮುಖಾ ಮೃತಾದ್ವಿನಿರ್ಗತಃ| ಜಯ ಸಿದ್ಧಾಂತ ಶಿಖಾಮಣಿ ಜಯಾ ಜಯ ಸುಧಾಮಣಿ ದಿವ್ಯ ಚಿಂತಾಮಣಿ||**" ಶಿವನು ಶಾಂಭವಿಗೆ ಪ್ರೀತಿಯಿಂದ ಬೋಧಿಸಿದ ಷಟ್ಸ್ಥಲ ಸಿದ್ಧಾಂತದ ರಸಾಯನವನ್ನು ಶಿವೋಕ್ತಿಯಂತೆ ಶ್ರೀ ದಕ್ಷಿಣಾ ಮೂರ್ತಿಯ ದಿವ್ಯ ಪರಂಪರಾವತಾರಿಗಳೆನಿಸಿದ ಜಗದಾದಿ ಶ್ರೀ ಮಜ್ಜಗದ್ಗುರು ರೇಣುಕ ಪರಂಜ್ಯೋತಿ ಭುವಿಯಲ್ಲಿ ಪ್ರಥಮ ಬಾರಿಗೆ ಶಿವಾಗಮಶಾಸ್ತ್ರ ಪಾರಂಗತರೂ ಚಿರಂಜೀವಿಗಳೂ ತಪಃ ಸಿದ್ಧಮನೋರಥರೂ ಆದ ಅದಿ ಅಗಸ್ತ್ಯರಿಗೆ ಕೂಲಂಕಶವಾಗಿ ಪ್ರಸನ್ನ ಭಾವದಿಂದ ಬೋಧಿಸಿದರು. ಈ ತತ್ವ ಬೋಧೆ ಜಗತ್ತಿನ ಸಮಸ್ತ ಆಸ್ತಿಕ ವೃಂದಕ್ಕೆ ಅನವರತ ನೂತನಾತಿ ನೂತನವಾಗಿ ಅಂತಃಕರಣವನ್ನು ನಿತ್ಯ ಬೆಳಗಿಸುವ ಚಿನ್ಮಯ ಜ್ಯೋತಿ ಶ್ರೀ ಸಿದ್ಧಾಂತ ಶಿಖಾಮಣಿ ಇದೊಂದು ಶಾಸ್ತ್ರವನ್ನು ಲಿಂಗಾಂಗಿ ಭಕ್ತನು ಶ್ರದ್ಧಾ ಭಕ್ತಿ, ನಿಷ್ಠಾ ಭಕ್ತಿ ಅವಧಾನ ಭಕ್ತಿಗಳಿಂದ ಯಾವಜ್ಜೀವವೂ ಅಭ್ಯಸಿಸುತ್ತಾ ಅನುಸಂಧಾನ ಮಾಡುತ್ತಾ ಬಂದರೆ, ಜೀವಿತ ಕಾಲದಲ್ಲಿ ಲಿಂಗಾಂಗ ಸಾಮರಸ್ಯವನ್ನು ಹೊಂದಿ ಪುನರಾವರ್ತಿ ರಾಹಿತ್ಯವಾದ ಪರಮ ಪದದಲ್ಲಿ ಶಿಖಿಯುಂಡ ಕರ್ಪೂರದಂತೆ ಶಿವಾನಂದದಲ್ಲಿ ಮಗ್ನನಾಗ ಬಹುದು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಮಾನವ "ಪುಸ್ತಕಂ ಹಸ್ತ ಭೂಷಣಂ" ಎಂಬಂತೆ ಪರಮೋತ್ಕೃಷ್ಟವಾದ ಆಧ್ಯಾತ್ಮಿಕ ಗ್ರಂಥಗಳನ್ನೇ ಸತತ ಪರಿಶೀಲಿಸುತ್ತಲಿರಬೇಕು.

"ಶಿವಾಗಮ ಪರಿಜ್ಞಾನ ಪರಿಪಾಕ ಸುಗಂಧಿನಾ" ಎಂದು ಕೀರ್ತಿವೆತ್ತ ಶ್ರೀ ಶಿವಯೋಗಿ ಶಿವಚಾರ್ಯರು ಶ್ರೀ ರೇಣುಕಾಗಸ್ತ್ಯ ಸಂವಾದ ರೂಪ ಶ್ರೀ ಸಿದ್ಧಾಂತ ಶಿಖಾಮಣಿಯ ತತ್ವಾಮೃತದ ಮಹತ್ವವನ್ನು ಮನ ದುಂಬಿ ಭಕ್ತಿ ಪರವಶರಾಗಿ ಪ್ರಶಂಸಿಸುತ್ತಾ, "**ಶ್ರೀ ವೇದಾಗಮ ವೀರಶೈವ ಸರಣಿಂ" ಜೀವೇಶ್ವರ ಯೋಗ ಪದ್ಮ ತರಣಿಂ | ಶ್ರೀ ಗೋಪ್ಯ ಚಿಂತಾಮಣಿಂ ||** ಎಂದು ಸ್ತುತಿಸಿರುವರು.

ಈ ಪದಪುಂಜಗಳಲ್ಲಿ ಸಾಸಿವೆಯಲ್ಲಿ ಸಾಗರವೆಂಬಷ್ಟು ಅರ್ಥ ಗರ್ಭಿತವಾಗಿದೆ. ಗುರು, ಲಿಂಗ ಜಂಗಮ, ವಿಭೂತಿ ರುದ್ರಾಕ್ಷಮಂತ್ರ ಪಾದೋದಕ ಪ್ರಸಾದವೆಂಬ ಅಷ್ಟಾವರಣದ ಚೌಕಟ್ಟಿನ ಸೌರಭದೊಂದಿಗೆ, ಲಿಂಗಾಚಾರ, ಸದಾಚಾರ, ಶಿವಾ ಚಾರ, ಗಣಾಚಾರ ಮತ್ತು ಭೃತ್ಯಾಚಾರಾದಿ ಪಂಚಾಚಾರಗಳ ಅನುಷ್ಠಾನ ದೊಂದಿಗೆ, ದೇದೀಪ್ಯವಾದ ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ ಮತ್ತು ಐಕ್ಯಸ್ಥಲಾದಿ ಷಟ್ಸ್ಥಲಗಳ ಸಾನ್ನಿಧ್ಯ ಸ್ವರೂಪಾನುಭವಗಳ ನಿತ್ಯಾನುಸಂಧಾನಗಳ ಪದ್ಧತಿಗಳನ್ನು ರೂಢಿಸಿ ಗುರೂಕ್ತ ಮಂತ್ರಮಾರ್ಗವನ್ನು ತೋರಿಸುವ ದರ್ಪಣ ಶ್ರೀ ಸಿದ್ಧಾಂತ ಶಿಖಾಮಣಿ. ವೀರಶೈವ ಪ್ರಪಂಚಕ್ಕೆ ಲಿಂಗಾಂಗಿ ಧರ್ಮೀಯರಿಗೆ ಮತ್ತು ಅಖಿಲ ವೈದಿಕ ಪಾಶುಪತಮ ತಾನುಯಾಯಿಗಳಿಗೆ ಜಗದಾದಿಯಿಂದ ಪ್ರಸ್ಫುರಿ ತವಾದ, ಸಕಲಾಗಮೋಪನಿಷದಾದಿಗಳ ಸಾರಸರ್ವಸ್ವ ಶ್ರೀ ಸಿದ್ಧಾಂತ ಶಿಖಾ ಮಣಿ. ಶಿವಶರಣರ ಪಂಚ ಪ್ರಾಣ ಮೇಲುಕ್ತವಾದ ಷಟ್ಸ್ಥಲಸಿದ್ಧಾಂತ. ಇದರ ವೊಂದೊಂದು ಭಾಗದ ತತ್ವವನ್ನು ನೂರಾರು ಪುಟಗಳಿಂದ ವರ್ಣಿಸಿದರೂ ಮುಗಿಯದ ಶಿವಜ್ಞಾನ ಭಂಡಾರವಿದು. ಶಿವಶರಣ ತತ್ವ ಆಚಾರ್ಯ ಶ್ರೀ ರೇಣುಕರ ಬೋಧೆಯಂತೆ ಭೂತಾಕಾಶದ ಎಲ್ಲೆಯನ್ನು ಭೇದಿಸಿ ಪರಾಕಾಶದ ಸೌರಭದಲ್ಲಿ ತಲ್ಲೀನವಾಗಿ ಸರ್ವಾಂಗ ಲಿಂಗಿಯಾಗಿ ಲಿಂಗಭೋಗೋಪ ಭೋಗಿ ಯಾಗಿ ರಂಜಿತ ಸ್ಥಿತಿಯದು. ಶ್ರೀ ಬಸವಾದಿ ಪ್ರಮಥರು ಜ|| ರೇಣುಕಾದಿ ಗುರು ಪರಂಪರೆಯ ಆಚಾರ್ಯರ ದಿವ್ಯ ಕೃಪಾಕಟಾಕ್ಷ ಲವಲೇಶದ ಪ್ರಭಾವ ದಿಂದ ಪಾದರಸದಂತೆ ಪ್ರಭಾವಾನ್ವಿತರಾಗಿ, ಅವರ ಹೃದಯಾಂತರಾಳದಿಂದ ಹಾಲುಕ್ಕುವಂತೆ ಹೊರಹೊಮ್ಮಿದ ಶುದ್ಧ ಸಿದ್ಧ ಬುದ್ಧವಾದ ದಿವ್ಯ ವಚನಗಳು ಅಮೃತ ಬಿಂದುಗಳಂತೆ ಲೋಕದ ಜನತೆಗೆ ಪರಮ ಆದರಣೀಯವೆನಿಸಿವೆ. ಕಾರಣ ಶ್ರೀ ಬಸವ, ಅಲ್ಲಮ ಪ್ರಭುದೇವ, ಶ್ರೀ ಚನ್ನ ಬಸವಣ್ಣನವರ ಹೃದಯ ದಲ್ಲಿ ಮನೆಮಾಡಿ ಕೊಂಡಿದ್ದ ಪೂರ್ವಾಚಾರ್ಯರಲ್ಲಿನ ಪರಮ ಭಕ್ತಿಯೇ ಕಾರಣ. ಅಂದೋ ! ಕ್ರಿ.ಶ. ೧೩ ನೇ ಶತಮಾನದಿಂದೀಚೆಗೆ, ಕೆಲವು ಪಂಡಿತರು ದುರುದ್ದೇಶಕ್ಕೆ ತುತ್ತಾಗಿ, ಪ್ರಮಥರ ಆದಿ ವಚನಗಳಲ್ಲಿ ಕೈಯ್ಯಾಡಿಸಿ ಬಹು ತೇಕ ಕಲಬೆರಕೆ ವಚನಗಳನ್ನು ಸೇರಿಸಿ, ರಚಿಸಿ, ವ್ಯಾಪಕವಾಗಿ ಪ್ರಚಾರ ಮಾಡಿದ್ದರ ದೆಶೆಯಿಂದಾಗಿ, ಜನತೆ ಶ್ರೀ ಬಸವಾದಿಗಳ ಸದ್ರೂಪದ ವಚನ

ಮಾಧುರ್ಯವನ್ನು ನೂರಕ್ಕೆ ನೂರರಷ್ಟು ಅರಿತು ಅನಂದಿಸಲು ಎಡೆಯಿಲ್ಲ ದಂತಾಯಿತು ಇದು ಬಸವಾದಿಗಳ ಮೃದುಮನಸ್ಸಿಗೆ ಘಾಸಿಯುಂಟು ಮಾಡಿದೆ.

ಶ್ರೀ ಸಿದ್ಧಾಂತ ಶಿಖಾಮಣಿ ತತ್ವ ಸುಧಾರಸ "ಸಾಗರಸ್ಸಾಗರೋಪಮಃ" ಎಂಬಂತೆ ಘನತರವಾದುದು. **"ಲಿಂಗದೇಹೀ ಶಿವಾತ್ಮಾಯಂ | ಲಿಂಗಾಚಾರೋ ನ ಲೌಕಿಕಃ | ಸರ್ವಂ ಲಿಂಗಮಯಂ ರೂಪಂ | ಲಿಂಗೇನ ಸಮುಮಶ್ನು ತೇ | ಸರ್ವಾಂಗ ಲಿಂಗಮೇವಸ್ಯಾತ್ |ಅನ್ನಪಾನಾದ್ಯ ಮರ್ಪಿತಂ|ಪ್ರಸಾದಸ್ತೃಪ್ತಿ ರೇವಸ್ಯಾತ್|ಸರ್ವಂ ಲಿಂಗಮಯ ತ್ವತಃ॥ ಶ್ರೀ ಜ||** ರೇಣುಕರು ಬೋಧಿಸಿದ ಪರಮ ಏಕೋತ್ತರ ಶತ ಸ್ಥಲದ ಶಿವಜ್ಞಾನ ಭಂಡಾರ ಇದು ಚಿನ್ಘನ ತತ್ವ ಘನಲಿಂಗ ತತ್ವ ಇದು "ಸ್ವಶಕ್ತಿ ಸೌಂದರ್ಯ ಸಂಪರ್ಕದಿಂ" ಸತತ ರಂಜಿಸುವ, ಸ್ವಸ್ವರೂಪೈಕ ಚಚ್ಛಕ್ತಿಯಿಂ | ಸ್ಫುರಿಸುತಿರ್ದುದದ್ವೈತ ಪರಮಾತ್ಮತತ್ವಂ ||, ಎಂಬುದಾಗಿ ಶಿವಾಗಮುಗಳಲ್ಲಿ ಸ್ತುತಿಸಿ ಪ್ರಶಂಸಿಸ ಲಾಗಿದೆ, ಅಸ್ತು.

**ಆಚಾರ್ಯಃ ಪರಿಷೇವ್ಯತಾಂ । ಶಿವಕರಂ ಲಿಂಗಂ ಸದಾಧಾರ್ಯತಾಂ॥**
**ನಿತ್ಯಂ ಜಂಗಮ ಈಡ್ಯತಾಂ । ಪರತರಂ ಪಾದೋದಕಂ ಪೀಯತಾಂ ।**
**ಶುದ್ಧಾನ್ನಂ ಪರಿಗೃಹ್ಯ ತಾಂ । ಭವಹರಂ ಭಸ್ಮಾಸು ಸಂ ಲಿಪ್ಯತಾಂ ।**
**ಪಂಚಾಚಾರ್ಯ ಪದಾಂಬುಜೇಶು। ಸತತಂ ಚೇತಸ್ಸಮಾಧೀಯತಾಂ॥**

**ಕಾಣದುದನರಸಿ, ಸಿಕ್ಕಲಿಲ್ಲವೆಂಬ । ಬಳಲಿಕೆಯ ನೋಡಾ ।**
**ಕಂಡುದನೆ ಕಂಡು । ಶ್ರೀಗುರು ಪಾದವ ಹಿಡಿದಲ್ಲಿ ।**
**ಕಾಣದುದ ಕಾಣ ಬಹುದು ಗುಹೇಶ್ವರಾ ॥**

ಶ್ರೀ ಅಲ್ಲಮ ಪ್ರಭು ದೇವರಿಗೆ ಶ್ರೀ ಮಹಾಗುರುವಿನ ಪಾದದಲ್ಲಿ ಅದೆಷ್ಟು ಗಾಢ ಭಕ್ತಿ. ಜ್ಞಾನಿಯಾದ ಶ್ರೀ ಅಲ್ಲಮರ ಗುರು, ಶಿವಜ್ಞಾನ ಪರಂಜ್ಯೋತಿ ಪರಾತ್ಪರ, ಶ್ರೀ ಅನಿಮಿಷ ಯೋಗಿ ನಾಮಕ, ಸೊನ್ನಲಿಗೆ ಶ್ರೀ ಸಿದ್ಧರಾಮ ಶಿವಯೋಗ ಸಿಂಹಾಸನಾಧೀಶ್ವರರು. ಈ ಮಹಾಮಹಿಮರು ಶಿವಾಗಮ ಸಂಪ್ರದಾಯ ಪ್ರವರ್ತಕರು. ಶ್ರೀ ರಂಭಾಪುರೀ ವೀರಸಿಂಹಾಸನಾಧೀಶ ಶ್ರೀ ೧೦೦೮

ಆದಿ ಜ॥ ರೇವಣ ಸಿದ್ಧ ಶಿವಾಚಾರ್ಯರ ದಿವ್ಯಾನುಗ್ರಹದಿಂದ ಕ್ರಿ. ಶ. ೧೦೮೮ರ ಶ್ರೀ ವಿಭವನಾಮ ಸಂವತ್ಸರ, ಪುಷ್ಯ, ಮಕರ ಸಂಕ್ರಾಂತಿ ಶುಭದಿನದಲ್ಲಿ ಸೊನ್ನಲಿಗೆ ಸಂಸ್ಥಾನ ಬೃಹನ್ಮಠಾಧೀಶ, ರಾಜಗುರು, ಶ್ರೀ ಮುದ್ದದೇವನ ಧರ್ಮಪತ್ನಿ ಸಾಧ್ವೀಶಿರೋಮಣಿ, ಸುಗ್ಗಲಾದೇವಿ ಗರ್ಭದಲ್ಲುದಿಸಿದರು. ಶ್ರೀ ಅಲ್ಲಮ, ಮಲ್ಲಿಕಾಪುರದ ನಾಗೇಶ ನಾಯಕನ ಧರ್ಮ ಪತ್ನಿ, ಚಿನ್ನಮಾಂಬೆ ಉದರದಲ್ಲಿ ಕ್ರಿ. ಶ. ೧೧೨೫ ರಲ್ಲಿ ಜನಿಸಿದನು. ಅಂದ ಬಳಿಕ ಶ್ರೀ ಗುರುಸಿದ್ಧ ರಾಮರು, ಅಲ್ಲಮನಿಗಿಂತ ೩೭ ವರ್ಷ ಹಿರಿಯರು, ವೀರಮಾಹೇಶ್ವರ ಸಂತತಿಯ ಬೃಹನ್ಮಠಾಧೀಶ್ವರರು. ಇವರು ತಮ್ಮ ಅನೇ ವಯಸ್ಸಿನಲ್ಲಿ ಶ್ರೀಶೈಲ ಭ್ರಮ ರಾಂಬಾ ಸಮೇತ ಶ್ರೀ ಮಲ್ಲಿಕಾರ್ಜುನರ ದಿವ್ಯ ಕೃಪಾ ದೃಷ್ಟಿಗೆ ಪಾತ್ರರಾಗಿ, ಅವರ ಅಮೃತಹಸ್ತದಿಂದ ಎತ್ತಿ ಮುದ್ದಾಡಿ, ಮೈದಡವಿ, ಅಪ್ಪಿ ಹರಸಲ್ಪಟ್ಟ ಸುಕುಮಾರ, ಸುಜ್ಞಾನಿ ಶ್ರೀ ಗುರು ಸೊನ್ನಲಿಗೆ ಸಿದ್ಧರಾಮರು, ಈ ಕಂದ ಹುಟ್ಟಿದ ೧೨ ನೇ ದಿನ, ಶ್ರೀ ರಂಭಾಪುರೀ ಜ॥ ರೇವಣಸಿದ್ಧರು, ಪಂಚ ಕಲಶ ಸ್ಥಾಪನ ಪೂರ್ವಕ ಶಿಶುವಿನ ಶಿರದಲ್ಲಿ ಇಷ್ಟಲಿಂಗಧಾರಣೆ ಮಾಡಿ ಆಶೀರ್ವ ದಿಸಿದರು. ಸಂಜೆ ಶಿಶುವಿನ ನಾಮಕರಣ ಸಮಯದಲ್ಲಿ ಜಗನ್ಮಾತೆ ಶ್ರೀ ಪಾರ್ವತಿ, ಶ್ರೀ ಲಕ್ಷ್ಮೀ, ಶ್ರೀ ಸರಸ್ವತಿ, ಶ್ರೀ ಶಚಿದೇವೀ ಹಾಗೂ ಶ್ರೀ ರುದ್ರ ಕನ್ಯೆಯರೊಂದಿಗೆ, ಶ್ರೀ ಮುದ್ದ ಗೌಡನ ನಿವಾಸಕ್ಕೆ ಬಂದು, ಸರ್ವರೂ ಆಶ್ಚರ್ಯ ಪಡುವಂತೆ ಆ ಕಂದನನ್ನೆತ್ತಿ ಮುದ್ದಾಡಿ, ಶ್ರೀ ಪಾರ್ವತಿ ಆ ಮಗುವಿಗೆ ಅನಿಮಿಷ ಯೋಗಿ, ಪ್ರಾಣಯೋಗಿ ಕಾರಣರುದ್ರ, ನಿತ್ಯತೃಪ್ತ ಮತ್ತೂ ಸಿದ್ಧರಾಮ ಎಂದು ಅನ್ವರ್ಥನಾಮಗಳನ್ನಿಟ್ಟು, ಕರೆದು, ತೊಟ್ಟಿಲ ತೂಗಿ, ಹರಸಿ ಅಂತ ರ್ಧಾನರಾದರು. ಈ ಮಗು ಶ್ರೀ ಸುಗ್ಗಲಾದೇವಿ ಗರ್ಭದಿಂದ ಅನಾಯಾಸ ವಾಗಿ ಭೂಸ್ಪರ್ಶವಾದಾಗ, ಕೂಸು ಅಳಲಿಲ್ಲ ಕೈ ಕಾಲುಗಳನ್ನು ಬಡಿಯಲಿಲ್ಲ. ಲೋಕೋತ್ತರ ಲಕ್ಷಣಗಳಿಂದ ಕೂಡಿದ ಶ್ರೀ ಸಿದ್ಧರಾಮ ಶಿಶು, ಎವೆ ಇಕ್ಕದ. ಉಸಿರಿಕ್ಕದ, ಕಣ್ರೆಪ್ಪೆ ಬಡಿಯದ, ಹಸಿವು ಬಾಯಾರಿಕೆಗಳಿಲ್ಲದ, ಜಲಮಲ ವಿಸರ್ಜನೆಯಿಲ್ಲದ, ಕಾಲ್ ಹೆಜ್ಜೆ ಮತ್ತೂ ಮೈ ನೆರಳುಗಳಿಲ್ಲದ, ಶಿವಯೋಗದ ತುರೀಯಾತೀತ ಸಮಾಧಿ ಯೋಗದಲ್ಲಿದ್ದಂತೆ, ಈ ಶಿಶುವನ್ನು ಕಂಡ ಪ್ರಾಜ್ಞರು ಸಕೌತುಕಾಶ್ಚರ್ಯಭರಿತರಾದವರು. ಶ್ರೀ ಶೈಲ ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜ॥ ಕಪಿಲ ಸಿದ್ಧ ಮಲ್ಲಿಕಾರ್ಜುನ ಶಿವಾಚಾರ್ಯರೂ ಮತ್ತೂ

ಶ್ರೀ ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜ। ಶ್ರೀ ರೇವಣ ಸಿದ್ಧ ಶಿವಾಚಾರ್ಯರು ಈ ಉಭಯಾಚಾರ್ಯರೂ, ಶ್ರೀ ಸೊನ್ನಲಿಗೆ ಬೃಹನ್ಮಠದಲ್ಲಿ ಶ್ರೀ ಸಿದ್ಧರಾಮ ಶಿವಯೋಗಿಗಳಿಗೆ ಶ್ರೀ ಜಗತ್ಪಿತ ಮಲ್ಲಿಕಾರ್ಜುನ ಭ್ರಮರಾಂಬೆಯರ ಆದೇಶದಂತೆ ಶುಭ ಮುಹೂರ್ತದಲ್ಲಿ ಕ್ರಿ. ಶ. ೧೧೪೭ ರಲ್ಲಿ ಅಂದರೆ ವಟುವಿನ ೮ ನೇ ವರ್ಷದಲ್ಲಿ ಶಿವದೀಕ್ಷಾ ಮಂತ್ರೋಪದೇಶದೊಂದಿಗೆ ತತ್ವ ಬೋಧೆಯನ್ನು ಶ್ರೀ ಉಭಯ ಜಗದ್ಗುರುಗಳು ಅನುಗ್ರಹಿಸಿ, ನೂತನ ಶಿವಯೋಗಿಗೆ ಸಿಂಹಾಸನಾರೋಹಣಂಗೈಸಿ, ನೀನು ಇಂದಿನಿಂದ **"ಶ್ರೀ ಮಹಾ ಗುರು ಸಿದ್ಧ ರಾಮನೆಂದು"** ಕರೆದು ಹರಸಿದರು. ವೀರಮಾಹೇಶ್ವರ ಗೋತ್ರದ ಶ್ರೀಮಹಾ ಗುರುಸಿದ್ಧರಾಮ ೧೦೧ಸ್ಥಲಗಳ ಅಂತರ್ಜ್ಯೋತಿ ಮುಖದಲ್ಲಿ ಕಂಡು ಅನುಭವಿಸಿ, ತಾದಾತ್ಮ್ಯ ಭಾವದಿಂದ ಸದಾ ರಂಜಿತನಾಗಿದ್ದನೆಂದ ಬಳಿಕ, ಅಲ್ಪಾಯುಗಳಾಗಿ ಜೀವಿಸಿ, ಶ್ರೀ ಸಿದ್ಧರಾಮ ಶಿವಯೋಗೀಶ್ವರರ ದಿವ್ಯ ಕೃಪಾಲೇಶಕ್ಕೆ ಪಾತ್ರರಾದ ಶ್ರೀ ಅಲ್ಲಮ, ಶ್ರೀ ಚನ್ನ ಬಸವಾದಿಗಳು ಪ್ರದೀಪ್ತರಾಗಿ ಬಾಳಿ, ಸಂಪೂಜ್ಯರೂ ಪ್ರಾತಃಸ್ಮರಣೀಯರಾಗಲು ಸಾಧ್ಯವಾಯಿತು.

ಶ್ರೀ ಮಹಾ ಗುರುಸಿದ್ಧರಾಮ ಶಿವಯೋಗಿಗಳು, ತಮ್ಮ ಶಿವಯೋಗದ ಸಮಾಧಿಯಲ್ಲಿದ್ದಾಗ ಅಲ್ಲಮನು ಅಲ್ಲಿ ಶರಣಾಗತನಾಗಿ ತನನ್ನು **"ಓ ಗುರುವೇ ! ಉದ್ಧರಿಸಬೇಕೆಂದು"** ಪ್ರಾರ್ಥಿಸಿದನು. ಕರುಣಾಮೂರ್ತಿ ಸಿಧ್ಧರಾಮರು ತಮ್ಮ ಗುಹೆಯಲ್ಲಿ ಪಂಚ ಕಲಶ ಸ್ಥಾಪನಾ ಪೂರ್ವಕ ಅಲ್ಲಮನಿಗೆ ಇಷ್ಟಲಿಂಗ ಧಾರಣ ಪೂರ್ವಕ, ಶಿವದೀಕ್ಷೆಯಿತ್ತು, ಶಿವ ತತ್ವವನ್ನು ಯಾವ ಜ್ಜೀವವೂ ಬೋಧಿಸುತ್ತಿರೆಂದು ಪೇಳಿ, ಅಲ್ಲಮನನ್ನು ಅಂದಿನಿಂದ ನೀನು **"ಶ್ರೀ ಅಲ್ಲಮ ಪ್ರಭು ದೇವ"** ನೆಂಬ ಹೆಸರಿಟ್ಟು ಕರೆದರು. ಶಿವಯೋಗದ ಗುಹೆಯಲ್ಲಿ ಶಿವದೀಕ್ಷೆ ಪಡೆದ ಉತ್ತಮ ಅಧಿಕಾರಿ ಅಲ್ಲಮ ಪ್ರಭು ದೇವರು, ಶ್ರೀ ಗುರು ಸಿದ್ಧರಾಮರನ್ನು ಅಂದಿನಿಂದ ಶ್ರೀ ಗುಹೇಶ್ವರನೆಂದು ಸ್ತುತಿಸಲಾರಂಭಿಸಿದರು.

ಶ್ರೀ ಅಲ್ಲಮ ಪ್ರಭುದೇವರಿಂದ, ಕಲ್ಯಾಣದ ಶ್ರೀ ಬಸವಣ್ಣ ಅವರಿಗೆ ಶಿವದೀಕ್ಷೆ ನಡೆದ ವೃತ್ತಾಂತವನ್ನು ಕೇಳಿ, ಶ್ರೀ ಗುರು ಸಿದ್ಧರಾಮಯತಿ ಸಾರ್ವಭೌಮರ ಅಮೃತ ಹಸ್ತದಿಂದ, ತಮ್ಮ ೮ ವರ್ಷದ ಸೋದರಳಿಯ ಚನ್ನಬಸವಣ್ಣನವರಿಗೆ ಇಷ್ಟಲಿಂಗ ಧಾರಣೆ ಪೂರ್ವಕ ಶಿವದೀಕ್ಷೆಯನ್ನು ನೆರವೇರಿಸಿಕೊಂಡು

ಕರತರುವಂತೆ ಪ್ರಾರ್ಥಿಸಿದರು. ಸೊನ್ನಲಿಗೆ ಶಿವಯೋಗದ ಗುಹೆಯಲ್ಲೇ ಅಲ್ಲಮರ ಪ್ರಾರ್ಥನೆಯಂತೆ, ಶ್ರೀ ಗುರುಸಿದ್ಧರಾಮರು ಕರುಣೆಯಿಂದ ಎಂಟು ವರ್ಷದ ಚನ್ನಬಸವಣ್ಣನಿಗೆ ವಿದ್ಯುಕ್ತವಾಗಿ ಶಿವದೀಕ್ಷೆಯನ್ನಿತ್ತು, ಷಟ್ಸ್ಥಲ ಸಿದ್ಧಾಂತದ ತಿರುಳನ್ನು ಪ್ರಭಾವಾನ್ವಿತವಾಗಿ ಬೋಧಿಸಿ ವತ್ಸಾ ! ಚನ್ನಬಸವಣ್ಣ ಈ ತತ್ವದಾಚರಣೆಯೊಂದಿಗೆ ನೀನು ಯಾವಜ್ಜೀವವೂ ಸರ್ವತ್ರ ಅಧಿಕಾರಿಗಳಿಗೆ ಶಿವತತ್ವವನ್ನು ಬೋಧಿಸಿ, ಧರ್ಮೋದ್ಧಾರ ಕಾರ್ಯದಲ್ಲಿ ನಿರುತನಾಗಿರೆಂದು ಆಶೀರ್ವದಿಸಿದರು. ಆಗ ಶ್ರೀ ಗುರು ಸಿದ್ಧರಾಮರು ೬೫ ವರ್ಷದವರಾಗಿದ್ದರು. ಶ್ರೀ ಅಲ್ಲಮ ತನ್ನ ೨೮ ನೇ ವಯಸ್ಸಿನಲ್ಲಿ ಶ್ರೀ ಗುಹೇಶ್ವರರಿಂದ ಶಿವದೀಕ್ಷೆ ಪಡೆದಾಗ, ಶ್ರೀ ಗುರುಸಿದ್ಧರಾಮರು ೬೪ ವರ್ಷದ ಯತಿರಾಟ್, ಶ್ರೀ ಗುರು ಸಿದ್ಧರಾಮರಿಂದ ಶಿವದೀಕ್ಷೆ ಆದುದಕ್ಕೆ ಶ್ರೀ ಬಸವಣ್ಣ ಅತೀವ ಸಂತೋಷಭರಿತರಾಗಿದ್ದರು. ಶ್ರೀ ಅಲ್ಲಮಪ್ರಭುದೇವರು, ಶ್ರೀ ಚನ್ನಬಸವಣ್ಣ ಮತ್ತು ಶ್ರೀ ಬಸವಣ್ಣ ಇತ್ಯಾದಿ ಶಿವ ಶರಣರು, ಶ್ರೀ ಜ|| ಪಂಚಾಚಾರ್ಯರ ಗುರು ವರ್ಗದವರಲ್ಲಿ ಅತ್ಯಂತ ಪೂಜನೀಯ ಭಾವದಿಂದ ವರ್ತಿಸುತ್ತಿದ್ದರು. ಇದು ಶ್ರೀ ಕೂಡಲ ಸಂಗಮೇಶ್ವರ ಮತ್ತೂ ಶ್ರೀ ಶೈಲಮಲ್ಲಿಕಾರ್ಜುನ ಲಿಂಗವರಿತಂತೆ, ನಿತ್ಯ ಸತ್ಯ ಸುಂದರವಾದ ವಿಷಯವಿರುತ್ತೆ. ಎರಡನೆಯದಾಗಿ ಶ್ರೀ ಅಲ್ಲಮಪ್ರಭುದೇವರು ತಮ್ಮ ದೀಕ್ಷಾಗುರು ಶ್ರೀ ಅನಿಮಿಷಯೋಗಿ ನಾಮಕ ಶ್ರೀಸೊನ್ನಲಿಗೆ ಸಿದ್ಧರಾಮರನ್ನು ಸದಾ ಸ್ಮರಿಸುವ ನಿಮಿತ್ತ, ತಮ್ಮ ವಚನಗಳ ಕೊನೆಯಲ್ಲಿ **"ಗುಹೇಶ್ವರಾ"** ಎಂದು ಭಕ್ತಿಯಿಂದ ಸ್ಮರಿಸಿದಂತೆ, ಶ್ರೀ ಚನ್ನಬಸವಣ್ಣನವರೂ ಸಹ, ತಮ್ಮ ದೀಕ್ಷಾಗುರು ಶ್ರೀ ಸಿದ್ಧರಾಮರನ್ನು, ತಮ್ಮ ಪ್ರತಿಯೊಂದು ವಚನಾಂತ್ಯದಲ್ಲಿ ಶ್ರೀ ಮಹಾಗುರು ಸ್ಮರಣಾರ್ಥ ಅಲ್ಲಮರಂತೆ ತಾವೂ **"ಗುಹೇಶ್ವರ"**ರೆಂದೇ ಅತ್ಯಂತ ಭಕ್ತಿಯಿಂದ ಸ್ಮರಿಸಿರಬೇಕು. ಅನ್ಯಥಾಯಿರಲಾರರು, ಇತ್ತೀಚಿನ ಶತಮಾನಗಳಲ್ಲಿ ದುರುದ್ದೇಶದಿಂದ ಯಾರೋ ಮೇಧಾವಿಗಳು ಚನ್ನಬಸವಣ್ಣನ ವಚನಗಳ ಅಂತ್ಯದಲ್ಲಿದ್ದ **"ಗುಹೇಶ್ವರ"** ಎಂಬ ಅಂಕಿತಕ್ಕೆ ಬದಲಾಗಿ **"ಚನ್ನ ಸಂಗಯ್ಯಾ"** ಎಂಬ ಮುದ್ರಿಕೆಯನ್ನು ಜೋಡಿಸಿ ಅಪಚಾರವೆಸಗಿರುವುದು ಸ್ಪಷ್ಟವಾಗೀ ಕಂಡುಬರುತ್ತೆ. ಚನ್ನ

ಸಂಗಯ್ಯ ಶ್ರೀ ಬಸವಣ್ಣನವರ ಏಕಮಾತ್ರ ಪುತ್ರ. ದುರ್ದೈವವಶಾತ್ ಚನ್ನ ಸಂಗಯ್ಯ ೫ ನೇ ವಯಸ್ಸಿನಲ್ಲಿ ಮೃತಪಟ್ಟನು. ಈತನ ಹೆಸರನ್ನು ಚಾರಿತ್ರಿಕವಾಗಿ ಉಳಿಸಲು, ಸಂಚುನಡೆಸಿ, **"ಗುಹೇಶ್ವರಾ"** ಎಂದಿದ್ದ ಪದ ಪುಂಜವನ್ನು ಕಿತ್ತೊಗೆದು ಆ ಸ್ಥಳದಲ್ಲಿ **"ಚನ್ನ ಸಂಗಯ್ಯ"** ಎಂಬ ಮುದ್ರಿಕೆ ಯನ್ನು ಜೋಡಿಸಿರುವರು. ಈ ಕೃತ್ರಿಮವನ್ನು ಶ್ರೀ ಚನ್ನಬಸವಣ್ಣನವರೇ ಒಪ್ಪುವುದಿಲ್ಲವೆಂದ ಬಳಿಕ, ಶ್ರೀ ಅಲ್ಲಮ, ಬಸವಾದಿಗಳೂ ಒಪ್ಪರು. **ಶ್ರೀ ಚನ್ನ ಸಂಗಯ್ಯ, ಶ್ರೀ ಚನ್ನ ಬಸವಣ್ಣನವರ ದೀಕ್ಷಾ ಗುರುವೇನಲ್ಲ.** ಇದು ಕೌತುಕವಿರುತ್ತೆ?

**ಶ್ರೀ ಗುರು ಚರಣಂ। ಭವಹರಣಂ। ಸದ್ಗುರು ಚರಣಂ। ಭವಹರಣಂ। ಜೈ ಗುರು ಚರಣಂ ಭವಹರಣಂ। ಶರಣ ಜನರ ಕರುಣಾಭರಣಂ॥.** ಇಪ್ಪತ್ತೆಂಟು ಶಿವಾಗಮಗಳ ಸಾರಸರ್ವಸ್ವ ಶ್ರೀ ಸಿದ್ಧಾಂತ ಶಿಖಾಮಣಿ, ಇದು ಶಿವಾದ್ವೈತ ಸಿದ್ಧಾಂತ ಹೃದಯ ತರಂಗ ಇದು ವಿಶ್ವದ ಅಖಿಲ ಸಿದ್ಧಾಂತಗಳ ಕೇಂದ್ರವೆನಿಸಿದೆ. ಜಗದಾದಿಯಲ್ಲಿ ಈ ಘನ ಗಂಭೀರವಾದ ವಿಶ್ವಧರ್ಮವನ್ನು ಜಗನ್ಮಾತೆ ಶ್ರೀ ಗಿರಿಜೆಗೆ ವಿಶ್ವೇಶ್ವರನು ವಿಶ್ವಸನೀಯವಾಗಿ ಬೋಧಿಸಿರುವನು,**"ಪುರಾದೇವೇನ ಕಥಿತಂ। ದೇವ್ಯೈತನ್ನಂದ ನಾಯಚ॥** ಎಂದೂ, ಮತ್ತೀ ಸರ್ವಶ್ರೇಷ್ಠವಾದ ತತ್ವವನ್ನು ಶಿವನ ಆದೇಶದಂತೆ, ಹರನೇ ಗುರುವೆನಿಸಿದ ಶ್ರೀ ಆದಿ ಜ॥ರೇಣುಕರ ರೂಪದಲ್ಲಿ ಭುವಿಯಲ್ಲಿ ಶ್ರೀ ಆದಿ ಅಗಸ್ತ್ಯ ಮಹರ್ಷಿಗಳನ್ನು ವ್ಯಾಜವಾಗಿ ಮುಂದಿರಿಸಿಕೊಂಡು ಅಖಂಡ ವಿಶ್ವಕ್ಕೆ ಬೋಧಿ ಸಿದ "ಶಿವತತ್ವ ಸಾರಾಮೃತ ಶ್ರೀ ಸಿದ್ಧಾಂತ ಶಿಖಾಮಣಿ". ಈ ಕಾರಣದಿಂದ

**ವಿಷ್ಣು ಬ್ರಹ್ಮಾದಯೋದೇವಾ। ಮುನಯೋ ಗೌತಮಾದಯಃ॥**
**ಧಾರಯಂತಿ ಸದಾ ಲಿಂಗಂ। ಉತ್ತಮಾಂಗೇ ವಿಶೇಷತಃ॥**

ಶ್ರೀ ಮಹಾ ವಿಷ್ಣು ಬ್ರಹ್ಮಾದಿ ಅನಂತ ದೇವತೆಗಳೂ ಹಾಗೂ ಶ್ರೀ ಗೌತಮಾದಿ ಅಸಂಖ್ಯಾತ ಬ್ರಹ್ಮರ್ಷಿಗಳು ಮತ್ತೂ **ಲಕ್ಷ್ಮ್ಯಾದಿ**

**ಶಕ್ತಯ ಸರ್ವಾಃ । ಶಿವಭಾವ ವಿಭಾವಿತಾಃ । ಧಾರಯಂ**
**ತ್ಯಾ ಲಿಕಾಗ್ರೇಷು । ಶಿವಲಿಂಗ ಮಹರ್ನಿಶಂ ॥**

**(ಸಿ. ಶಿ. ಪರಿ ೬ ಶ್ಲೋ ೫೬)**

ಶ್ರೀ ಪಾರ್ವತಿ, ಶ್ರೀ ಆದಿಲಕ್ಷ್ಮಿ, ಆಧ್ಯಾತ್ಮ ವಿದ್ಯಾಮಯಳಾದ ಶ್ರೀ ಸರಸ್ವತಿ, ಅನಂತ ದೇವ, ರುದ್ರ ಕನ್ಯೆಯರು ಸದಾ ಇಷ್ಟ ಲಿಂಗಾರಾಧನೆ ಈಕ್ಷಣೆ, ಧಾರಣೆ, ಧ್ಯಾನಾದಿಗಳಲ್ಲಿ ತತ್ಪರರಾಗಿರುವರು. **ಶ್ರೀ ಗುರುಪಾದವ ಹಿಡಿದಲ್ಲಿ । ಕಾಣದುದ ಕಾಣಬಹುದು ಗುಹೇಶ್ವರಾ ॥**

**ಭೋ ! ಸೋಮೇಶ್ವರಲಿಂಗ ಸಂಭವ । ಸುಧಾಮರ್ಣಧನ್ಯ ಧನ್ಯ ಪ್ರಭೋ । ದಿವ್ಯಜ್ಞಾನ ನಿರಸ್ತ ಮೋಹ ಮಹಿಮರ್ । ನಿತ್ಯೋದಿತಾ ತ್ಮನ್ ಮಹನ್‌ಯೋಗಿ । ಜಂಗಮ ಸಾರ್ವಭೌಮ ಸದಯಂ ಮಾಮು । ದ್ಧರೇತ್ಯುಚರ್ರ । ತಂ ವಂದೇ ಸತತಂ । ಜಗದ್ಗುರು ಮಹಂ । ಶ್ರೀ ರೇಣುಕಂ ಸಿದ್ಧಯೇ ॥**

**ಭೋ ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ। ರಕ್ಷಮಾಂ ಭವ ರೋಗಿಣಂ॥**

ವಿಶ್ವ ಸೃಷ್ಟಿಯಾದಿ ಕಾಲದಲ್ಲಿ ವೇದಾಗಮಗಳ ವಾಙ್ಮಯ, ಭಗವಂತ ನಿಂದ ನಿರ್ಮಾಣವಾಯಿತು. **"ಈ ಶಾನೇನ ಮುಖೇ ನೈವ । ಕಾಮಿಕಾ ದ್ಯಾಗ ಮಸ್ತಥಾ ॥** ಅಂದರೆ ಶಿವನ ಈಶಾನ ಮುಖದಿಂದ ಕಾಮಿಕಾದಿ ಅಖಿಲ ಶಿವಾಗಮಗಳು ಉದ್ಭವಿಸಿದವೆಂದರ್ಥ. ಋಗಾದಿ ಚತುರ್ವೇದಗಳು ಶಿವನ ಮುಖದಿಂದ ನಾದರೂಪದಲ್ಲಿ ಹೊರ ಹೊಮ್ಮಿವೆ. "ಶಿವನ ನಿಶ್ವಾಸವೆನಿಸಿವೆ, ಶಿವಾಗಮಗಳು ॥ **ಆಗತಂ ಶಿವ ವಕ್ತ್ರೇಭ್ಯಃ । ಗತಂತು ಗಿರಿ ಜಾಶ್ರುತೌ॥** ಪಂಚಾನನನ ಶ್ರೀ ಮುಖದಿಂಡ ದಿವ್ಯ ವಚನ ಸಾಹಿತ್ಯ, ಘನ ಜ್ಞಾನ ಭಂಡಾರ ರೂಪದಲ್ಲಿ ಶಾಂಭವಿಗೆ ಆತ್ಮೀಯವಾಗಿ ಬೋಧಿಸಿದ, ಏಕೋತ್ತರಶತ ಸ್ಥಲ ಸಿದ್ಧಾಂತ ಆಧ್ಯಾತ್ಮ ವಿದ್ಯೆಯೆನಿಸಿದೆ. ಈ ಕಾರಣದಿಂದ ೨೮ಶಿವಾಗಮಗಳು ಶಿವನ ಶಾಸನವೆಂದರಿಯ ಬೇಕು. "ಶಿವಶಾಸನಃ ವೇದಸಾರಃ ಶಿವಾಗಮಃ" ಶಿವಶಾಸನ

ವಾದ ವೇದಗಳಿಗೂ ಶಿವಾಗಮಗಳಿಗೂ ಸಮನ್ವಯಾರ್ಥ ಸಮಾನವಾಗಿಯೇ ಗರ್ಭಿತವಾಗಿವೆ. ಇವೆರಡೂ ಏಕಾರ್ಥ ಪ್ರತಿಪಾದಕವೆನಿಸಿವೆ.

**ಏಕ ವಿಜ್ಞಾನೇನ ಸರ್ವ ವಿಜ್ಞಾನಂ ಭವತಿ। ಶಿವಾಗಮಾಶ್ಚ ವೇದಾಶ್ಚ। ನಿತ್ಯ ಏಕ ಪ್ರಮಾಣತಃ॥** ಎಂದು ಈಶಾನ ಶಿವಾಚಾರ್ಯರು ಘೋಷಿಸಿರುವರು. ಶ್ರೀ ಅಪ್ಪಯ್ಯ ದೀಕ್ಷಿತರೂ ಇದೇ ಅಂಶವನ್ನು ದೃಢಪಡಿಸುತ್ತಾ **॥ವೇದ ಶಿವಾಗಮಯೋರ್ಭೇದಂ ನ ಪಶ್ಯಾಮಃ॥** ಎಂದು ಒಪ್ಪಿರುತ್ತಾರೆ. ಲಕ್ಷದ ತೊಂಭತ್ತಾರು ಸಾವಿರ ಗಣಾಧೀಶ್ವರರು, ಅಖಿಲ ಶಿವಪ್ರಮಥರೂ, ಶಿವೋಕ್ತ ಶಿವಾಗಮಗಳ ಮಾರ್ಗಾನುವರ್ತಿಗಳೂ ಶಿವಾಗಮಜ್ಞರು, ಆದ ಈ ಮಹಾನುಭಾವರು, ಶಿವಾಗಮಗಳ ಮಂತ್ರ ಭಾಗಗಳನ್ನು ಕನ್ನಡ ಭಾಷೆಗೆ ಅಚ್ಚುಮೆಚ್ಚಾಗಿ ಭಾಷಾಂತರ ಗೊಳಿಸಿ ಕನ್ನಡ ವಾಙ್ಮಯವನ್ನು ಸಿರಿವಂತಿಕೆ ಗೊಳಿಸಿ ಅಖಂಡ ಶಿವಾನುಭೂತಿಯಿಂದ, ಮಹಿಮಾನ್ವಿತರಾಗಿರುವುದು ಸ್ತುತ್ಯ.

**"ಶೈವಾಗಮಾಂಬುಜ ಭಾಸ್ಕರ"**ರೆಂದು ಶಿವಾಗಮಗಳಲ್ಲಿ ಅಖಂಡವಾಗಿ ಸ್ತುತ್ಯರಾದ ಶ್ರೀ ಆದಿ ಜ॥ ರೇಣುಕಾದಿ ಪಂಚಾಚಾರ್ಯರನ್ನು ಶ್ರೀ ಪಂಚಾನನನೇ ತನ್ನ ಅರ್ಧಾಂಗಿ ಶ್ರೀ ಗಿರಿಜೆಗೆ ವಿವರಿಸುತ್ತಾ, ದೇವಿ! **"ತಸ್ಮಾತ್ತಸ್ಮಾಚ್ಛ ಗಿರಿಜೆ! ಪಂಚಾನನ ಸಮುದ್ಭಾವಾಃ । ಮದಾದಿ ಸರ್ವ ಲೋಕಾನಾಂ। ಜಗದ್ಗುರುವರೋತ್ತಮಾಃ ॥** (ಸ್ವಾಯಂಭು ಆಗಮ) ನನ್ನನ್ನೂ ನನ್ನ ಲೋಕವನ್ನೂ ಹಾಗೂ ನನ್ನಿಂದ ಸೃಜಿಸಿರುವ ಅನಂತ ಲೋಕಗಳಿಗೂ ಶ್ರೀ ರೇಣುಕಾದಿ ಪಂಚಾಚಾರ್ಯರೇ ಜಗದ್ಗುರು ಸಾರ್ವಭೌಮರೆಂದು ಜಗವರಿಯುವಂತೆ ಘೋಷಿಸಿರುವನು. ಇದರಿಂದಾಗಿ ಶ್ರೀ ವಿಷ್ಣು ಬ್ರಹ್ಮಾದಿ ದೇವತೆಗಳು, ಶ್ರೀ ವಸಿಷ್ಠ, ವಾಮದೇವ, ಗೌತಮ, ಆದಿ ಶ್ರೀ ವ್ಯಾಸ, ದೂರ್ವಾಸಾದಿ ಮುನಿವರ್ಯರು, ಅನೇಕ ಶಿವಶರಣರೂ, ಶಿವಯೋಗಿಗಳೂ, ಬ್ರಹ್ಮವಿದ್ವರರೂ, ಪ್ರಸ್ಥಾನತ್ರಯ ಭಾಷ್ಯ ಕರ್ತೃಗಳೂ, ಅವತಾರ ಪುರುಷರೂ, ಅನಾದಿ ಕಾಲದಿಂದ ಅವಿಚ್ಛಿನ್ನವಾಗಿ ಶ್ರೀ ರೇಣುಕಾದಿಪಂಚಾಚಾರ್ಯರನ್ನು ಅನನ್ಯ ಹಾಗು ಅವ್ಯಭಿಚಾರಣೀ ಭಕ್ತಿ ಭಾವದಿಂದ ಪೂಜಿಸಿ, ಸ್ತುತಿಸಿ, ಮಹಾಚಾರ್ಯರ ಕೃಪೆಗೆ ಪಾತ್ರರಾಗಿ ಧನ್ಯರಾಗಿದ್ದಾರೆ. ಅಖಿಲ ದೇವ ದಾನವ ಮಾನವಾದಿಗಳು ಶ್ರೀ ಜ॥ ಪಂಚಾಚಾರ್ಯರ ಕೃಪಾದೀಕ್ಷೆಯಿಂದ ತಂತಮ್ಮ ಅಭೀಷ್ಟ

ಗಳನ್ನು ಪಡೆದು ಶರಣಾಗತರಾಗಿದ್ದಾರೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ ೨೧ ನೇ ಪರಿಚ್ಛೇದ "ಶ್ರೀ ವಿಭೀಷಣಾಭೀಷ್ಟವರಪ್ರದಾನಂ"ವೆಂಬ ಆಚಾರ್ಯರ ಘನ ಲೀಲೆ ಇದಕ್ಕೆ ನಿದರ್ಶನ ವಿರುತ್ತೆ, ಗುರು ರೇಣುಕರಲ್ಲಿ ಶ್ರೀ ವಿಭಿಷಣ ಶರಣಾಗತನಾಗಿದ್ದಾನೆ.

ವಿಶ್ವ ಧರ್ಮವೆನಿಸಿದ ಲಿಂಗಾಂಗ ಸಾಮರಸ್ಯದ ಸುಧಾಮೃತವನ್ನು ದೇವ ದಾನವ ಮಾನವರಿಗೆ ಉಣಬಡಿಸಿ ; ಅಸತ್ತಿನಿಂದ ಸತ್ಸ್ವರೂಪದೆಡೆಗೆ ತಮಸ್ಸಿನಿಂದ ಚಿಜ್ಯೋತಿಯತ್ತ ಆಕರ್ಷಿಸಿ, **"ಮೃತೋರ್ಮಾ ಅಮೃತಂಗಮಯ"** ಮೃತ ಪ್ರಾಯರಾದ ಸಮಸ್ತ ದೇವ ದಾನವ ಮಾನವಾದಿಗಳನ್ನೆಲ್ಲಾ ಶ್ರೀ ಪಂಚಮಹಾಚಾರ್ಯರು ಅಮರರನ್ನಾಗಿಸಿ, ಅಮೃತ ಸ್ವರೂಪಿಗಳನ್ನಾಗಿಸಿ ಅನುಗ್ರಹಿಸಿರುವರು. ಶ್ರೀ ವಿಷ್ಣು ಬ್ರಹ್ಮಾದಿ ದೇವತೆಗಳೂ, ವಸಿಷ್ಠ ವಾಮದೇವ, ವಿಶ್ವಾಮಿತ್ರ, ಅತ್ರಿ, ಭರದ್ವಾಜ, ಗೌತಮಾದಿ, ಋಷಿಗಳೂ, ಶ್ರೀ ಆಗಸ್ತ್ಯ, ಶ್ರೀ ವ್ಯಾಸ, ಶ್ರೀ ದೂರ್ವಾಸ, ಶ್ರೀ ದಧೀಚಿ, ಶ್ರೀ ಸಾನಂದಾದಿ ಮುನಿಗಳೂ, ಮಾಂಧಾತಾದಿ ಚಕ್ರವರ್ತಿಗಳೂ, ರಾಜ ಮಹಾ ರಾಜರೂ, ಮುನಿಜನ, ಸಿದ್ಧಜನ. ಬ್ರಹ್ಮಜನ, ದೇವಜನ, ಪ್ರಸ್ಥಾನ ತ್ರಯಂಗಳ ಭಾಷ್ಯ ಕರ್ತೃಗಳೂ, ಇತ್ಯಾದಿ ಅನಂತ ಭಕ್ತವೃಂದದವರು ಕಾಲ ಕಾಲಕ್ಕೆ ಶ್ರೀ ಜ|| ಪಂಚಾಚಾರ್ಯರನ್ನು ಅವ್ಯಭಿಚಾರಿಣಿ ಭಕ್ತಿ ಭಾವದಿಂದ ಸ್ತುತಿಸಿ, ಸ್ತುತಿಸಿ, ಪೂಜಿಸಿ ಅನನ್ಯ ಭಾವೇನ ಶರಣಾಗತರಾಗಿದ್ದಾರೆ. ಇದರಂತೆಯೇ ಶಿವಶರಣರೂ ಪಂಚಾಚಾರ್ಯರನ್ನು ಅತೀವಭಕ್ತಿ ಭಾವದಿಂದ ತಮ್ಮ ವಚನ ವಾಙ್ಮಯದಲ್ಲಿ ಹಾಡಿಪಾಡಿ ಕೊಂಡಾಡಿ ವಿಜೃಂಭಿತರಾಗಿ ಆನಂದಿಸಿರುತ್ತಾರೆ. ಇವರು ಶ್ರೀ ವೀರ ಮಾಹೇಶ್ವರ ಗುರುವರ್ಗದವರಲ್ಲಿಟ್ಟ ಅಭೂತ ಪೂರ್ವವಾದ ಗುರುಭಕ್ತಿ ದೃಢಪಟ್ಟಿದೆ. ಗುರುಗಳ ಆಜ್ಞೆಯಂತೆ ಅನೇಕರು ಗುರೂಕ್ತಿಯಂತೆ ವೀರಶೈವ ಧರ್ಮಸಾಮ್ರಾಜ್ಯದ ಶ್ವೇತ ಛತ್ರಿಯೊಳಗಿದ್ದು, ಲಿಂಗಿಧರ್ಮವನ್ನು ಶಕ್ತಿ ಮೀರಿ ಪುನಃರೋದ್ಧಾರ ಮಾಡಿ, ಪ್ರಾಥಃ ಸ್ಮರಣೀಯರೆನಿಸಿರುವರು.

**"ಪೂರ್ವಂ ಸೃಷ್ಟಿ ಸಮುದ್ಭವಾ। ಪರಶಿವಾದುದ್ಭೂಯ ಸದ್ವೈಭವಾತ್ । ಸಿದ್ಧಾಂತಂ ಶೃತಿಸಿದ್ಧ ಮುದ್ಭೃತ ತಮಂ। ಸಂಸ್ಥಾಪ್ಯ ಸಂ ವಿಶ್ರುತಾಃ ॥ ಸಿದ್ಧ ಸ್ಥೋಮ ಸುರದ್ರುಮಾಃ ಸುರ। ವರ್ಯೈಃ ಸಂ ಸೇವ್ಯ ಮಾನಾಃ ಸದಾ। ಪಂಚಾಚಾರ್ಯ ಗುರೂತ್ತಮಾಃ। ಸ ಕರುಣಂ ಸಿದ್ಧಿಂ ವಿತನ್ವಂತುಮೇ"**

**"ಭೋ ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ। ರಕ್ಷಮಾಂ ಭವ ರೋಗಿಣಂ॥**

ಓಂ ! ಪರಮ ಜಗದಾಚಾರ್ಯವರೇಣ್ಯ ಶ್ರೀ ರೇಣುಕ ಪರಂಜ್ಯೋತಿ, ಆದಿ ಅಗಸ್ತ್ಯಮುನಿ ಚಂದ್ರನಿಗೆ ಶಿವಾದ್ವೈತಸಿದ್ಧಾಂತ ಸಾರಾಮೃತವನ್ನು **ಧ್ಯಾತ್ವಾ ಕ್ಷಣಂ ಮಹಾ ದೇವಂ । ಸಾಂಬಮಾಹ ಸಮಾಹಿತಃ.॥** ಉಮಯಾ ಸಹಿತನಾದ ಶ್ರೀ ಸಾಂಬ ಶಿವನನ್ನು ಸ್ಮರಿಸಿ ಪ್ರಸನ್ನಭಾವದಿಂದ ಬೋಧಿಸಲುಪಕ್ರಮಿಸಿದರು. ಪ್ರಥಮ ಪರಿಚ್ಛೇದ **"ಶಿವ ಸ್ತುತಿ"** ಏಳು ಶ್ಲೋಕಗಳಿಂದ ಸ್ತುತಿಸಲಾಗಿದೆ.

**ತ್ರೈಲೋಕ್ಯ ಸಂಪದಾಲ್ಲೇಖ್ಯ ಸಮುಲ್ಲೇಖನ ಭಿತ್ತಯೇ।**
**ಸಚ್ಚಿದಾನಂದ ರೂಪಾಯ । ಶಿವಾಯ ಬ್ರಹ್ಮಣೇ ನಮಃ ॥"**

"**ತ್ರೈಲೋಕ್ಯ**" ವೆಂದರೆ ಮೂರು ಲೋಕಮಾತ್ರವೆಂದರ್ಥವಲ್ಲ. ಪುರುಷ ಸೂಕ್ತದಲ್ಲಿ **"ಓಂ ಸಹಸ್ರ ಶೀರ್ಷಾ ಪುರುಷಃ ॥"** ಎಂಬ ಕಡೆ ಕೇವಲ ಸಾವಿರ ತಲೆಯುಳ್ಳವನೆಂದು ಅರ್ಥೈಸದೆ, ಅನಂತ ಶಿರಗಳುಳ್ಳ ಪರಮಾತ್ಮನೆಂಬಂತೆ, ಇಲ್ಲಿ ತ್ರೈಲೋಕ್ಯವೆಂದರೆ ಅನಂತಾನಂತ ಲೋಕಗಳ ಕೋಟ್ಯಾಂತರ ಸೃಷ್ಟಿಯೊಳಗಣ ಬ್ರಹ್ಮಾಂಡಗಳ ಸಂಪದ್ಯುಕ್ತ ಹಾಗೂ ವಿಶ್ವೋತ್ತರೋತ್ತರ ಚಿತ್ರಣದ ಸದ್ಭಾವಕ್ಕೆ ಉದಯಕ್ಕೆ ಮೂಲ ಕಾರಣವಾದ ಭಿತ್ತಿ (ಬೀಜ) ಅಂದರೆ ಚರಾಚರಾತ್ಮಕ ವಾದೀ ಅಖಂಡ ವಿಶ್ವದ ಮನಮೋಹಕ ಚಿತ್ರದ ಸದ್ಭಾವಕ್ಕೆ ರಚನಾ ಕೌಶಲ್ಯಕ್ಕೆ, ಸಂರಕ್ಷಣೆಗೆ ಮೂಲ ಸ್ಥಂಭಾಯ ಮಾನವಾದ

ಪರಶಿವ ಪರಾತ್ಪರ ವಸ್ತುವನ್ನು "ಭಿತ್ತಿ" ಯೆಂದು ಸ್ತುತಿಸಲಾಗಿದೆ. ಇದು ಸ್ವಯಂ ಸಿದ್ಧವಾದ ಆದಿ ಮಧ್ಯಾಂತ ರಹಿತವಾದುದಾಗಿ ಗುಣಾತೀತ, ರೂಪಾತೀತ, ನಾಮಾತೀತ, ನಿರವಯಾತ್ಮಕ ಪಿಂಡವೆನಿಸಿದೆ. ವೀರಶೈವ ಸಿದ್ಧಾಂತ ಪ್ರಥಮತಃ ಅರಂಭವಾಗುವುದು ಅದ್ವಿತೀಯವಾದೀ ತತ್ವ ವಿಚಾರ ವಿನಿಮಯ ದಿಂದ ಎಂಬುದು ಗಮನಾರ್ಹವಿರುತ್ತೆ. ಭಕ್ತಸ್ಥಲದ ೧೫ ಉಪಸ್ಥಲಗಳಲ್ಲಿ "ಪಿಂಡ" ಪ್ರಥಮ ಉಪಸ್ಥಲವೆನಿಸಿದೆ. ಪಿಂಡ ಮೂರು ಪ್ರಕಾರವಾಗಿ ವಿಂಗಡಿಸಲಾಗಿದೆ. ಸಾಮಾನ್ಯ ಪಿಂಡ, ವಿಶೇಷ ಪಿಂಡ ಮತ್ತೂ ಬ್ರಹ್ಮಪಿಂಡ. ದೇಹ ಜೀವರ ಬೆಸುಗೆ ಸಾಮಾನ್ಯ ಪಿಂಡ ಜೀವದೇವನ ಬೆಸುಗೆ ವಿಶೇಷ ಪಿಂಡವೆಂದೂ ಶ್ರೀ ಮಹಾಗುರುವಿನ ಹಸ್ತಮಸ್ತಕ ಸಂಯೋಗ ಮತ್ತೂ ಕರುಣಾಕಟಾಕ್ಷ ದೀಕ್ಷೆಯಿಂದ ಜೀವನು (ಅಂಗನು) ಶಿವನಾಗುವ (ಲಿಂಗವಾಗುವ) ಪರಮೋನ್ನತ ಸ್ಥಿತಿ ದೇವಪಿಂಡ ಅಥವಾ ಬ್ರಹ್ಮಪಿಂಡವೆಂದು ವಿವರಿಸಲಾಗಿದೆ. ಜಗದಾಚಾರ್ಯ ಶ್ರೀ ರೇಣುಕರು,

**ಬಹು ಜನ್ಮ ಕೃತೈಃ ಪುಣ್ಯೈಃ । ಪ್ರಕ್ಷೀಣೇ ಪಾಪ ಪಂಜರೇ ।**
**ಶುದ್ಧಾಂತಃ ಕರಣೋ ದೇಹೀ । ಪಿಂಡಶಬ್ದೇನ ಗೀಯತೇ ॥**

(ಸಿ. ಶಿ. ಪರಿ ೫ ಶ್ಲೋ ೩೧)

ಎಂದು ಅಪ್ಪಣೆ ಕೊಡಿಸಿರುವರು. ಇಂತಪ್ಪ ಬ್ರಹ್ಮಪಿಂಡವನ್ನು ಶೃತಿ ಮಾತೆ ಭಿತ್ತಿ (ಜಗದುತ್ಪತ್ತಿಗೆ ಬೀಜ) ಎಂದು ಘೋಷಿಸಿರುವಳು. ಭಗವದ್ಗೀತೆಯಲ್ಲಿ "**ಬೀಜಂಮಾಂ ಸರ್ವಭೂತಾನಾಂ**" ಎಂದರೆ ಅಂಡಾಂಡ ಪಿಂಡಾಂಡಗಳ ಉತ್ಪತ್ತಿಗೆ ನಿಧಿನಿಕ್ಷೇಪಾದಿಗಳಿಗೆ ಕಣ್ಮನಂಗಳ ಸೂರೆಗೊಳ್ವ ವಿಚಿತ್ರಾಯಮಾನ ಚಿತ್ರಣಕ್ಕೆ, ಸಂಪದ್ಭರಿತ ಸೌಂದರ್ಯಕ್ಕೆ ಮೂಲ ಭೂತವಾದ ಸ್ವಯಂ ಸಿದ್ಧವೆನಿಸಿದ ಪರವಸ್ತು "ಭಿತ್ತಿ"ಯೆನಿಸಿದೆ. ಇದನ್ನು ಬ್ರಹ್ಮಪಿಂಡವೆನ್ನುವರು.

ಋಗ್ವೇದದಲ್ಲಿ ಒಂದು ಮಂತ್ರವಿದೆ. ಈ ಮಂತ್ರಾರ್ಥವೇನೆಂದರೆ ಸದಾಸತ್ತುಗಳ ಸೃಷ್ಟಿಗೆ ಮೊದಲು, ಇದ್ದೂ ಇಲ್ಲವೆಂದೆನಿಸುವ ಅಖಂಡಾದ್ವಿತೀಯ ವಸ್ತು ವಿಮರ್ಶ ಶಕ್ತಿಯುತ ಸ್ಫುರಣಮಯ ಪರವಸ್ತು ಗೋಚರವಾಯಿತು. ಮಂತ್ರದ್ರಷ್ಟಾರರಾದ ಋಗ್ವೇದ ಕಾಲದ ಮಹರ್ಷಿಗಳು ಈ ಚಿದ್ಘನ ಲಿಂಗವಸ್ತುವನ್ನು ಪಿಂಡವೆಂದು ನಾಮಕರಣ ಮಾಡಿದರು. ಈ

ಪಿಂಡಕ್ಕೆ ಅಂಗ ಅವಯವಗಳಿಲ್ಲ ಇದೊಂದು ಬ್ರಹ್ಮಾಂಡವಾದ ತೇಜಸ್ಸು ಸ್ವಯಂ ಸಿದ್ಧವಾದ ಭಿತ್ತಿ ಎಂದು ನಂಬಿದರು. ಚಿಚ್ಛಕ್ತಿಯುತವಾದ ಪಿಂಡ ವಿದೆಂದರಿತರು. ಇಚ್ಛಾ ಶಕ್ತಿ, ಜ್ಞಾನ ಶಕ್ತಿ, ಕ್ರಿಯಾಶಕ್ತಿಗಳು ಈ ಚಿದ್ವಸ್ತುವಿನ ಗರ್ಭದಿಂದ ಆವಿರ್ಭವಿಸಿದ ದಿವ್ಯ ತರಂಗಗಳೆಂದು ತಮ್ಮ ಶಿವಯೋಗ ಶಕ್ತಿಯಿಂದ ಅರಿತರೆಂದು ಪ್ರತಿಪಾದಿಸಲಾಗಿದೆ.

ಶಿವಾಗಮಾದಿಗಳಲ್ಲಿ ಅಖಂಡ ಪರಿಜ್ಞಾನಿಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರು ಪರಶಿವ ಬ್ರಹ್ಮಮಯವಾದೀ ಭಿತ್ತಿಯನ್ನು ಭಕ್ತಿಪೂರ್ವಕ ನಮಸ್ಕರಿಸುತ್ತಾ **"ಸಚ್ಚಿದಾನಂದ ರೂಪಾಯ । ಶಿವಾಯ ಬ್ರಹ್ಮಣೇ ನಮಃ"** ಎಂದು ಸ್ತುತಿಸಿರುವರು.

## ಶಕ್ತಿ ಸ್ತುತಿ

ಶಿವನ ಅರ್ಧಾಂಗಿಯಾದ ಶಕ್ತಿಮಾತೆಯನ್ನು ಸ್ಮರಿಸಿ ಐದು ಶ್ಲೋಕಗಳಲ್ಲಿ ವಂದಿಸಿರುವರು. **||ಯಾ ಮಾಹುಃ ಸರ್ವ ಲೋಕಾನಾಂ । ಪ್ರಕೃತಿಂ ಶಾಸ್ತ್ರ ಪಾರಗಾಃ ॥ ತಾಂ ಧರ್ಮಚಾರಿಣೀಂ ಶಂಭೋಃ ॥ ಪ್ರಣಮಾಮಿ ಪರಾಂ ಶಿವಾಂ ॥ ಅಮೃತಾರ್ಥಂ ಪ್ರಪನ್ನಾನಾಂ । ಯಾ ಸುವಿದ್ಯಾ ಪ್ರದಾಯಿನೀಂ । ಅಹರ್ನಿಶಮಹಂ ವಂದೇ ತಾಮೀಶಾನ ಮನೋರಮಾಂ ||** ಶಕ್ತಿ ಸ್ತುತಿಯಲ್ಲಿ ದೃಶ್ಯಾದೃಶ್ಯ ಲೋಕಂಗಳೆಲ್ಲಾ ಯಾವ ದೇವಿಯ ಕಟಾಕ್ಷ ಲವಲೇಶ ಮಾತ್ರೇಣ ಪ್ರಾದುರ್ಭವಿಸಿರುವುವೋ ಮತ್ತೂ ಯಾರನ್ನು ಶಾಸ್ತ್ರ ಪಾರಂಗತರು ಶಂಭುವಿನ, ಧರ್ಮಚಾರಿಣಿಯೆಂದು ಶಿರಬಾಗಿ ಭಕ್ತಿಪೂರ್ವಕ ನಮಸ್ಕರಿಸಿರುವರೊ, ಅಂತಪ್ಪ ಶಾಂಭವಿಯನ್ನು ನಮಸ್ಕರಿಸಿರುವರು. ಶರಣಾಗತರಾದ ಭಕ್ತರ ಪಾಲಿಗೆ ದೇವಾಮೃತ ಸ್ವರೂಪಿಣಿ ಮತ್ತೂ ಸಕಲ ವಿದ್ಯೆಗಳನ್ನು ದಯಪಾಲಿಸುವ ಅಧ್ಯಾತ್ಮ ವಿದ್ಯಾಮಯಳಾದ ಹಾಗೂ ಸರ್ವೇಶ್ವರನ ಮಾನಸ ರಾಜಹಂಸ ಸ್ವರೂಪಿಣಿಗೆ ಅನನ್ಯ ಭಕ್ತಿ ಭಾವದಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ನಮಸ್ಕರಿಸಿರುವರು. ಪರಾಶಕ್ತಿಯನ್ನು **"ತಾಂ ಧರ್ಮಚಾರಿಣೀಂ"** ಎಂದು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃ ಪ್ರಸಂಶಿಸಿದರೆ, ಶ್ರೀ ಮದ್ವಾಲ್ಮೀಕಿ ರಾಮಾಯಣದ ಶ್ರೀ ಸೀತಾ

ಸ್ವಯಂವರ ಮಂಟಪದಲ್ಲಿ ಶ್ರೀ ಜನಕ ಮಹಾರಾಜನು ಶ್ರೀ ರಾಮನ ಅಮೃತ ಹಸ್ತದಲ್ಲಿ ವಧು ಶ್ರೀ ಸೀತೆಯ ಕರವನ್ನಿರಿಸುತ್ತಾ,

**"ಇಯಂ ಸೀತಾ ಮಮಸುತಾ । ಸಹ ಧರ್ಮ ಚರೀತವಾ ॥**

**ಪ್ರತೀಚ್ಛಚ್ಛೈನಂ ಭದ್ರಂತೇ । ಗೃಹ್ಣಿಂ ಪಾಣಿಂ ಸ್ವಪಾಣಿನಾ ॥**

ಹೇ ರಾಮಾ ! ನನ್ನ ಸಾಕು ಮಗಳಾದ ಈ ಸೀತೆಯ ಹಸ್ತವನ್ನು ನಿನ್ನ ಹಸ್ತದಿಂದ ಹಿಡಿ. ನಿಮಗೆ ಮಂಗಳವುಂಟಾಗಲಿ. ಸೀತೆ ನಿನ್ನ ಇಂಗಿತ ವನ್ನರಿತು **"ಸಹ ಧರ್ಮ ಚರೀತವ"** ನಿನ್ನ ನೆರಳಿನಂತೆ ನಿನ್ನ ಮನೋ ಧರ್ಮಕ್ಕೆ ಅನುಗುಣವಾಗಿ ನಡೆದು ಕೊಳ್ಳುವಳೆಂದು ಅರುಹಿರುವನು. ಅಂದ ಬಳಿಕ ಶಕ್ತಿ ದೇವಿಯರು ಪತಿಯ ಮನೋ ಧರ್ಮಕ್ಕನುಗುಣವಾಗಿ ವರ್ತಿಸಿ, **"ದಂಪತಿ ಭಾವ ರಮ್ಯಂ"** ವೀಳ್ಯೇದೆಲೆಯ ಕೋಮಲವಾದ ಬಳ್ಳಿ ಅಡಿಕೆ ಮರವನ್ನು ಆಶ್ರಯಿಸಿ, ಬಳ್ಳಿ ಅಡಿಕೆ ಮರವನ್ನು ಆಶ್ರಯಿಸಿ ಸಂಪದ್ಯುಕ್ತಕರ ವಾಗಿ ಪರಿಶೋಭಿಸುವಂತೆ, ಸಾಧ್ವೀಮಣಿ, ಪತಿಯ ಇಂಗಿತವನ್ನರಿತು ಸೇವಾ ತತ್ಪರಳಾದರೆ ಆ ಸಂಸಾರ || ಸಾನಂದಂ ಸದನಂ | ಸು ತಾಶ್ಚ ಸುಧೀ ಯಃ। ಕಾಂತಾ ನ ದುರ್ಭಾಷಿಣೀ । ಸನ್ಮಿತ್ರಂ ಸಧನಂ ಸ್ವಯೋ ಶಿತಿ ರತಿ ಶ್ಚಾಜ್ಞಾ ಪರಃ ಸೇವಕಾಃ । ಆಥಿತ್ಯಂ ಶಿವ ಪೂಜನರಿ ಪ್ರತಿ ದಿನೇ ಇಷ್ಟಾನ್ನ ಪಾನಂ ಗೃಹೇ | ಸಾಧೋಸ್ಸಂಘ ಮುಪಾಸ ತೇ ಹಿ ಸತತಂ। ಧನ್ಯೋ ಗೃಹ ಸ್ಯಾ ಶ್ರಮಃ || ಎಂಬಂತೆ ಶೋಭಾಯಮಾನವಾಗುವುದು.

**ಶ್ರೀಮರ್ಾ ಸೋಮೇಶ ಲಿಂಗೋತ್ಥಿತ । ವಪುರಖಿಲ ಶ್ಲಾಘನೀ**
**ಯಾನು ಭಾವಃ । ಸಿದ್ಧಾನಾಂ ಸಾರ್ವಭೌಮಃ ಪ್ರವಿತತ ।**
**ತಪಸಾಮಾಕರಃ ಸಾಧುಭಾವಃ । ಶೈವಾದ್ವೈತ ಪ್ರತಿಷ್ಠಾ ಚಣ**
**ಮತಿರಮಲ। ಜ್ಞಾನ ಭೂತಿರ್ನಿರೀತಿಃ। ದಧ್ಯಾಚ್ಛ್ರೀ ರೇಣುಕಾ**
**ಖ್ಯೋಗುರುವರಃ । ಚರಣ ; ಸಮ್ಯಗಿಷ್ಟಾರ್ಥಸಿದ್ಧಿಂ ॥**
**ಭೋ ! ಕಲ್ಯಾಣ ಮಹಾ ಭಾಗ । ಶಿವಜ್ಞಾನ ಮಹೋದಧೇ।**
**ಆಚಾರ್ಯವರ್ಯ ಸಂಪ್ರಾಪ್ತಂ । ರಕ್ಷಮಾಂ ಭವರೋಗಿಣಂ॥**

**(ಸಿ. ಶಿ. ಅ. ೬ ಶ್ಲೋ ೯)**

# ಗ್ರಂಥ ಕರ್ತುಃ ಶಿವಯೋಗಿ ಶಿವಾಚಾರ್ಯಸ್ಯ ವಂಶವರ್ಣನಂ

**ಆಸೀ ದಾಚಾರ ಸಿದ್ಧಾನಾಮಗ್ರಣೀಃ ಶಿವಯೋಗಿನಾಂ।**
**ಶಿವಯೋಗೀತಿ ವಿಖ್ಯಾತಃ ಶಿವಜ್ಞಾನ ಮಹೋದಧಿಃ ॥**
(ಸಿ. ಶಿ. ಪರಿ.೧ ಶ್ಲೋ ೧೩)

ಗ್ರಂಥಕರ್ತೃ ಶ್ರೀ ಶಿವಯೋಗಿ ಶಿವಾಚಾರ್ಯರ ವಂಶ ವೃತ್ತಾಂತ ಪವಿತ್ರವೆನಿಸಿದೆ. ಇವರ ಮುತ್ತಾತ ಶ್ರೀ ಶಿವಯೋಗಿ ಶಿವಾಚಾರ್ಯರು, ಆಗಮಾಮ್ನಾಯಾದಿ ವಿಷಯಗಳಲ್ಲಿ, ಆಚಾರ ಸಿದ್ಧರಲ್ಲಿ ಅಗ್ರ ಗಣ್ಯರೆನಿಸಿ ಸ್ತುತ್ಯರಿದ್ದರು. ಇವರು ಶ್ರೀ ಜ|| ಪಂಚಾಚಾರ್ಯರ ಗುರುಪರಂಪರೆಗೆ ಸೇರಿದ ಪರಮ ಶಿವಾಚಾರ್ಯವರ್ಯರು, ಇವರ ಸುಪುತ್ರ,

**ಮುದ್ದ ದೇವಾಭಿದಾಚಾರ್ಯೋ। ಮೂರ್ಧನ್ಯಃ ಶಿವಯೋಗಿನಾಂ ॥**

ಶಿವಯೋಗಿಗಳಲ್ಲಿ ಪ್ರಮುಖರೆನಿಸಿದ ಮುದ್ದದೇವಾಚಾರ್ಯಯೆಂಬ ಹೆಸರಿನ ಪರಮಾಚಾರ್ಯರು, ಈ ಹೆಸರಿನಿಂದ ಇವರು ಕರ್ನಾಟಕದವರೆಂದು ವ್ಯಕ್ತವಾಗುತ್ತೆ, ಭಾರತದ ಕಟಿ ಪ್ರದೇಶದಂತಿರುವ ಕರ್ನಾಟಕ ರಾಜ್ಯ, ರಾಮಾಯಣ, ಮಹಾಭಾರತ ಕಾಲಗಳಿಂದಲೂ, ಆಧ್ಯಾತ್ಮಿಕ ವಿಚಾರದ ಬೆಳವಣಿಗೆಗೆ ಪ್ರಮುಖ ಕ್ಷೇತ್ರವಿರುತ್ತೆ, ವೀರಶೈವ ಸಿದ್ಧಾಂತದ ಬೆಳವಣಿಗೆಗೆ, ಪ್ರಚಾರಕ್ಕೆ ವೀರಶೈವಾಚಾರ್ಯರ ಧರ್ಮ ಪ್ರತಿಪಾದನೆಗೆ ಕರ್ನಾಟಕ ತವರು ಕ್ಷೇತ್ರವೆನಿಸಿರುತ್ತೆ. ಶ್ರೀ ಮುದ್ದದೇವ ಶಿವಾಚಾರ್ಯರು ಸರ್ವರಿಗೂ ಹಿತವನ್ನೇ ಬಯಸುತ್ತಾ, ಲಿಂಗಾಂಗ ಸಾಮರಸ್ಯ ಸಿದ್ಧಾಂತವನ್ನು ಸುಲಿದ ಬಾಳೆಯ ಹಣ್ಣಿನಂದದಿ ಎಲ್ಲರಿಗೂ ಹಿತವಾಗಿ ಬೋಧಿಸುತ್ತಾ, ಜನಪ್ರಿಯರಾದ್ದರಿಂದ **"ಮುದ್ದಾನಾತ್ ಸರ್ವ ಜಂತೂನಾಂ। ಪ್ರಣತಾನಾಂ ಪ್ರಬೋಧತಃ"** ಅನೇಕರಿಂದ ಸ್ತುತ್ಯರೂ ವಂದನೀಯರಾಂ ಆಗಿದ್ದರು. ಶ್ರೀ ಮುದ್ದದೇವಾಚಾರ್ಯರ ಮಗ **"ಶಾಂತಃ ಸಿದ್ಧನಾಥಾ ಭಿದಃ ಶುಚಿಃ"**. ಪರಮಶಾಂತನೂ ವೀರಶೈವಾಚಾರ ಸಂಪನ್ನನೂ, ಶುಚಿರ್ಭೂತನೂ, ಮೇಧಾವಿಯೂ ಆಗಿದ್ದರು.

ಸಿದ್ಧನಾಥ ಶಿವಾಚಾರ್ಯರು ತಮ್ಮ ಪೂರ್ವಿಜರಂತೆ ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ಅದ್ವಿತೀಯ ಪಾಂಡಿತ್ಯ ಪ್ರತಿಭೆಗಳಿಂದ ಜನತೆಯ ಹೃದಯ ಭೂಮಿಕೆಯಲ್ಲಿ ಆಚಾರ ವಿಚಾರ ಸರಣಿಗಳಿಂದ ಪ್ರಿಯತಮವೆನಿಸುವ ರೀತಿಯಲ್ಲಿ ಬೋಧಿಸುತ್ತಾ, ಇಪ್ಪತ್ತೆಂಟು ಶಿವಾಗಮಗಳ ಸಾರಸರ್ವಸ್ವವನ್ನು ಪ್ರಚಾರ ಪಡಿಸುತ್ತಾ ಶ್ರೀ ಸಿದ್ಧನಾಥ ಶಿವಾಚಾರ್ಯರು,

**ವೀರಶೈವ ಶಿಖಾರತ್ನಂ ವಿಶಿಷ್ಟಾಚಾರ ಸಂಪದಂ ।**
**ಶಿವಜ್ಞಾನ ಮಹಾಸಿಂಧುಂ । ಯಂ ಪ್ರಶಂಸಂತಿ ದೇಶಿಕಾಃ ॥**
(ಸಿ. ಶಿ. ಪರಿ. ೧ ಶ್ಲೋ ೧೮).

ಶಿವಜ್ಞಾನ, ಶಿವವ್ರತ, ಶಿವಪೂಜೆ, ಶಿವಮಂತ್ರ ಜಪ ಹಾಗೂ ನಿರಂತರ ಶಿವಧ್ಯಾನಾದಿ ಶಿವಯೋಗದಲ್ಲಿ ತಲ್ಲೀನರಾಗಿ, ಶರಣಾಗತರಾದ ಭಕ್ತ ಕೋಟಿಯನ್ನು ತಮ್ಮೊಂದಿಗೆ ಕೈಹಿಡಿದು, ತಮಸ್ಸಿನಿಂದ ಜ್ಯೋತಿರ್ವಲಯದತ್ತ ಮತ್ತೂ **"ಮೃತೋರ್ಮಾ ಅಮೃತಂ ಗಮಯಾ"** ಶಿವಪೂಜೆಯಿಂದಲೇ ಜೀವ ಶಿವನಾಗುವನೆಂಬ ಮಾರ್ಗವನ್ನು ಸತತ ಬೋಧಿಸುತ್ತಾ ಇಷ್ಟಲಿಂಗಾರಾಧನೆಯ ಮಹತ್ವವನ್ನು ಸ್ತ್ರೀ ಪುರುಷರಾದಿಯಾಗಿ ಸಮಸ್ಥರಿಗೂ ಸ್ವಚ್ಛಂಧವಾಗಿ ಉಪದೇಶಿಸುತ್ತಲಿದ್ದರು.

## ಶ್ರೀ ಶಿವಯೋಗಿ ಶಿವಾಚಾರ್ಯ ವರ್ಣನಂ

**ಯದಾಚಾರ್ಯ ಕುಲೇಜಾತಾ । ಸತಾಂಮಾಚಾರಮಾತೃಕಾ ।**
**ಶಿವ ಭಕ್ತಿಃ ಸ್ಥಿರಾಯಸ್ಮಿನ್ । ಜಜ್ಞೇವಿಗತ ವಿಪ್ಲವಾ ॥**

ಇಂತಪ್ಪ ಪರಮವೀರ ಮಾಹೇಶ್ವರ ಸಂತತಿಯಲ್ಲಿ ಶ್ರೀ ಸಿದ್ಧನಾಥ ಶಿವಾಚಾರ್ಯರಿಗೆ ಶಿವಜ್ಞಾನ ಮತ್ತೂ ಶಿವಭಕ್ತಿಗಳಲ್ಲಿ ಅಪಾರ ಜ್ಞಾನಾನುಭವವುಳ್ಳ ಸುಕುಮಾರನೊಬ್ಬನು ಸಮುದ್ರದಿಂದ ಪೂರ್ಣ ಚಂದ್ರನುದಯಿಸಿದಂತೆ ಅವತರಿಸಿದನು. ಸಿಂಹದ ಗರ್ಭದಲ್ಲಿ ಸಿಂಹ ಹುಟ್ಟುವಂತೆ ಶ್ರೀ ವೇದಾಗಮ ವೀರಶೈವ ಸರಣಿಯಲ್ಲಿ ಪ್ರಕಾಶಿತರಾದ ಪಂಡಿತ ಸಂತತಿಯ ಶಿವಾಚಾರ್ಯರ ಸತ್ಕೀರ್ತಿಯನ್ನು ಗೌರೀಶಂಕರ ಎತ್ತರಕ್ಕೆ ಎತ್ತಿಹಿಡಿದ ಮಹೋದಯರು ಶ್ರೀ ಶಿವಯೋಗಿ ಶಿವಾಚಾರ್ಯರೆಂಬ ತನುಜನು ಪ್ರಕಾಶಿತನಾದನು. ಈತನು

ತನ್ನ ತಂದೆ ಶ್ರೀ ಸಿದ್ಧನಾಥ ಶಿವಾಚಾರ್ಯ, ತಾತ ಶ್ರೀ ಮುದ್ದದೇವ ಶಿವಾಚಾರ್ಯ ಹಾಗೂ ಮುತ್ತಾತ ಶ್ರೀ ಶಿವಯೋಗಿ ಶಿವಾಚಾರ್ಯರುಗಳು, ಅಭ್ಯಸಿಸಿ, ಆಚರಿಸಿ, ಬೋಧಿಸಿ, ತೋರಿಸಿ ಕೊಟ್ಟ ಶ್ರೀ ಷಟ್‌ಸ್ಥಲ ಸಿದ್ಧಾಂತದ ಸನ್ಮಾರ್ಗವನ್ನು ಅನುಕ್ರಮವಾಗಿ ಪೈಗೂಡಿಸಿಕೊಂಡು ಪ್ರಬುದ್ಧರಾದರು.

**ಶಿವಾಗಮ ಪರಿಜ್ಞಾನ । ಪರಿಪಾಕಸು ಗಂಧಿನಾ ।**
**ಯದೀಯ ಕೀರ್ತಿ ಪುಷ್ಪೇಣ । ವಾಸಿತಂ ಹರಿತಾಂ ಮುಖಂ॥**
(ಶ್ಲೋ ; ೨೨)

ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಕರ್ತೃಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರ ಕೀರ್ತಿ ಕುಸುಮದ ಮಕರಂದದ ಪರಾಗ ಪರಿಮಳ ನಾಲ್ಕು ದಿಕ್ಕುಗಳಲ್ಲಿ ಪಸರಿಸಿ ಪಲ್ಲವಿಸಿ ಫಲಭರಿತವಾಗಿ ಪ್ರಫುಲ್ಲಕರದಿಂದ ರಾರಾಜಿಸುವಂತೆ, ಶ್ರೀ ಮದಾಚಾರ್ಯವರೇಣ್ಯರ ಸ್ವಾನುಭೂತಿಯಲ್ಲಿ ಪ್ರಕಟವಾದ ಶಿವಾಗಮೋಕ್ತ ಪರಿಜ್ಞಾನದ ಸುಗಂಧಯುತವಾದ ಪರಿಪಾಕ ಸರ್ವಾದರಣೀಯವೆನಿಸಿತ್ತು. ಇಂತಪ್ಪ ಶ್ರೀ ಶಿವಯೋಗಿ ಶಿವಾಚಾರ್ಯರಿದ್ದ ಕಾಲ ಯಾವುದೆಂಬ ಬಗೆಗೆ ನಿರ್ದಿಷ್ಟವಾಗಿ ಕಂಡು ಬಂದಿಲ್ಲ. ಆದರೂ,

**ಏನ ರಕ್ಷಾವತೀ ಜಾತಾ । ಶಿವಭಕ್ತಿಃ ಸನಾತನೀ ।**
**ಬೌದ್ಧಾದಿ ಪ್ರತಿಸಿದ್ಧಾಂತ । ಮಹಾಧ್ವಾಂತಾಂಷು ಮಾಲಿನಾ॥**
(ಸಿ. ಶಿ. ಅ. ೧ ಶ್ಲೋ ೨೩)

ಈ ಶ್ಲೋಕದಿಂದ ಕಂಡು ಬರುವುದೇನೆಂದರೆ ಕ್ರಿ. ಪೂ. ಕಾಲದಲ್ಲಿ ಬೌದ್ಧಾದಿನಿರೀಶ್ವರ ಮತಗಳು ಭಾರತಾದ್ಯಂತ ವ್ಯಾಪಕವಾಗಿ ವೇದಗಮಾದಿಗಳಲ್ಲಿ ಪ್ರೋಕ್ತವಾದ ವೈದಿಕ ಪಾಶುಪತಾದಿ ಮತಗಳ ಏಳಿಗೆಗೆ ಪ್ರತಿಬಂಧಕವಾಗಿದ್ದವು ಶ್ರೀ ಶಿವಯೋಗಿ ಶಿವಾಚಾರ್ಯರು ಜೈನ ಬೌದ್ಧಾದಿ ಮತಗಳನ್ನು ಖಂಡಿಸಿ, ವೇದವಿಹಿತವಾದ ಸನಾತನ ಶಿವಭಕ್ತಿಯು, ತವರಾದ ವೀರಶೈವ ಮತವನ್ನು ರಕ್ಷಿಸಿ ಪಾಲಿಸಿರುವರು. ಎರಡನೆಯದಾಗಿ ಶ್ರೀ ಜ॥ ರೇವಣಸಿದ್ಧರು ಶ್ರೀ ಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀ ರತ್ನಗರ್ಭಗಣಪತಿಯನ್ನೂ

ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿರುವ, ನಿತ್ಯ ಸತ್ಯ ಸುಂದರ ವಿಷಯ, ಶ್ರೀ ಶಿವಯೋಗಿ ಶಿವಾಚಾರ್ಯರು : ತಮ್ಮಿಂದ ರಚಿತವಾದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿಸಿಲ್ಲವಾಗಿ, ಈ ಮಂಗಳ ಘಟನೆ ಜರುಗಿದ ಕಾಲಕ್ಕೆ ಮುಂಚಿತವೇ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ಗ್ರಂಥ ಕರ್ತರು ರಚಿಸಿರ ಬೇಕೆಂದು ಸ್ಪಷ್ಟ ಪಡುತ್ತೆ. ಶ್ರೀ ಶೃಂಗೇರಿ ಆದಿ ಶ್ರೀ ಶಂಕರಾಚಾರ್ಯರು ಕ್ರಿ. ಪೂ. ೫೦೯ ರಲ್ಲಿ ಜನಿಸಿ ೩೨ ವರ್ಷ ಬದುಕಿ ಕ್ರಿ. ಪೂ. ೪೭೭ ರಲ್ಲಿ ಬ್ರಹ್ಮೀಭೂತರಾದರೆಂದು ಶಿವಕಂಚಿ ಶ್ರೀ ಕಾಮಕೋಟಿ ಶಂಕರ ಮಠಾಧಿ ಪತಿಗಳಿಂದ ಸ್ಪಷ್ಟಗೊಳಿಸಲಾಗಿದೆ. ಕ್ರಿ. ಶ. ೮ ನೇ ಶತಮಾನದಲ್ಲಿದ್ದ ಶಂಕರಾಚಾರ್ಯರು ಅಭಿನವ ಶಂಕರರೆಂದು ಕಂಡುಬಂದಿದೆ. ಇತ್ಯಾದಿ ಕಾರಣಗಳಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಿ. ಪೂ. ಕಾಲಾವಧಿಯಲ್ಲಿದ್ದರೆಂದು ಕಂಡು ಬಂದಿದೆ.

ಕೆಲವರ ಅಭಿಪ್ರಾಯದಂತೆ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಿ.ಶ. ೮ ನೇ ಶತಮಾನದಲ್ಲಿದ್ದಿದ್ದರೆ, ಕ್ರಿ. ಶ. ೯ ನೇ ಶತಮಾನದಲ್ಲಿದ್ದ **"ಶ್ರೀ ನಿಲ ಕಂಠಭಾಷ್ಯ"** ಕರ್ತೃ ಶ್ರೀ ನೀಲಕಂಠ ಶಿವಾಚಾರ್ಯರಾಗಲಿ ಅಥವಾ ಕ್ರಿ. ಶ. ೧೦ ನೇ ಶತಮಾನದಲ್ಲಿದ್ದ ಶ್ರೀ ಶ್ರೀಕಂಠಾಚಾರ್ಯರಾಗಲಿ ಇವರ ಶಿಷ್ಯ ಶ್ರೀ ಅಪ್ಪಯ್ಯ ದೀಕ್ಷಿತರಾಗಲೀ, ಅಥವಾ ಕ್ರಿ. ಶ. ೧೧ ನೇ ಶತಮಾನದಲ್ಲಿದ್ದ, ಶ್ರೀ ಸಿದ್ಧಾಂತ ಶಿಖಾಮಣಿಗೆ ಸಂಸ್ಕೃತದಲ್ಲಿ ಅಮೋಘವಾದ ವ್ಯಾಖ್ಯಾನವನ್ನು ರಚಿಸಿರುವ ಪೂಜ್ಯ ಶ್ರೀ ಮರಿತೋಂಟದಾರ್ಯರಾಗಲಿ. ಶ್ರೀ ಶಿವಯೋಗಿ ಶಿವಚಾರ್ಯರು ಕ್ರಿ. ಶ. ೮ ನೇ ಶತಮಾನದಲ್ಲಿದ್ದು, ಆಗ ಶ್ರೀ ಸಿದ್ಧಾಂತ ಶಿಖಾಮಣಿ ಮಹಾಕೃತಿಯನ್ನು ರಚಿಸಿದರೆಂದು, ಯಾರೂ ಸ್ಪಷ್ಟೋಕ್ತಿಗಳಿಂದ ಘೋಷಿಸಿಲ್ಲ. ಇದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಿ. ಪೂ. ಕಾಲದ ಸುಮಾರು ೫ ನೇ ಶತಮಾನದಲ್ಲಿದ್ದ ಮಹಾನೀಯರೆಂದು, ಪರಿಗಣಿಸಲು ಸಾಕಷ್ಟು ನಂಬಲರ್ಹವಾದ ಆಧಾರ, ಪಂಡಿತ ಮಂಡಲಿಯವರ ಮಧ್ಯೇ ಇರುತ್ತೆ.

**ಪೂರ್ವಂ ಸೃಷ್ಟಿಸಮುದ್ಭವಾ | ತ್ಪರಶಿವಾದುದ್ಭೂಯ ಸದ್ವೈ**
**ಭವಾತ್ | ಸಿದ್ಧಾಂತಂ ಶೃತಿಸಿದ್ಧ ಮುದ್ಭುತತಮಂ |**
**ಸಂಸ್ಥಾಪ್ಯ ಸಂ ವಿಶ್ರುತಾಃ || ಸಿದ್ಧಸ್ಥೋಮ ಸುರದ್ರುಮಾಃ |**

**ಸುರವರ್ಯೈಃ ಸಂ ಸೇವ್ಯಮಾನಾಃ ಸದಾ । ಪಂಚಾಚಾರ್ಯ**

**ಗುರೂತ್ತಮಾಃ । ಸಕರುಣಂ ಸಿದ್ಧಿಂ ವಿತನ್ವಂತುವೋ ॥**

ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರು ಇದ್ದ ಕಾಲವಾವುದು ? ಈ ಬಗೆಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಕೃತಿಕಾರರು ಸುಮಾರು ಕ್ರಿ. ಶ. ಎಂಟನೇ ಶತಮಾನದಲ್ಲಿದ್ದರೆಂದು ಅಭಿಪ್ರಾಯ ಪಟ್ಟರೆ ಮತ್ತೆ ಕೆಲವರು ಅವರು ಕ್ರಿ. ಪೂ. ಐದನೆ ಶತಮಾನದಲ್ಲಿದ್ದರೆಂದು ಅಭಿಪ್ರಾಯಪಟ್ಟರೆ ಮತ್ತೆ ಕೆಲವರು ಅವರು ಕ್ರಿ. ಪೂ. ಐದನೆ ಶತಮಾನದಲ್ಲಿದ್ದರೆಂದು ಘೋಷಿಸಿರುವರು. ಇದನ್ನು ನಿರ್ಣಯಿಸುವುದು ತಾನೆ ಹೇಗೆ ? ಕೃತಿಕರ್ತರು ಅಥವಾ ಅವರ ಪೂರ್ವಜರು ಈ ಬಗೆಗೆ ಮೌನವಾಗಿರುವರು. ಶ್ರೀ ಸಿದ್ಧಾಂತ ಶಿಖಾಮಣಿ ಗಂಥಕರ್ತೃ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಿ. ಶ. ೮ ನೇ ಶತಮಾನದಲ್ಲಿದ್ದ ಬಗೆಗೆ ಅವರ ಸಮಕಾಲೀನ ಅಥವಾ ತದನಂತರದ ಮಹಾನ್ ಕೃತಿಕರ್ತರು, ಭಾಷ್ಯಕಾರರು, ಯಾರಾದರು ತಮ್ಮ ಕೃತಿರತ್ನಗಳಲ್ಲಿ ಪ್ರಸಿದ್ಧ ಪಡಿಸುತ್ತಲಿದ್ದರು. ಕ್ರಿ. ಶ. ೯ ನೇ ಶತಮಾನದಲ್ಲಿ **"ಶ್ರೀ ನೀಲಕಂಠ ಭಾಷ್ಯ"**ವನ್ನು ರಚಿಸಿದ ಶ್ರೀ ನೀಲಕಂಠ ಶಿವಾಚಾರ್ಯರು, ಶ್ರೀ ಸಿ. ಶಿ. ಶ್ಲೋಕಗಳನ್ನು ತಮ್ಮ ಘನ ಭಾಷ್ಯದಲ್ಲಿ ಆಧಾರವಾಗಿ ಬಳಸಿಕೊಂಡಿದ್ದರೂ, ಆ ಕೃತಿಕಾರರಿದ್ದ ಕಾಲದ ಬಗೆಗೆ ಏನನ್ನೂ ಉಲ್ಲೇಖಿಸಿಲ್ಲ. ನಂತರ ಕ್ರಿ. ಶ. ೧೦ ನೇ ಶತಮಾನದಲ್ಲಿದ್ದ ಭಾಷ್ಯಕಾರರು ಶ್ರೀ ಶ್ರೀಕಂಠ ಶಿವಾಚಾರ್ಯರಾಗಲಿ ಅಥವಾ ಇವರ ಪರಮ ಶಿಷ್ಯ ಶ್ರೀ ಅಪ್ಪಯ ದೀಕ್ಷಿತರೂ ಸಹ ಶ್ರೀ ಶಿವಯೋಗಿ ಶಿವಾಚಾರ್ಯರ ಕಾಲಮಾನದ ಬಗ್ಗೆ ಏನನ್ನೂ ಹೇಳಿಲ್ಲ. ತದನಂತರ ಕ್ರಿ. ಶ. ೧೧ ನೇ ಶತಮಾನದಲ್ಲಿ ಸುಪ್ರಸಿದ್ಧ **"ಶ್ರೀ ಕರಭಾಷ್ಯ"** ಕರ್ತೃಗಳಾದ ಶ್ರೀ ಶ್ರೀಪತಿ ಪಂಡಿತರು ಸಿದ್ಧಾಂತ ಶಿಖಾಮಣಿ ಶ್ಲೋಕಗಳನ್ನು ತಮ್ಮ ಭಾಷ್ಯದಲ್ಲಿ ವಿಪುಲವಾಗಿ ಬಳಸಿಕೊಂಡಿರುವವರಾದರೂ, ಶ್ರೀ ಶಿವಯೋಗಿ ಶಿವಾಚಾರ್ಯರು ಸಮೀಪ ಕಾಲದ ಕ್ರಿ. ಶ. ೮ ನೇ ಶತಮಾನದಲ್ಲಿದ್ದರೆಂದು ಖಚಿತವಾಗಿ ಹೇಳದೆ ಇರುತ್ತಿರಲಿಲ್ಲ. ಇಂತಪ್ಪ ಸಮೀಪಕಾಲದ ಘನ ಪಂಡಿತರು ಶ್ರೀ ಸಿ. ಶಿ. ಗ್ರಂಥಕರ್ತೃ ಶ್ರೀ ಶಿವಯೋಗಿಶಿವಾಚಾರ್ಯರು ಕ್ರಿ. ಶ. ಎಂಟನೇ ಶತಮಾನದಲ್ಲಿದ್ದರೆಂದು ಸಾದೃಶ್ಯವಾಗಿ ಎನನ್ನೂ ಪ್ರಸ್ತಾಪಿಸದೆಯಿರಲು, ಶ್ರೀ ಶಿವಯೋಗಿ ಶಿವಾಚಾರ್ಯರ

ದ್ವಾದಶ, ಶತಮಾನಗಳ ಹಿಂದೆ ಅಂದರೆ ಕ್ರಿ. ಶ. ೮ ನೇ ಶತಮಾನದಲ್ಲಿದ್ದರೆಂಬ ನಿರ್ಧಾರ, ನಿರಾಧಾರವಾದ್ದರಿಂದ ಗೌಣವಿರುತ್ತೆ.

ಮತ್ತೆ ಕೆಲವರು ಶ್ರೀ ಸಿ. ಶಿ. ಗ್ರಂಥಕರ್ತೃ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಿ. ಪೂ. ಆರನೆಯ ಶತಮಾನಧಲ್ಲಿದ್ದರೆಂದು ಅಭಿಪ್ರಾಯಪಟ್ಟಿರುತ್ತಾರೆ. ಈ ಪರಮ ಶಿವಾಚಾರ್ಯರ ವಂಶದಲ್ಲಿ ಜನಿಸಿದ ಗಂಡು ಸಂತತಿಯವರಿಗೆ ಪೂರ್ವಾಚಾರ್ಯರ ಹೆಸರುಗಳನ್ನೇ ಸ್ಮರಣಾರ್ಥ ಆಗಾಗ ಇಡುವ ಸಂಪ್ರದಾಯ ನಡೆದು ಬಂದಿದೆ. ಆದ್ದರಿಂದ ಕಾಲಕಾಲಕ್ಕೆ ಜನಿಸಿದ ಮಕ್ಕಳಿಗೆ ಶ್ರೀಶಿವಯೋಗಿಶಿವಾಚಾರ್ಯರೆಂಬ ಹೆಸರಿನವರು ಅನೇಕರು ಆಗಿಹೋಗಿರುವರು, ಹೀಗಿದ್ದರೂ ನಮಗೆ ಬೇಕಾದ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃ ಶ್ರೀ ಶಿವಯೋಗಿ ಶಿವಾಚಾರ್ಯರಿದ್ದ ಕಾಲ.

ದ್ವಾಪರ ಯುಗಾರಂಭ ಕಾಲದಲ್ಲಿ ಶ್ರೀ ಆದಿ ಜ|| ರೇಣುಕಾಚಾರ್ಯರು ಶ್ರೀ ಆದಿ ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ಶ್ರೀ ಏಕೋತ್ತರ ಶತಸ್ಥಲ ಸಿದ್ಧಾಂತದ ಸಾರಾಮೃತವನ್ನು ಕಲಿಯುಗದ ಕ್ರಿ. ಪೂ. ಕಾಲದಲ್ಲಿದ್ದ ಶ್ರೀ ಶಿವಯೋಗಿ ಶಿವಾಚಾರ್ಯರು ರಚಿಸಬೇಕಾದರೆ ಶ್ರೀ ಮಹಾಚಾರ್ಯರ ಕೃಪಾದೀಕ್ಷೆ ಬೇಕು.

ಶ್ರೀ ವ್ಯಾಸಾಚಾರ್ಯರು ಸಂಜಯನಿಗೆ ಜ್ಞಾನ ದೃಷ್ಟಿಯನ್ನು ಕೃಪೆಯಾಅನುಗ್ರಹಿಸಿದುದರಿಂದ ಕುರುಕ್ಷೇತ್ರದಲ್ಲಿ ಜರುಗುವ ಯುದ್ಧದ ಅಖಿಲ ವೃತ್ತಾಂತವನ್ನು, ಹಸ್ತಿನಾಪುರದ ಅರಮನೆಯಲ್ಲಿ ಕುಳಿತ ಜಾತ್ಯಂಧ, ಧೃತರಾಷ್ಟ್ರ ಚಕ್ರವರ್ತಿಗೆ ಮಂತ್ರಿ ಸಂಜಯನು ರನಿಂಗ್ ಕಾಮೆಂಟರಿ ರೂಪದಲ್ಲಿ ವಿವರಿಸಿದನಷ್ಟೆ. ಇದರಂತೆ ಶ್ರೀ ಶಿವಯೋಗಿ ಶಿವಾಚಾರ್ಯರಿಗೆ ಹಿಂದೆ ಜರುಗಿದ, **"ರೇಣುಕಾಗಸ್ತ್ಯಸಂವಾದದ"** ಸಾರಾಮೃತವನ್ನು ಕ್ರಿ. ಪೂ. ೫ ನೇ ಶತಮಾನದಲ್ಲಿ ಮನೋಹರವಾಗಿ ರಚಿಸಲು ಸುಜ್ಞಾನ ದೃಷ್ಟಿಯನ್ನಿತ್ತವರಾರು ? ಇದು ನಿಜಕ್ಕೂ ವಿಚಾರಾರ್ಹವಾದ ವಿಷಯ.

ಕ್ರಿ. ಪೂ. ೧೮೮೫ ರಲ್ಲಿ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ ಚಿತ್ಕಳಾರೂಪದಲ್ಲಿ ಹೊರಹೊಮ್ಮಿದ ಚಿಜ್ಯೋತಿಚಿದಂಶ ಶಿವನ

ಇಚ್ಛೆಯಂತೆ ಶ್ರೀ ರೇವಣಸಿದ್ಧ ಶಿವಾಚಾರ್ಯರ ರೂಪದಲ್ಲಿ ಅವತರಿಸಿ ೧೪೦೦ ವರ್ಷಗಳು ಅಂದರೆ ಕ್ರಿ. ಪೂ. ೪೮೫ ರ ವರವಿಗೆ ಭುವಿಯಲ್ಲಿದ್ದು ಪರಮ ವೀರ ಶೈವ ಮತಧರ್ಮವನ್ನು ಜಗದಾದ್ಯಂತ ಸ್ಥಾಪಿಸಿ, ಬೋಧಿಸಿ, ಆಚರಿಸಿ, ಭೋಗ ಮೋಕ್ಷಗಳ ಮಾರ್ಗವನ್ನು ಮಾನವ ಕುಲಕ್ಕೆ ಮಾರ್ಗದರ್ಶನ ನೀಡಿದ ವಿಷಯ ವೇದಾಗಮಗಳಲ್ಲಿ ಉಕ್ತವಿರುತ್ತೆ. ಶ್ರೀ ಚಿತ್ಸುಕಾಚಾರ್ಯ ವಿರಚಿತ **"ಬೃಹದ್ ಪ್ರಾಚೀನ ಶಂಕರ ವಿಜಯ'' "ಜೈನಧರ್ಮದ ಜಿನವಿಜಯ", "ಶ್ರೀ ಗುರುವಂಶಕಾವ್ಯ"** ಇತ್ಯಾದಿ ಮಹಾನ್ ಕೃತಿಗಳಿಂದ ಕಂಡಂತೆ ಶ್ರೀ ಶೃಂಗೇರಿ ಆದಿ ಶಂಕಾರಚಾರ್ಯರು ಕ್ರಿ. ಪೂ. ೫೦೯ ರಲ್ಲಿ ಜನಿಸಿ ಕ್ರಿ. ಪೂ. ೪೭೭ ರವವಿಗೆ ಅಂದರೆ ೩೨ ವರ್ಷ ಭುವಿಯಲ್ಲಿ ದ್ದರೆಂದು ಉಲ್ಲೇಖವಿರುತ್ತೆ ಇವರಿಂದ ೩೮ ನೇ ಆಚಾರ್ಯರೇ ಶ್ರೀ ಅಭಿನವ ಶಂಕರಾಚಾರ್ಯರೆಂದು, ಇವರು ಕ್ರಿ.ಶ. ಎಂಟನೇ ಶತಮಾನದಲ್ಲಿದ್ದ ಮಹಾ ಚಾರ್ಯರೆಂದೂ ಅಧಿಕೃತವಾಗಿ ಕಂಡು ಬಂದಿದೆ. ಆದಿ ಶ್ರೀ ಶಂಕರಾ ಚಾರ್ಯರು ತಮ್ಮ ೨೪ ನೇ ವರ್ಷದ ವಯಸ್ಸಿನಲ್ಲಿ ಅಂದರೆ ಕ್ರಿ. ಪೂ. ೪೮೫ ರ ಆದಿ ಕಾಲದಲ್ಲಿ ಶ್ರೀ ಶೈಲ ಬ್ರಮರಾಂಬ ಸಮೇತನಾದ ಶ್ರೀ ಗಿರಿ ಮಲ್ಲಿ ಕಾರ್ಜುನನ ಆದೇಶದಂತೆ ಶ್ರೀ ಆದಿ ಜ|| ರೇವಣಸಿದ್ಧ ಶಿವಾಚಾರ್ಯರನ್ನು ಶ್ರೀ ಆದಿ ಶಂಕರಾಚಾರ್ಯರು ಸಂದರ್ಶಿಸಿ, ಅವರ ಕೃಪೆಯಿಂದ **"ಶ್ರೀ ರತ್ನ ಗರ್ಭ ಗಣಪತಿ ಮತ್ತು ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು"** ಪಡೆದರೆಂದು ಮೇಲುಕ್ತವಾದ ಶ್ರೀ ಶೃಂಗೇರಿ ಸಂಸ್ಥಾನ ಮಠಗಳ ಬಹು ಪ್ರಾಚಿನ ಅಧಿಕೃತ ಗ್ರಂಥಾಧಾರಗಳಿಂದ ಮನವರಿಕೆಯಾಗಿದೆ.

ಶ್ರೀ ಶಿವಯೋಗಿ ಶಿವಾಚಾರ್ಯರಿಂದ ರಚಿತವಾದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಆದಿ ಜ|| ರೇವಣಸಿದ್ಧ ಶಿವಾಚಾರ್ಯರಿಂದ ಶ್ರೀ ಆದಿ ಶಂಕರಾಚಾರ್ಯರಿಗೆ ದತ್ತವಾದ ಶ್ರೀ ಚಂದ್ರಮೌಳೀಶ್ವರ ಲಿಂಗದ ವೃತ್ತಾಂತ ಲಿಖಿತವಾಗಿಲ್ಲವಾದ್ದರಿಂದ ಶ್ರೀ ಶಿವಯೋಗಿ ಶಿವಾಚಾರ್ಯರು ಪ್ರಾಯಶಃ ಮೇಲ್ಕಂಡ ಮಂಗಳ ಘಟನೆಗೆ ತತ್ಪೂರ್ವವೇ ಶ್ರೀ ಸಿ. ಶಿ. ಗ್ರಂಥವನ್ನು ಶ್ರೀ ಆದಿ ಜ|| ರೇವಣಸಿದ್ಧ ಶಿವಾಚಾರ್ಯರಿಂದ, ಕೃಪೆಯ ಅನುಗ್ರಹೀತವಾದ

"ಜ್ಞಾನ ದೃಷ್ಟಿಯ ಬಲದಿಂದ" ಶ್ರೀ ಶಿವಯೋಗಿ ಶಿವಾಚಾರ್ಯರು ವಿಜೃಂಭಿತ ಭಾವದಿಂದ ಷಟ್ಸ್ಥಲ ಸಿದ್ಧಾಂತ ಗರ್ಭಿತ ವಿಶ್ವಧರ್ಮವನ್ನು ಕ್ರಿ. ಪೂ. ೫ ನೇ ಶತಾಬ್ಧಿಯಲ್ಲಿ ಸರ್ವಾಂಗ ಸುಂದರವಾಗಿ ರಚಿಸಿರುವರೆಂದು ಪಂಡಿತ ಮಂಡಲಿಯವರು ನಿರ್ಣಯಿಸಿರುವರು. ಇದಕ್ಕನುಗುಣವಾಗಿ ಶ್ರೀ ಸಿ. ಶಿ. ಪ್ರಥಮ ಪರಿಚ್ಛೇದದ ೨೪ನೇ ಶ್ಲೋಕದಲ್ಲಿ,

**ಯೇನ ರಕ್ಷಾವತೀ ಜಾತಾ । ಶಿವಭಕ್ತಿಃ ಸನಾತನೀ ।**

**ಬೌದ್ಧಾಧಿ ಪ್ರತಿ ಸಿದ್ಧಾಂತ ಮಹಾಧ್ವಾಂತಾಂಶುಮಾಲಿನಾ ।**

ಎಂದು ಉಕ್ತವಾಗಿರುತ್ತದೆ. ಏನೆಂದರೆ : ಸನಾತನ ಪರಮ ವೀರ ಶೈವ ತಾಂತ್ರಿಕ ವೈದಿಕ ಧರ್ಮವನ್ನು ಅಂದಿನ ಪ್ರಬಲವಾದ ನಿರೀಶ್ವರವಾದಿ ಮತಗಳಾದ ಜೈನ, ಬೌದ್ಧಮತಗಳ ಉಪಟಳಗಳಿಂದ ರಕ್ಷಿಸಲು ಶ್ರೀ ಶಿವ ಯೋಗಿ ಶಿವಾಚಾರ್ಯರು ಬಹಳ ಹೋರಾಡಿದುದಾಗಿ ಕಂಡು ಬಂದಿದೆ. ನಂತರ ಶ್ರೀ ಆದಿ ಶಂಕರಾಚಾರ್ಯರೂ ಸಹ ಈ ದಿಶೆಯಲ್ಲಿ ಶ್ರಮಿಸಿರುವರು, ಬೌದ್ಧ ಮತ ಸ್ಥಾಪಿತವಾಗಿ ಇಲ್ಲಿಗೆ ಸುಮಾರು ೨೫೦೦ ವರ್ಷಗಳಾಗಿವೆ. ಕ್ರಿ. ಪೂ. ಕಾಲದಲ್ಲಿ ಬೌದ್ಧ ಧರ್ಮ ಭಾರತಾದ್ಯಂತ ವ್ಯಾಪಕವಾಗಿತ್ತು. ಕ್ರಿ. ಶ. ೮ನೇ ಶತಮಾನದ ಹೊತ್ತಿಗೆ ದುರ್ಬಲ ಹೊಂದಿ ವೇದವಿಹಿತ ವೈದಿಕಧರ್ಮ ಸಾಕಷ್ಟು ತಲೆ ಎತ್ತಿತ್ತು. ಇತ್ಯಾದಿ ಕಾರಣಗಳಿಂದ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃ ಶ್ರೀ ಶಿವಯೋಗಿ ಶಿವಾಚಾರ್ಯರು ಕ್ರಿ. ಪೂ. ೫ ನೇ ಶತಮಾನದ ಆದಿ ಭಾಗದಲ್ಲಿದ್ದು ಲಿಂಗೋದ್ಭವ ಮಂಗಳಮೂರ್ತಿ ಶ್ರೀ ಆದಿ ಜ|| ರೇವಣ ಸಿದ್ಧಶಿವಾಚಾರ್ಯರ ಕೃಪಾದೀಕ್ಷೆಯ ಪ್ರಭಾವದಿಂದ ಶ್ರೀ ಸಿ. ಶಿ. ಕೃತಿಯನ್ನು ರಚಿಸಿರುವರು, ಶಿವ.

**ಶ್ರೀಮರ್ಾ ಸೋಮೇಶ ಲಿಂಗೋತ್ಥಿತ । ವ ಪುರಖಿಲ ಶ್ಲಾಘನೀ**

**ಯಾನುಭಾವಃ । ಸಿದ್ಧಾನಾಂ ಸಾರ್ವಭೌಮಃ ಪ್ರವಿತತ ।**

**ತಪಸಾಮಾಕರಃ ಸಾಧು ಭಾವಃ ॥ ಶೈವಾದ್ವೈತ ಪ್ರತಿಷ್ಠಾ**

**ಚಣಮತಿ । ರಮಲ ಜ್ಞಾನ ಭೂತಿರ್ನಿರೀತಿಃ । ದದ್ಯಾಚ್ಛ್ರೀ**

**ರೇಣುಕಾಖ್ಯೋ ಗುರು । ವರ ಚರಣಃ ಸಮ್ಯಗಿಷ್ಟಾರ್ಥಸಿದ್ಧಿಂ॥**

ಭೋ ! ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ ।ರಕ್ಷಮಾಂ ಭವರೋಗಿಣಂ॥
(ಸಿ.ಶಿ.ಅ. ೬ ಶ್ಲೋ೯)

## "ಜಗತ್ಸೃಷ್ಟಿ ವಿಚಾರ" (ಪರಿಚ್ಛೇದ ೨)

ಸಚ್ಚಿದಾನಂದ ರೂಪಾಯ ಸದಸದ್ವ್ಯಕ್ತಿ ಹೇತವೇ ।
ನಮಃ ಶಿವಾಯ ಸಾಂಬಾಯ । ಸಗಣಾಯ ಸ್ವಯಂ ಭುವೇ॥
ಶಿವರುದ್ರ ಮಹಾದೇವಂ । ಭವಾದಿ ಪದ ಸಂಜ್ಞಿತಂ ॥
ಅದ್ವಿತೀಯ ಮನಿರ್ದೇಶ್ಯಂ । ಪರಂ ಬ್ರಹ್ಮ ಸನಾತನಂ ॥
ತತ್ರ ಲೀನ ಮಭೂತ್ಪೂರ್ವಂ । ಚೇತನಾ ಚೇತನಂ ಜಗತ್ ।
ಸ್ವಾತ್ಮಲೀನಂ । ಜಗತ್ಕಾರ್ಯಂ ಸ್ವಪ್ರಕಾಶ್ಯಂ ತದದ್ಭುತಂ ॥

ಶಿವಯೋಗಿ ಶಿವಾಚಾರ್ಯರ ಶಿವಶರಣರ ಶಿರದರ ಮನೆಯ ಪಶ್ಚಿಮ ಶಿಖಾಚಕ್ರದಲ್ಲಿ ವಿರಾಜಿಸುವ ಪರಶಿವ ಬ್ರಹ್ಮವನ್ನು ಸಚ್ಚಿದಾನಂದ ರೂಪಿಯೆಂದೂ, ಸದಸದ್ವ್ಯಕ್ತಿಯೆಂದೂ, ಶಿವನೆಂದೂ, ಸಾಂಬಶಿವನೆಂದೂ, ಪ್ರಮಥ ಗಣಗಳ ಈಶನೆಂದೂ ಸ್ವಯಂಭುವೆಂದೂ, ನಿತ್ಯ ಪರಿಪೂರ್ಣನೆಂದೂ ಸ್ತುತ್ಯನಿರುವನು. ಓಂಕಾರಮಯ ಪರಶಿವಪರಬ್ರಹ್ಮವು, ಸತ್ ಚಿತ್ ಆನಂದ ರೂಪಿಯೆಂದು ಶೃತಿಗಳಲ್ಲಿ ಸ್ತುತಿಸಲಾಗಿದೆ.

ಭೂತ ಭವಿಷ್ಯ ವರ್ತಮಾನ ಕಾಲಗಳನ್ನು ಮೀರಿ, ಅದರಾಚೆ ವ್ಯಾಪಕವೂ ತ್ರಿಕಾಲಾಬಾಧ್ಯವೂ ಆದ ಪರತತ್ವ "ಸತ್" ಯೆಂದು ಕರೆಯಲಾಗಿದೆ. ಅಷ್ಟೇ ಅಲ್ಲದೆ ಆ ಪರಾತ್ಪರ ವಸ್ತುವನ್ನು "ಚಿತ್" ಯೆಂದೂ ಹೆಸರಿಸಲಾಗಿದೆ. ಸಹಜವಾಗಿಯೇ ಚೈತನ್ಯದಿಂದ ಸ್ವಪ್ರಕಾಶದೊಂದಿಗೆ ಅರಿವು ಮಯವಾದ ಅಖಂಡ ದಿವ್ಯ ಸ್ವರೂಪವನ್ನು "ಚಿತ್" ಎಂದು ಘೋಷಿಸಲಾಗಿದೆ. "ಆನಂದ" ವೆಂದರೆ, ದುಃಖದ ಸುಳಿವಿಲ್ಲದ, ನಿತ್ಯಪರಿಪೂರ್ಣ, ಚಿದ್ಘನ ಹಾಗೂ ಅನಿರ್ವಚ

ನೀಯಮವಾದ ಪ್ರೇಮಾಮೃತ, ಮೃದು ಮಧುರ ಅಮೃತ ಸ್ವರೂಪವಾದ ಹಾಗೂ ಆದಿ ಮಧ್ಯಾಂತ ರಹಿತವಾದ ಸ್ವಯಂ ಜ್ಯೋತಿ ಬೃಹದ್ ತತ್ವವನ್ನು ಆನಂದವೆಂದು ಸ್ತುತಿಸಲಾಗಿದೆ. ಪರಬ್ರಹ್ಮನ ನೈಜ ಶಕ್ತ್ಯಾವಿರ್ಭಾವಾದಿ ಮಹತ್ವ, ತ್ರಿಮೂರ್ತಿಗಳಿಗೂ ಮತ್ತು ತ್ರಿಶಕ್ತಿ ದೇವಿಯರುಗಳಿಗೂ ಆಗೋಚರ ಅಚಿಂತ್ಯ., ಅಪ್ರಮೇಯವೆನಿಸಿರುತ್ತೆ. ಹೆಚ್ಚೇನು ಚತುರ್ವೇದಗಳಿಗೂ ಈ ತತ್ವ ಆನಿರ್ವಚನೀಯವೆನಿಸಿರುತ್ತೆ "**ಪರಾ್ಯಸ ಶಕ್ತಿರ್ವಿವಿಧೈವ । ಶ್ರೂಯತೇ ಸ್ವಾಭಾವಕಿ । ಜ್ಞಾನ ಬಲಕ್ರಿಯಾಚ**" ಎಂದು ಶ್ವೇತಾಶ್ವ ತರೋಪ ನಿಷತ್ತಿನಲ್ಲಿ ಉದ್ಘೋಶಿಸಲಾಗಿದೆ.

ಇಂತಪ್ಪ ಸನಾತನವಾದ ಪರಬ್ರಹ್ಮದ ಚಿಚ್ಛಕ್ತಿ ಅಂಶದಿಂದ ಇಚ್ಚಾಶಕ್ತಿ ಆವಿರ್ಭವಿಸಲು, ಇದರ ಅಂಗವಾಗಿ ಕ್ರಿಯಾ ಶಕ್ತಿ ಜ್ಞಾನ ಶಕ್ತಿಗಳು ಉದಯಿಸಿ, ಪರಶಿವಬ್ರಹ್ಮವು, ಸೃಷ್ಟ್ಯುನ್ಮುಖವಾಯಿತು.

**ತತ್ರಲೀನ ಮಭೂತ್ಪೂರ್ವಂ ।**
**ಚೇತನಾ ಚೇತನಂ ಜಗತ್ ॥**

ಪ್ರಳಯ ಕಾಲದಲ್ಲಿ ಚರಾಚರಾತ್ಮಕ ಜಗತ್ತು ಶಿವನಲ್ಲಿ ಸೂಕ್ಷ್ಮವಾಗಿ ಅಂತರ್ಗತವಾಗಿದ್ದು ಸೃಷ್ಟಿ ಕಾಲದಲ್ಲಿ ಮತ್ತವನಿಂದಲೇ ಹೊರಬೀಳುವುದು.

**ಸ್ವಾತ್ಮಲೀನಂ ಜಗತ್ಕಾರ್ಯಂ । ಸ್ವಪ್ರಕಾಶ್ಯಂ ತಡದ್ಭುತಂ ॥**

ಮೊದಲಿಲ್ಲದ ಮೊದಲುಳ್ಳ ಪರಶಿವನಿಂದ ಚೇತನಾಚೇತನವಾದ ಜಗತ್ತು ಸಂಕಲ್ಪ ಮಾತ್ರೇಣ ಆವಿರ್ಭವಿಸಿತು.

**ಯತೋವಾ ಇಮಾನಿ ಭೂತಾನಿ ಜಾಯಂತೇ ।**
**ಏನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿ ಸಂ ವಿಶಂತಿ ।**
**ತದ್ವಿ ಜಿಜ್ಞಾಸಸ್ವ ತದ್ ಬ್ರಹ್ಮ ॥**

ಎಂಬುದಾಗಿ ಉಪನಿಷತ್ತು ಘೋಷಿಸುತ್ತಲಿದೆ.

**ಯಜುರ್ವೇದದಲ್ಲಿ || ಯಸ್ಮಾದಿದಂ ಜಗತ್ತು ಜಾಯತ ।**
**ಯ ತ್ರ ತಿಷ್ಠತ್ಯಂತೇ । ಸಮಸ್ಥ ವಿಧಮಸ್ತ ಮುಪೈತಿಯತ್ರ**
**ತಸ್ಮೈನಮಃ| ಸದ ಸದಾದಿ ವಿಕಲ್ಪ ಶೂನ್ಯಃ। ಚೈತನ್ಯ ಮಾತ್ರ**
**ಮಪುಷೇ ಪುರುಷೋತ್ತಮಾಯಹಾ ||**

ಇತ್ಯಾದಿ ವೇದಾಗಮ ಉಪನಿಷದ್ ಮಂತ್ರಗಳಿಂದ, ಶಿವನು ಕೇವಲ ತನ್ನ ಸಂಕಲ್ಪ ಶಕ್ತಿಯಿಂದ ಎಲ್ಲವನ್ನೂ ಕ್ಷಣಾರ್ಧದಲ್ಲಿ ಸೃಷ್ಟಿಸಿರುವನು. ಶಕ್ತಿ ಮಾನ್ ನಲ್ಲವಾ ಪರಶಿವನು.

**ಮಾಯಯಾ ಸಹಿತಃ ಪರಮೇಶ್ವರಃ । ಸರ್ವಂ ಜಗತ್ಸೃಷ್ಟ್ವಾ**
**ಸ್ವಯಂಚಾನು । ಪ್ರವಿಶ್ಯಾ ಭೋಕ್ತೃ ಭೋಗ್ಯಾದಿ ರೂಪೇಣ |**
**ವಿಭಾಗಂ ಕೃತವಾನ್ ಇತ್ಯರ್ಥಃ ||**

**" ಉಮಯಾ ಸಹ ವರ್ತತೇ ಸಾಂಬಃ "** ಉಮಾ ಸಮೇತನಾದ ಪರಶಿವನು ತನ್ನ ಅಂತರಂಗದ ಶಕ್ತಿಯಿಂದ ಕ್ಷಣಾರ್ಧದಲ್ಲಿ ಸಂಕಲ್ಪ ಮಾತ್ರೇಣ ಅಂನತ ಕೋಟಿ ಬ್ರಹ್ಮಾಂಡಗಳನ್ನು ಲೀಲಾಜಾಲವಾಗಿ ಸೃಷ್ಟಿಸಿ, ಸರ್ವತ್ರ ತಾನೇ ತಾನಾಗಿ ವ್ಯಾಪಿಸಿ ಸಾಕ್ಷಿ ರೂಪೇಣ ವಿರಾಜಿತನಾಗಿಹನೆಂದು ಶ್ರುತಿಯು ಸಾರುತ್ತಲಿದೆ. **"ಜಗದೊಳಗೆ ನೀನೋ ನಿನ್ನೊಳಗೆ ಜಗವೋ"** ಎಂಬಂತಿಹನು. ಈ ಚರಾಚರಾತ್ಮಕ ಜಗತ್ಸೃಷ್ಟಿ ಕ್ರಮವರಿತು ಆಗಿದೆ.

ಶ್ರೀ ಭಗವತ್ಪಾದ ಆದಿ ಶ್ರೀ ಜ|| ರೇಣುಕಾಚಾರ್ಯರು, ಆದಿ ಶ್ರೀ ಅಗಸ್ತ್ಯಮಹರ್ಷಿಗಳಿಗೆ ಇದನ್ನು ವಿವರಿಸುತ್ತಾ,

**ಶಿವಾಭಿಧಂ ಪರಂ ಬ್ರಹ್ಮ । ಜಗನ್ನಿರ್ಮಾತು ಮಿಚ್ಛಯಾ ।**
**ಸ್ವರೂಪ ಮಾದಥೇ ಕಿಂ ಚಿತ್ಸುಖ ಸ್ಫೂರ್ತಿ ವಿಜೃಂಭಿತಂ||**
(ಸಿ.ಶಿ.ಅ. ೨ ಶ್ಲೋ ೮)

ಜಗತ್ಸೃಷ್ಟಿಗಾಗಿ ಸಂಕಲ್ಪಿಸಿ ವಿಜೃಂಭ ಭಾವದಿಂದ ಶಿವನು,

**ಪ್ರಥಮಂ ಬ್ರಹ್ಮಾಣಂ ಸರ್ವದೇಹಿನಾಂ ||**

ಚತುರ್ಮುಖ ಬ್ರಹ್ಮನನ್ನು ಸಂಕಲ್ಪ ಮಾತ್ರೇಣ ಸೃಜಿಸಿ, ತನ್ನ ಪ್ರಥಮ ಪುತ್ರನನ್ನು ನೋಡಿ,

**ಸರ್ವಜ್ಞಃ ಸಕಲಾವಿದ್ಯಾಃ । ಸಾನುಗ್ರಹ ಮುಪಾದಿಶತ್ ॥**

ಎಲ್ಲಾ ವಿದ್ಯೆಯನ್ನು ಸರ್ವಜ್ಞನಾದ ಶಿವನು ಚತುರ್ಮುಖ ಬ್ರಹ್ಮನಿಗೆ ಬೋಧಿಸಿ, ಜಗತ್ಸೃಷ್ಟಿ ಮಾಡೆಂದನು. ಜಗತ್ಸೃಷ್ಟಿ ಕ್ರಮದ ಎಲ್ಲಾ ಉಪಾಯಗಳನ್ನು ಶಿವನು ಬೋಧಿಸಿದ್ದರೂ ಜಗತ್ಸೃಷ್ಟಿಯನ್ನು ಕಾರ್ಯ ರೂಪದಲ್ಲಿ ತರಲು ಬ್ರಹ್ಮನು ಅಸಮರ್ಥನಾಗಿ ಪರಮೇಶ್ವರನನ್ನು ಮತ್ತೊಮ್ಮೆ ಸೃಷ್ಟಿ ವಿಧಾನವನ್ನು ಮಾಡಿ ತೋರಿಸಬೇಕೆಂದು ವಿನಂತಿಸಿ ಕೊಂಡನು.

**ಪುನಸ್ತಂ ಪ್ರಾರ್ಥಯಾಮಾಸ । ಬ್ರಹ್ಮಾ ವಿಹ್ವಲ ಮಾನಸಃ ।**
**ದೇವ ದೇವ ಮಹಾದೇವ । ಜಗತ್ಪ್ರಥಮ ಕಾರಣ ।**
**ನಮಸ್ತೇ ಸಚ್ಚಿದಾನಂದ । ಸ್ವೇಚ್ಛಾ ವಿಗ್ರಹ ರಾಜಿತ ಭವಶರ್ವ**
**ಮಹೇಶಾನ ಸರ್ವಕಾರಣ ಕಾರಣ ॥**

(ಸಿ. ಶಿ. ಅ. ೨ ಶ್ಲೋ ೨೨, ೨೩.)

ಚತುರ್ಮುಖ ಬ್ರಹ್ಮನ ಪ್ರಾರ್ಥನಾನುಸಾರ, ಪರಮೇಶ್ವರನು, ಧೃಢ ಸಂಕಲ್ಪ ಮಾತ್ರೇಣ,

**ಸಸರ್ಜಾತ್ಮ ಸಮುಪ್ರಖ್ಯಾ । ಸರ್ವಜ್ಞಾನ್ ಸರ್ವಶಕ್ತಿಕಾನ್ ॥**

(ಶ್ಲೋ ೨೫)

ಚತುರ್ಮುಖನು ನೋಡುತ್ತಿದ್ದ ಹಾಗೆ ಕಂತುಹರ ಶಂಭುವೊಲಿದು ತನ್ನ ಸದ್ಯೋಜಾತಾದಿ ಪಂಚಮುಖಗಳಿಂದ "ಸಸರ್ಜಾತ್ಮ" ತನ್ನ ಆತ್ಮದ ಚಿತ್ಕಳೆಗಳು ಚಿನ್ಮಯ ರೂಪದಲ್ಲಿ ಪ್ರಾದುರ್ಭವಿಸಿ,

**ಪಂಚಾಸ್ಯಾನನ ಪಂಕಜಾತ ಜನಿತರ್ । ಪಂಚಾಸ್ಯ ಪೀಠಾಧಿಪರ್ । ಪಂಚಕ್ಲೇಶ ವಿನಾಶಕರ್ । ಪರತರ ಶ್ರೀ ಪಂಚಲಿಂಗೋದ್ಭವರ್ । ಪಂಚಾಚಾರ ನಿಯಾಮಕರ್ । ಪರಿಲಸತ್ ಪಂಚಾಕ್ಷರೀ ಬೋಧಕರ್। ಪಂಚಾಚಾರ್ಯ ಜಗದ್ಗುರೂತ್ತಮರವರ್ ಪಾಲಿಪ್ಪುದೀ ಲೋಕಮಂ ॥**

ಶ್ರೀ ಜ | ರೇಣುಕ, ಶ್ರೀ ಜ | ದಾರುಕ, ಶ್ರೀ ಜ | ಏಕೋರಾಮಾರಾಧ್ಯ, ಶ್ರೀ ಜ | ಪಂಡಿತಾರಾಧ್ಯ ಮತ್ತೂ ಶ್ರೀ ಜ| ವಿಶ್ವಾರಾಧ್ಯ ಶಿವಾಚಾರ್ಯರ ಮಂತ್ರಮಯ ದೇಹಗಳು ಮಂಗಳ ರೂಪದಲ್ಲಿ ಆವಿರ್ಭವಿಸಿ, ಶಿವನ ಸುತ್ತಲೂ ದಿವ್ಯ ಪಂಚ ಮೂರ್ತಿಗಳಾಗಿ ಕ್ಷಣಾರ್ಧದಲ್ಲಿ ಅಲಂಕೃತರಾದರು. ಇವರು ೬೪ ವಿದ್ಯೆಗಳಲ್ಲಿ ವಿಶಾರದರು. ಅಖಿಲ ತಾಂತ್ರಿಕ ವೈದಿಕ ವಿದ್ಯೆಗಳಲ್ಲಿ ವಿಚಕ್ಷಣಸಂಪನ್ನರು, ಮಾಯಾಮಲ ವಿರಹಿತರು, ಮಹಾಮಹಿಮ ವಿಭೂಷಿತ ಮಹಾ ವಿಭೂತಿಗಳು, ಭವರೋಗ ವೈದ್ಯರು, ಶಿವತತ್ವವೇತ್ತರು, ಹಾಗೂ ಶ್ರೀ ಆದಿ ಜ|| ಪಂಚಾಚಾರ್ಯರು, ಶೈವಾಗಮಾಂಭುಜ ಭಾಸ್ಕರರಿವರು. ಇವರನ್ನು ತೈತ್ತಿರಿಯೋಪನಿಷತ್ತಿನಲ್ಲಿ **"ಸ ವಾ ಏಷಪುರುಷಃಪಂಚಧಾ"** ಅಂದರೆ ಇವರೇ ಐವರು ಅಪ್ರಾಕೃತ ಶಿವನ ಮೂಡ್ಡೋಲಗವನ್ನು ಅಲಂಕರಿಸಿ ವಿರಾಜಿಸುವ, ಚಿದ್ಬಿಂದು, ಚಿದ್ರೂಪಿ, ಚಿತ್ಕಳಾಮಯ ಚಿನ್ಮೂರ್ತಿಗಳು. ಶಿವನು ಇವರಿಗೆ ಏಕೋತ್ತರ ಶತಸ್ಥಲದ ಸಾರಾಮೃತವನ್ನು ಬೋಧಿಸಿ, ಇದನ್ನು ಅಖಿಲ ಬ್ರಹ್ಮಾಂಡಗಳಲ್ಲಿನ ಸಮಸ್ತ ದೇವ ದಾನವ ಮಾನವರುಗಳಿಗೆಲ್ಲಾ ಮೋಕ್ಷಾರ್ಥ ಬೋಧಿಸಿ, ಸ್ಥಾಪಿಸಿರೆಂದು ಆರುಹಿದನು. ಇದು ಕಾರಣ ಶ್ರೀ ಜ|| ರೇಣುಕಾದಿ ಪಂಚಾಚಾರ್ಯರಿಂದ ಸ್ಥಾಪಿತವಾದ ಮತ ಅಪ್ರಾಕೃತವೆನಿಸಿ, ಚತುರ್ಮುಖ ಬ್ರಹ್ಮನ ಸೃಷ್ಟಿಗೆ ಭಿನ್ನಪಟ್ಟು ಅತೀತವೆನಿಸಿದೆ. ಇಂತಪ್ಪ ಶಿವನಿಂದಾದ ಸೃಷ್ಟಿ ಕ್ರಮವನ್ನು ಅನುಸರಿಸಿ ಚತುರ್ಮುಖ ಬ್ರಹ್ಮನು, ಶಿವನನ್ನೂ ಶ್ರೀ ಪಂಚಾಚಾರ್ಯರನ್ನೂ ಭಕ್ತ್ಯಾವಂದಿಸಿ, ತನ್ನ ತನುವಿನಿಂದ, ಬ್ರಹ್ಮ ಮಾನಸ ಪುತ್ರರಾದ ಶ್ರೀ ನಾರದ, ಪುಲಸ್ತ್ಯಬ್ರಹ್ಮ, ದಕ್ಷಬ್ರಹ್ಮ ಮೊದಲಾದವರನ್ನೂ, ದೇವದಾನವ ಮಾನವರನ್ನೂ, ಪ್ರಾಕೃತ ಸೃಷ್ಟಿಗೊಳಪಡಿಸಿ, ಜಗತ್ತನ್ನು ಚತುರ್ಮುಖನ್ನು, ಸೃಷ್ಟಿಸಿರುವನು. ಇದರಿಂದಾಗಿ ಕಾಣುವೀ ಜಗತ್ತಿನಲ್ಲಿ ಹಾಗೂ ದೃಶ್ಯಾದೃಶ್ಯ, ಸ್ಥಾವರ ಜಂಗಮಾತ್ಮಕ ಜಗತ್ತು ಅಪ್ರಾಕೃತ ಸೃಷ್ಟಿ ಮತ್ತೂ ಪ್ರಾಕೃತ ಸೃಷ್ಟಿಗಳೆಂದು ವಿರಾಜಿತವಾಗಿವೆ.

## ಕೈಲಾಸ ಪರ್ವತ ವರ್ಣನಂ

(ಶ್ರೀ ಸಿ. ಶಿ. ತೃತೀಯ ಪರಿಚ್ಛೇದದ ಪೂರ್ವಾರ್ಧ)

**ಕದಾಚಿದಥ ಕೈಲಾಸೇ । ಕಲಧೌತ ಶಿಲಾಮಯೇ ।**
**ಗಂಧರ್ವ ವಾಮನಯನಾ । ಕ್ರಿಡಾ ಮೌಕ್ತಿಕ ದರ್ಪಣೇ ॥**

ಭೂಲೋಕದಲ್ಲಿರುವ ಹಾಗೆ, ಶ್ರೀ ಮತ್ಕೈಲಾಸದಲ್ಲೂ ಗಿರಿಗಹ್ವರಗಳೂ, ಪರ್ವತಗಳೂ, ನದ ನದೀ ವಾಪೀ ಕೂಪ ತಟಾಕಗಳೂ, ಮನೋರಂಜಿತ ವಾದ ಹಚ್ಚ ಹಸುರಿನ ವನಗಳೂ, ಅವುಗಳಲ್ಲಿ ಮಂದಾರ, ಬಕುಳ, ಅಶೋಕ, ಬಾಳೆ, ತೆಂಗು, ಕಿತ್ತಳೆ, ಮಾವು, ನಿಂಬೆ, ನೆಲ್ಲಿ, ಚಂದನ, ಮುಂತಾದ ವಿವಿಧ ಬೃಹದ್ ಫಲ ವೃಕ್ಷಗಳಿಂದಲೂ ಹಾಗೂ ಅಲ್ಲಲ್ಲಿ ಕಣ್ಮನಂಗಳನ್ನು ಸೂರೆ ಗೊಳ್ಳುವ ತೆರದಲ್ಲಿ ಅರಳಿ, ಘಮಘಮಿಪ ಸೂತ್ತಲೂ ಸುಗಂಧವ ಬೀರುವ ಏಳುಸುತ್ತಿನ ಮಲ್ಲಿಗೆ, ಗುಂಡುಮಲ್ಲಿಗೆ, ಜಾಜಿ, ಪಾರಿಜಾತ, ರೋಜ, ಸೇವಂತಿಗೆ, ಸಂಪಿಗೆ, ತಾವರೆ ಕಮಲಗಳ ಪರಾಗದ ಮಕರಂದದಿಂದ ಸೂಸುವ, ಜೇನುಂಡ ದುಂಬಿಗಳ ತಂಡವು, ಸುತ್ತಲೂ ಹ್ರೀಂಕಾರ ಧ್ವನಿಯಿಂದ ಝೇಂಕ ರಿಸುತ್ತಿರಲು, ಮತ್ತೊಂದು ಕಡೆ ರಜತಮಯ ಶಿಲಾ ವಿಶಿಷ್ಟವಾದ, ಕೈಲಾಸದ ಕಲ್‌ನೆಲವೆಲ್ಲಾ. ಬೆಳ್ಳಿಯ ಪದರುಗಳಿಂದ ಹಾಸಿದ ಸೊಬಗಿನಿಂದ ರಾರಾಜಿಸು ತ್ತಲಿತ್ತು. ಅಲ್ಲಿ ನೆರೆದಿರ್ದ ಗಂಧರ್ವ ಸ್ತ್ರೀಯರ ಎಡೆಗಣ್ ಕಿರುನೋಟದ ಸಿಂಗಾರದಾಟಕ್ಕೆ ಆ ಪ್ರದೇಶ ಮುತ್ತಿನ ಕನ್ನಡಿಯಂತೆ ಮನಮೋಹಕವೆ ನಿಸಿತ್ತು. ಅಲ್ಲಿನ ನೈಸರ್ಗಿಕ ಚಂದದ ಗುಹೆಗಳಲ್ಲಿ,

**ಸಾನಂದ ವರಯೋಗೀಂದ್ರ । ಬೃಂದಾಲಂ ಕೃತ ಕಂದರೇ ॥**

ಎನ್ನುವ ಸಾನಂದಾದಿ ಅನೇಕ ಶಿವಯೋಗಿಗಳ ವೃಂದಕ್ಕೆ ಇಂಪಾದ ತಪಸ್ಸಿಗೆ ರಂಜಿತವಾದ ಸ್ಥಾನಗಳು ಆಕರ್ಷಣೀಯವೆನಿಸಿದ್ದವು. ಸುತ್ತಲೂ ಶುಕಪಿಕ, ಮಯೂರಾದಿ ಸಮೂಹದ ಮಧುರ ಧ್ವನಿಗಳಿಂದ ಇಂಪಾಗಿ ಪಾಡುವ ಗಾನಕ್ಕೆ ಮನಸೋತಿರಲು ಎತ್ತೆತ್ತ ನೋಡಿದರತ್ತತ್ತ ಮಾಣಿಕ್ಯದ ರತ್ನ ದೀಪಗಳು ಪರಿಶೋಭಿಸುತ್ತಲಿದ್ದವು. ಶಿವನ ಕೈಲಾಸ ಮಹಾಧ್ವಾರದ ಇಕ್ಕೆಡೆಗಳಲ್ಲಿನ ಕನಕಮಯ ಸ್ಥಂಭಗಳ ಮಧ್ಯೇ ಶಂಖ, ಪದ್ಮ ಮಹಾನಿಧಿಗಳ ಕೆತ್ತನೆಯ ಚಿತ್ರ ಆಕರ್ಷಿತವಾಗಿದ್ದವು. ಅಲ್ಲಿನ ಮಂದೆಡೆಯಲ್ಲಿ ರಮ್ಯವಾದ ಮಾನಸ ಸರೋವರ ದಲ್ಲಿ ರಾಜ ಹಂಸಗಳು ಮಂದಗಮನದಿಂದ ಮನೋಹರವಾಗಿ ಕ್ರೀಡಿಸುವ ದೃಶ್ಯ, ಪ್ರೇಕ್ಷಕರ ಕಣ್ಮನಂಗಳನ್ನು ತಣಿಸುವಂತಿತ್ತು. ಶ್ರೀಮತ್ ಕೈಲಾಸದ ಮಹಾದ್ವಾರ ತೋರಣ,

ಸಂ ರೂಢ । ಶಂಖ ಪದ್ಮ ನಿಧಿದ್ವಯೋ ||

ಎಂಬುದಾಗಿ ಶ್ರೀ ಶಿವಯೋಗಿ ಶಿವಾಚಾರ್ಯರು ಮುಕ್ತಕಂಠದಿಂದ ಕೀರ್ತಿಸಿರುವರು. ಮಾನವರಿಗೆ ಶ್ರೀಮತ್ಕೈಲಾಸ ದರ್ಶನ ದುರ್ಲಭವಿರುತ್ತೆ.

ದುರ್ಲಭೋ ಮಾನುಷೋ ದೇಹಃ। ದೈಹಿನಾ ಕ್ಷಣ ಭಂಗುರಃ||

ತತ್ರಾಪಿ ದುರ್ಲಭಂ ಮನ್ಯೇ । ಕೈಲಾಸ ಪ್ರಿಯದರ್ಶನಂ||.

---

## ಶಿವ ವರ್ಣನಂ

ವಂದಾರು ದೇವ ಮುಕುಟ । ಮಂದಾರ ರಸವಾಸಿತಂ ||
ರತ್ನಸಿಂಹಾಸನಂ ದಿವ್ಯ । ಮಧ್ಯಸ್ತಂ ಪರಮೇಶ್ವರಂ||
ಕೈಲಾಸ ಶಿಖರೇ ರಮ್ಯೇ । ಶಂಕರಸ್ಯ ಶಿವಾಲಯೇ||

ಶ್ರೀ ಮತ್ಕೈಲಾಸದಲ್ಲಿ ಸರ್ವತ್ರ ವಜ್ರವೈಢೂರ್ಯ, ಮರಕದ, ಮಾಣಿಕ್ಯಗಳಿಂದ ದಿವ್ಯವಾಗಿ ಕೆತ್ತಲ್ಪಟ್ಟ ಗೋಡೆಗಳಿಂ, ಅಲ್ಲಲ್ಲಿ ಪೋಣಿಸಿದ ಮುತ್ತಿನ ಮಣಿಗಳ ಹಾರಗಳು ಮಿನುಗುತ್ತಿರಲು, ಇಂತು ಚೆಲ್ವಾಂತ, ಆ ಮಣಿಮಂದಿರದೊಳಗೆ, ಚಂದ್ರಕಾಂತ ಸೂರ್ಯಕಾಂತ ಶಿಲೆಗಳ ಪ್ರಕಾಶದ ಮಧ್ಯೇ ; ಮಧ್ಯಮಣಿ ನ್ಯಾಯದಂತೆ, ಕೋಟಿ ಕೋಟಿ ಲಾವಣ್ಯಾತಿಶಯ ಗಳಿಂದ ರಾರಾಜಿಸುತ್ತ ಶಿವನು ಉನ್ನತ ರತ್ನ ಖಚಿತ ದಿವ್ಯ ಮಣಿಮಯ ವೀರ ಸಿಂಹಾಸನಾ ರೂಢನಾಗಿ ಅಲಂಕೃತನಾಗಿದ್ದನು. ಆ ದೇವ ದೇವನಾದ ಮಹಾದೇವನು. ಶ್ರೀ ಗೌರೀರಮಣನ ಇಂತಪ್ಪ ಅರುಣೋದಯದ ಹೊಂಬಣ್ಣದ ಕಾಂತಿಯನ್ನು ತಿರಸ್ಕರಿಸುವಂಥಾ ಕಾಂತಿಯುಳ್ಳ ಪದನಖ ಚಂದ್ರದಲ್ಲಿ ಪ್ರತಿ ಬಿಂಭಿಸಿದ ತಮ್ಮ ಶೋಭಿತವಾದ ಮುಖ ಕಮಲಗಳನ್ನು ಕಂಡ ಅಸಂಖ್ಯಾತ ಪ್ರಮಥ ಗಣ, ದೇವಗಣ ಮುನಿಗಣ, ಬ್ರಹ್ಮಜನರು, ರಾಜ ಮಹಾರಾಜರೂ ಚಕ್ರವರ್ತಿಗಳೂ, ವಿಷ್ಣು ಬ್ರಹ್ಮಾದಿ ಅಖಿಲ ದೇವತೆಗಳು ಭಕ್ತ್ಯೋದ್ರೇಕದಿಂದ, ಮುಕ್ಕಣ್ಣೀಶ್ವರನ ಅನನ್ಯ ಭಕ್ತಿ ಭಾವದಿಂದ ಸ್ತುತಿಸಿ ವಂದಿಸುತ್ತಲಿದ್ದರು. ಕಿರೀಟಧಾರಿಗಳಾದ ಮಹೋದಯರು ಶಿವನನ್ನು ವಂದಿಸುತ್ತಿರುವಾಗ, ಶಿವನ

ಪದನಖಚಂದ್ರದಲ್ಲಿ ತಮ್ಮ ಕಿರೀಟಗಳಲ್ಲಿ ಅಲಂಕೃತವಾದ ವಿಕಸಿತ ಪಾರಿಜಾತ ಪುಷ್ಪಗಳ ರಸಭರಿತ, ಮಕರಂದದ ಪರಾಗಗಳಿಂದ ಸುವಾಸಿತವಾದ ಪಾದ ಕಮಲಗಳನ್ನು ಕಂಡ ಭಕ್ತಸ್ತೋಮ ಅತುಲಾನಂದದಲ್ಲಿ ತೋಯ್ದು ಓಲಾಡಿ ದರು. ಮಹಾದೇವನು ಮುತ್ತಿನ ಸರಗಳಿಂದ ಕೂಡಿದ ರುಂಡಗಳ ಮಾಲೆ ಯಿಂದಲೂ, ಪೂರ್ಣಚಂದ್ರನ ಸೌಂದರ್ಯವನ್ನು ಮೀರಿಸುವಂಥಾ ಮುಖ ಕಾಂತಿಯಿಂದಲೂ, ವಿರಾಜಿತನಾಗಿದ್ದನು. ಕಾಮಾರಿಯ ಥಳಥಳಿಸುವ ಕರ್ಣಕುಂಡಲಗಳು, ಆತನ ಕಪೋಲದ ಮೇಲೆ ಕ್ರೀಡಿಸುವಂತಿರುವ ಸೊಬಗಿನ ಕರ್ಣ ಕುಂಡಲಗಳು ವರ್ಣನಾತೀತವೆನಿಸಿದ್ದವು. ಕಾಲಾರಿಯ ಕೊರಳಲ್ಲಿ ಕಾಲಕೂಟದ ಕಪ್ಪುವೊಪ್ಪಿಹುದು. ಇಂತಪ್ಪ ನಂಜುಂಡ ಶಿವನ ಸರ್ಪಗಳ ವಿಷಾ ಹಾರ ಶೃಂಗಾರ, ಭಕ್ತಜನಮಂದಾರ, ಭೋ ಭೋ ! ಮಣಿಮಂಜೀರದ ಬೊಂಬೆಳಗಿನಿಂದ ತೊಳ ತೊಳಗಿ ಬೆಳಗುವ ಹರನೇ, ಚಂದ್ರಾರ್ಧ ಶೇಖರನೇ ನಿನ್ನ ದಿವ್ಯ ಚರಣ ಕಮಲಗಳನ್ನು ನಮಿಸುವೆವು. ಓ ಚಂದ್ರಧರಾ, ಗಂಗಾಧರಾ, ವೃಷಭಾರೂಢನೇ ! ರಕ್ಷಿಸು ರಕ್ಷಿಸು ನಮ್ಮ ನನವರತ.

——

## ಶಕ್ತಿ ವರ್ಣನಂ

**ಉಮಯಾ ಸಮಮಾಸೀನಂ । ಲೋಕಜಾಲ ಕುಟುಂಬಯಾ।**
**ಅಪೂರ್ವ ರೂಪಮು ಭಜನ್ । ಪರಿವಾರಾಃ ಸಮಂ ತತಃ ॥**

ಭೋ ! ಭುವನೇಶ್ವರಿ, ಓಂಕಾರ ಸ್ವರೂಪಿಣೀ ! ಭುವನಾಂಡಕೋಟಿಗಳ ಅಧಿಪತಿ ಮುಕ್ಕಣ್ಣೇಶ್ವರನ ಅರ್ಧಾಂಗಿ,

**ಶಂಭೋಃ ಧರ್ಮಚಾರಿಣೀ। ದೇವೀ ನಮಸ್ತೇ ನಮಸ್ತೇ ನಮಃ ॥**

ಶಿವನ ಅರ್ಧಾಂಗಿ, ಪಾರ್ಶ್ವವರ್ತಿನಿಯಾಗಿ ಅವಿನಾಭಾವ ಸಂಬಂಧದಿಂದ ಸಚ್ಚಿದಾನಂದ ನಿತ್ಯ ಪರಿಪೂರ್ಣಳಾದ ಜಗದಾಂಬಿಕೆಯೇ ಶರಣು ಶರಣು. ನಿನ್ನ ಅಗಣಿತ ದಿವ್ಯ ಶಕ್ತಿ ವೈಖರಿಯನ್ನು ಚತುರ್ವೇದಗಳು ಅಹೋ ರಾತ್ರಿ ಅಖಂಡ ವಾಗಿ ಭಕ್ತಿಯಿಂ ಸ್ತುತಿಸುತ್ತಲಿರುವುವು, ಶೃತಿಯು ನಿನ್ನ ಅಗಣಿತ ಮಹಿಮೆ ಯನ್ನು,

**ಪರಾಸ್ಯ ಶಕ್ತಿಃರ್ವಿವಿಧೈವಶ್ರೂಯತೇ। ಜ್ಞಾನಬಲ ಕ್ರಿಯಾಚ॥**

ಎಂದು ಸಾರುತ್ತಿರುವಳು, ಚಿಚ್ಛಕ್ತಿಯುತಳಾದ ನೀನು, ಜಗತ್ಸೃಷ್ಟಿಗೆ ಉನ್ಮುಖಳಾದಾಗ ನಿನ್ನ ಗರ್ಭ ಸುಧಾಂಬುಧಿಯಿಂದ ನಿನ್ನ ಸಂಕಲ್ಪದಂತೆ ಇಚ್ಛಾಶಕ್ತಿ ಮೈದೋರಿ, ಆದರಿಂದ ಮತ್ತೆ ಜ್ಞಾನ ಕ್ರಿಯಾಶಕ್ತಿಗಳು ಆವಿರ್ಭವಿಸಿರುವುವು. ತದಂಗವಾಗಿ,

**|| ಪಿಂಡಾಂಡ ಬ್ರಹ್ಮಾಂಡಯೋರೈಕ್ಯಂ ।**

ಎಂಬ ಸನಾತನ ಸಿದ್ಧಾಂತಕ್ಕನುಗುಣವಾಗಿ, ಈ ಅಖಂಡ ಮಹೀ ಮಂಡಲದಲ್ಲಿರುವ ಎಲ್ಲಾ ಅಂಶಗಳು, ಸೂಕ್ಷ್ಮಾತಿ ಸೂಕ್ಷ್ಮವಾಗಿ ಪಿಂಡಾಂಡ ದಲ್ಲೂ ಸ್ಫುರಿಸುತ್ತಲಿರುವುದು. ಅನಂತ ಕೋಟಿ ಬ್ರಹ್ಮಾಂಡಗಳನ್ನು ವ್ಯಾಪಿಸಿರುವ ಪರಾಶಕ್ತಿ, ಪಿಂಡಾಂಡದಲ್ಲಿ **"ಕುಂಡಲಿನಿ"** ರೂಪದಲ್ಲಿ, ಪಾಯು ಮೇಢ್ರಗಳ ಮಧ್ಯೇ ಅಂದರೆ ಮೂಲಾಧಾರಚಕ್ರದ ಮಧ್ಯೇ ವಿರಾಜಿಸುವ **"ಸ್ವಯಂಭು ಲಿಂಗವನ್ನು"** ಮೂರುವರೆಸುತ್ತು ಸುತ್ತಿ ಕೊಂಡಿರುವಳು. ಅಲ್ಲಿಂದಲೇ ಪ್ರಾರಂಭವಾಗುವ **"ಸುಷುಮ್ನಾನಾಡಿಯು"** ರಂಧ್ರವನ್ನು ಹೆಡೆಯಿಂದ ಮುಚ್ಚಿ ಕೊಂಡಿರುವಳು. ಧ್ಯಾನಾರೂಢರಾದ ಶಿವಯೋಗಿಗಳು, ಮತ್ತು ಕ್ರಿಯಾವಿಶಿಷ್ಟರಾದ ಸದ್ಭಕ್ತರು, ಅವ್ಯಭಿಚಾರಿಣಿ ಭಕ್ತಿಯೋಗದಿಂದ, ಪ್ರಾಣಾಯಾಮಾದಿ ರೇಚಕ, ಪೂರಕ, ಕುಂಭಕ ಬಂಧನದಿಂದ ಕುಂಡಲಿನಿಯು ವಾಯುನ್ನು ಕಂದರ್ಪಾಗ್ನಿಯಿಂದ ಉದ್ದೀಪನ ಗೊಳಿಸಲು, ಮುಚ್ಚಿರುವ ಆ ಹೆಡೆ ತೆರೆಯಲ್ಪಟ್ಟು, ಅಲ್ಲಿಂದಲೇ ಪ್ರಾರಂಭವಾಗುವ ಸುಷುಮ್ನಾನಾಡಿಯು ದ್ವಾರದ ಮೂಲಕ ಪಿಂಡ ನಾಮಕ ಜೀವಾತ್ಮನು, ಮೂಲಾಧಾರ ಚಕ್ರ ಮಾರ್ಗವಾಗಿ ಊರ್ಧ್ವದಿಶೆಯಲ್ಲಿ ಮೇಲಕ್ಕೆ ಶಿವಚಿಂತನೆಯೊಂದಿಗೆ ಏರುತ್ತಾ, ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ಧಿ ಮತ್ತು ಆಜ್ಞಾರೂಪ ಷಡ್ ಚಕ್ರಗಳ ರಾಜಮಾರ್ಗದಲ್ಲಿ ಹಾದು, ಸುಷುಮ್ನಾನಾಡಿಯ ಮೇಲ್‌ತುದಿ, ಸಹಸ್ರಾರ ಚಕ್ರದಲ್ಲಿ ಅಂತ್ಯಗೊಳ್ಳುವ ಸ್ಥಲದಲ್ಲಿ ಭಕ್ತಿಜ್ಞಾನ ಕ್ರಿಯಾ ವೈರಾಗ್ಯ ಗಳಿಂದ ಪ್ರದೀಪ್ತನಾದ ಅಂಗನು, ಮೇಲುಕ್ತಕ್ಷೇಂದ್ರವನ್ನು ಸ್ಪರ್ಶಿಸುತ್ತಲೇ, ಅಲ್ಲಿ ತಾನೇ ತಾನಾಗಿ ರಂಜಿಸುತ್ತಿರುವ ಚಿಲ್ಲಿಂಗದಲ್ಲಿ, ಜ್ಯೋತಿಯು ಸ್ಪರ್ಶಿಸಿದ ಕರ್ಪೂರ ಪರಂಜ್ಯೋತಿಯಾಗಿ ಬೆಳಗುವಂತೆ ಚಿಚ್ಛಕ್ತಿಯ ಕೃಪಾನುಗ್ರಹದಿಂದ ಅಂಗನು ಲಿಂಗಮಯನಾಗಿ ಪ್ರಕಾಶಿಸುವನು.

ಶಿವನ ಸಮವಾಯ ಸ್ವರೂಪಿಣಿಯಾದ ಶಾಂಭವಿಯು, ಸದಾ, ಸ್ಥಿರ ಯೌವ್ವನ ಲಾವಣ್ಯಾತಿ ಶೃಂಗಾರವಿಶಿಷ್ಟ ದೇದೀಪ್ಯಮಾನ ಶರೀರದಿಂದ ಪರಿ ಶೋಭಿಸುತ್ತಾ ಅನವರತ ಅನಂತ ಜೀವಕೋಟಿಗಳನ್ನು ಪರಿ ರಕ್ಷಿಸುತ್ತಾ ಅನವ ರತ ಅನಂತ ಜೀವಕೋಟಿಗಳನ್ನು ರಕ್ಷಿಸುತ್ತಲಿರುವ ಅನ್ನಪೂರ್ಣಾ ಮಾತೆಯನ್ನು ಅನನ್ಯ ಭಕ್ತಿಭಾವದಿಂದ ಶರಣು ಹೋಗುವೆನು. **ಅಚ್ಚ ಳಿಯದ ಶೃಂಗಾರ ಸಿಂಗಾರದ ಸ್ವರ್ಣಮಯ ಸರ್ವಮಂಗಳೆಯೇ ! ಎದೆ ತುಂಬಿದ ಕುಂಭ ಕುಚಭಾರದಿಂ, ಬಳುಕುವ ದಿವ್ಯ ಭವಾನಿಯೇ ! ವಂದಿಪೆ ನಿನಗೆ, ತಾವರೆಯ ತಂತುವಿನಂತೆ ತೋರುವ ಬಡನಡುವಿನ ಮೃಡಾಣಿಯೇ, ಶೃಂಗಾರ ತರಂಗಿಣಿಯ ಮಳಲ್ ದಿಣ್ಣೆಯಂತೆ ತುಂಬಿ ಬೆಳದ ನಿತಂಬದಂಬಿಕೆಯೇ ! ಶರಣು, ಭಕ್ತರ ಭಾಗ್ಯದ ಬಳ್ಳಿ ಸಕಲ ಸೌಭಾಗ್ಯವತಿ ನೀನು, "ಉಮಯಾ ಸಹವರ್ತತೇ ಸಾಂಬಃ ||"**

ಎಂಬಂತೆ ಅನವರತ ಶೋಭಿಸುವ ರತ್ನಸಿಂಹಾಸನಾರೂಢರಾದ ಶ್ರೀ ಉಮಾಮಹೇಶ್ವರರ ಸುತ್ತಲೂ, ೩೩ ಕೋಟಿ ದೇವತೆಗಳೂ ಬ್ರಹ್ಮರ್ಷಿ ಗಳೂ ಶ್ರೀ ನಾರದರೂ, ಶ್ರೀ ಜ|| ಪಂಚಾಚಾರ್ಯರೂ ವೀರ, ನಂದಿ, ಭೃಂಗಿ, ಸ್ಕಂದ, ವೃಷಭ, ವೀರಭದ್ರಾದಿಗಳೂ, ದ್ವಾದಶ ಆದಿತ್ಯರೂ, ಏಕಾದಶ ರುದ್ರರೂ, ರುದ್ರಕನ್ಯೆಯರೂ, ಸಪ್ತಮಾತೃಕೆಯರೂ ಸುಸ್ವರದಿಂದ ಆದಿಶಕ್ತಿ ಯನ್ನು ಸಮಷ್ಟಿಗೋಷ್ಟಿಯಿಂದ ಕೂಡಿ, **"ದೇವೀ ಪ್ರಸನ್ನಾರ್ತಿಹರೇ ! ಪ್ರಸೀದ,**

**ಪ್ರಸೀದ ಮಾತರ್ಜಗತೋಽಖಿಲಸ್ಯ || ಪ್ರಸೀದ ವಿಶ್ವೇಶ್ವರೀ |**
**ಪಾಹಿ | ವಿಶ್ವಂತ್ವಮೀಶ್ವರಿ, ದೇವೀ ಚರಾಚರಸ್ಯ ||**

---

## ದೇವತಾ ಸಮೂಹಕೃತ, ಶಿವಸೇವಾ ವರ್ಣನಂ

**ಪುಂಡರೀಕಾಕೃತಿಸ್ವಚ್ಛಂ | ಪೂರ್ಣಚಂದ್ರ ಸಹೋದರಂ ||**
**ದದೌ ತಸ್ಯ ಮಹಾಲಕ್ಷ್ಮೀಃ | ಸಿತಮಾತಪ ವಾರಣಂ ||**
**ತತೋಽನಂದೀ ಮಹಾಕಾಲ | ಶ್ಚಂಡೋ ಭೃಂಗಿರಿಟಿಸ್ತತಃ ||**

ಘಂಟಾಕರ್ಣಃಪುಷ್ಪದಂತಃ । ಕಪಾಲೀ ವೀರಭದ್ರಕಃ ॥
ಬ್ರಹ್ಮೋಪೇಂದ್ರ ಮಹೇಂದ್ರಾದ್ಯಾ । ವಿಶ್ವತಂತ್ರಾಧಿ ಕಾರಿಣಂ ।
ಆಯುಧಾಲಂಕೃತಪ್ರಾಂತಾಃ । ಪರಿತಸ್ತಂ ಸಿಷೇವಿರೇ ॥
ವಸಿಷ್ಠೋವಾಮದೇವಶ್ಚ । ವಿಶ್ವಾಮಿತ್ರಾತ್ರಿ ಶೌನಕಾಃ ।
ದಧೀಚಿ ಗೌತಮಶ್ಚೈವ । ಸಾನಂದ ಶುಕ ನಾರದಾಃ ।
ಉಪಮನ್ಯು ಭೃಗುವ್ಯಾಸ । ಪರಾಶರ ಮರೀಚಯಃ ॥
ಇತ್ಯಾದ್ಯಾಮುನಯಃ ಸರ್ವೇ ನೀಲಕಂಠಂಸಿಷೇವಿರೇ ॥

ಪಂಚಪಂಚ ಉಷಃ ಕಾಲದಲ್ಲೇ ನಿತ್ಯ ಶ್ರೀ ಪಾರ್ವತಿ, ಗಣಪತಿ, ಸುಬ್ರಹ್ಮಣ್ಯ, ವೀರಭದ್ರ, ಶ್ರೀ ಜ|| ರೇಣುಕಾದಿ ಪಂಚಾಚಾರ್ಯರೂ, ನಂದೀ ಭೃಂಗಿ, ಶ್ರೀ ಹರಿಬ್ರಹ್ಮೇಂ ದ್ರಾದಿಗಳೂ ಶ್ರೀ ನಾರದ ಶ್ರೀ ಸರಸ್ವತಿ ಲಕ್ಷ್ಮೀ ಇತ್ಯಾದಿ ತ್ರಿಶಕ್ತಿಯರೂ, ಶಚೀದೇವಿ, ರುದ್ರಕನ್ಯೆಯರೂ, ಕಿಂಪುರುಷ, ಗರುಡ, ಸಿದ್ಧ ಸಾಧ್ಯರೂ, ಹಾಹಾ ಹೂಹೂ ಇತ್ಯಾದಿ ಅಸಂಖ್ಯಾತ ದೇವತೆ ಗಳೂ, ಪ್ರಮಥಗಣಾಧೀಶ್ವರರೂ, ದ್ವಾಪಶ ಆದಿತ್ಯರೂ, ಮರುದ್ಗಣಗಳೂ, ವಾಸವಾದಿ ಋಷಿ, ಮಹರ್ಷಿಗಳೂ, ಸಪ್ತಮಾತೃಕೆಯರೂ, ದಾನವ ರಾಕ್ಷಸ ದೈತ್ಯಾದಿಗಳೂ, ಸಿದ್ಧವಿದ್ಯಾಧರೋರಗರೂ, ಶ್ರೀ ವಶಿಷ್ಠ, ವಾಮದೇವ, ಮರೀಚಿ, ವಿಶ್ವಾಮಿತ್ರ, ಅತ್ರಿ ಅನಸೂಯಾ, ಶುಕ್ರ, ಶೌನಕ, ಚ್ಯವನ, ಗಾಲವ, ಭೃಗು ಭಾರ್ಗವ, ಭರದ್ವಾಜ, ಗೌತಮ, ಮೈತ್ರೇಯ, ಶ್ರೀ ಅಗಸ್ತ್ಯ, ದಧೀಚಿ, ವೇದವ್ಯಾಸ, ಸಾನಂದ, ಉಪಮನ್ಯು, ದೂರ್ವಾಸ, ಮುನಿಶ್ರೇಷ್ಠರೂ, ಮಾಂಧಾತಾದಿ ಚಕ್ರವರ್ತಿಗಳೂ, ರಾಜ ಮಹಾ ರಾಜರೂ, ಅನಂತಾನಂತ ಭಕ್ತ ಸಮೂಹ, ಆನಂದಾಶ್ರುಭರಿತರಾಗಿ ಪ್ರಾರ್ಥಿಸು ತ್ತಿರಲು, ಪಾರ್ಶ್ವಸ್ಥ ಪರಿವಾರಾಣಾಂ । ವಿಮಲಾಂಗೇಷು ಬಿಂಬಿತಃ ||

ಸರ್ವಾಂತರ್ಗತ ಮಾತ್ಮಾನಂ । ಸ ರೇಜೇ ದರ್ಶಯನ್ನಿವ ॥

ಶಿವನು ತನ್ನ ರಜತಮಯ ದಿವ್ಯ ವೊಡ್ಡೋಲಗದಲ್ಲಿ ಉಮಾಸಹಿತನಾಗಿ ಮಂಡಿಸಿ ಪ್ರಸನ್ನವದನದಿಂದ,

ಅಭಯಂ ಸರ್ವ ಭೂತೇಭ್ಯೋ । ದಧಾಮ್ಯೇತದ್ ವ್ರತಂ ಮಮ ॥

ಎಂಬ ವ್ರತಧಾರಿಯಾಗಿ ತನ್ನ ಅಮೃತಹಸ್ತವನ್ನು ಮೇಲೆತ್ತಿ,

**ಸರ್ವೇಷಾಂ ಸನ್ಮಂಗಳಾನಿ ಭವಂತು । ಲೋಕಾಃ ಸಮಸ್ತಾಸ್ಸು ಖಿನೋ ಭವಂತು ॥** ಎಂದು ಹರಸುತ್ತಿರುವಾಗ ವೇದರ್ಷಿಗಳು, ಋಗ್, ಯಜುರ್, ಸಾಮ, ವೇದತ್ರಯಂಗಳನ್ನು ಘನಪಾಠಿಗಳೂ, ಉಚ್ಚಧ್ವನಿ ಯಿಂದ ಕ್ರಮವರಿತು ಆರೋಹಣ, ಅವರೋಹಣ, ಆಲಾಪನ ಪದ್ಧತಿಗಳನ್ನು ಗೌರವಿಸಿ ಗಂಭೀರವಾಗಿ ವೇದಘೋಷಗಳೊಂದಿಗೆ, ಜಗತ್ಪಿತನಾದ ಶ್ರೀನೀಲ ಕಂಠನನ್ನು ಸೇವಿಸಿ, ಸ್ತುತಿಸಿ, ಸುಪ್ರಸನ್ನ ಭಾವದಿಂದ ಸಂತೃಪ್ತಿಯಲ್ಲಿ ಮೂಳ್ಗಿ ವೋಲಾಡುತ್ತಿದ್ದರು.

ಇಂತಪ್ಪ ವೈಭವೋಪೇತದಿಂದ ಕೊಂಡಾಡಿದ ಮಹಾ ಉತ್ಸವದ ಸಂದರ್ಭದಲ್ಲಿ ಶ್ರೀ ಮಹಾಲಕ್ಷ್ಮಿ, ಶಿವನ ಬಳಿ ಉನ್ನತ ಸ್ಥಳದಲ್ಲಿ ನಿಂತು, ಪೂರ್ವ ಚಂದ್ರೋ ದಯದಂತೆ ಹೊಳೆಯುವ ಶ್ವೇತಛತ್ರಿಯನ್ನು ಹಿಡಿದಿರಲು, ವೀಣಾ ಪಾಣಿ ಶ್ರೀ ಶಾರದಾಂಬೆ ಸಪ್ತಸ್ವರಗಳಿಂದ ಮಂಜುಳ ಧ್ವನಿಯಿಂದ ಮಧುರತರ ಗಾನ ವನ್ನು ಹಾಡುತ್ತಾ ಮಹಾಮಹಿಮನಾದ ಶಿವನನ್ನು ಸ್ತುತಿಸುತ್ತಿದ್ದಳು. ನೂರೆಂಟು ಉಪನಿಷದ್ ಕನ್ಯೆಯರು ತಮ್ಮ ಕರಗಳಲ್ಲಿನ ಶಬ್ದಾಯಮಾನ ಬಳೆ ಗಳಿಂದ ಪ್ರಣವಮಯ ಬೀಸಣಿಗೆಗಳನ್ನು ಹಿಡಿದು ಮೆಲ್ಲಗೆ ಗಾಳಿ ಬೀಸುತ್ತ ಲಿದ್ದರು. ಇಪ್ಪತ್ತೆಂಟು ಶಿವಾಗಮಗಳೆಂಬ ದೇವತಾವನಿತೆಯರು, ಹರ್ಷ ಚಿತ್ತರಾಗಿ, ಪ್ರಣವೋಪಾಸನೆಯೊಂದಿಗೆ, ಧಾವಳ್ಯವಾಗಿ ಹೊಳೆಯುವ ಚಾಮ ರಗಳನ್ನು ಇಕ್ಕೆಡೆಗಳಲ್ಲಿ ನಿಂತು ಬೀಸುತ್ತಿದ್ದರು. ಶ್ರೀಗೌರೀರಮಣನು ಎಲ್ಲವನ್ನೂ ಠೀವಿಯಿಂದ ತನ್ನ ಎಡೆಗಣ್ ನೋಟದಿಂದ ಸುತ್ತಲೂ ಅಡಿಗಡಿಗೆ ತಿರುಗಿ ನೋಡುತ್ತ, ಸರ್ವರನ್ನೂ ಮಂದಹಾಸದಿಂದ ಚಕಿತಗೊಳಿಸುತ್ತ, ರತ್ನ ಸಿಂಹಾಸನಾರೂಢನಾಗಿ ವಿಜೃಂಭ ಭಾವದಿಂದ ರಂಜಿತನಾಗಿದ್ದನು.



## ಶ್ರೀ ಪರಮೇಶ್ವರಸ್ಯ ರಾಜವ್ಯಾಪಾರ ವರ್ಣನಂ

**ಕ್ಷಣಂ ಸ ಶಂಭುರ್ದೇವಾನಾಂ । ಕಾರ್ಯಭಾಗಂ ನಿರೂಪಯನ್ ।**
**ಕ್ಷಣಂ ಗಂಧರ್ವ ರಾಜಾನಾಂ । ಗಾನ ವಿದ್ಯಾಂ ವಿಭಾವಯನ್ ॥**

ಬ್ರಹ್ಮವಿಷ್ಣ್ವಾದಿಭಿರ್ದೇವೈಃ | ಕ್ಷಣ ಮಾಲಾಪಮಾಚರನ್ |
ಕ್ಷಣಂ ದೇವಮೃಗಾಕ್ಷೀಣಾಂ | ಲಾಲಯನ್ ನೃತ್ಯ ವಿಭ್ರಮಂ ||
ವ್ಯಾಸಾದೀನಾಂ ಕ್ಷಣಂ ಕುರ್ವನ್ | ವೇದೋಚ್ಚಾರೇಷು ಗೌರವಂ|
ಹಾಸ್ಯ ನೃತ್ಯಂ ಕ್ಷಣಂ ಪಶ್ಯನ್ | ಭೃಂಗಿಣಾ ಪರಿಕಲ್ಪಿತಂ ||
ಸಭಾಂತರಗತಂ ತಂತ್ರಂ | ರೇಣುಕಂ ಗಣನಾಯಕಂ |
ಪ್ರಸಾದಂ ಸುಲಭಂ | ದಾತು ಮಾಹೂ ಏತ್ಥಂ | ಸಮಾದಿ ಶತ್||

ರಜತಗಿರಿಯ ತನ್ನ ಪೊಡ್ಡೋಲಗದಲ್ಲಿ, ಅವ್ಯಭಿಚಾರಿಣೀ ಭಕ್ತಿಭಾವದಿಂದ ನೆರೆದಿದ್ದ ಅಪರಿಮಿತ ಭಕ್ತ ಸಮೂಹವನ್ನು ಪ್ರೇಮಾಮೃತಭಾವದಿಂದ ವೀಕ್ಷಿಸಿ ಒಮ್ಮೊಮ್ಮೆ ಉಮಾಕಾಂತನು ಪ್ರಸನ್ನ ಭಾವದಿಂದ ವಿರಾಜಿತನಾಗಿದ್ದನು. "ಜ್ಞಾನೀಚ ಅತೀವ ಮೇ ಪ್ರಿಯಃ" ಎಂಬಂತೆ ಶಿವಶರಣರೆಂದರೆ ಶಿವನಿಗೆ ಅತಿಮುದ್ದು. ತನ್ನ ಸಮೀಪದಲ್ಲೇ ನಿಂತಿದ್ದ ಶ್ರೀ ವಿಷ್ಣು ಬ್ರಹ್ಮೇಂದ್ರಾದಿ ದೇವರೊಡನೆ ಮುಗುಳ್ ನಗೆಯನ್ನು ಬೀರುತ್ತ ಕ್ಷಣಕಾಲ ಅವರುಗಳೊಂದಿಗೆ ಸಕಲ ಜೀವಾವಳಿಗೆ ಲೇಸನೆ ಬಯಸುವ ಮಹದ್ವಿಷಯಗಳನ್ನು ಗಂಭೀರವಾಗಿ ಆಲೋಚಿಸುತ್ತಲಿದ್ದನು. ತಕ್ಷಣ ದೇವತೆಗಳ ಕಡೆತಿರುಗಿ, ದೇವತೆಗಳಿರಾ ! ನೀವು ನಿಮನಿಮಗೆ ಕ್ಲಿಪ್ತವಾಗಿರುವ ಕರ್ತವ್ಯಗಳನ್ನು ನಿಸ್ಪೃಹಭಾವದಿಂದ ಆಲಸ್ಯವಿಲ್ಲದೆ ನೆರವೇರಿಸುತ್ತಲಿರಬೇಕೆಂದು ಆಜ್ಞಾಪಿಸುತ್ತಲಿದ್ದನ್ನು. ತನ್ನ ವಾಮ ಪರ್ಯಂಕದಲ್ಲಿ ಪ್ರಿಯದರ್ಶಿನಿ ಕಲ್ಯಾಣಿ ಶ್ರೀ ಪಾರ್ವತಿ ಮಂಡಿಸಿರಲು ಆ ದೇವಿಯನ್ನು ನೆಟ್ಟದೃಷ್ಟಿಯಿಂದ ನೋಡುತ್ತಾ ಶ್ರೀ ದೇವಿಯ ದಿವ್ಯ ಮುಖ ಮಂಡಲದ ಸೌರಭದಲ್ಲಿ ಆಕರ್ಷಿತನಾಗಿದ್ದನು. ಇಂತಿರುತ್ತ ತನ್ನ ಕಣ್ ಸನ್ನೆಯಿಂದ ಸಭಿಕರಲ್ಲಿ ಕೆಲವರನ್ನು ಬೀಳ್ಕೊಡುತ್ತಲಿದ್ದನು. ಒಂದು ಕಡೆ ಭೃಂಗಿದೇವನು ಅಡಿಗಡಿಗೆ ನವರಸಗಳ ಸೂಸುವ ವಿನೋದ ಚಕ್ರವರ್ತಿಯತೆ ನಟಿಸುತ್ತ ಪರಮಾತ್ಮನ ಪ್ರೀತಿಗೆ ಪಾತ್ರನಾಗಿದ್ದನು. ಆ ದೇವ ಸಭೆಯು ಮಹದೈಶ್ವರ್ಯಾನುಭೂತಿ ಪ್ರಭಾವಲಯದ ನಿರ್ವಹಣೆ ಕಾರ್ಯವನ್ನು ಶ್ರೀ ನಂದಿ ಕೈಯ್ಯಲ್ಲಿ ಬೆಳ್ಳಿ ಬೆತ್ತವನ್ನು ಹಿಡಿದು ಅತ್ತಿತ್ತ ತಿರುಗಾಡುತ್ತ ಇರಲು ಶಿವನು ನಂದಿಯ ಮೂಲಕ ಕೆಲವರನ್ನು ತನ್ನ ಹತ್ತಿರಕ್ಕೆ ಬರಮಾಡಿ ಕೊಂಡು ಅವರವರಿಗೆ ಸಮಯೋಚಿತ ಸಲಹೆಯನ್ನು ಕ್ಷಣಕಾಲ ನೀಡುತ್ತಲಿದ್ದನು.

ಇಂತು ಶ್ರೀ ಪರಮೇಶ್ವರನ ರಾಜ ವ್ಯಾಪಾರದ ವೈಖರಿ ಅಸದೃಶವಾಗಿತ್ತು. ಮೊಟ್ಟನಲ್ಲಿ, **ಚಿಂತಾಮಣಿಃ ಪ್ರಪನ್ನಾನಾಂ। ಶ್ರೀಕಂಠಃ ಪರಮೇಶ್ವರಃ ॥**

---

## ಶ್ರೀ ರೇಣುಕ ಗಣೇಶ್ವರಂ ಪ್ರತಿ ಶಿವಾದೇಶಃ

**ಶ್ರೀ ಶೈಲಸ್ಯೋತ್ತರೇ ಭಾಗೇ । ತ್ರಿಲಿಂಗ ವಿಷಯೇ ಶುಭೇ ।**
**ಕುಲ್ಯಪಾಕಾಭಿಧಂ ಪುಣ್ಯಕ್ಷೇತ್ರಮೇಕಂ ವಿರಾಜತೇ ॥**
**ಸೋಮೇಶ್ವರಾಭಿಧಾನಸ್ಯ । ತತ್ರ ವಾಸವತೋ ಮಮ ।**
**ಅಸ್ಪೃಶನ್ಮಾನುಷಂ ಭಾವಂ। ಲಿಂಗಾತ್ ಪ್ರಾದುರ್ಭವಿಷ್ಯಸಿ**
**ಮದದ್ವೈತಪರಂ ಶಾಸ್ತ್ರಂ ವೇದವೇದಾಂತ ಸಮ್ಮತಂ !**
**ಸ್ಥಾಪಯಿಷ್ಯಸಿ ಭೂಲೋಕೇ । ಸರ್ವೇಷಾಂ ॥ ಹಿತಕಾರಕಂ ॥**

ಭಕ್ತಿಭಾವದಿಂದ ಹಾಗೂ ತುಂಬಿದ ಹೃದಯದಿಂದ ಎಲ್ಲವನ್ನೂ ಶಾಂತವಾಗಿ ಮಹಾಸಭೆಯಲ್ಲಿ ಕುಳಿತು ನೋಡುತ್ತಲಿದ್ದ **"ಸಸರ್ಜಾತ್ಮ ಸಮಪ್ರಖ್ಯಾನ್"** ತಮ್ಮ ದಿವ್ಯಾತ್ಮ ತೇಜಸ್ಕರಾದ ಶ್ರೀ ಮಹಾಗುರು ರೇಣುಕರನ್ನು ಪರಮೇಶ್ವರನು ತನ್ನ ಬಳಿಗೆ ಕರೆದು, ರೇಣುಕಾ ನೀನು ಈಗ ವಿಶ್ವಧರ್ಮ ಸಂಸ್ಥಾಪನಾರ್ಥ ಧರ್ಮಕ್ಷೇತ್ರ ಹಾಗೂ ಕರ್ಮಾಚರಣೆಗೆ ಆಗರವೆನಿಸಿರುವ ಭೂಲೋಕದಲ್ಲಿ ಅವತರಿಸಬೇಕೆಂದು ತಿಳಿಸಿ, ಒಂದು ಸುಂದರ ಸಂದೇಶವನ್ನು ಆ ಮಹಾ ಸಭೆಯಲ್ಲಿ ರೇಣುಕರಿಗೆ ನೀಡಿದನು. ಹೇ ರೇಣುಕಾ ! ಭೂಲೋಕದ ಭಾರತ ದೇಶದಲ್ಲಿ ಇಹ ಪರಗಳಲ್ಲಿನ ಸುಖಸೌರಭ ಸಂಪತ್ತನ್ನು ಸುಲಲಿತವಾಗಿ ಸೂರೆಗೊಳ್ಳಲು ಸಾಧನೀ ಭೂತವೆನಿಸಿದ ಶ್ರೀ ಶೈಲಕ್ಷೇತ್ರವಂದಿದೆ. ಈ ಮಹಾ ಕ್ಷೇತ್ರಕ್ಕೆ ಉತ್ತರದಲ್ಲಿ ಶುಭಕರವಾದ ತ್ರಿಲಿಂಗ ರಾಜ್ಯವಂದಿದೆ. ಇದು ಆನಂದದ ಘಣಿಯೆನಿಸಿದೆ ಆಂದ್ರಪ್ರದೇಶ. ಈ ರಾಜ್ಯದಲ್ಲಿ **"ತ್ರಿಲಿಂಗಗಳು"** ಮೂರುಜ್ಯೋತಿರ್ಮಯ ಸ್ವಯಂಭುಲಿಂಗಗಳು ಉದ್ಭವಿಸಿ, ಭಕ್ತಕೋಟಿಯಿಂದ ಸತತ ನಿತ್ಯ ಪೂಜೆಗೊಂಡು ಲೋಕಾನುಗ್ರಹದಾಯಕವೆನಿಸಿವೆ. ಈ ರಾಜ್ಯದ ಒಂದು ದಿಕ್ಕಿನಲ್ಲಿ ವಾಯು ಲಿಂಗವೆನಿಸಿದ ಪ್ರಸಿದ್ಧ **"ಕಾಳಹಸ್ತೀಶ್ವರ ಜ್ಯೋತಿರ್ಲಿಂಗ"** ಮುಕ್ಕೋಣಾಕೃತಿಯಲ್ಲಿ ವಿಸ್ತರಿಸಿರುವ ಈ ಭೂವಲಯದ

ಮತ್ತೊಂದು ಮೂಲೆಯ ಕೊಲ್ಲಿಪಾಕಿಕ್ಷೇತ್ರದಲ್ಲಿ ಸ್ವಯಮೇ ಪ್ರಜ್ವಲಿಸುವ ಪೃಥ್ವಿಲಿಂಗವೆಂದು ಪೆಸರ್ಗೊಂಡ **"ಶ್ರೀ ಸೋಮನಾಥೇಶ್ವರ ಲಿಂಗ ರಾರಾಜಿಸುತ್ತಿರಲು"** ಮತ್ತೊಂದು ದೆಶೆಯಲ್ಲಿ ಶ್ರೀ ಶೈಲಗಿರಿಯ ಉನ್ನತ ಶಿಖರದ ಮೇಲೆ ಪರ್ವತ ಲಿಂಗವೆಂದು ಸ್ತುತ್ಯವಾಗಿದ್ದು **"ಜ್ಯೋತಿರ್ಮಯ ಸ್ವಯಂಭುಲಿಂಗ ಶ್ರೀ ಭ್ರಮರಾಂಬಾ ಸಮೇತ ಶ್ರೀ ಮಲ್ಲಿಕಾರ್ಜುನಲಿಂಗ"** ವಿರಾಜಿತವಾಗಿ ಸತತ ಸಮಸ್ತ ದೇವ, ದಾನವ, ಮಾನವಾದಿಗಳಿಂದ ವಿಧ್ಯುಕ್ತ ಪೂಜೆಗಳನ್ನು ಸ್ವೀಕರಿಸಿ ಸಮಸ್ತರನ್ನೂ ರಕ್ಷಿಸುತ್ತ ಮೋಕ್ಷ ಪ್ರದವೆನಿಸಿವೆ. ಈ ಮೂರು ಲಿಂಗಗಳನ್ನು ಆವರಿಸಿರುವ ರಾಜ್ಯವಾದ್ದರಿಂದ ಇದು ತ್ರಿಲಿಂಗ ರಾಜ್ಯವೆಂದು ಪೆಸರ್ಗೊಂಡು ಮಘಮಘಿಸುತ್ತಲಿದೆ. ನಾನು ಕೊಲ್ಲಿಪಾಕಿ **"ಕುಲ್ಯ ಪಾಕಾಭಿಧಂ ಪುಣ್ಯ ಕ್ಷೇತ್ರ ಮೇಕಂ ವಿರಾಜತೇ| ಸೋಮೇಶ್ವರಾಭಿಧಾನಸ್ಯ । ತತ್ರ ವಾಸವ ತೋ ಮಮ॥"** ಆ ದೇದೀಪ್ಯಮಾನವಾದ ಶ್ರೀ ಸೋಮನಾಥಲಿಂಗದಲ್ಲಿ ನಾನು ಅಲ್ಲಿ ಸತತ ಶ್ರೀ ಚಿಚ್ಛಕ್ತಿ ಚಿನ್ಮಯ ಸ್ವರೂಪದಿಂದ **"ಚಿಂತಾಮಣಿಃ ಪ್ರಪನ್ನಾನಾಂ॥** ಶರಣಾಗತ ರಕ್ಷಕನೆಂದು ಜಾಜ್ವಲ್ಯಮಾನವಾಗಿ ಸುಪ್ರಸನ್ನವಾಗಿದ್ದೇನೆ.

**ಧರ್ಮಮೇವ ಸಮಸ್ತಾನಾಂ | ದುಃಖಾನಾಂ ಶಮನೌಷಧಂ |**
**ತಸ್ಮಾತ್ ಧರ್ಮಾಮೃತಂಪೀತ್ವಾ| ಸುಖಿನಃ ಸಂತುಮಾನವಾಃ॥**
**ಸ್ಥಾಪಕಾಯಚ ಧರ್ಮಸ್ಯ । ಸರ್ವಧರ್ಮ ಸ್ವರೂಪಿಣೇ ।**
**ಅವತಾರ ವರಿಷ್ಠಾಯ ಶ್ರೀ ಮಜ್ಜಗದ್ಗುರು ರೇಣುಕಾ**
**ಚಾರ್ಯಾಯ ನಮಃ ॥**

ಪರಿಣಾಮದಿಂದ ವಿಭಿನ್ನವೆನಿಸುವುದಿಲ್ಲ. ಇದರಂತೆ ಬ್ರಹ್ಮ, ಜಗತ್ತು, ಜೀವರುಗಳು, ವಂದೇ ಮೂಲಕ್ಕೆ ಸೇರಿದ ಅವಿಕಾರ ಪರಿಣಾಮದಿಂದಾಗಿ ಈ ಮೂರೂ ಒಂದೇ ತತ್ವದ ಸಜಾತೀಯ ಅಂಶಗಳೆಂದರೆ ಸಮಂಜಸವೆನಿಸುವುದು. ಇತ್ಯಾದಿ ಕಾರಣಗಳಿಂದ, ಇತ್ತಿಚೀನ ಶಂಕರಾದ್ವೈತವಾದ ವಿವಾದಗಳಿಗೆ ಎಡೆ ಮಾಡಿದೆ. ಇವರ ಅದ್ವೈತ ಶಿದ್ಧಾಂತಕ್ಕೆ ವಿರುದ್ಧವಾಗಿ ಶ್ರೀ ರಾಮನುಜಾಚಾರ್ಯರೂ ಮತ್ತು ಸರ್ವಜ್ಞಾಚಾರ್ಯರೆನಿಸಿದ, ಶ್ರೀಮನ್ ಮಧ್ವಾಚಾರ್ಯರೂ ಒಕ್ಕೊರಲಿನಿಂದ ಜಗತ್ತು ಮಿಥ್ಯೆಯಲ್ಲ ಸತ್ಯವೆಂದೇ ಪ್ರತಿಪಾದಿಸಿರುವರು.

ಶಿವನು, ದ್ವಾಪರ ಯುಗಾರಂಭ ಕಾಲದಲ್ಲಿ ಶ್ರೀ ಮತ್ಕೈಲಾಸದ ತನ್ನ ಒಡ್ಡೋಲಗದಲ್ಲಿ ರೇಣುಕರಿಗೆ ಅರುಹುತ್ತಾ **ಮದದ್ವೈತಪರಂ ಶಾಸ್ತ್ರಂ"** ಎಂದಾಗ ಅದು ಅವಿಕಾರ ಪರಿಣಾಮವಾದದ, ಏಕೋತ್ತರ ಶತಸ್ಥಲ ಪ್ರವಿರಾಜಮಾನ ಶ್ರೀ ಷಟ್ಸ್ಥಲ ಸಿದ್ಧಾಂತವನ್ನೊಳಗೊಂಡ ವೇದ ವೇದಾಂತ ಸಿದ್ಧಾಂತಾಗಮೋಪನಿಷದಾದಿಗಳಿಗೆ ಸಮ್ಮತವೆನಿಸಿ, ಅಖಿಲ ಸಿದ್ಧಾಂತಗಳಿಗೆ ಪೂರಕವೆನಿಸಿರುವುದೆಂಬುದು ನಿತ್ಯ, ಸತ್ಯ, ಸುಂದರ ವಿಷಯವಿರುತ್ತೆ. ಆದ್ದರಿಂಧ,

**ಮಮ ಪ್ರತಾಪ ಮತುಲಂ| ಮದ್ಭಕ್ತಾನಾಂ ವಿಶೇಷತಃ |**
**ಪ್ರಕಾಶಯ ಮಹೀ ಭಾಗೇ । ವೇದ ಮಾರ್ಗಾನು ಸಾರತಃ ||**

ರೇಣುಕಾ ! ಭೂಲೋಕದಲ್ಲಿ ನೀನು ನನ್ನ ಪರಂಪರಾವತಾರಿಯಾಗಿ, ಎನ್ನ ಭಕ್ತರ, ರಕ್ಷಿಸುವ ರಕ್ಷಣೆ ಪೋಷಣೆಗೆ, ನಿನ್ನನ್ನು ಭಜಿಸಿ, ಸೇವಿಸಲಿ. ಭಕ್ತಿಯಿಂ ಭುವನದ ಅಖಿಲ ಜನಕೋಟಿ ವೇದ, ವೇದಾಂತ, ಶಿವಾಗಮ ಸಿದ್ಧಾಂತ ಸಮ್ಮತ, ಶಿವಾದ್ವೈತ ಶಾಸ್ತ್ರವಂ, ಸರ್ವಜನಕೆ, ಹಿತಕರವಾಗಿ ಆಸ್ವಾದಿಸುವಂತೆ, ಆಪ್ಯಾಯನಕರವಾಗಿ ಸ್ಥಾಪಿಸಿ, ಆಚರಿಸಿ ತೋರಿಸಿ, ಸ್ಥಾಯಿಯಾಗಿ, ಬಂಧುರವಾಗಿ, ಸರ್ವಕಾಲಕ್ಕೆ ಸುಮಧುರವಾಗಿರುವಂತೆ ಸ್ಥಾಪಿಸೈ, ಎಂದು ಕಂತುಹರನು ರೇಣುಕನಿಗೆ ಪೇಳಿ ಎಲ್ಲರಿಗೂ ತನ್ನ ಹುಬ್ಬು ಸನ್ನೆಯಿಂದ ಶುಭಕೋರಿ, ಮೃಡಾಣಿಯೊಡಗೂಡಿ, ರತ್ನಸಿಂಹಾಸನದಿಂದೆದ್ದು, ತನ್ನ ಅಂತಃಪುರಕ್ಕೆ ದಯಮಾಡಿಸಿದನು. ಪೊಡ್ಡೋಲಗದಲ್ಲಿ ನೆರೆದಿದ್ದ ಅಸಂಖ್ಯಾತ ಭಕ್ತಗಣ, ಶಿವ ಶಿವೆಯರನ್ನು ತುಂಬಿದ ಹೃದಯದಿಂದ ಹರ್ಷೋದ್ಗಾರ ಮಾಡುತ್ತಾ, ಶಿವಮಹಾದೇವ, ಸಾಂಬ ಸದಾಶಿವನೆಂದು ಸ್ತುತಿಸುತ್ತಾ ಅವರವರ ಸ್ವಸ್ಥಾನಂಗಳನ್ನು ಸೇರಿದರು. ಇಂತಪ್ಪ ಶಿವೋಕ್ತ ರಾಜ ಮಾರ್ಗದಲ್ಲಿ ಮಾನವರೆಲ್ಲಾ, ಅಚಲ ಭಕ್ತಿಭಾವದಿಂದ, ಲಿಂಗರೂಪಿ ಶಿವನ ಕಟ್ಟಾಜ್ಞೆಯಂತೆ ಐಕ್ಯಮತ್ಯದಿಂದ, ಇದರಲ್ಲೂ ವಿಶೇಷತಃ ಸಮಸ್ತ ಲಿಂಗಾಂಗಿ ಧರ್ಮಿಯರು, ರಾಗದೂರರಾಗಿ, ಪೊಮ್ಮನಸ್ಸಿನಿಂದ ಶ್ರೀ ಗುರುಕಾರುಣ್ಯ ಸ್ಥಲದಲ್ಲಿ ನಿಂತು, ನಿರಂತರ ಸುಖಿಗಳಾಗ ಬೇಕು.

**ಯತ್ಕೃಪಾ ಲೇಶ ಮಾತ್ರೇಣ । ವಾಂಛಿತಂ ಲಭತೇ ಪುಮಾನ್|**
**ತಂ ವಂದೇ ಗಿರಿಜಾನಾಥಂ । ಪರಬ್ರಹ್ಮ ಶಿವಾಭಿದಂ ॥**

ಸರ್ವಜ್ಞನೂ, ಸರ್ವಶಕ್ತಿ ಸಂಪನ್ನನೂ, ಸರ್ವಾಧಾರಮಯನೂ ಹಾಗೂ ಸರ್ವ ವ್ಯಾಪಿಯೆನಿಸಿದ ಸರ್ವೇಶ್ವರನು ಸಮಸ್ತ ಜೀವಕೋಟಿಗಳ ಉದ್ಧಾರಾರ್ಥ ತಾನು ವಿಶೇಷತಃ ಜ್ಯೋತಿರ್ಮಯ ಸ್ವಯಂಭುಲಿಂಗದಲ್ಲಿ ಸುಪ್ರತಿಷ್ಠತನಾಗಿರುವ ಮಹದಂಶವನ್ನು, ಶ್ರೀ ಮತ್ಕೈಲಾಸದ ಒಡ್ಡೋಲಗ ದಲ್ಲಿ ತನ್ನ ಸಂಭ್ರಮದಿಂ ದೇದೀಪ್ಯವಾಗಿ ವಿರಾಜಿಸುತ್ತಿದ್ದ ಶ್ರೀ ಜ|| ರೇಣುಕಾ ಚಾರ್ಯರನ್ನು ನೋಡಿ, "ಕಂದಾ ! ಬಾಯಿತ್ರ, ನೀನು ಈಗ ಭೂಲೋಕದಲ್ಲಿ ನನ್ನ ಅದ್ವೈತಮತ (ಅಂದರೆ ಶಿವಾದ್ವೈತ ಅಥವಾ ವಿಶೇಷಾ ದ್ವೈತ ಮತ ವೆಂಪರ್ಥ) ವನ್ನು ಸ್ಥಾಪಿಸಿ ಈ ತತ್ವಾವಳಿಯನ್ನು ಸಮಸ್ತ ಮಾನವ ಸಮು ದಾಯದಲ್ಲಿ ಸ್ಥಾಪಿಸಿ ಆಚರಿಸಿ ತೋರಿಸಿ ಬೋಧಿಸಲು ತೆರಳು. ಅಲ್ಲಿ ಶ್ರೀ ಶೈಲ ಕ್ಷೇತ್ರಕ್ಕೆ ಉತ್ತರದಲ್ಲಿರುವ ಧರ್ಮಕ್ಷೇತ್ರ ವೆನಿಸಿದ ತ್ರಿಲಿಂಗ ರಾಜ್ಯದ ಮಸ್ತಕ ಮಣಿಯಂತೆಸೆವ, ಕುಲ್ಯಪಾಕವೆಂಬ ಪುಣ್ಯಕ್ಷೇತ್ರದಲ್ಲಿ ನಾನು ಸ್ವಯಮೇ "ಸೋಮೇಶ್ವರಾಭಿಧಾನಸ್ಯ ತತ್ರ ವಾಸವತೋ ಮಮ" ಸೋಮೇಶ್ವರ ಲಿಂಗ ರೂಪದಲ್ಲಿ ಸದಾ ಉಜ್ವಲವಾಗಿ ಪ್ರಜ್ವಲಿಸುತ್ತಲಿದ್ದೇನೆ ತಿಳಿ. ಇಂತಪ್ಪ ನನ್ನ ಗರ್ಭದಿಂದ ನೀನು,

**ಆಸ್ಪೃಶನ್ಮಾನುಷಂ ಭಾವಂ | ಲಿಂಗಾತ್ ಪ್ರಾದುರ್ಭವಿಷ್ಯಸಿ ||**

**ಅಪ್ರಾಕೃತ ಸ್ವರೂಪದಿಂದ ತೇಜಸ್ಸಂಪನ್ನನಾಗಿ, "ಅಸ್ಪೃಶನ್ ಮಾನುಷಂ ಭಾವಂ ||** ಅಂದರೆ,

ಈ ಶಿವಲಿಂಗದಿಂದ ನೀನು ಉದಿಸುವ ಮುನ್ನ ಯಾರಿಗೂ ಅರಿವಾಗದೆ, ಯಾರ ಭಾವವೂ ನಿನ್ನ ಸ್ಪರ್ಶವಾಗದೇ, ಯಾರ ನೋಟವೂ ನಿನ್ನ ಮೇಲೆ ಬೀಳುವುದಕ್ಕೆ ಮುಂಚಿತವಾಗಿಯೇ ಅಂದರೆ ಅವ್ಯಕ್ತ ಚಿತ್ಕಳಾ ರೂಪದಲ್ಲಿ ಲಿಂಗ ದಿಂದ ಆವಿರ್ಭವಿಸಿ, ನಂತರ ತೇಜಸ್ಸಂಪನ್ನನಾಗಿ ಸರ್ವರಿಗೂ ಕಾಣಿಸಿಕೊಂಡು ಮಂತ್ರಮಯ ದಿವ್ಯ ಮಾನವ ರೂಪದ ಇಚ್ಛಾಮಯ ಜಗದಾಚಾರ್ಯನಾಗಿ ಪ್ರಕಾಶಿತನಾಗೆಂದು ಅನುಗ್ರಹಿಸಿ ವೀಳ್ಯವನಿತ್ತು ರೇಣುಕರನ್ನು ಭುವಿಯತ್ತ ಬೀಳ್ಕೊಟ್ಟನೆಂದು ಮೇಲಿನ ಶ್ಲೋಕದ ಭಾವಾರ್ಥ".

**ಮದದ್ವೈತ ಪರಂ ಶಾಸ್ತ್ರಂ । ವೇದವೇದಾಂತ ಸಮ್ಮತಂ |**

**ಸ್ಥಾಪ ಇಷ್ಯಸಿ ಭೂಲೋಕೇ | ಸರ್ವೇಷಾಂ ಹಿತಕಾರಕಂ ||**

(ಅ ೩ ಶ್ಲೋ ೭೦)

ಜಗನ್ನಿರ್ಮಾಣ ಕರ್ತನಾದ ಜಗದೀಶ್ವರನ ಅಣತಿಯಂತೆ ಜಗದಾದಿ ಶ್ರೀ ಜಗದ್ಗುರು ರೇಣುಕಾಚಾರ್ಯರು ವೇದವೇದಾಂತ ಸಿದ್ಧಾಂತಾಗಮೋಪನಿಷದಾದಿಗಳಲ್ಲಿ ಮಹಾದೇವನಿಂದ ಶ್ರೀ ಗಿರಿಜೆಗೆ ಆತ್ಮೀಯವಾಗಿ, ಕಾಂತಾ ಸಂಹಿತೆ ರೂಪದಲ್ಲಿ ಪ್ರೇಮದಿಂದ ಉದ್ಬೋಧಕವಾದ ಯಾವ ಘನ ಗಂಭೀರವೆನಿಸಿದ ಏಕೋತ್ತರ ಶತಸ್ಥಲಾತ್ಮಕ, ಅದ್ವೈತಪರ ಶಾಸ್ತ್ರನ್ನು ಮನಸ್ಸಿನಲ್ಲಿ ಧರಿಸಿ ಮತ್ತದನ್ನೇ ಭುವಿಯಲ್ಲಿ ಜಗದಾದ್ಯಂತ ಶಿವೋಕ್ತಿಯಂತೆ ಗಂಭೀರವಾಗಿ ಪ್ರತಿಪಾದಿಸಿರುವರು. ಕಲಿಯುಗದಲ್ಲಿ ಶ್ರೀ ಶೃಂಗೇರಿ ಜ|| ಶ್ರೀ ಆದಿ ಶಂಕರಾಚಾರ್ಯರು ತಮ್ಮ ಕಾಲದಲ್ಲಿ ವೇದಬಾಹ್ಯ ಮತಗಳಾದ ಜೈನ, ಬೌದ್ಧ, ಚಾರ್ವಾಕ ಧರ್ಮೀಯರೊಡನೆ ಹೋರಾಡುತ್ತಾ,

**ಬ್ರಹ್ಮ ಸತ್ಯಂ ಜಗನ್ಮಿಥ್ಯಾ । ಜೀವೋ ಬ್ರಹ್ಮೈವ ನ ಪರಃ ||**

ಎಂಬ ಸಿದ್ಧಾಂತವನ್ನು ಸ್ಥಾಪಿಸುವ ಭರಾಟೆಯಲ್ಲಿ, ತಮ್ಮದೇ ಆದ ವಿವರ್ತವಾದದ ತಳಹದಿಯ ಮೇಲೆ ಅದ್ವೈತ ಸಿದ್ಧಾಂತದ ಸಿದ್ಧಾಂತವನ್ನು ಪ್ರತಿಪಾದಿಸಿ ಸ್ಥಾಪಿಸಿರುವರು. ಇದೂ ಸಹ ವೇದವಿಹಿತ ವೈದಿಕ ಮತವೆನಿಸಿದೆ. ಇವರಂತೆ **"ಬ್ರಹ್ಮ ಜಗತ್ತು, ಜೀವ"** ಈ ಮೂರರಲ್ಲಿ ಬ್ರಹ್ಮ ಮತ್ತೂ ಜೀವ ಸತ್ಯವಿದ್ದು ಇವೆರಡರ ಮಧ್ಯೇ, ಮಧ್ಯಮಣಿ ನ್ಯಾಯದಂತೆ ಸತತ ಬ್ರಹ್ಮ, ಬ್ರಹ್ಮವೇ ಆದ ಜೀವನ, ಆಕರ್ಷಣೆಗಳಿಗೆ ಒಳಪಟ್ಟು ಸ್ಕಾಂತದಂತೆ ಆಕರ್ಷಿತವಾಗಿರುವ "ಜಗತ್ತು", ಜಗದೀಶ್ವರನಿಂದ ವಿಲಕ್ಷಣವಾದ ಮಿಥ್ಯಾ ತತ್ವವೆಂದು ಸಾರಿರುವರು. ಎರಡೂ ಕಡೆಗಳಲ್ಲೂ ಪರುಷಮಣಿಗಳಿದ್ದ ಬಳಿಕ ಮಧ್ಯವಿರುವ ಜಗತ್ತು, ಪರುಷ ಸೋಂಕಿದ ಕಬ್ಬಿಣ ಬಂಗಾರವಾಗುವಾಗ ಉಭಯತರ ಬ್ರಹ್ಮರುಗಳ ಅಂದರೆ "ಜೀವ, ಬ್ರಹ್ಮರ", ಮಧ್ಯೆಯಿರುವ **"ಜಗತ್ತೂ"** ಸಹ ಜಗತ್ಪತಿಯ ಅಂಶವೇ ಅಷ್ಠೆ.

"ಈಶಾವಾಸ್ಯ ಮಿದಂ ಸರ್ವಂ। ವಾಸುದೇವಸ್ಸರ್ವ ಮಿತಿ" ಮೊದಲಾದ ಉಪನಿಷದೋಕ್ತ ಘೋಷಣದಂತೆ "ಬ್ರಹ್ಮ ಜಗತ್ತು ಮತ್ತು ಜೀವ" ಈ ಮೂರು ಒಂದೇ ಸೂತ್ರದಲ್ಲಿ ಕಾಣುವ ಸರ್ವಭೂತಾಂತರಗಳಲ್ಲಿ ಪ್ರಜ್ವಲಿಸುವ ಪರಶಿವ ಬ್ರಹ್ಮನ ಅಂಶವೇ ಆಗಿದ್ದು "ಮಹತೋ ಮಹೀಯಾನ್" ಎಂದು ಸ್ತುತ್ಯವಿರುವಾಗ, ಒಂದೇ ಶ್ರೇಣಿಯಲ್ಲಿರುವ ಉಭಯ ಬ್ರಹ್ಮರುಗಳ ಮಧ್ಯೇ ಅನೃತ, ಮಿತ್ಯಾ ಜಗತ್ತು ಇರಲು ಹೇಗೆ ಸಾಧ್ಯವಾದೀತು ?

"ದೇವೋ ಗಾವೋ ಬ್ರಾಹ್ಮಣೋ ಏಕರಾಶಿ" "ಮೂಢೋ ಮೂರ್ಖೋ ಗಾರ್ಧಭೋ ಏಕರಾಶಿ" ಸಜಾತೀಯ ಶಬ್ಧಗಳು ಸಮಂಜಸವಿರುವುವು. ಇದರಂತೆ "ಬ್ರಹ್ಮ ಜಗತ್ತು ಜೀವರು" ಸಜಾತೀಯ ರಾಶಿಗೆ ಸೇರಿರಬೇಕು. ಆದರೆ ಶ್ರೀ ಶಂಕರಾಚಾರ್ಯರು ಎರಡು ಸಜಾತೀಯ ಶಬ್ಧಗಳ ಮಧ್ಯೇಯಿರುವ ಜಗತ್ತು "ಮಿಥ್ಯೇ" ಎನ್ನುವುದು ಸಮಂಜಸವಲ್ಲ. ತಾಯಿ, ಮಗ, ತಂದೆ ಒಂದು ವರ್ಗ. ಮಗ, ತಾಯಿತಂದೆಗಳ ರಕ್ತ ಹಾಗೂ ವೀರ್ಯದ ಅಂಶಗಳನ್ನು ಸಹಜವಾಗಿ ಹೊಂದಿರುವನು. ಹೀಗಲ್ಲದೆ ಈ ಮಗನು ತದ್ವಿರುದ್ಧ ಅಂದರೆ ಹುಲಿ, ಸಿಂಹಗಳ ರಕ್ತವನ್ನು ಹೊಂದಿರಲು ಸಾಧ್ಯವಿಲ್ಲ. ಬಂಗಾರದಿಂದ ವಿವಿಧಾಭರಣಗಳು ಬೇರೆ ಬೇರೆ ರೂಪ, ಹೆಸರು ಪಡೆದು ಶೋಭಿಸುತ್ತವೆ. ಇವುಗಳ ಬೆಲೆ ತೂಕಗಳಲ್ಲೂ ವ್ಯತ್ಯಾಸವಿದ್ದರೂ ಇವೆಲ್ಲವೂ ಬಂಗಾರದ ಅಂಶ ಬಿಟ್ಟಿಲ್ಲ. ಇದರಂತೆ, ವಿಜಾತೀಯ ವಸ್ತುವನ್ನು ಮಧ್ಯೆ ಇರಿಸಲು ಸಾಧ್ಯವಿಲ್ಲ.

**ಮಾಯಾ ಸಹಿತಃ ಪರಮೇಶ್ವರಃ । ಸರ್ವಂ ಜಗತ್ಸೃಷ್ಟ್ವಾ ।**
**ಸ್ವಯಂಚಾನು ಪ್ರವಿಶ್ಯಾ । ಭೋಕ್ತೃಭೋಗ್ಯಾದಿ ರೂಪೇಣ ।**
**ವಿಭಾಗಂ ಕೃತವಾನಿತ್ಯರ್ಥಃ ॥**

ಸಮುದ್ರದ ನೀರು ಉಷ್ಣಕ್ಕೆ ಆವಿಯಾಗಿ, ಮೋಡವಾಗಿ, ಮಳೆಯಾಗಿ, ನದ, ನದಿಗಳ ರೂಪ ತಾಳಿದರೂ ಸಹ, ಸಾಗರದ ನೀರಿನ ಸಜಾತೀಯ ಅಂಶದಿಂದ, ಸಾಗರದಲ್ಲಿ ಸಂಗಮವಾಗಿ, ಸಮುದ್ರದ ಜಲವೆನಿಸಿರುವಂತೆ ಅವಿಕಾರ ಪರಿಣಾಮ ಸಿದ್ಧಾಂತದಂತೆ "ಬ್ರಹ್ಮ ಜಗತ್ತು ಜೀವ" ಈ ಮೂರೂ ವಂದೇ ಸಜಾತೀಯರಿರುವುವು.

ಸಂಸಾರ ಸಾಗರಂ ಘೋರಂ । ತರ್ತುಂ ಮಿಂಚ್ಛತಿ ಯೋ ನರಃ ।
ರೇಣುಕ ಗೀತಾನಾವಂ । ಸಮಾಸಾದ್ಯ । ಪಾರಂಯಾತಿ
ಸುಖೇನ ಸಃ ॥

"ಶ್ರೀ ರೇಣುಕ ಗಣಾಧೀಶ್ವರಸ್ಯ । ಲಿಂಗಾವತಾರ ವರ್ಣನಂ"
(ನಾಲ್ಕನೇ ಪರಿಚ್ಛೇದ ಪೂರ್ವಾರ್ಧ)

ಅಥ ತ್ರಿಲಿಂಗ ವಿಷಯೇ। ಕುಲ್ಯಪಾಕಾಭಿಧೇ ಸ್ಥಲೇ ।
ಸೋಮೇಶ್ವರ ಮಹಾಲಿಂಗಾತ್ । ಪ್ರಾದುರಾಸೀತ್ ಸ ರೇಣುಕಃ ॥
ಪ್ರಾದುರ್ಭೂತಂ ತಮಾಲೋಕ್ಯ । ಶಿವಲಿಂಗಾ ತ್ರಿಲಿಂಗಜಾಃ ।
ವಿಸ್ಮಿತಾಃ ಪ್ರಾಣಿನಃ ಸರ್ವೇ । ಬಭೂವು ರತಿ ತೇಜಸಂ ॥
ಭಸ್ಮೋದ್ಧೂಲಿತ ಸರ್ವಾಂಗಂ । ಸಾರರುದ್ರಾಕ್ಷ ಭೂಷಣಂ ।
ಜಟಾ ಮುಕುಟ ಸಂಯುಕ್ತಂ। ತ್ರಿಪುಂಡ್ರಾಂಕಿತ ಮಸ್ತಕಂ।

ಶಿವನ ಆಜ್ಞೆಯನ್ನು ಶಿರದಲ್ಲಿ ಹೊತ್ತು ಶ್ರೀ ಜ|| ರೇಣುಕಾಚಾರ್ಯರು ಶ್ರೀ ಮತ್ಕೈಲಾಸದಿಂದ ಹೊರಹೊಟ್ಟು ಇಳಿಯುತ್ತಾ ಶ್ರೀ ಮದ್ವೈಕುಂಟ ವನ್ನು ಸೇರುತ್ತಲೇ;

ಪ್ರವಿದಿತಾಜ ರಮೇಶ ಶಕ್ರ । ಧ್ರುವ ದಿವಾಕರ, ಕುಮುದ
ಭಾಂಧವ। ಭುವನಗಳ ದಾಂಟುತ್ತೆ ಗೌರೀ ರಮಣನಾಜ್ಞೆಯಲಿ।
ಜವದಿ ಸಾರಿದನಲ್ತೆ ಭೂಲೋಕವನು । ಸದ್ಯೋಜಾತ ಮುಖ
ಸಂಭವನು । ರೇಣುಕನಮಲ ಶಿವಸಿದ್ಧಾಂತ ಪಾರಗನು ॥

ಶ್ರೀಮನ್‌ಲಕ್ಷ್ಮೀ ನಾರಾಯಣರು ಅತುಲಾನಂದ ಭರಿತರಾಗಿ, ಶ್ರೀ ಭುವನಾಚಾರ್ಯವರೇಣ್ಯ ಶ್ರೀ ಮದಾಚಾರ್ಯ ರೇಣುಕ ಗಣಾಧೀಶ್ವರರನ್ನು ಪೂರ್ಣಕುಂಭದೊಂದಿಗೆ ವೇದ ಘೋಷಗಳರವದಿಂದ ಸ್ವಾಗತಿಸಿ, ಉಚಿತಾಸನ ದಲ್ಲಿ ಕುಳ್ಳಿರಿಸಿ, ಮಹಾಗುರುವಿನ ಶ್ರೀ ಪಾದ ಪೂಜೆಯನ್ನು ಭಕ್ತ್ಯಾ ನೆರವೇರಿಸಿ ಸ್ತುತಿಸಿ ತಮ್ಮ ಸಂತೋಷವನ್ನು ವ್ಯಕ್ತಗೊಳಿಸಿದರು ಶ್ರೀ ಲಕ್ಷ್ಮೀ ನಾರಾಯಣರ

ಅವ್ಯಭಿಚಾರಿಣಿ ಭಕ್ತಿ ಭಾವಕ್ಕೆ ತೃಪ್ತರಾದ, ಶ್ರೀ ಶಿವನ ಸದ್ಯೋಜಾತ ಮುಖ ಸಂಭವರು, ಶ್ರೀಮನ್ನಾರಾಯಣನಿಗೆ ನಿತ್ಯ ಪೂಜೆಗಾಗಿ **"ಇಂದ್ರ ನೀಲಂ ಪೂಜಿತಂ ವಿಷ್ಣುನಾಂ" ನೀಲಮೇಘಶ್ಯಾಮಳ ವರ್ಣವುಳ್ಳ ವಿಷ್ಣುಃ ಐಂದ್ರೇತಿ । ವಿಷ್ಣುನಾ । ಆದಿ ನಾರಾಯಣೇ ನ । ಐಂದ್ರ ನೀಲ, ಆಂದರೆ ಇಂದ್ರನೀಲ ರತ್ನಮಯ ಲಿಂಗಂ (ಶಿವಲಿಂಗಂ) ಪೂಜಿತ, ಮರ್ಚಿತ । ಮಾಸೀತ್ ॥** ನಿತ್ಯ ಪೂಜೆಗಾಗಿ ಅನುಗ್ರಹಿಸಿದ ಬಳಿಕ ಜಗದಾಚಾರ್ಯರು ಕ್ಷೀರಸಾಗರ ಕನ್ಯೆಯನ್ನು ವೀಕ್ಷಿಸಿ, ಶ್ರೀ ಲಕ್ಷ್ಮಿಗೆ **"ಶ್ರೀ ವೃಕ್ಷ ರೂಪಂಕ್ಷ್ಮಾತ್ರ್ಯೆ ಲಕ್ಷ್ಮಾತ್ರ್ಯೆ"** ಅಂದರೆ ಮನಮೋಹಕವಾದ ಬಿಲ್ವ ವೃಕ್ಷದ ಚಿತ್ರವುಳ್ಳ ಬಂಗಾರದ ಮಹಾಲಿಂಗವನ್ನು ಮಹಾಚಾರ್ಯರು ಮಹಾಲಕ್ಷ್ಮಿಗೆ ನಿತ್ಯ ಪೂಜೆಗಾಗಿ ಅನುಗ್ರಹಿಸಿ, ಶಿವಶಕ್ತಿ ಸಂಪುಟದಿಂದ ವಿರಾಜಸುವ ಶಿವಲಿಂಗ ತತ್ವವನ್ನು ಈರ್ವರಿಗೆ ಬೋಧಿಸಿದರು. ಅಲ್ಲಿಂದ ಆಕಾಶ ಮಾರ್ಗವಾಗಿ ಕೆಳಗಿಳಯುತ್ತಾ ಬ್ರಹ್ಮನ ಲೋಕಕ್ಕೆ ಆಗಮಿಸುತ್ತಲೇ, ಚತುರ್ಮುಖ ಬ್ರಹ್ಮನು ವಿದ್ಯಾಂಬೆ ಶಾರದೆಯೊಂದಿಗೆ ತ್ರಿಭುವನಾಚಾರ್ಯವರೇಣ್ಯರನ್ನು ಆದರದಿಂದ ಸ್ವಾಗತಿಸಿ, ಉಚಿತಾಸನವಿತ್ತು **''ಪೂಜಾ ಮೂಲಂ ಗುರೋಪ್ರಸಾದಂ"** ಎಂಬಂತೆ, ಶ್ರೀ ಮಹಾಗುರು ಪಾದ ಪೂಜೆಯನ್ನು ಭಕ್ತಿಪೂರ್ವಕ ನೆರವೇರಿಸಿ ಸ್ತುತಿಸಲು ಸಂಪ್ರೀತರಾದ ವಿಶ್ವಾಚಾರ್ಯರು ಚತುರ್ಮುಖನಿಗೆ **"ಅಸೀಲ್ಲಿಂಗಂ ವೈಢೂರ್ಯಂ ವಿಧಿನಾ" ವಿಧಿನಾ ಚತುರ್ಮುಖೇನ ಶಿವಸ್ಯ ಪ್ರಥಮ ಪುತ್ರೇಣ ವೈಢೂರ್ಯಂ—ವೈಢೂರ್ಯರೂಪಂ ಲೋಕ ಪ್ರಸಿದ್ಧಂ ಲಿಂಗಂ ಪೂಜಿತಮಾಸೀದಿತ್ಯರ್ಥಃ ॥** ಅಧ್ಯಾತ್ಮ ವಿದ್ಯಾಮಯಳಾದ **ಶ್ರೀ ಶಾರದಾಂಬೆಗೆ ಅಥ ಸರಸ್ವತೀ ರತ್ನ ರೂಪಂ ಲಿಂಗಂ । ಪೂಜಿತ ಮಾಸೀತ್ ॥ ಅಥಚ, ಸರಸ್ವತೀ ಭಾರತಿ ರತ್ನರೂಪಂ, ರತ್ನಮಯ ಶಿವಲಿಂಗಂ । ಪೂಜಯಾ ಮಾಸ ಭಕ್ತ್ಯಾ ॥** ಇವರೀರ್ವರಿಗೂ ಶಿವ ಲಿಂಗಗಳನ್ನು ಅನುಗ್ರಹಿಸಿ, ಪೂಜಾ ವಿಧಿವಿಧಾನಗಳನ್ನು ವಿವರಿಸಿ, ಹರಸಿ, ಅಲ್ಲಿಂದ ಭೂಲೋಕಾಭಿಮುಖವಾಗಿ ಇಳಿಯುತ್ತಿರಲು ಶ್ರೀ ಮದಾಚಾರ್ಯ

ರೇಣುಕರು ಅಂತರಿಕ್ಷದಿಂದ ಆಂಧ್ರ ಪ್ರದೇಶದ ತ್ರಿಲಿಂಗ ರಾಜ್ಯದ ಕೊಲ್ಲಿಪಾಕಿ ಶ್ರೀ ಸೋಮನಾಥ ಲಿಂಗ ದೇವಾಲಯದ ಗೋಪುರ ದರ್ಶನ ಮಾಡಿದರು.

ಯಮಾದಿ ಅಷ್ಟಾಂಗ ಯೋಗ ತಂತ್ರಜ್ಞರೂ ಅಣಿಮಾದಿ ಅಷ್ಟ ಸಿದ್ಧಿಗಳನ್ನು ತಮ್ಮ ವಶವರ್ತಿಯಾಗಿಸಿ. ಸರ್ವತಂತ್ರರೂ. ಸ್ವೇಚ್ಛಾ ವಿಗ್ರಹ ರಾಜಿತರೂ, ಆದ ಪರಮಾಚಾರ್ಯರು ಕ್ಷಣಾರ್ಧದಲ್ಲಿ ತಮ್ಮ ನಿಜ ರೂಪವನ್ನು ಅಂತರ್ಧಾನಗೊಳಿಸಿ ಶ್ರೀ ಸೋಮನಾಥ ಲಿಂಗ ಜ್ಯೋತಿರ್ಮುಖದಿಂದ, ಶಿವನ ಆಣತಿಯಂತೆ,

**ಪ್ರಾದುರ್ಭೂತಂ ತಮಾಲೋಕ್ಯ । ಶಿವಲಿಂಗಾ ತ್ರಿಲಿಂಗಜಾಃ ।**
**ವಿಸ್ಮಿತಾಃ ಪ್ರಾಣಿನಃ ಸರ್ವೇ । ಬಭೂವು ರತಿ ಶೇಜಸಂ ॥**

ಕೊಲ್ಲಿಪಾಕಿ ಶ್ರೀ ಸೋಮೇಶ್ವರ ಮಹಾಲಿಂಗದ ಮುಖದಿಂದ ಅದೃಶ್ಯವಾದ ಚಿತ್ಕಳಾರೂಪದಿಂದ ಇಚ್ಛಾ ಮಾತ್ರದಲ್ಲಿ ಹೊರ ಹೊಮ್ಮಿ ಶುಭಸೂಚನೆಗಳ ಮಧ್ಯೇದೇದೀಪ್ಯ ಮಾನವಾದ ಹೊಂಬೆಳಕಿನ ಕಾಂತಿಯಿಂದ ಉಜ್ವಲವಾಗಿ ಕಂಡು, ಮರು ಕ್ಷಣದಲ್ಲೇ ಆ ಚಿಜ್ಯೋತಿ, ಮಂತ್ರಮಯ ದಿವ್ಯ ಪುರುಷಾಕಾರದಿಂದ ಶ್ರೀ ಆದಿ ಜ॥ ರೇಣುಕಾಚಾರ್ಯರ ರೂಪದಲ್ಲಿ ಪ್ರಾದುರ್ಭಾವಗೊಂಡು ವಿರಾಜಿಸಿದರು. ಲೌಕಿಕರ ದೃಷ್ಟಿಗೆ ವಿಜ್ಞಾನಿಗಳ ವಿಚಾರ ತರಂಗಗಳಿಗೆ ಈ ರಹಸ್ಯ ನಿಲುಕದ ಒಗಟಾಗಿಯೇ ಉಳಿದಿದೆ. ಮಹಾಚಾರ್ಯರ ಉದ್ಭವದಿಂದ ಈ ಲಿಂಗವೇನೂ ಭಿನ್ನವಾಗಿಲ್ಲ. ಕಾರಣ ಇದು ಪರಿಪೂರ್ಣ ವಸ್ತು ಅನವಚ್ಛಿನ್ನಾನಂತ ಚಿನ್ಮೂರ್ತಿ ಆಖಂಡಾ ದ್ವಿತೀಯ ಆದಿ ಮಧ್ಯಾಂತ ರಹಿತವಾದ ಪರಾತ್ಪರ ವಸ್ತು "**ಪೂರ್ಣ ಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ ಮುದಚ್ಯತೇ । ಪೂರ್ಣಸ್ಯ ಪೂರ್ಣ ಮಾದಾಯ । ಪೂರ್ಣ ಮೇವಾ ವಶಿಷ್ಯತೇ ॥** ಶ್ರೀ ಸೋಮೇಶ್ವರ ಲಿಂಗ ಜ್ಯೋತಿರ್ಮಯವಾಗಿ ಪ್ರಜ್ವಲಿಸುತ್ತಿರಲು, ಆ ಲಿಂಗದ ಗರ್ಭದಿಂದ ಅಂದರೆ ಗೋಳಾಕಾರದ ವರ್ತುಳದಿಂದ ಚಿಜ್ಯೋತಿಚಿನ್ಮಯ ಕಳೆಗಳು ಅನವರತ ಸೂರ್ಯನ ಅನಂತ ರಶ್ಮಿಗಳಂತೆ "ನಿತ್ಯೋದಿತಃ" ಅದೃಶ್ಯ ರೂಪದಲ್ಲಿ ಹೊರ ಹೊಮುತ್ತಲಿರುವವು. ಇಂತಪ್ಪ ವಂದು ಚಿತ್ಕಳೆ ಶಿವನಿಚ್ಛೆಯಂತೆ ಅದ್ಭುತ ಕಾಂತಿಗೊಂಡು ಅದರಿಂದ ಶ್ರೀ ಜ॥ ರೇಣುಕಾಚಾರ್ಯರ ದಿವ್ಯ ಮಂತ್ರಮಯ ಮಂಗಳ ರೂಪ ಆವಿರ್ಭವಿಸಿತು.

ಸ್ಥೂಲ ದೃಷ್ಟಿಗೆ ಶಿವಲೀಲೆ ಆಗೋಚರವಾದ ಕಾರಣ ನಂಬಲು ಸಾಧ್ಯವಿರಲಾರದು. ಉದಾಹರಣೆಗಾಗಿ ಒಂದು ನಿದರ್ಶನವನ್ನು ಕೊಡಲಾಗಿದೆ.

ಮಳೆಗಾಲದ ಆಕಾಶದಲ್ಲಿ ಮನಮೋಹಕವಾದ ಸಪ್ತವರ್ಣದ ಕಾಮನ ಬಿಲ್ಲು ತೋರುವಂತೆಯೆಂದು ತಿಳಿಯ ತಕ್ಕದ್ದು. ಸಿನಿಮಾ ನೋಟದ ಅನುಭವ ಯಿದೆಯಲ್ಲವೇ. ಆರಂಭದಲ್ಲಿ ಕತ್ತಲು ತೋರಿಸಿ, ಬಿಳಿಪರದೆಯ ಮೇಲೆ ಮಾತ್ರ ಬೆಳಕು ಮಿಣಿಮಿಣಿಯನ್ನುತ್ತೆ ನಂತರ ಬಿಳಿ ಪರದೆಯ ಮಧ್ಯೇ ಗುಂಡನೆಯ ಅಧಿಕ ಪ್ರಕಾಶವನ್ನು ತೋರಿಸಿ, ಇದರ ಮಧ್ಯೇ ಸುಂದರ ಪುರುಷನನ್ನು ಕಾಣಿಸಿ ಆತ ನಮಸ್ಕರಿಸಿ ಹಾಡುತ್ತಾನೆ. ಇದೆಲ್ಲಾ ೨, ೩, ನಿಮಿಷಗಳೊಳಗಾಗಿ ತೋರಿಸಿ ಬೆರಗು ಗೊಳಿಸುವ ಚಮತ್ಕಾರವಿದು. ಸಾಮಾನ್ಯ ವ್ಯಕ್ತಿಯಿಂದ ಇಷ್ಟೆಲ್ಲಾ ಅದ್ಭುತ ಕಾರ್ಯ ಜರುಗುವಾಗ ಇದನ್ನು ನಂಬುವ ಪ್ರಾಜ್ಞರು, ಸರ್ವಶಕ್ತಿ ಸರ್ವಜ್ಞ ಸರ್ವಾಂತರ್ಯಾಮಿ ಸರ್ವೇಶ್ವರನು ಶಿವಲಿಂಗ ಮುಖದಿಂದ ಜ್ಯೋತಿರ್ಮಯ ದಿವ್ಯಮಂತ್ರ ಮಯ ದೇಹಧಾರಿಯಾಗಿ ಲೋಕೋದ್ಧಾರ, ಧರ್ಮೋದ್ಧಾರಕ್ಕಾಗಿ, ಮಹಾಗುರು ಶ್ರೀ ರೇಣುಕಾಚಾರ್ಯರ ರೂಪದಲ್ಲಿ ಶಿವ ನಿಚ್ಛೆಯಂತೆ ಕ್ಷಣಾರ್ಧದಲ್ಲಿ ಆವಿರ್ಭವಿಸಿದರೆಂದು ವೇದಾಗಮಗಳು ಅನಾದಿ ಕಾಲದಿಂದ ಘೋಷಿಸುತ್ತಿರುವಾಗ, ಈ ಪರಮ ಪವಿತ್ರವಾದ ವಿಷಯವನ್ನು ಮಾನವ ನಂಬುವುದಿಲ್ಲವೆಂದರೆ ಇದಕ್ಕಿಂತಲೂ ಮೌಢ್ಯ ಬೇರೆಯಿಲ್ಲ. ಹೀಗಾಗ ಬಾರದು. ಗೀತಾಚಾರ್ಯನು **"ಸಂಶಯಾತ್ಮಾ ವಿನ್ಯಶತಿ"** ಎಂದು ಎಚ್ಚರಿಸಿರುವರು. ಇದನ್ನೇ "Doubt is death-faith is life" ಎಂದು ಸಾರಿದ್ದಾರೆ-ದೈವೀಕ ವಿಷಯ, ಆಧ್ಯಾತ್ಮಿಕ ವಿಷಯಗಳು ಅರ್ಥವಾಗದಿದ್ದರೆ ಹಿರಿಯರಿಂದ, ಗುರುಗಳಿಂದ ಕೇಳಿ ತಿಳಿದು ನಂಬಿದರೆ ಅಗಣಿತ ಫಲವುಂಟು. ನಂಬಿಕೆಟ್ಟವರಿಲ್ಲ। ರಂಗಯ್ಯಾ। ನಿನ್ನ ನಂಬದೆ ಕೆಟ್ಟರೆ ಕೆಡಲಿ॥ ನಂಬಿ ಕೆಟ್ಟವರಿಲ್ಲಾ ಎಂದು ಪುರಂದರದಾಸರು ಸ್ಪಷ್ಟಪಡಿಸಿರುವರು. ಶಿವಲಿಂಗೋದ್ಭವ ಮಂಗಳಮೂರ್ತಿ ಶ್ರೀ ಜ॥ ರೇಣುಕಾಚಾರ್ಯರ ದಿವ್ಯ ಮಾನವ ದೇಹ ನಮ್ಮ ಕರ್ಮ ಸಂಬಂಧವಾದ ದೇಹದಂತಲ್ಲ. ಅದು ಅಪ್ರಾಕೃತ ನಿರ್ವಿಷಯಕ ನಿಸ್ತ್ರೈಗುಣ್ಯಮಯ, ನಿರ್ದ್ವಂದ್ವ ನಿರಾಮಯ ಸ್ವರೂಪವದು. **ದಿಕ್ಕಾಲಾದ್ಯಾನವಚ್ಛಿನ್ನಾನಂತ। ಚಿನ್ಮಾತ್ರ ಮೂರ್ತಯೆ॥** ಎಂಬಂತೆ ಸಚ್ಚಿದಾನಂದ ನಿತ್ಯ ಪರಿಪೂರ್ಣ

ಸ್ವರೂಪವುಳ್ಳದ್ದು ಶಿವಲಿಂಗೋದ್ಭವ ಶ್ರೀ ಜ|| ರೇಣುಕಾಚಾರ್ಯರ ದಿವ್ಯ ಮಾನವ ರೂಪ.

**"ನ ಭೂತ ಸಂಘ ಸಂಸ್ಥಾನೋ ; ದೇವಸ್ಯ ಪರಮಾತ್ಮನಃ"**

## ಪರಮ ವೀರಶೈವ ಧರ್ಮ ವಿಶ್ವಧರ್ಮ

ವೀರಶೈವ ಧರ್ಮವು ವೇದ ಪೂರ್ವ ಕಾಲದಿಂದ ಭಾರತಾದ್ಯಂತ ವ್ಯಾಪಕವಾಗಿ ಹರಡಿದ್ದ ತಾಂತ್ರಿಕ ವೈದಿಕ ಮತವಿದು. ಶಿವಸರ್ವೋತ್ತಮತ್ವವನ್ನು ನಭೋ ಮಂಡಲದೆತ್ತರಕ್ಕೆ ಎತ್ತಿ ಹಿಡಿದ ಮತವಿದು. **"ನ ಹೀ ವೀರಶೈವ| ಸದೃಶ ಮತಮಸ್ತಿ । ಜಗತ್ರಯೇ । ಸರ್ವಭೋಗ ಪ್ರದಂ ಪುಣ್ಯ । ಶಿವಸಾಯುಜ್ಯ ದಾಯಕಂ||** ಎಂದು ಶಿವಾಗಮಗಳು ಉಗ್ಗಡಿಸಿವೆ. ಶಿವಲಿಂಗ ಧಾರಣ, ಇಷ್ಟಲಿಂಗ ಪೂಜೆ, ಶಿವೋಪಾಸನೆಗಳಿಂದ ಜೀವನು ಶಿವನಾಗುವನು. ತನು ಕರಣಗಳು. ಶಿವಕರಣಗಳಾಗುವುವು. ಇಂತಪ್ಪ ಶ್ರೇಷ್ಠ ಧರ್ಮಾಚಾರಣೆಗಳಿಂದ ಅಂಗನು, **ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರೀ ||** ಎಂದು ಶಿವಾಗಮಗಳು ಭೋರ್ಗರೆಯುತ್ತಿರುವುವು.

ಪರಮೋತ್ಕೃಷ್ಠವಾದೀ ಸಿದ್ಧಾಂತವನ್ನು ಕುರಿತು, ಮಹಾಚಾರ್ಯರ ಕೃಪಾನುಗ್ರಹವನ್ನು ಮುಂದು ಮಾಡಿಕೊಂಡು ನಾನು ಮೂರು ದಿವ್ಯ ಕೃತಿಗಳನ್ನು ರಚಿಸಿ ಪ್ರಕಾಶಗೊಳಿಸಿರುತ್ತೇನೆ. ಇವು ವಾಙ್ಮಯವಾಗಿವೆ. ಶ್ರೀ ಮಹಾಗುರುದ್ವಯರ ಹೆಸರಿನಲ್ಲಿ ರಚಿಸಿ ಪ್ರಕಟಿಸಿರುತ್ತೇನೆ. ೧೯೭೦ ರಲ್ಲಿ **"ಶ್ರೀ ಶೃಂಗೇರಿ ಜ|| ಆದಿ ಶಂಕರಾಚಾರ್ಯರಿಗೆ ದತ್ತ** ವಾದ ಶ್ರೀ ಚಂದ್ರ ಮೌಳೀಶ್ವರಲಿಂಗದ ನಿಜವೃತ್ತಾಂತ" ಪ್ರಥಮ ಭಾಗ (ಪ್ರಸ್ತಾವನೆ) ಬೆಲೆ. ರೂ. ೨೦-೦೦. ೧೯೮೦ ರಲ್ಲಿ "Essentials of spiritulism ಎಸೆನ್ಷಿಯಲ್ಸ ಆಫ್ ಸ್ಪಿರಿಚುಯಾಲಿಜಂ" ಬೆಲೆ ರೂ. ೪೫-೦೦, ಪುಟ ೭೦೦. ೧೯೮೫-೮೭ ರಲ್ಲಿ **"ಶ್ರೀ ರತ್ನ ಗರ್ಭಗಣಪತಿ ಮತ್ತೂ ಶ್ರೀ ಚಂದ್ರ ಮೌಳೀಶ್ವರ ಲಿಂಗ" ಎಂಬ ಮಹಾನ್ ಕೃತಿ ಬೆಲೆ ರೂ. ೨೫-೦೦ ಪುಟ ೩೭೦ ಈ ಕೃತಿಗಳನ್ನು ಶ್ರೀ ಶೃಂಗೇರಿ ಮತ್ತೂ ಶ್ರೀ ಕಂಚಿ**

**ಕಾಮಕೋಟಿ ಶಂಕರ** ಮಠಗಳ ಗ್ರಂಥ ಭಂಡಾರಗಳಲ್ಲಿನ ಪ್ರಾಚೀನ ಅಧಿಕೃತ ಕೃತಿಗಳ ಆಧಾರಗಳನ್ನೊಳಗೊಂಡಂತೆ ರಚಿಸಿ ಪ್ರಕಟಿಸಲಾಗಿದೆ. ಇವುಗಳಲ್ಲಿ ಶಿವಲಿಂಗಾರಾಧನೆಗೆ ಆದ್ಯತೆಯಿತ್ತು ಸ್ಥಾವರ ಲಿಂಗಾರಾಧನೆ ಮತ್ತೂ ಇಷ್ಟ ಲಿಂಗಾರಾಧನೆಗಳ ಪ್ರಶಾಸ್ತ್ಯವನ್ನು ಶಿವಾಗಮೋಪನಿಷದಾದಿಗಳ ಆಧಾರವ ಅಸ್ತಿತ್ವದ ಹೊಸಲಿನಲ್ಲಿ ಪ್ರಕಾಶಗೊಳಿಸಲಾಗಿದೆ. ನಾಡಿನ ಹಿರಿಯ ವಿದ್ವಾಂಸರೂ, ಶ್ರೀಗಳವರೂ ಮುಕ್ತಕಂಠದಿಂದ ಈ ಮೂರು ದಿವ್ಯ ಕೃತಿಗಳನ್ನು ಮುಕ್ತ ಕಂಠದಿಂದ ಪ್ರಶಂಸಿಸಿರುವರು ಶ್ರೀ ಕಾಶಿಜ್ಞಾನ ಸಿಂಹಾಸನಾಧೀಶ್ವರ ಶ್ರೀ ಜ॥ ಶ್ರೀ ಶ್ರೀ ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ನನ್ನ ಮೇಲ್ಕಂಡ ಗ್ರಂಥಗಳನ್ನು ಪರಾಂಬರಿಸಿ ಸಂತೋಷದಿಂದ ರೂ. ೧೦೦೦ ಗಳನ್ನು ಆಶೀರ್ವದಿಸಿ **"ಸದರಿ ಗ್ರಂಥದ ಬಗೆಗೆ ಎಷ್ಟು ಪ್ರಶಂಸಿದರೂ ಕಡಿಮೆಯೆ"** ಎಂದು ಅಭಿಪ್ರಾಯ ಪಟ್ಟಿರುವರು. ಆದ್ದರಿಂದ ಸಹೃದಯರು ಮೇಲುಕ್ತ ಸದ್ಗ್ರಂಥಗಳನ್ನು ವಿ. ಪಿ. ಮೂಲಕ ತರಿಸಿ ಕೊಂಡು ಆದರ ಭಾವದಿಂದ ಓದಿ ಆನಂದಿಸಿ ಶ್ರೀ ಉಭಯಾಚಾರ್ಯರ ದಿವ್ಯ ಕೃಪೆಗೆ ಪಾತ್ರರಾಗ ಬೇಕೆಂದು ವಿನಂತಿ.

**ಯಾಮಾಹುಃ ಸರ್ವ ಲೋಕಾನಾಂ । ಪ್ರಕೃತಿಂ ಶಾಸ್ತ್ರ.ಪಾರಗಾಃ।**
**ತಾಂ ದಮ್ರ್ಯಚಾರಿಣೀಂ ಶಂಭೋಃ। ಪ್ರಣಮಾಮಿ ಪರಾಂ ಶಿವಾಂ॥**
**ಅಮೃತಾರ್ಥಾಂ ಪ್ರಪನ್ನಾನಾಂ ಯಾ। ಸುವಿದ್ಯಾ ಪ್ರದಾಯಿನೀಂ।**
**ಅಹರ್ನಿಶಮಹಂ ವಂದೇ। ತಾಮೀಶಾನ ಮನೋ ರಮಾಂ ॥**

## ಶ್ರೀ ಜ॥ ರೇಣುಕರ ಶಿವಲಿಂಗಾವತಾರ ವರ್ಣನೆ

(ಸಿ. ಶಿ. ೪ ನೇ ಪರಿಚ್ಛೇದ)

**ಮದೀಯಲಿಂಗ ಸಂಭೂತಂ । ಮದ್ಭಕ್ತ ಪರಿಪಾಲಕಂ ।**
**ವಿಸ್ಮಿತಾಮಾನುಷಾಃ ಸರ್ವೇ। ತ್ವಾಂ ಭಜಂತು ಮದಾಜ್ಞಯಾ॥**

ಶಿವನಾಜ್ಞೆಯಂತೆ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗದಿಂದ ಕೋಟಿ ಸೂರ್ಯ ಪ್ರಕಾಶ ಮಾನರಾಗಿ ಉದ್ಭವಿಸಿದ ಪರಮಾಚಾರ್ಯರು ಕೋಟಿ ಕೋಟಿ ಲಾವಣ್ಯಾತಿಶಯಗಳಿಂದ, ಉಜ್ವಲವಾಗಿ ಪ್ರಜ್ವಲಿಸುತ್ತ

ಅಖಂಡ ಶಿವ ಜ್ಞಾನ ಭಂಡಾರದ ಕನಕ ದೀಪ್ತಿಯ ಸುಧಾಮಣಿಯಂತೆ ದೇದೀಪ್ಯಮಾನರಾಗಿ ವಿರಾಜಿಸುತ್ತಲಿದ್ದರು. ಆ ಸೋಮನಾಥ ದೇವಾಲಯದಲ್ಲಿ ಆ ವೇಳೆಗೆ ಪೂಜೆಗಾಗಿ ಬಂದಿದ್ದ ಸುಕೃತ ಶಾಲಿಗಳಾದ ಭಕ್ತರು ಎಂದೂ ಕೇಳದ ಸಂದರ್ಶಿಸದ ಪರಶಿವನ ಪರಂಪರಾವತಾರದ ಜಗನ್ಮಂಗಳ ಮೂರ್ತಿಯನ್ನು ಕಣ್ಮನಂಗಳು ತಣಿಯುವಂತೆ ವೀಕ್ಷಿಸಿ ಆನಂದಭಾಷ್ಪಗಳನ್ನು ಸುರಿಸಿ ಬದ್ಧಾಂಜಲಿ ಪುಟರಾಗಿ, ಗದ್ಗದಸ್ವರದಿಂದ ಜಗದಾಚಾರ್ಯರನ್ನು ಪುಳುಕಾಂಕಿತ ಭಾವದಿಂದ ಸ್ತುತಿಸಿ, ವಂದಿಸಿ, ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸಿ ಆನಂದತುಂದಿಲ ಹೃದಯ ಸ್ವಾಂತರಾಗಿ ನೆರೆದಿದ್ದ ಸಮಸ್ತ ಸದ್ಭಕ್ತರು ಕಂಡ ದಿವ್ಯ ದೃಶ್ಯ **"ಸರ್ವಮಂಗಳಾನಾಂ ಮಂಗಳಂ"** ಎಂಬಂತೆ ಅನಂತ ಕೋಟಿ ಸೂರ್ಯ ಪ್ರಕಾಶವನ್ನು ತನ್ನಲ್ಲಿ ಊರ್ಜಿತಗೊಳಿಸಿ ಶೋಭಿಸುವಂತಿತ್ತು.

ಶ್ರೀ ರೇಣುಕಾಚಾರ್ಯರು ತಾವು ಉದ್ಭವಿಸಿದ ಶಿವ ಲಿಂಗಸನ್ನಿಧಿಯಲ್ಲಿ ಭಕ್ತರು ಕಂಡ ದೃಶ್ಯ–

**ಲಿಂಗಂ ಮಸ್ತಕದೊಳ್ । ಜಟಾಮುಕುಟಭೂಷಂ । ಶೀರ್ಷದೋಳ್ । ಫಾಲದೋಳ್ ತುಂಗ ಶ್ರೀ ಭಸಿತ ತ್ರಿಪುಂಡ್ರ। ಮಾನಲಾಕ್ಷಿಸಪ್ಫರ ಭ್ರೂಮಧ್ಯದೋಳ್ ॥ ಮಾಂಗಲ್ಯಾಕ್ಷ ಸರಂ ಮಹಾಗಲದೊಳಿಂತು । ತೋರುತಂ । ಶ್ರೀ ಸಾಂಬನ ಸನ್ನಿಧಿಯೊಳ್ । ಶೃಂಗಾರಾನ್ವಿತರಾಗಿ ಭೂವಲಯಮಂ ಶ್ರೀ ರೇಣುಕಾಧೀಶ್ವರಾ ॥** ಇಂತಪ್ಪ ಮೋಕ್ಷದಾಯಕ ಜಗದಾಚಾರ್ಯರ ರೂಪದಲ್ಲಿ ಜಗತ್ತಿಗೆ ದರ್ಶನವಿತ್ತರು. ಶಿವನಾಣತಿಯನ್ನು ತಮ್ಮ ಶಿರದಲ್ಲಿ ಹೊತ್ತು ಭುವಿಯಲ್ಲಿ **"ಸದ್ಯೋಜಾತಾ ದಯಃ"** ಎಂದು ಸ್ತುತ್ಯರಾದ ಶ್ರೀ ಜ॥ ರೇಣುಕಾದಿ ಪಂಚಾಚಾರ್ಯರು, **"ಜನಿಯಿಸಿ ಪಂಚ ಲಿಂಗದೊಳನಂತ ಮಹತ್ವವ ತೋರುತಂ ।ಜಗಜ್ಜನ। ರನು ರಾಗಮಂ । ಪಡೆದು, ಲೋಕದೆ ಪರ್ಬಿಸಿ । ವೀರಶೈವದಾ ಘನತರ । ಚಿತ್ಕ್ರಿಯಾತ್ಮಕದ । ತತ್ವಗಳಂ ಮೆರೆದಾ । ಮಹೋನ್ನತರ್ । ಘನ ಮಹಿಮರ್। ಜಗದ್ಗುರುವೆರೇಣ್ಯರ್ । ಭೂಸುರ ಭೂ ರುದ್ರಗೇಯ ರಾವಗಂ॥**

ಅದ್ವಿತೀಯವಾದ ಇಂತಪ್ಪ ಮಹಿಮೆಯನ್ನು ಹೊತ್ತು ಶಿವಲಿಂಗ ಮುಖದಿಂ ಆವಿರ್ಭವಿಸಿದ ಮಹಾಚಾರ್ಯರನ್ನು ನೆರೆದಿದ್ದ ಭಕ್ತರು ಕರಗಳಂ ಜೋಡಿಸಿ, ಬಾಗಿದ ಶಿರವುಳ್ಳವರಾಗಿ, ಭಯಭಕ್ತಿ ಪ್ರೇಮಾತಿಶಯಗಳಿಂದ ; ಶಂಭೋ ಮಹಾದೇವ, ಸಾಂಬ ಶಿವನೇ ! ಎಂದು ಪುನಃ ಪುನಃ ನಮಸ್ಕರಿಸುತ್ತಾ ನಲಿಯುತ್ತ ಭಕ್ತರೆಲ್ಲಾ ಜಯ ಜಯವೆನ್ನುತ್ತಾ ತಾವಾರು ? ತಮ್ಮ ದಿವ್ಯ ಸ್ವರೂಪವ ಕಂಡು ಆಚ್ಚರಿ ಗೊಂಡಿಹೆವು ತಮ್ಮ ಪೆಸರೇನು ಪೇಳಾ ಕಾಂತಿಕಲಾ ಗುರುವೇ, ಎಂದು ಪ್ರಾರ್ಥಿಸಿದರು. ಮತ್ತೆ ಕೆಲವರು ಬೆರಗುಗೊಂಡು, ಮುಚ್ಚಿ ಕಂಗಳ ಹರಹರಾ ಶಂಭೋ ಸಾಂಬ ಸರ್ವಜ್ಞಾ, ಪೊರೆವುದೆಂಪತಿ ಭಕ್ತಿಯಲಿ, ಬಿಡದೆರಗಿ ಪೊಗಳೆ, ಮನೋಜ್ಞ ಮೋಹನಕರ, ದಿವಾಕರ ಕೋಟಿ ದೀಪ್ತಿಯ ಮಹಾ ಗುರುವೇಯೆಂದು ಉಗ್ಗಡಿಸಿತು ಭಕ್ತ ಸಮೂಹ. ಭಕ್ತರ ಪ್ರಾರ್ಥನೆಯಿಂದ ವಿಜೃಂಭಿತರಾದ ಶ್ರೀ ಮಹಾಗುರು ರೇಣುಕರು ಸಂಪ್ರೀತರಾಗಿ,

“ಆಲಿಸುವುದೆಲೆ ಭಕ್ತವರ್ಯರೇ । ನೀಲಕಂಠನವೊಲವು ನಿಮ್ಮಲಿ । ಮೇಳಿಸಿರ್ಪುದು, ಬಂದೆನದರಿಂದ । ಶಿವನಾಣತಿಯಂ ತಾಳಿ ತಲೆಯೊಳು ॥ ಜಗದೆ ಶಿವಮತದೇಳಗೆಯು ಮೆರೆಯುವುದು । ಶರಣ ರಜಾಲವಾಂಪುದು । ಮುಕ್ತಿ ಸಂಪತ್ಸುಖವು ಕೈಗೂಡುವುದೆಂದರುಹಿದರು

ಗುರುದೇವನು ಎಮ್ಮ ಕುರುಹ ಬೆಸಗೊಂಬೆ ಭಕ್ತರೇ ಕೇಳಿ; ರೇಣುಕರೆಂಬ ಪೆಸರೆಮಗೆ, ರುದ್ರಗಣೇಶ್ವರರು ನಾವು ಶಿವನ ಬಳಿವಳಿಯವರು ನಾವು. ಶಿವನಾಣತಿ ವಿಡಿದು ಈ ಶಿವಲಿಂಗದಿಂದ ಅವತರಿಸಿರುನೆವು. ಶುದ್ಧ ಶಿವಸಿದ್ಧಾಂತ ಪಾಲನೆಯೇ ನಮ್ಮ ಮಹಿಮೆವು. ನಾವು ಸರ್ವಸ್ವತಂತ್ರರೆಂದು ಪೇಳಿದರು.

ಮತ್ತೆ ನಸುನಗುತ ಭಕ್ತವರ್ಯರೇ ಕೇಳಿ, ಮಾಡುವುದು ಶಿವ ಪೂಜೆಯನು । ಸಲೆ ಪಾಡುವುದು ಶಿವನಾಮವನು । ಕೊಂಡಾಡುವುದು ಶಿವಭಕ್ತಿ ಭರಿತ। ಸ್ವಾಂತಸಂತತಿಯಂ। ಸೂಡುವುದು ಶಿವ ಮಾಲ್ಯವಂ। ಮಾತಾಡುವುದು ಶಿವ ತತ್ವವಿದರಲಿ । ನೀಡುವುದು ಶಿವಯೋಗಿಗಳ್ಗೆ । ಇದೇ ಧರ್ಮ ತಾನೆಂದಂ ॥ ಎಲೆ ಭಕ್ತರೆ ಸ್ವಲ್ಪ ಲಾಲಿಸುವುದು ॥ ಉತ್ತಮಾಂಗದೆ ಲಿಂಗವನು ತಳೆಯುತ್ತೆ । ಮಂತ್ರ ಪವಿತ್ರ ಭಸ್ಮವ ಮೆತ್ತಿ

ಮೆಯ್ಯೊಳು । ವಿಮಲ ಪಂಚಾಕ್ಷರಿಯು ಜಪಿಸುತಲಿ । ಮತ್ತೆ ಮೆರೆವ ಶಿವಾಗಮೋಪನಿಷತ್ತುಗಳ। ಪುರುಳರಿದು ಭಕ್ತಿಯು ಭಿತ್ತರಿಪ್ಪುದೆಲೆ । ಧರ್ಮ ಕರ್ಮವು ಮರ್ಮವಿದೆಯೆಂದಂ ॥

ಶ್ರೀ ರೇಣುಕ ಉವಾಚ–ಶಿವಾದೇಶಾನುಸಾರೇಣ । ಶಿವ ಲಿಂಗಾದಿ ಹಾ ಭವಂ । ನಾಮ್ನಾ ರೇಣುಕ ಸಿದ್ಧೋಽಹಂ । ಸಿದ್ಧ ಸಂತಾನ ನಾಯಕಃ ॥ ಇತ್ಯುಕ್ತ್ವಾ ಪಶ್ಯತಾಂ ತೇಷಾಂ । ವಿಷಯ ಸ್ಥಿರ ಚಕ್ಷುಷಾಂ । ಉತ್ಥಾಯ ವ್ಯೋಮಮಾರ್ಗೇಣ । ಮಲ ಯಾದ್ರಿ ಮುಪಾಗಮತ್ ॥ ಇಂತಪ್ಪ ಶುಭ ಸಂದೇಶವನ್ನು ಶ್ರೀ ರೇಣುಕ ಗುರುವರರು. ದೇವಾಲಯದಲ್ಲಿ ನೆರೆದಿದ್ದ ಭಕ್ತವರ್ಯರಿಗೆ ಅನುಗ್ರಹಿಸಿ; ಕೊಲ್ಲೀ ಪಾಕ್ಯಭಿದೇ ಪುರೇ ಸುವಿಮಲೇ ಸೋಮೇಶಲಿಂಗಾಚ್ಚು ಭಾತ್। ಆವಿರ್ಭೂಯ ತತೋಽಗ ತೋಗಗನತೋ । ಆಗಸ್ತ್ಯಾಶ್ರಮಂ ಪಾವಯನ್ ॥ ಯಸ್ತಸ್ಮೈ ವಿನತಾಯ ವೇದ ವಿಹಿತಂ। ಸಿದ್ಧಾಂತ ಮಾ ಬೋಧಯತ್ । ಸ ಶ್ರೀ ರೇಣುಕ ಯೋಗಿರಾಟ್ । ವಿತನುತಾಂ ಸಾನಂದ ಮುರ್ವೀತಲಂ ॥

ಸಮಸ್ತರೂ ನೋಡುತ್ತಿದ್ದಂತೆ ಗುರುವರೇಣ್ಯರು ಊರ್ಧ್ವಗಾಮಿಗಳಾಗಿ ಅಂತರಿಕ್ಷ ಮಾರ್ಗವಾಗಿ ಮಲಯಾಚಲ ಪ್ರದೇಶದಲ್ಲಿ ಶ್ರೀ ಅಗಸ್ತ್ಯಾಶ್ರಮ ವನ್ನುದ್ದೇಶಿಸಿ ಆತ್ತ ಧಾವಿಸಿದರು.

## ಮಲಯಾದ್ರಿ ವರ್ಣನಂ

ನವ ಚಂದನ ಕಾಂತಾರ । ಕಂದನ್ಮಂದ ಮಾರುತಂ ।
ಅಭಂಗುರ ಭುಜಂಗ ಸ್ತ್ರೀ ಸಂಗೀತ ರಸ ಸಂಕುಲಂ ॥
ಪಟೀರದಲ ಪರ್ಯಂಕ । ಪ್ರಸುಪ್ತವ್ಯಾಧ ದಂಪತಿಂ ।
ಮಾಧವೀ ಮಲ್ಲಿಕಾಜಾತೀ । ಮಂಜರೀ ರೇಣುರಂಜಿತಂ ॥

ಶ್ರೀ ಮದಾಚಾರ್ಯ ರೇಣುಕರು ಅಗಸದಲ್ಲಿ ಮೆಲ್ಲನೆ ತೆರಳುತ್ತಾ ತಮ್ಮ

ಕಟಾಕ್ಷವನ್ನು ಭುವಿಯತ್ತ ಬೀರಿದಾಗ ಅನೇಕ ಬೆಟ್ಟ ಪರ್ವತಗಳನ್ನೂ ನದ ನದೀ ವಾಪೀ ಕೂಪತಟಾಕಗಳನ್ನೂ ದಟ್ಟವಾದ ವನ ವನಾಂತರಗಳನ್ನೂ ನೋಡಿ ಹರ್ಷಿತರಾಗಿ ಹೋಗುತ್ತಿದ್ದರು. ಮಲಯಾಚಲ ಪುಣ್ಯ ಪ್ರದೇಶ ಸಮೀಪಿಸಿದುದನ್ನು ಕಂಡಾಗ ಅಲ್ಲಿ ಸುತ್ತಲೂ ಬಹು ಚೆಲುವಿನಿಂದ ಸುಂದರ ವಾಗಿತ್ತು. ಎತ್ತೆತ ನೋಡಿದರತ್ತತ್ತ ಹೊಸ ಚಂದನದ ನಂದನವನ, ಚಿಗು ರೊಡೆದು ತಂಪಾಗಿತ್ತು. ಅರಳುತ್ತಿರುವ ವಿವಿಧ ಹೂವಿಡಿದು ಸುವಾಸನೆಯು ಕಂಪು. ಇಂತಪ್ಪ ಕಂಪು ಹೊತ್ತ ತಂಗಾಳಿ, ನಾಲ್ದಿಶೆಗಳನ್ನು ಆವರಿಸಿರಲು, ಅಲ್ಲಲ್ಲಿಯ ಹೆಣ್ಣು ಸರ್ಪಗಳು ಹುತ್ತಗಳಿಂದ ಹೊರಬಂದು ನೈಸರ್ಗಿಕ ಗಾನರಸ ವಲ್ಲಿ ಸಂಗೀತ ಸುಧಾರಸದಿಂದ ವ್ಯಾಪ್ತವಾಗಿದ್ದವು. ಮತ್ತೊಂದೆಡೆಯಲ್ಲಿ ಹಬ್ಬಿದ ಏಲಕ್ಕಿ ತೋಟದೊಳಗೆ ನುಗ್ಗಿದ ಕಾಡಾನೆಮರಿಗಳು ಏಲಕ್ಕಿ ಬಳ್ಳಿ ಗಳನ್ನು ಮೇಲೆತ್ತಿ, ಸೊಂಡಲುಗಳಿಂದ ಎಸೆದು ತುಳಿಯುತ್ತಲಿದ್ದವು. ಮತ್ತೊಂದು ಕಡೆ ಕಾಡು ಹಂದಿಗಳು ಕೋರೆಹಲ್ಲುಗಳಿಂದ ಕೊನ್ನಾರಿ ಗೆಡ್ಡೆ ಗಳನ್ನು ಬಗೆದು ತುಂಡರಿಸುತ್ತಿರಲು ಆ ಗೆಡ್ಡೆಗಳಿಂದ ಹೊರಟ ಸುಗಂಧ ಸುತ್ತ ಲಿರುವ ಗುಹೆಗಳಲ್ಲೂ ಹರಡುತ್ತಿತ್ತು. ಮನಮೋಹಕವಾದೀ ದೃಶ್ಯದ ಮಧ್ಯೇ ಒಂದೆಡೆಯಲ್ಲಿ, ಚಂದನ ವೃಕ್ಷಗಳ ರೆಂಬೆ ಹಸಿರೆಲೆಗಳಿಂದ ರಚಿತವಾದ ಮೆತ್ತ ನೆಯ ಮಂಚದ ಚಿಗುರಿನ ಹಾಸಿಗೆ ಮೇಲೆ ಹೊಸವ್ಯಾಧ ದಂಪತಿಗಳು ಮನೋ ಹರವಾಗಿ ನಲಿಯುತ್ತಿದ್ದರು ಇತ್ಯಾದಿ ದೃಶ್ಯಗಳನ್ನು ಜಗದಾಚಾರ್ಯರು, ಕಡೆ ಗಣ್ ನೋಟದಿಂದ ಎಲ್ಲವನ್ನೂ ನೋಡುತ್ತಾ, ಮಂದ ಗಮನದಿಂದ ಆಕಾಶ ದಲ್ಲಿ ಮುಂದುವರಿಯುತ್ತಾ, **ಅಪಸ್ಯದಾ ಶ್ರಮಂ। ದಿವ್ಯಮಗಸ್ತ್ಯಸ್ಯ ಮಹಾಮುನೇಃ ॥** ಮಲಯಾಚಲ ಪ್ರದೇಶದ ಪ್ರಶಾಂತವಾದ ಒಂದೆಡೆಯಲ್ಲಿ ಸುತ್ತಲೂ ರಮಣೀಯವಾದ ವಿವಿಧ ಹೂ, ಹಣ್ಣು, ಹಸಿರು ತರಿಳ ತೋರಣ, ತಟಾಕಗಳಿಂದ ನಿಬಿಡವಾದ ಉದ್ಯಾನವನದ, ರಮ್ಯವಾಗಿ ಜುಳು ಜುಳು ಎಂಬ ಶಬ್ಧದಿಂ ಪ್ರವಹಿಸುವ ಶುದ್ಧ ಸ್ಫಟಿಕದ ಜಲಾಶಯದ, ದಡದಲ್ಲಿನ ಉನ್ನತ ಪ್ರದೇಶದಲ್ಲಿ ಮುನಿಗಳ ಮಧ್ಯೇ ಮಂಡಿಸಿರ್ದ ಅಗಸ್ತ್ಯ ಮಹರ್ಷಿಗಳ ಭವ್ಯವಾದ ಆಶ್ರಮವನ್ನು ತ್ರಿಭುವನಾಚಾರ್ಯ ಶ್ರೀ ರೇಣುಕ ಪರಂಜ್ಯೋತಿ ಆಕಾಶ ಮಾರ್ಗಗಾಮಿಯಾಗಿ ಮೆಲ್ಲನೆ ಭುವಿಯತ್ತ ಇಳಿಯುತ್ತಿದ್ದಂತೆ ಕಂಡನಾ ಗಸ್ತ್ಯಾಶ್ರಮವಂ.

ರುದ್ರಾಕ್ಷಃ ಪರಿಧಾರ್ಯತಾಂ। ಪ್ರಿಯಕರೀ ಪಂಚಾಕ್ಷರೀ ಜಪ್ಯತಾಂ। ಪಂಚಾಚಾರಚಯೋಜ್ಯರ್ತಾಂ। ಪಶುಪತಿಃ ಪಂಚಾನನಃ ಪೂಜ್ಯತಾಂ। ಪಂಚಕ್ಲೇಶ ಗಣೋರ್ದ್ಯತಾಂ। ಭ್ರಮಕರಃ ಪಂಚಾಯುಧೋಭ್ರಶ್ಯತಾಂ। ಪಂಚಾಚಾರ್ಯರ್ಪದಾಂಬುಜೇಷು। ಸತತಂ ಚೇತಸ್ಸಮಾಧೀಯ ತಾಂ ॥

ಭೋ! ಕಲ್ಯಾಣ ಮಹಾಭಾಗ। ಶಿವಜ್ಞಾನ ಮಹೋದಧೇ।
ಅಚಾರ್ಯವರ್ಯ ಸಂಪ್ರಾಪ್ತಂ ರಕ್ಷಮಾಂ ಶರಣಾಗತಂ ॥

## ಅಗಸ್ತ್ಯಾಶ್ರಮ ವರ್ಣನಂ

ಮಂದಾರ ಚಂದನಪ್ರಾಯೈ। ರ್ಮಂಡಿತಂ ತರುಮಂಡಲೈಃ।
ಶಾಖಾ ಶಿಖರ ಸಂಲೀನ। ತಾರಕಾಗಣ ಕೋರಕೈಃ ॥
ಮುನಿಕನ್ಯಾ ಕರಾನೀತ! ಕಲಶಾಂಬು ವಿವರ್ಧಿತೈಃ।
ಆಲವಾಲ ಜಲಾ ಸ್ವಾದ। ಮೋದ ಮಾನ ಮೃಗೀಗಣೈಃ।

ಶ್ರೀ ಅಗಸ್ತ್ಯ ಮಹರ್ಷಿಗಳ ತಪೋ ಭೂಮಿ, ಅತಿ ರಮಣೀಯವಾದ ನೈಸರ್ಗಿಕ ಪ್ರಶಾಂತ ವಾತವರಣದಿಂದ, ಮುನಿವೃಂದವನ್ನು ತನ್ನತ್ತ ಆಕರ್ಷಿಸುತ್ತಲಿತ್ತು. ಆಶ್ರಮದ ಸುತ್ತಲೂ ನವ ಚಂದನ, ಬಾಳೆ, ಮಾವು, ತೆಂಗು ವೃಕ್ಷಗಳಿಂದಲೂ ಮತ್ತೊಂದು ಕಡೆ ಏಲಕ್ಕಿ, ಲವಂಗ, ಮಲ್ಲಿಗೆ, ಜಾಜಿ, ರೋಜಾ, ಸಂಪಿಗೆ, ಶ್ಯಾವಂತಿಗೆ, ಸೂರ್ಯಕಾಂತಿ, ಮರುಗಬಳ್ಳಿ ಗಿಡಗಳಿಂದಲೂ ಅಲ್ಲಲ್ಲಿ ಬಿಲ್ವ ವೃಕ್ಷಗಳ ಸಾಲಿನಿಂದ ರಾರಾಜಿತವಾಗಿತ್ತು. ಮತ್ತೊಂದೆಡೆಯಲ್ಲಿ ಮುನಿಕನ್ಯೆಯರು, ಮಣ್ಣಿನ ಕುಂಭಗಳಲ್ಲಿ, ಸುತ್ತ ಹರಿಯುತ್ತಲಿದ್ದ ಹೊಳೆಯ ನೀರನ್ನು ತಂದು ಆ ವನ ಸ್ಪತಿ ವೃಂದಕ್ಕೆ ಶಿವಸ್ಮರಣೆಯೊಂದಿಗೆ ಎರೆಯುತ್ತಿದ್ದರು. ಅಗಸ್ತ್ಯ ಮಹರ್ಷಿಗಳ ಧರ್ಮಪತ್ನಿ ಶ್ರೀ ಲೋಪಾಮುದ್ರಾ ದೇವಿಯು ಆಶ್ರಮದಲ್ಲಿದ್ದು ಪತಿಸೇವೆಯನ್ನು ಅತಿಶಯ ಭಕ್ತಿಭಾವದಿಂದ ಮಾಡುತ್ತ, ಶೃತಿ ಶಿರೋಮಂತ್ರಗಳ ಸ್ಮರಿಸಿ, ಧ್ಯಾನಿಸುತ್ತಾ ಋಗಾದಿ ಮಂತ್ರಗಳಿಗೆ ಸ್ಫೂರ್ತಿಧಾಯಕ

ವಾದ ಭಾಷ್ಯಗಳನ್ನು ರಚಿಸಿ ಬೋಧಿಸುತ್ತಲಿದ್ದಳು. ಲೋಪಾಮುದ್ರಾ ದೇವಿಯ ಕೋಮಲ ಪಾದ ಸ್ಪರ್ಶದಿಂದ ಆ ತಟ ಪ್ರದೇಶವೆಲ್ಲಾ ಪಾವನ ವೆನಿಸಿತ್ತು. ಶ್ರೀ ತಪೋಧನ ಅಗಸ್ತ್ಯಾಶ್ರಮದ ನದಿಯು ಚಿಲವು ಮುತ್ತಿನ ಹಾರದಂತೆ, ಹಿಮದಂತೆ, ಕರ್ಪೂರದಂತೆ ಮತ್ತೂ ಶಿವನ ಮಂದ ಸ್ಮಿತ ನಗೆ ಯಂತೆ ನಿರ್ಮಲವಾಗಿ ಶೋಭಿತವಾಗಿತ್ತು. ಆ ಅಶ್ರಮದ ಕೆಲವು ಕಡೆಗಳಲ್ಲಿ ತಪಸ್ವಿಗಳು, ಮುನಿಗಳು ಋಷಿ ಮಹರ್ಷಿಗಳು ಶಿವಧ್ಯಾನಾ ರೂಢರಾಗಿದ್ದರು. ಮತ್ತೊಂದೆಡೆಯಲ್ಲಿ ಬಣ್ಣ ಬಣ್ಣದ ಹಸುಗಳು ಕರುಗಳಿಗೆ ಮಲೆಯೂಡಿಸುತ್ತ ಲಿದ್ದವು. ಅಗಸ್ತ್ಯಾಶ್ರಮದಲ್ಲಿ ಹೋಮಕುಂಡದೊಳಗೆ ಹೊಯ್ದ ತುಪ್ಪದ ಮತ್ತೂ ಸಮಿತ್ತುಗಳ ಹೊಗೆಯು ಸುಗಂಧವಾಗಿ ಸುತ್ತಲೂ ಹರಡಿತ್ತು. ಪ್ರಶಾಂತವಾದ ಅಗಸ್ತ್ಯಾಶ್ರಮದ ಪರಿಸರದಲ್ಲಿ ವಂದೆಡೆ,

**ಶುಕ ಸಂಸತ್ಸಮಾರಬ್ಧ । ಶ್ರುತಿ ಶಾಸ್ತ್ರೋಪ ಬೃಂಹಣಂ ॥**

ಸುಂದರವಾದ ಗಿಣಿಗಳು ಆಗಾಗ ಕೂಡಿ ಅವಿಕಾರ ಪರಿಣಾಮವಾದವು ವಿಶೇಷಾದ್ವೈತವೆಂತಲೂ, ಲಿಂಗಾಂಗ ಸಾಮರಸ್ಯದ ತತ್ವದ ಬಗೆಗೆ ತಮ್ಮದೇ ಆದ ಭಾಷೆಯಲ್ಲಿ ಶೃತಿಶಾಸ್ತ್ರಂಗಳ ಉದಹರಿಸಿ ವೇದಾಗಮ ಶಾಸ್ತ್ರ ವಿಚಾರ ವಾಗಿ ಆಗಿಣಿಗಳು ವಾದಿಸುತ್ತಲಿದ್ದವು. ಇಂತು ಕಂತು ಹರನ ತಪೋಧನನಾದ ಅಗಸ್ತ್ಯ ಮಹರ್ಷಿಗಳ ದಿವ್ಯಾಶ್ರಮ, ಯಜ್ಞದಾನ, ತಪಃ, ಕರ್ಮ, ಜಪೋ, ಧ್ಯಾನ, ಜ್ಞಾನಂಗಳಿಗೆ ನವ ಚೈತನ್ಯವನ್ನು ಉಕ್ಕೇರಿಸಿ ಶಿವಪೂಜಾ ನಿಷ್ಠರನ್ನಾಗಿ ಮಾಡುವ ಪ್ರೇರಕ ಶಕ್ತಿಯಂತಿತ್ತು.

## ಅಗಸ್ತ್ಯಮಹರ್ಷಿ ವರ್ಣನಂ

**ತಸ್ಯ ಮಧ್ಯೇ ಸಮಾಸೀನಂ । ಮೂಲೇ ಚಂದನ ಭೂ ರುಹಃ ॥**
**ಸುಕುಮಾರ ದಲಚ್ಛಾಯಾ ವಾರಿತಾದಿತ್ಯ ತೇಜಸಃ ॥**

(ಸಿ. ಶಿ. ಅ. ಶ್ಲೋ ೨೪)

ತನ್ನ ಆಶ್ರಮದ ಮಧ್ಯೇ ಪಟ್ಟಣಿಸಿ ಚಿಗುರಿದ ತಣ್ಣನೆಯ ಶ್ರೀಗಂಧದ ಗಿಡಗಳ ಅಡಿಯಲ್ಲಿ, ಜಿಂಕೆ ಚರ್ಮದ ಮೇಲೆ ಮಂಡಿಸಿ, ಮನೋ ನಿಗ್ರಹವಂ ಗೈದು ಅಗಸ್ತ್ಯ ಮುನಿಚಂದ್ರನು, ಅರ್ಧೋನ್ಮೀಲಿತ ಕಣ್ಣುಗಳಿಂದ,

**ಸಮಕಾಯ ಶಿರೋಗ್ರೀವದಿಂದ ಶಿವನನ್ನು ಧ್ಯಾಸಾವಸ್ಥಿತ ತದ್ಗತೇನ ಮನಸಾ ॥**

ಎಂಬಂತೆ ಅಂತರ್ಮುಖಿಯಾಗಿ ಸಮಾದಿಯೋಗದಲ್ಲಿ ತಲ್ಲೀನನಾಗಿದ್ದನು. ಸಮಾದಿಯೋಗವೆಂದರೆ " Absorption of mind in God consciousness, produced by deep meditation is known as samadhi" ಮನೋಬುದ್ಧಿ, ಚಿತ್ತವಾಕ್, ಕಾಯಾದಿಗಳು ಅಂತರ್ಮುಖದ ಧ್ಯಾನಯೋಗದಲ್ಲಿ ಕೂಡಿ, ಹಾಲಿನಲ್ಲಿ ಹಾಲು ಬೆರೆತಂತೆ, ತಲ್ಲೀನವಾಗಿರುವ ಸ್ಥಿತಿ ಸಮಾಧಿಯೋಗವೆನಿಸಿದೆ.

ಮಹತ್ತರವಾದ ಇಷ್ಟಲಿಂಗಾರಾಧನೆಯಿಂದ ಅಗಸ್ತ್ಯರು ರುದ್ರನಂತೆ ಕೆಂಜೆಡೆ ಮುಡಿಯಿಂದ ತ್ರಿಪುಂಡ್ರೋದ್ಧೂಳನದಿಂದ ಶೋಭಿತರಾಗಿದ್ದರು ನವನಾರು ಮಡಿಯನುಟ್ಟು ಹಣೆಯಲ್ಲಿ ತ್ರಿರೇಖೆಯಾಗಿ ತ್ರಿಪುಂಡ್ರ ಧಾರಣಂ ಗೈದು ಬಾಲ ರವಿಯಂತೆ ಶ್ರೀ ಅಗಸ್ತ್ಯ ಮಹರ್ಷಿಗಳು ಭಾಸಮಾನರಾಗಿದ್ದರು. ಸಕಲ ನಿಗಮಾಗಮಾದಿ ವಿದ್ಯೆಗಳಲ್ಲಿ, ತಪಸ್ಸಿನಲ್ಲಿ, ಪಾಠ ಪ್ರವಚನಾದಿಗಳಲ್ಲಿ ಶಿವಧ್ಯಾನ ಜ್ಞಾನಾದಿ ಸತ್ಕ್ರಿಯೆಗಳಲ್ಲಿ ಅಷ್ಟಸಿದ್ಧಿಗಳ ಜಯಿಸಿದವರಾಗಿ ಅಖಿಲ ಕಲ್ಯಾಣ ಗುಣಗಣಗಳಿಗೆ ಜನ್ಮಭೂಮಿಯಾಗಿ ಊರ್ಧ್ವಜ್ಞಾನಾನು ಸಂಧಾನದಲ್ಲಿ ನಿಷ್ಠೆಯುಳ್ಳವರಾಗಿ ಮೋಹಾಂಧಕಾರಕ್ಕೆ ದಿವಾಕರನಂತೆಸೆವ ಅಗಸ್ತ್ಯ ಮಹರ್ಷಿಯನ್ನು ಆಗಸದಿಂದಲೇ ಶಿವಲಿಂಗೋದ್ಭವ ಭಗವತ್ಪಾದ ಶ್ರೀ ರೇಣುಕಾಚಾರ್ಯರು ಕಲಸ (ಕುಂಭ) **ಸಂಭವನಾದ, ದದರ್ಶ ಸಮಹಾಯೋಗೀ । ಮುನಿಂ ಕಲಸಸಂಭವಂ ॥** ಕಲಸ (ಕುಂಭ) ಸಂಭವನಾದ ಅಗಸ್ತ್ಯ ಮುನಿ ಚಂದ್ರನನ್ನು **"ದದರ್ಶ"** ಕಂಡರು.

## ಅಗಸ್ತ್ಯಾಶ್ರಮ ಮಾಗತಸ್ಯ ಶ್ರೀ ರೇಣುಕ ಗಣೇಶ್ವರಸ್ಯ ಪಾದಪೂಜಾ ತಥಾ ಅಗಸ್ತ್ಯಂ ಪ್ರತಿ ಕುಶಲ ಪ್ರಶ್ನಃ ॥

**ತಮಾಗತಂ ಮಹಾಸಿದ್ಧಂ । ಸಮೀಕ್ಷ್ಯ ಕಲಶೋದ್ಭವಃ ।**
**ಗಣೇಂದ್ರಂ ರೇಣುಕಾಭಿಖ್ಯಂ ವಿವೇದ ಜ್ಞಾನ ಚಕ್ಷುಷಾ ॥**

**ಲೋಪಾಮುದ್ರಾ ಕರಾನೀತೈ । ರುದ ಕೈರತಿ ಪಾವನೈಃ ॥**
**ಪಾದೌಪ್ರಕ್ಷಾಲಯಾ ಮಾಸ । ಸ ತಸ್ಯ ಶಿವಯೋಗಿನಃ ॥**

ಆಕಾಶದಿಂದ ಅಗಸ್ತ್ಯಾಶ್ರಮದ ಕಡೆ ಭೂಮಿಗಿಳಿಯುತ್ತಿದ್ದ ಸಿದ್ಧಕುಲ ಚಕ್ರವರ್ತಿ ಭಗವತ್ಪಾದಾಚಾರ್ಯ ಶ್ರೀ ರೇಣುಕ ಗಣೇಂದ್ರನನ್ನು ಕಂಡ ತಕ್ಷಣ ತನ್ನ ಆಸನದಿಂದ ಜಗ್ಗನೆ ಎದ್ದು ತಮ್ಮ ಅರ್ಧಾಂಗಿ ಲೋಪಾಮುದ್ರೆಯೊಂದಿಗೆ ಹಾಗೂ ತಮ್ಮಾಶ್ರಮದ ಸುತ್ತಯಿದ್ದ ಸಮಸ್ತ ಋಷಿ ಮಹರ್ಷಿಗಳೊಂದಿಗೆ ಶಿರದಲ್ಲಿಟ್ಟ ಬದ್ಧಾಂಜಲಿ ಪುಟ ಭಾವದಿಂದ ಜಗದಾಚಾರ್ಯ ಸಾರ್ವಭೌಮರನ್ನು ಪರಮ ಭಕ್ತಿಭಾವದಿಂದ ಸ್ವಾಗತಿಸಿ, ಮುಡಿಸಾರ್ದ್ರ ಬೆಂಬಿಳಿ ವಿಡಿದು ವೇದ ಘೋಷದೊಂದಿಗೆ ತಮ್ಮ ಆಶ್ರಮದೊಳಗೆ ಬರಮಾಡಿಕೊಂಡನು ತಮ್ಮ ಆಶ್ರಮವನ್ನು ಪ್ರವೇಶಿಸಿದ ಶ್ರೀ ಜ॥ ರೇಣುಕ ಪರಂ ಜ್ಯೋತಿ ಸಾಕ್ಷಾತ್ ಪರ ಶಿವನ ಪರಂಪರಾವತಾರಿ ಎಂದು ಅಗಸ್ತ್ಯ ದಂಪತಿಗಳು ತಮ್ಮ ಜ್ಞಾನನೇತ್ರಂಗಳಿಂದ ಅರಿತು ಆನಂದಿಸಿ ಸಾಷ್ಟಾಂಗ ನಮಸ್ಕಾರಗಳನ್ನೆಸಗಿ ಆಚಾರ್ಯ ದೇವರ ಕರವಿಡಿದು ಒಳಗೆ ಕರತಂದು ಉನ್ನತಾಸನದಲ್ಲಿ ಅಲಂಕೃತಗೊಳಿಸಿದರು. ಮಹಾಚಾರ್ಯರ ಕೋಟಿ ರವಿ ತೇಜದಂತೆ ಪ್ರಕಾಶಮಾನವಾದ ಅಡಿದಾವರೆಗಳನ್ನು ಅಗಸ್ತ್ಯ ದಂಪತಿಗಳು ಅತ್ಯಂತ ನಮ್ರಭಾವದಿಂದಲೂ ಅವಧಾನ ಭಕ್ತಿಪೂರ್ವಕ ಪೂಜಿಸಲುಪಕ್ರಮಿಸಿದರು. **ಲೋಪಾಮುದ್ರಾ ಕರನೀತೈ । ರುದಕೈ ರತಿ ಪಾವನೈಃ ॥** ವೇದಮಂತ್ರ ಭಾಷ್ಯಕಾರಳೂ ಪತಿವ್ರತೆಯೂ ಮತ್ತು ತಪಸ್ವಿನಿ ಲೋಪಾಮುದ್ರಾದೇವಿ ಮಡಿಯಿಂದ ತಂದ ಪವಿತ್ರ ಗಂಗೋದಕದಿಂದ ಅಗಸ್ತ್ಯ ದಂಪತಿಗಳು ಅತೀವ ಆನಂದ ಪುಳಕಾಂಕಿತ ಭಾವದಿಂದ ಶ್ರೀ ತ್ರಿಭುವನಾಚಾರ್ಯರು, " **ಅರುಣಾಂಬುಜ ಸೋದರ ಪಾದಸ್ಮರಣಂ** " ಅರುಣೋದಯದಿಂದ ತಟಾಕಗಳಲ್ಲಿನ ಕೋಮಲ ಕರ ಕಮಲಗಳನ್ನು ಅರಳಿಸುವ ಕಮಲಗಳ ಸೋದರನೋ ಎಂಬಂತೆಸೆವ ಸೂರ್ಯೋದಯದ ಹೊಂಬಣ್ಣದ ಮನ ಮೋಹಕಕಾಂತಿಯನ್ನು ಸಹಸ್ರ ಪಟ್ಟು ಅಧಿಕರಿಸಿ ಬೆಳಗುವಂಥಾ ಶ್ರೀ ರೇಣುಕಾಚಾರ್ಯರ ದಿವ್ಯ ಪಾದಕಮಲಗಳನ್ನು ವಿಧಿವತ್ತಾಗಿ ಪಾದಂಗಳನ್ನು ಪ್ರಕ್ಷಾಳಿಸಿ, ಅಭಿಷೇಕಂಗೈದು ಪರಿಶುಭ್ರವಸ್ತ್ರದಿಂ ಮೆಲ್ಲನೆ ವರಸಿ ಆ ಧೂಳೀ ಪಾದೋದಕವನ್ನು ಶಿರದಲ್ಲಿ ಪ್ರೋಕ್ಷಿಸಿ, ಆಶ್ರಮದಾದ್ಯಂತ ಸಂಪ್ರೋಕ್ಷಣೆಗೈದರು ನಂತರ ತಮಗೆ ಅನಾಯಾಸವಾಗಿ ದೊರಕಿದ ಶ್ರೀ ಗುರು ಪಾದಕಮಲ

ಗಳನ್ನು ವಿಧಿವತ್ತಾಗಿ ಪೂಜಿಸಿ ವಿನಯವಿನಮ್ರತರಾಗಿ ಪರಮಾನಂದ ತುಂದಿಲ ಹೃದಯ ಸ್ವಾಂತ ಭಾವದಿಂದ ವಿಜೃಂಭಿತರಾಗಿ, ಆಗ ತಮ್ಮ ಆಶ್ರಮದಲ್ಲಿ ಭಕ್ತಿಯಿಂದ ನೆರೆದಿದ್ದ ಋಷಿ ಜನ, ಮುನಿ ಜನ ಪ್ರಮಥಗಣರಿಗೆ ಶಿವಾನಂದದಲ್ಲಿ ಮುಳುಗಿಸಿದ, ಆಗಸ್ತ್ಯ ದಂಪತಿಗಳ ಭಾಗ್ಯಕ್ಕೆಣೆಯುಂಟೆ? ಕೈಮುಗಿದು ಎದುರಲ್ಲಿ ನಿಂತಿದ್ದ ಮುನಿದಂಪತಿಗಳು, ಶ್ರೀ ಜ|| ರೇಣುಕ ಗುರುವರನ ಅಣತಿವಿಡಿದು ದರ್ಭಾಸನದಲ್ಲಿ ಶ್ರೀ ಮದಾಚಾರ್ಯವರ್ಯರ ಸನ್ನಿಧಿಯಲ್ಲಿ ನಮ್ರಭಾವದಿಂದ ಕುಳಿತು ಕೊಂಡರು. "ಗುರು ಪೂಜೈವ ಪೂಜಸ್ಯ| ಶಿವಸ್ಯ ಪರಮಾತ್ಮನಃ||

ಶ್ರೀ ಮಹಾ ಗುರುವಿನ ಪಾದ ಪೂಜೆಯೇ ಶಿವನ ಪೂಜೆ. ಶಿವನು ಗುರು ರೂಪದಲ್ಲಿ ಪ್ರತ್ಯಕ್ಷನಿರುವನು.ಅದ್ದರಿಂದ ಶ್ರೀ ಗುರು ಪಾದ ದ್ವಯಮೇ ದೈವಂ.

**ಧರ್ಮೇದುರ್ಮತಿ ರುಜ್ಜ್ಯತಾಂ| ಶೃತಿಮತಂ ಕರ್ಮ ಸ್ವನುಷ್ಠೀಯತಾಂ | ಶರ್ಮತ್ವಂ ಪರಿಭಾವ್ಯತಾಂ | ದೃಢತರಂ ಪ್ರಾಕ್ಕರ್ಮಸಂ ಹಾರ್ಯತಾಂ | ಶಾಂತಿಸ್ಸಂತ ತಮಾಪ್ಯ ತಾಂ ಗುರು ಕುಲೇ ಭಕ್ತಿಸ್ಸಮಾಶ್ರೀಯತಾಂ| ಪಂಚಾಚಾರ್ಯ ಪದಾಂಬುಜೇಷು | ಸತತಂ ಚ್ಚೇತಃ ಸ್ವಮಾಧೀಯತಾಂ ||**

**ಕೈಲಾಸಾಚಲ ಕಂದರಾಲಯ ಕರೀ | ಗೌರೀ ಶಿವಾ ಶಂಕರೀ |**
**ಕೌಮಾರೀ ನಿಗಮಾರ್ಥ ಗೋಚರ ಕರೀ|ಓಂಕಾರ ಬೀಜಾಕ್ಷರೀ|**
**ಮೋಕ್ಷದ್ವಾರ ಕವಾಟ ಪಾಟನ ಕರೀ| ಕಾಶೀ ಪುರಾಧೀಶ್ವರೀ**
**ಭಿಕ್ಷಾಂ ದೇಹಿ ಕೃಪಾವಲಂಬನಕರೀ|ಮಾತನ್ನಪೂರ್ಣೇಶ್ವರೀ||**

## ಆಗಸ್ತ್ಯಂ ಪ್ರತಿ ಕುಶಲ ಪ್ರಶ್ನಃ

**ನಿರ್ವಿಘ್ನಂ ವರ್ತಸೇ ಕಿಂ ನು| ನಿತ್ಯಾ ತೇ ನಿಯಮ ಕ್ರಿಯಾ ?|**
**ಅಥವಾಗಸ್ತ್ಯ ತೇಜಸ್ವಿನ್ | ಕುತಃ ಸ್ತ್ವೈಸ್ತ್ರೇಂ ತರಾಯಕಾಃ |**
**ವಿಂಧ್ಯೋ ನಿರುದ್ಧೋ ಭವತಾ| ವಿಶ್ವೋಲ್ಲಂಘನ ವಿಭ್ರಮಃ |**

**ನಹುಷೋ ರೋಷ ಲೇಶಾತ್ತೇ । ಸದ್ಯಃ ಸರ್ಪತ್ವಮಾಗತಃ ॥**

ತಮ್ಮ ಎದುರಿನಲ್ಲಿ ಪದ್ಮಾಸನಾಸೀನನಾಗಿ ಕೈಜೋಡಿಸಿ ಕೊಂಡು ಶಾಂತವಾಗಿ ಕುಳಿತಿದ್ದ ಅಗಸ್ತ್ಯ ಮುನಿವರನನ್ನು ಕೃಪಾನುಗ್ರಹ ದೃಷ್ಟಿಯಿಂದ ನೋಡಿದ ತೇಜಸ್ಸಂಪನ್ನನಾದ ಸಿದ್ಧಕುಲ ಚಕ್ರವರ್ತಿ ಶ್ರೀ ಜ॥ ರೇಣುಕಾಚಾರ್ಯರು,

**ಚಿತ್ರಂ ವಟ ತರೋರ್ಮೂಲೇ। ವೃದ್ಧಾ ಶಿಷ್ಯಾಗುರೋರ್ಯುವಃ।**
**ಗುರೋಸ್ತು ಮೌನಂ ವ್ಯಾಖ್ಯಾನಂ । ಶಿಷ್ಯಾಸ್ತು ಛಿನ್ನ ಸಂಶಯಾಃ ॥**

ವೃದ್ಧ ಶಿಷ್ಯನನ್ನುದ್ದೇಶಿಸಿ, ಹೇ ತಪೋಧನನೇ! ನಿನ್ನ ನಿತ್ಯನೈಮಿತ್ತಿಕಾದಿ ತ್ರಿಕಾಲ ಇಷ್ಟ ಲಿಂಗಾರಧನೆ, ಜಪ ತಪ ಹೋಮಾದಿಗಳೂ, ಸ್ವಾಧ್ಯಾಯಾದಿ ಅಧ್ಯಯನ ಅಧ್ಯಾಪನಾ ಕಾರ್ಯಗಳು ನಿರ್ವಿಘ್ನದಿಂದ ಸುಲಲಿತವಾಗಿ ಜರುಗುತ್ತಲಿವೆಯಾ? ನಿನಗೆ ಪ್ರತಿ ಬಂಧಕವನ್ನು ತಂದು ವೊಡ್ಡುವವರಾರು? ಮುನಿಕುಲ ತಿಲಕಾ! ನಿನ್ನ ಪಶುಸಂವರ್ಧನ ಸೇವಾಕಾರ್ಯ ಯಶಸ್ವಿಯಾಗಿ ಮುಂಜರುಗುತ್ತಲಿದೆಯಾ? ಯಾಕೆಂದರೆ "**ಗಾವೋ ಲೋಕಸ್ಯಮಾತರಃ**" ಸಕಲರಿಗೂ ಕ್ಷೀರಾಮೃತ ಕೊಡುವ ಗೋವುಗಳು ಜಗತ್ತಿನವರಿಗೆಲ್ಲಾ ತಾಯಿ. ನಿನ್ನ ಅತುಲ, ಅಸದೃಶ ಪ್ರಭಾವವನ್ನು ಅರಿತಿದ್ದೇನೆ. ಅಸಾಧ್ಯವಾಗಿ ಮದದಿಂದ ಬೆಳೆ, ಬೆಳೆಯುತ್ತ ಜಗತ್ತಿನ ಉಲ್ಲಂಘನದಲ್ಲಿ ಮಿತಿಮೀರುತ್ತಿದ್ದ ವಿಂಧ್ಯಪರ್ವತದ ಗರ್ವವನ್ನು ತಗ್ಗಿಸಿದೆ ನೀನು. ನಹುಷ ಚಕ್ರವರ್ತಿಯ ಅಹಂಭಾವ ಅಟ್ಟಹಾಸವನ್ನು ಮುರಿದು ದಂಡಿಸಿ ಅವನನ್ನು ಅವನ ದರ್ಪದ ನುಡಿಯಿಂದ "**ಸರ್ಪ ಸರ್ಪ**" ಎಂದದ್ದಕ್ಕೆ ನಿನ್ನ ತಪಃ ಶಕ್ತಿಯಿಂದ ಆನಹುಷ ಚಕ್ರವರ್ತಿಯನ್ನು ಇಂದ್ರನ ಪದವಿಯಿಂದ ಪತಿತನನ್ನಾಗಿಸಿ, ನಿಮಿಷಾರ್ಧದಲ್ಲಿ ಅವನನ್ನು ಹಾವಾಗಿ (ಸರ್ಪವಾಗಿ) ಭೂಮಿಗೆ ಉರುಳುವಂತೆ ಮಾಡಿ ಅವನ ಅಷ್ಟೈಶ್ವರ್ಯವೆಲ್ಲಾ ಸಮುದ್ರದ ಪಾಲುಮಾಡಿದೆ. ನಿನ್ನ ತಪಃ ಪ್ರಭಾವದಿಂದ ಸಪ್ತಸಾಗರಗಳ ಜಲವನ್ನು ಲೀಲಾಜಾಲವಾಗಿ ಆಪೋ ಶನಂ ಗೈದೆ. ದುಷ್ಟ ದುರುಳನಾದ ದೂರ್ತ ವಾತಾಪಿಯೆಂಬ ದಾನವನನ್ನು ದಂಡಿಸಿ ಹೆಸರಿಲ್ಲದಂತೆ ಮಾಡಿ ಅವನನ್ನು ನುಂಗಿ ನೀರ್ಕುಡಿದು ನಿನ್ನ ಜಠರಾಗ್ನಿಯಿಂದ ವಾತಾಪಿಯನ್ನು ದಹಿಸಿ, "**ವಾತಾಪಿ ಜೀರ್ಣೋದ್ಭವ**" ಯೆಂದುಸುರುತ್ತಾ

ಹೊಟ್ಟೆಯನ್ನು ಸವರಿ ಕೊಂಡೆ. ಇಂತಪ್ಪ ಲೋಕೋತ್ತರ ಪವಾಡಗಳಿಂದ ಮೆರದ ನಿನಗಾರು ಸಾಟಿ ?

ಭಗವಾನ್ ಅಗಸ್ತ್ಯರು ಶಿವಾಂಶ ಸಂಭೂತರು ನಭೋ ಮಂಡಲದಲ್ಲಿ ಪ್ರಕಾಶಿಸುವ ಸಪ್ತರ್ಷಿತಾರಾಗಣಕ್ಕೆ ಅಧಿಪತಿಗಳು, ಶ್ರೀ ಗಿರಿಜಾಕಲ್ಯಾಣ ಸಂದರ್ಭದಲ್ಲಿ ಅಗಣಿತ ಅಸಂಖ್ಯಾತ ದೇವ ಗಣ, ಪ್ರಮಥಗಣ, ಋಷಿಮಹರ್ಷಿ ಗಳ ಪ್ರೇಕ್ಷಕರ ಸಂದಣಿಯ ದಟ್ಟಣೆಯ ನೂಕು ನುಗ್ಗಲು ತುಳಿತದಿಂದಾಗಿ ಭೂಮಿಯ ಉತ್ತರದ ಮೇರು ಗಿರಿ ಕುಸಿದು, ಸಮಸ್ತರನ್ನೂ ಕಂಪನ ಗೊಳಿಸಲು ಬೆದರಿದ ಗಿರಿಜೆ ಶಿವನನ್ನು ಭಯದಿಂ ಅಪ್ಪಿದಳು. ಎಲ್ಲರೂ ಮಹಾದೇವನನ್ನು ಪ್ರಾರ್ಥಿಸುತ್ತ ತಂತಮ್ಮ ಪ್ರಾಣ ರಕ್ಷಣೆಗಾಗಿ ಚೀರಿದರು. ಈ ಘೋರ ದೃಶ್ಯ ವನ್ನು ಕಣ್ಣಾರೆ ಕಂಡ ಆಪದ್ಬಾಂಧವನು, ತಕ್ಷಣ ಸಮಿಪದಲ್ಲಿ ಕೈ ಜೋಡಿಸಿ ನಮಸ್ಕರಿಸುತ್ತಿದ್ದ ಅಂಗುಷ್ಠ ಪ್ರಮಾಣ ಎತ್ತರದ ತೇಜಃ ಪುಂಜನಾದ ಅಗಸ್ತ್ಯನನ್ನು ವೀಕ್ಷಿಸಿ ನೀನು ತಕ್ಷಣ ಭಾರತದ ದಕ್ಷಿಣ ಭಾಗದ ತುದಿಯಲ್ಲಿ ನಿಲ್ಲುವುದಾಗಿ ಅಜ್ಞಾಪಿಸಲು ಆಹಹಾ ! ಅಗಸ್ತ್ಯ ಮಹರ್ಷಿ ಕ್ಷಣಾರ್ಧದಲ್ಲಿ ಆಕಾಶ ಮಾರ್ಗವಾಗಿ ವಾಯುವೇಗ ಮನೋ ವೇಗದಿಂದ ಕನ್ಯಾಕುಮಾರಿ ತೀರದ ತುದಿಯ ಭೂಮಿಯ ಮೇಲೆ ಶಿವ ಶಿವಯೆಂದು ತನ್ನ ಪುಟ್ಟ ಹೆಜ್ಜೆಗಳ ನ್ನೂರಿದೊಡನೆ, ಆಗ ಏರುಪೇರಾಗಿದ್ದ ಭೂಮಿ ಸಮತೊಲನವಾಗಲು ಸಮಸ್ತ ರಿಗೂ ಸಮಾಧಾನವಾಯಿತು. ಅಂದಿನಿಂದ ಪುಣ್ಯ ಪುರುಷ ಶ್ರೀ ಅಗಸ್ತ್ಯ ಮಹರ್ಷಿಗಳು ದಕ್ಷಿಣ ಭಾರತದಲ್ಲೇ ಉಳಿದರು. ದ್ರಾವಿಡ ಜನಾಂಗದವರ ಭಾಗ್ಯ ದೇವತೆಯ ಜ್ಞಾನ ನೇತ್ರಂಗಳನ್ನು ತೆರೆಯಿಸಿದಂತಾಯಿತು. ಶ್ರೀ ಸೀತಾ ರಾಮ ಲಕ್ಷ್ಮಣರು ತಮ್ಮ ದಂಡಕಾರಣ್ಯವಾಸ ಕಾಲದಲ್ಲಿ ಶ್ರೀ ಅಗಸ್ತ್ಯಾ ಶ್ರಮದಲ್ಲಿ ಒಂದು ರಾತ್ರಿ ವಿಶ್ರಮಿಸಿ ಅವರ ಅಥಿತ್ಯದಿಂದ ಸಂತುಷ್ಟರಾದರು. ಅಗಸ್ತ್ಯ ದಂಪತಿಗಳು ಶ್ರೀ ಸೀತಾ ರಾಮರನ್ನು ಆಶೀರ್ವದಿಸಿ ಸರ್ವಮಂಗಳವಾಗ ಲೆಂದು ಹರಸಿದರು. ನಂತರ ರಾಮ ರಾವಣರ ಮಧ್ಯೇ ಜರುಗಿದ ಮಹಾ ಯುದ್ಧದಲ್ಲಿ ರಾವಣಾಸುರನನ್ನು ಸಂಹರಿಸಲು ಅಶಕ್ತನಾದ ಶ್ರೀ ರಾಮ, ಉಪಾಯವರಿಯದೆ ಮರದಡಿ ಏಕಾಂಗಿ, ಶಿರದಲ್ಲಿಟ್ಟ ಕರಗಳಿಂದ ಕುಳಿತು ಶಿವ ಭಕ್ತಾಗ್ರೇಸರನಾದ ಲಂಕಾಧಿಪತಿಯನ್ನು ಸಂಹರಿಸುವುದೆಂತು ಎಂದು ಚಿಂತಿಸು ತ್ತಿದ್ದನು. ಆ ಸಮಯದಲ್ಲಿ ಶಿವತೇಜಸ್ವಿಯಾದ ಶ್ರೀ ಜ|| ರೇಣುಕಾಚಾರ್ಯರ

ಪ್ರಥಮ ಶಿಷ್ಯ ಆದಿ ಅಗಸ್ತ್ಯ ಮಹರ್ಷಿ, ಆಕಾಶ ಮಾರ್ಗವಾಗಿ ಬಂದು ಶ್ರೀ ರಾಮನನ್ನು ಸಂತೈಸಿಸಿ, **ರಾಮ ರಾಮ ಮಹಾ ಬಾಹೋ।ಶ್ರುಣು ಗುಹ್ಯಂ ಸನಾತನಂ। ಆದಿತ್ಯ ಹೃದಯಂ ಪುಣ್ಯಂ। ಸರ್ವ ಶತ್ರು ವಿನಾಶನಂ॥** ಎಂದು ಆದಿತ್ಯ ಹೃದಯ ಮಹಾಮಂತ್ರವನ್ನು ರಣರಂಗದಲ್ಲಿ ಉಪದೇಶಿಸಿ, ಈ ಮಂತ್ರವನ್ನು ಭಕ್ತ್ಯಾ ಜಪಿಸಿ ಮಂತ್ರಸಿದ್ಧಿಯಿಂದ ಲಂಕಾಧಿಪತಿ ದಶಕಂಠ ರಾವಣಾಸುರನನ್ನು ಸಂಹರಿಸೆಂದು ರಾಮರಿಗೆ ಶುಭವಕೋರಿ ಅಂತರ್ಧಾನರಾದರು ಆದಿತ್ಯನ ಹೃದಯದಲ್ಲಿ ಪ್ರಜ್ವಲಿಸುವಾತ ಪರಶಿವ ಬ್ರಹ್ಮನೆಂದು ನಿಗಮಾಗಮ ಗಳು ಸಾರುತ್ತಲಿವೆ. ಈ ಅಂಶವನ್ನು ಶ್ರೀಕರ ಭಾಷ್ಯದಲ್ಲಿ ಶ್ರೀಪತಿ ಪಂಡಿತಾ ರಾಧ್ಯರು ಉಪಹರಿಸಿ ಘಂಟಾಘೋಷದಿಂದ ಘೋಶಿಸಿರುವರು.

ಭಗವತ್ಪಾದ ಶ್ರೀ ರೇಣುಕಾಚಾರ್ಯರು ಏಕೋತ್ತರ ಶತಸ್ಥಲ ಸಿದ್ಧಾಂತ ವನ್ನು ಅಗಸ್ತ್ಯರಿಗೆ ಬೋಧಿಸುವಾಗ ಅಡಿಗಡಿಗೆ ಅಲ್ಲಲ್ಲಿ "**ಮಹಾತ್ಮ**" ಮತ್ತೂ "**ಕಥಯಾಮಿ ಮಹಾಮುನೇ**" ಎಂದೂ ವಾತ್ಸಲ್ಯ ಭಾವದಿಂದ ಸಂಭೋ ಧಿಸಿರುವರು. ಇದೆಂಥಾ ಉದಾತ್ತವಾದ ಭಾವ. ಅಗಸ್ತ್ಯರು ಪ್ರಕೃತಿ ಸಂಘ ರಹಿತರು, ಶಿವಾದ್ವೈತ ಪರಾನಂದ ಪ್ರಕಾಶನ ನಿರತರೆಂದೂ, ಪರಶಿವ ಭಕ್ತಿ ಭರಿತರೆಂದೂ ಸ್ತುತಿಸುತಿಹರು. ಮುನ್ನ ಮಹಾದೇವನು ಬೋಧಿಸಿದ ಶಿವಧರ್ಮೋತ್ತರ ಶಾಸ್ತ್ರವನ್ನು ಹೈಮವತಿ ಸುತ ಷಣ್ಮುಖಸ್ವಾಮಿ ನಿನಗೆ ಕರುಣೆಯಿಂದ ಉಪದೇಶಿಸಿರುವನು. ಹೇ ! ಅಗಸ್ತ್ಯ ಮುನಿಯೆ !! ಘನ ಘೋರ ಸಂಸಾರ ಭಯವ ಹರಿಸುವ ಶಿವಭಕ್ತಿ ಪಂಥವು ಭುವಿಯೊಳಗೆ ನಿನ್ನ ತಪೋಬಲದಿಂದ ಬೆಳಗುತ್ತಿದೆ. ಎಂದು ಶ್ರೀ ರೇಣುಕರು, ತಮ್ಮ ಕುಶಲ ಪ್ರಸ್ತಾ ಪದಲ್ಲಿ ಅಗಸ್ತ್ಯರನ್ನು ಪ್ರಶಂಶಿಸಿದರು.

**ಕಲ್ಯಾಣಾನಾಂ ನಿಧಾನಂ। ಕಲಿಮಲ ಮಥನಂ। ಪಾವನಂ ಪಾವನಾನಾಂ॥ ಪಾಥೇಯ ಯನ್ಮುಮುಕ್ಷೋಃ॥ ಸಪದಿ ಪರ ಪದ ಪ್ರಾಪ್ತಯೇಪ್ರಸ್ಥಿತಸ್ಯ। ವಿಶ್ರಾಮ ಸ್ಥಾನಮೇಕಂ। ಕವಿವರ ವಚಸಾಂ। ಜೀವನಂ ಸಜ್ಜನಾನಾಂ। ಬೀಜಂ ಧರ್ಮ ಧೃಮಸ್ಯ। ಪ್ರಭವತು ಭವತಾಂ। ಭೂತಯೇ ಶಿವನಾಮ॥೧॥**

ವೇದಾರ್ಥೋರ್ಽ ಹಿ ವಿಚಾರ್ಯತಾಂ । ಗುರುಕೃತಂ ಸೂತ್ರಂ ।
ಸಮಾಲೋಚ್ಯತ್ಯಾಂ । ತದ್ಭಾಷ್ಯಂ ಸು ಸಮೀಕ್ಷ್ಯತಾಂ ।
ಗುರುಮುಖಾಚ್ಛೈವಾಗಮಃ ಶ್ರೂಯತಾಂ । ದುಸ್ತರ್ಕಃ ಪರಿ
ಭೂಯತಾಂ । ಶಿವಮಯಂ ಜ್ಞಾನಂ ಚ ಸಂಪಾದ್ಯತಾಂ ।
ಪಂಚಾಚಾರ್ಯ ಪದಾಂಬುಜೇಷು । ಸತತಂ ಚೇತಃ ಸಮಾ
ಧೀಯ ತಾಂ ॥

## ಅಗಸ್ತ್ಯ ಮಹರ್ಷಿ ಪ್ರಾರ್ಥನಾ

(ಪರಿಚ್ಛೇದ ೪)

ಅಹ ಮೇವ ಮುನೀಂದ್ರಾಣಾಂ। ಲಾಲನೀಯೋಸ್ಮಿ ಸರ್ವದಾ।
ಭವದಾಗಮ ಸಂಪತ್ತಿರ್ಮಾಂ । ವಿನಾ । ಕಸ್ಯ ಸಂಭವೇತ್ ॥
ಸಂಸಾರ ಸರ್ಪದಷ್ಟಾನಾಂ । ಮೂರ್ಛಿ ತಾನಾಂ ಶರೀರಿಣಾಂ ।
ಕಟಾಕ್ಷಸ್ತವ ಕಲ್ಯಾಣಂ । ಸಮುಜ್ಜೀವನ ಭೇಷಜಂ ॥

(ಶ್ಲೋ ೪೫, ೪೭)

ಶ್ರೀ ರೇಣುಕರ ಅಮೃತ ವಾಣಿಯನ್ನು ಪರಮಾದರದಿಂದ ಲಾಲಿಸಿ, ಭಕ್ತಿಭರಿತ ಭಾವದಿಂದ ವಿನಯಾನ್ವಿತನಾಗಿ ನಿವೇದಿಸಿ ಕೊಳ್ಳುತ್ತಾ, ಭೋ ಭೋ ಶ್ರೀ ಗುರೂಣಾಂ ಗುರುವೇ ! ನಿಮ್ಮ ಆಗಮನದಿಂದ ನಾವೆಲ್ಲರೂ ಧನ್ಯ ರಾದೆವು. ನಮ್ಮ ಆಶ್ರಮವೂ ಪಾವನವಾಯಿತು. ಈ ಮಲಯಾಚಲ ಪ್ರದೇಶವೆಲ್ಲಾ ಪುಣ್ಯಮಯವೆನಿಸಿತು. ಸಂಪದ್ಭರಿತ ಸೌರಭದಿಂದ ಶೋಭಿತ ವಾಗಿಹುದು. ನಾನು ಅನೇಕಾನೇಕ ಜನ್ಮಗಳಲ್ಲಿ ಮಾಡಿದ ಶಿವಪೂಜಾ, ಜ್ಞಾನ, ವ್ರತ, ಧ್ಯಾನಾದಿಗಳ ಪುಣ್ಯ ಪರಿಪಾಕದ ಫಲವಾಗಿ ಶಿವನೇ ಆದ ನೀವು ಇಂದು ನಮಗೆ ಪ್ರತ್ಯಕ್ಷ ದರ್ಶನವಿತ್ತು ಅನುಗ್ರಹಿಸಿರುವಿರಿ. ನನ್ನ ಭಾಗ್ಯಕ್ಕೆಣೆ ಯುಂಟೇ ? ಮಹಾ ಗುರುವೇ ! ಇಂದೆನ್ನ ತಪಸ್ಸು ಹಣ್ಣಾಯಿತು. ನನ್ನ ಅಂತಃಕರಣದ ಶಿವಭಕ್ತಿ, ಇಷ್ಟಲಿಂಗದ ನಿಷ್ಠೆ, ಶಿವಜ್ಞಾನ, ಶಿವಧ್ಯಾನಾದಿಗಳು ಸ್ಥಿರತೆಯಿಂದ ಸಫಲ ಗೊಂಡವು.

**ಪಾದಾಗ್ರ ರೇಣವೋ ಯತ್ರ । ಪತಂತಿ ಶಿವಯೋಗಿನಾಂ ।**
**ತದೇವ ಸದನಂ ಪುಣ್ಯಂ । ಪಾವನಂ ಗೃಹಮೇಧಿನಾಂ ॥**

ಧರಣಿಯಲ್ಲಿ ಎಲ್ಲಿ ಶ್ರೀ ಶಿವಯೋಗಿಗಳ, ಶಿವಾಚಾರ್ಯರ ದಿವ್ಯ ಶ್ರೀ ಪಾದ ಸ್ಪರ್ಶವಾಗುತ್ತೋ ಅದು, ಪಾವನಾತಿಪಾವನ ಸ್ಥಳವೆಂದು ಸ್ತುತ್ಯ ವಿರುತ್ತೆ. ಜೀಯಾ ! ಸಚ್ಚಿದಾನಂದ ನಿತ್ಯ ಸತ್ಯ ಪರಿಪೂರ್ಣವೆನಿಸಿದ ನಿಮ್ಮ ಸ್ವರೂಪಂಗಳ ದರ್ಶನದಿಂದೊದಗಿದ ಪುಣ್ಯದ ವಿಶೇಷದಿಂದ ನಾನು ಕೃತಕೃತ್ಯ ನಾದೆನು. ನಿಮ್ಮ ಕರುಣಾಕಟಾಕ್ಷದಿಂದ ನನ್ನ ಮುನಿ ಸಾರ್ವಭೌಮತ್ವವು ಸಾರ್ಥಕವಾಯಿತು. ಗುರುವೇ ! ಪಂಚಜ್ಞಾನೇಂದ್ರಿಯಂಗಳ ಅರಿವುಳ್ಳ ಮಾನವರೂ ಘೋರ ಸಂಸಾರ ರೂಪ,

**ಸಂಸಾರ ಸರ್ಪದಷ್ಟಾನಾಂ । ಮೂರ್ಛಿತಾನಾಂ । ಶರೀರಿಣಾಂ॥**

ನಾಗರ ಘಟಸರ್ಪದ ಕಡಿತದ ವಿಷಜ್ವಾಲೆಯಿಂದ ಮೂರ್ಛಿತರಾಗಿ, ಹೆರಗುರು ದೈವಂಗಳ ಪೂಜಿಸಿ, ಸುಕೃತಿಗಳಾಗುವುದನ್ನು ಮರೆತು, ಸಂಸಾರವೇ ಸಾರವೆಂದು ನೆರೆನಂಬಿ ವೃಥಾ ವ್ಯಾಮೋಹ ಭರಿತರಾಗಿ ಗತಿ ಮೋಕ್ಷಗಳನ್ನರಿಯದೆ,

**"ಪುನರಪಿ ಜನನಂ। ಪುನರಪಿ ಮರಣಂ। ಪುನರಪಿ ಜನನೀ ಜಠರೇ ಶಯನಂ|** ಎಂಬಂತೆ **ಭ್ರಾಮಯನ್ ಸರ್ವಭೂತಾನಿ । ಯಂತ್ರಾ ರೂಢನಿ ಮಾಯೆಯಾ ॥** ಯಂತ್ರದ ಚಕ್ರ ಸುತ್ತುತ್ತಿರುವಂತೆ ೮೪ ಲಕ್ಷ ಜೀವ ಕೋಟಿಗಳಲ್ಲಿ ಹುಟ್ಟುತ್ತಾ ತೊಳಲಿ ಬಳಲಿ ಬೆಂಡಾಗಿ ದುಃಖಕ್ಕೆ ಈಡಾಗಿ ರುವರು. **ಸಂಸಾರೇ ಭ್ರಮತಾಂ ನಿತ್ಯಂ। ಕರ್ಮಯಂತ್ರ।ನಿಯಂತ್ರಣೇ॥** ಕೊನೆಯನ್ನು ಕಾಣದ ಸಂಸಾರ ಚಕ್ರದ ಮಧ್ಯೇ ಸಿಕ್ಕಿ ಸುತ್ತುತ್ತಾ ಜೀವರು ಗಳು ಕರ್ಮ ಪಾಶಕ್ಕೊಳಗಾಗಿ, ಗತಿ ಮೋಕ್ಷ ಕಾಣದೆ ನುಚ್ಚು ನೂರಾಗಿ ನಶಿಸುತ್ತ ಇದೇ ಸುಖವೆಂದು ಭಾವಿಸಿರುವರು. ಅಂದೋ ! ಕಾಲಚಕ್ರದ ಪಾಶ ಯಾರನ್ನೂ ಬಿಟ್ಟಿಲ್ಲಾ. ಅಶಾಂತಿಯೆಂಬ ಭವಸಾಗರದ ಅಲೆಗಳು ನಿರಂತರ ಮಾನವರ ಮನವೆಂಬ ದಡವನ್ನು ಬಡಿದು ಬಡಿದು ಘಾಸಿ ಪಡಿಸುತ್ತಲಿವೆ. ಇದೆಲ್ಲಾ ಸಂಸಾರ ಸರ್ಪದ ಕಡಿತದಿಂದ ದೇಹದಲ್ಲಿ ಆವರಿಸಿರುವ ಆಶಾನಾಮ ವಿಷದ ಪರಿಭ್ರಮಣೆ. ಇಂತಪ್ಪ ವಿಷವನ್ನು ಶಮನಗೊಳಿಸಿ, ನಮ್ಮನ್ನು ಕರುಣೆ

ಯಿಂದ ಉದ್ಧರಿಸಲು– **ಶ್ರೀ ಮದ್ರೇಣು ಕಾಖ್ಯಾನ । ಪೀಯೂಷಂ ಭೇಷಜಂ ಸ್ಮೃತಂ ॥** ಅಂದರೆ ಮಾನವರು ತಾಪತ್ರಯಗಳಿಂದ, ಈಷಣತ್ರಯಗಳಿಂದ ಹಾಗೂ ಕನಕ, ಕಾಮಿನಿ, ಕಾಂಚನಗಳ ಮೋಹ ಜಾಲದಿಂದ ಮುಕ್ತರಾಗಲು ಮತ್ತೂ ಧನ ಕನಕ ವಸ್ತು ವಾಹನಾದಿಗಳ ಆರ್ಭಟದ ಸೆಳೆತದಿಂದ ಸಕ್ರಿಯವಾಗಿ ವಿಮೋಚನೆ ಹೊಂದಲು, ಶ್ರೀ ಗುರುಪಾದ ಸ್ಮರಣೆಯೊಂದಿಗೆ ಎಚ್ಚೆತ್ತ ಮಾನವ, **ಶ್ರೀ ಮದ್ರೇಣುಕಾಖ್ಯಾನ । ಪೀಯೂಷಂ । ಪಿಬ ಪಿಬ ಸತತಂ ॥ ಏಕೇನ ಜನ್ಮನಾ ಮುಕ್ತಿಃ । ವೀರಶಾಂತು । ಮಹೇಶ್ವರೀ ॥** ಎಂಬಂತೆ, ಶ್ರೀ ಮದ್ರೇಣುಕ ಗೀತಾಮೃತವನ್ನು ಅನುಗ್ರಹಿಸಲು ನಮ್ಮಾಶ್ರಮಕ್ಕೆ ಕೃಪೆಯ ಅಪ್ರಾರ್ಥಿತರಾಗಿ ಬಂದಿರುವ ಶಿವಾವತಾರಿ ಶ್ರೀ ಮಜ್ಜಗದ್ಗುರು ರೇಣುಕನೇ, ಎಂದು ಸ್ತುತಿಸಿ ಅಗಸ್ತ್ಯನು ಶರಣಾಗತನಾದನು.

ಕ್ರಿಯಾ ಭಕ್ತಿ ಜ್ಞಾನಗಳ ಸಮುಸಮುಚ್ಚಯ ಸಿದ್ಧಾಂತ ಶಿಖಾಮಣಿ ಪ್ರೋಕ್ತ ಶಿವಾದ್ವೈತ. ಇದರಿಂದಾಗಿ ಸನಾತನವೆನಿಸಿ ವೇದವಿಹಿತವಾದೀ ಪರಮ ಸಿದ್ಧಾಂತ **"ತತ್ವಾನಾಂ ಮಹದಾದೀನಾಂ"** ಎಂದು ಶ್ರುತಿಗಳಲ್ಲಿ ಉಕ್ತವಾಗಿದೆ. ಕ್ರಿಯಜ್ಞಾನಗಳ ಮಧ್ಯೆ **"ಭಕ್ತಿ"** ಮಧ್ಯಮಣಿ ನ್ಯಾಯದಂತೆ ಪರುಷಮಣಿಯೆನಿಸಿದೆ. ಭಕ್ತಿಯಿಲ್ಲದ ಕ್ರಿಯೆ, ಭಕ್ತಿ ರಹಿತವಾದ ಜ್ಞಾನ ಒಣಸುಂಟಿಯಂತೆ ನಿಷ್ಫಲವೆನಿಸಿವೆ.

## "ಅಗಸ್ತ್ಯಮಹರ್ಷಿಂ ಪ್ರತಿ ಶ್ರೀ ರೇಣುಕ ಭಗವತ್ಪಾದಾನಾಂ ತ್ವತ್ತ್ವೋಪದೇಶಃ"

(ಶ್ರೀ ಸಿ. ಶಿ. ಪಂಚಮ ಪರಿಚ್ಛೇದದ ಪ್ರಾರಂಭದ ಉಪೋದ್ಘಾತ)

**ವೇದಃ ಪ್ರಧಾನಂ ಸರ್ವೇಷಾಂ । ಸಾಂಖ್ಯಾದೀನಾಂ ಮಹಾಮುನೇ। ವೇದಾನು ಸರಣಾದೇಷಾಂ। ಪ್ರಮಾಣ ಮಿತಿ ನಿಶ್ಚಿತಂ॥ ಪಾಂಚ- ರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯ ಚ ತಥಾಮುನೇ ।**

**ವೇದೈಕದೇಶ ವರ್ತಿತ್ವಂ ಶೈವಂ ವೇದಮಯಂ ಮತಂ॥ ವೇದೈಕದೇಶ ವರ್ತಿಭ್ಯಃ। ಸಾಂಖ್ಯಾದಿ ಭ್ಯೋ ಮಹಾಮುನೇ । ಸರ್ವ ವೇದಾನು ಸಾರಿತ್ವಾ। ಚ್ಛೈವತಂತ್ರಂ ವಿಶಿಷ್ಯತೇ ॥**

**(ಶ್ಲೋ ೫, ೬, ೭)**

ಶಿವಾದ್ವೈತವೆಂಬ ಅಮೃತ ಸಾಗರದಲ್ಲಿ ಶಿವಸ್ಮರಣೆಯೊಂದಿಗೆ ಧುಮುಕಿದ ವೀರ, ಅಂಜದೆ, ಅಳುಕದೆ, ದಮ್ ಹಿಡಿದು ಅಡಿಗಡಿಗೆ ಮುಳುಗೇಳುತ್ತ ಒಮ್ಮೊಮ್ಮೆ ಸಾಗರದ ಆಳವನ್ನು ಮುಟ್ಟಿ, ನವರತ್ನ ಮುತ್ತು ಹವಳಗಳನ್ನು ಬಾಚಿಕೊಂಡು ಸುರಕ್ಷಿತವಾಗಿ ಮೇಲೆ ಬಂದು ದಡವನ್ನು ಸೇರುವಂತೆ, ಇಲ್ಲಿ ಮುತ್ತು ರತ್ನಗಳೆಂದರೆ ಆತ್ಮಾನಾತ್ಮ ವಿಚಾರವೆಂದರಿಯಬೇಕು. ವೀರಶೈವ ಮತಧರ್ಮದಲ್ಲಿ ಎದ್ದು ಕಾಣುವ **"ಸ್ಥಲ, ಅಂಗ, ಲಿಂಗ, ಗುರು, ಓಂಕಾರ ಜಂಗಮ, ವಿಭೂತಿ, ರುದ್ರಾಕ್ಷ, ಶಿವ ಪಂಚಾಕ್ಷರೀ ಮಹಾ ಮಾತ್ರ, ಪ್ರಣವ ಮಹಾಮಂತ್ರ, ಪಾದೋದಕ, ಪ್ರಸಾದ"**, ಇವುಗಳೊಂದಿಗೆ ಪಂಚಾಚಾರ ಷಟ್ಸ್ಥಲ ಮೊದಲಾದ ಮೋಕ್ಷಪ್ರದವಾದ ಸಂಪತ್ತು ಶಾಶ್ವತ ಪದವನ್ನೀಡುವ ಈಶ್ವರೀಯ ಮಹದಂಶಗಳೇ, ಅನರ್ಘ್ಯ ರತ್ನಾಭರಣಗಳೆನಿಸಿವೆ, ಇಂತಪ್ಪ ಷಡ್ಗುಣೈಶ್ವರ್ಯ ಯುತ ಮೋಕ್ಷಾಪೇಕ್ಷಿಯಾದ ಮುಮುಕ್ಷುವಿನ, ವೀರಮಾಹೇಶ್ವರನ, ಅತ್ಮಾನಾತ್ಮ ವಿಚಾರ ತರಂಗಗಳು ಅವನ ಸ್ಫಟಿಕದಂಥಾ ಮನೋ ಬುದ್ಧಿ ಪಟಲಗಳಲ್ಲಿ ಹಾಗೂ ಶುದ್ಧಾಂತಃಕರಣಗಳಲ್ಲಿ ಪ್ರಸ್ಫುಟಿತವಾಗಿ ಭಾಸಮಾನವಾಗುವುವು.

ಋಗಾದಿ ಚತುರ್ವೇದಗಳ ಉತ್ತರ ಭಾಗದ ಸಾರವತ್ತಾದ ಅಂಶದ ಉಜ್ವಲ ವಿಚಾರ ತರಂಗ ವೇದಾಂತವೆನಿಸಿದೆ. ಸಿದ್ಧಾಂತವಾದರೋ, ವೇದಾಂತದೊಳಗಿನ ಹೃದಯದ ಮಿಡಿತವನ್ನು ಗಮನಿಸಿ ಹೊಂಬಣ್ಣದ ಹೃನ್ಮಂದಿರವನ್ನು ಬೆಳಗಿಸುವ, ಚಿನ್ಮಯ ಚಿಚ್ಛಕ್ತಿ ಪರಶಿವನ ಘನತತ್ವವು, **"ಸ್ವಸ್ವರೂಪೈಕ ಚಿಚ್ಛಕ್ತಿಯಿಂ ಸ್ಫುರಿಸುತಿರ್ದುದದ್ವೈತ ಪರಮಾತ್ಮ ತತ್ವಂ"** ಎಂಬ ಶಿವ ಶಕ್ತಿಯಿಂದ ಪ್ರಜ್ವಲಿಸುವ ಸೊಬಗನ್ನು ಶ್ರೀ ಗುರು ಮುಖದಿಂದ ಅರಿತು ಸ್ವಾನುಭೂತಿಗೆ ಅಳವಡಿಸಿ ಕೊಂಡು ತನ್ಮಯನಾಗುವ ಪರಮ ಗುರಿ ಸಿದ್ಧಾಂತವೆನಿಸುವುದು. ವೇದಾಂತ ಪುನಃ ಪುನಃ ಆತ್ಮ ಪರಮಾತ್ಮರ ವಿಚಾರದಲ್ಲಿ

ಪ್ರಶ್ನೋತ್ತರಗಳೆದ್ದು ಚರ್ಚಿಸಲು ಅವಕಾಶ ನೀಡುವುದು. ಹಾಗಿರದೆ, ಸಿದ್ಧಾಂತಂ ಅಂತ್ಯದ ಆಂತರಿಕ ಶುದ್ಧ ಸಿದ್ಧ ಪ್ರಬುದ್ಧ ಶಿವಾನುಭೂತಿಯನ್ನು ನಿರ್ಣಯಾತ್ಮಕವಾಗಿ ಹೊರ ಹೊಮ್ಮಿಸಿ ಮನೋ ಬುದ್ಧೀಂದ್ರಿಯಗಳಿಗೆ ಪರಮ ಶಾಂತಿ ತೃಪ್ತಿಗಳನ್ನು ತಂದೊಡ್ಡುವದು, ಸಿದ್ಧಾಂತದಲ್ಲಿನ ಸೌಭಾಗ್ಯ, ಶಿವಾದ್ವೈತ ಸಿದ್ಧಾಂತ ೨೮ ಶಿವಾಗಮಗಳ ಉತ್ತರ ಭಾಗದಲ್ಲಿ ಉಜ್ವಲವಾಗಿ ಪ್ರಜ್ವಲಿಸುವಂತೆ, ಶಿವನು ಶಿವೆಗೆ ಸ್ವಚ್ಛಂದವಾಗಿ ಉಪದೇಶಿಸಿದ ಸಾರಾಂಶವನ್ನು ; ಶ್ರೀ ಆದಿ ಜ|| ರೇಣುಕಾಚಾರ್ಯರು ದ್ವಾಪರ ಯುಗಾರಂಭ ಪರ್ವಕಾಲದಲ್ಲಿ ಮುನಿಕುಲಚಂದ್ರನೂ **ಚಿರಂಜೀವಿಯೂದ** ಶ್ರೀ ಆದಿ ಅಗಸ್ತ್ಯ ಮಹರ್ಷಿಗಳಿಗೆ ಮೋಕ್ಷಾರ್ಥ ಹಾಗೂ ಲೋಕ ಕಲ್ಯಾಣಾರ್ಥ ಉಪದೇಶಿಸಿರುವರು.

ಇಂತಪ್ಪ ಪರಮೋತ್ಕೃಷ್ಟವಾದ ವಿಶ್ವಧರ್ಮವನ್ನು ವಿಶ್ವಾಚಾರ್ಯ ಶ್ರೀ ಜ|| ರೇಣುಕಾದಿ ಪಂಚಾಚಾರ್ಯರು **ಸಕಲ ಜೀವಾವಳಿಗೆ ಲೇಸನೆ ಬಯಸುವ ಆತ್ಮ ಕಲ್ಯಾಣಕರ** ಮಹತ್ತತ್ವವನ್ನು ಭುಕ್ತಿ, ಮುಕ್ತಿ, ಭಕ್ತಿ ಮಾರ್ಗಗಳನ್ನು ಅನುಸರಿಸಿ, ಉದಾರಭಾವದಿಂದ ಮನನೀಯವಾಗಿ, ಉಚ್ಚ ನೀಚ ಭಾವವನ್ನು ತೊರೆದು ಬಡವ ಬಲ್ಲಿದನೆಂಬ ಭೇದವ, ವರ್ಜಿಸಿ, ಸ್ತ್ರೀ ಪುರುಷರಾದಿಯಾಗಿ ಸಮಾನತಾ ದೃಷ್ಟಿಯಿಂದ ಕಾಯಕವೇ ಕೈಲಾಸವೆಂದು ಸತತ ದುಡಿಯುತ್ತಾ ಶ್ರಮಿಸಿ, ಧಾರ್ಮಿಕ ಕವಚವನ್ನು ತೊಟ್ಟು, ಗುರು ಭಕ್ತಿ ಪರಾಯಣರಾಗಿ ಯಾವ ಜೀವವೂ ಸುಖ ಸಂತೋಷಗಳಿಂದ ಚಿತ್ತವೃತ್ತಿಗಳನ್ನು ಇಷ್ಟಲಿಂಗಾರ್ಪಿತಗೆಯುತ್ತ ಸರಳ ಹೃದಯಿಗಳಾಗಿ ಬಾಳಬೇಕೆಂದು ಸಕಲರಿಗೆ ಸತತ ಸಮಸ್ತ ಶುಭಾಭ್ಯುದಯಂಗಳು ವೃದ್ಧಿಸಲೆಂದು ಹರಸಿ, ಈ ಬೋಧಾಮೃತ **"ಸರ್ವೇಶಾಂ ಹಿತಕಾರಕಂ"** ಅಖಿಲ ಜೀವ ಕೋಟಿಗಳಿಗೆ ಹಿತವನ್ನುಂಟುಮಾಡುವ ಉದಾತ್ತ ಸಿದ್ಧಾಂತ, ಶ್ರೀ ಸಿದ್ಧಾಂತ ಶಿಖಾಮಣಿ ಎಂದರುಹಿದರು.

**ಹೃತ್ಪದ್ಮಂ ಶಿವಧರ್ಮ ಕಂದ ಸಹಿತಂ । ಸುಜ್ಞಾನ ನಾಳಂ ತಥಾ ||**
**ನಿತ್ಯೈಶ್ವರ್ಯ ದಳಾಷ್ಟಕಂ ಶಶಿನಿಭಂ । ವೈರಾಗ್ಯ ಸತ್ಕರ್ಣಿಕಂ ||**
**ಶ್ರೀ ರುದ್ರೇಶ್ವರ ಕೇಸರಾನ್ವಿತ ಮಿದಂ । ಸಂಚಿಂತ್ಯ ತನ್ಮಧ್ಯಮೇ ||**
**ಸೂರ್ಯೇಂದೂಜ್ವಲ ವಹ್ನಿ ಮಂಡಲ । ಗತಂ ಧ್ಯಾಯೇ ಶಿವಂ**

**ಚಿನ್ಮಯಂ ||**

**ಭೋ ! ಕಲ್ಯಾಣ ಮಹಾಭಾಗ । ಶಿವಜ್ಞಾನ । ಮಹೋಧದೇ।**

**ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷಮಾಂ ಭವರೋಗಿಣಂ ||**

(ಸಿ. ಶಿ. ಪರಿ ೬ ಶ್ಲೋ. ೯)

ಪರಶಿವತತ್ವ ಅಗೋಚರ, ಅವ್ಯಕ್ತ, ಅಚಿಂತ್ಯ, ಅಪ್ರಮೇಯ ಹಾಗೂ ಅನಿರ್ವಚನೀಯವಿರುತ್ತೆ. ಇದನ್ನು "**ಅನಿರ್ವಚನೀಯಂ ಪ್ರೇಮ ಸ್ವರೂಪಂ**" ಎಂದು ಶ್ರೀ ನಾರದ ಭಕ್ತಿಸೂತ್ರದಲ್ಲಿ ಪ್ರತಿಪಾದಿಸಲಾಗಿದೆ. ಇಂತಪ್ಪ ಶಿವ ಶಕ್ತಿಯುತ ಸಹಜ ಶಾಂಭವೀ ಗುಹ್ಯತರ ಮಹಾತತ್ವವನ್ನು, ಜೀವಾತ್ಮನು ಅವಿದ್ಯಾಪಾಶದಿಂದ ಮುಕ್ತನಾಗಲು,

**ಸರ್ವದಾ ಸರ್ವ ಭಾವೇನ ನಿಶ್ಚಿಂತ್ಯೈಃ । ಭಗವಾನೇವ ಭಜನೀಯಃ||**

ಅನವರತ ಷಡ್ಗುಣೈಶ್ವರ್ಯ ಸಂಪನ್ನನಾದ ಭಗವಂತನನ್ನು ಅವ್ಯಭಿಚಾರಿಣೀ ಭಕ್ತಿಯೋಗದಿಂದ ನಮ್ಮ ಶುದ್ಧಾಂತರಂಗದಲ್ಲಿ ಧ್ಯಾನಿಸಿ ಚಿಂತಿಸುತ್ತಿರಬೇಕೆಂದು ಭಕ್ತಿ ಸೂತ್ರಾಚಾರ್ಯ ಶ್ರೀ ನಾರದ ಮಹರ್ಷಿಗಳು ಎಚ್ಚರಿಸಿರುವರು.

**ವೇದಃ ಪ್ರಧಾನಂ ಸರ್ವೇಷಾಂ**" ಶಿವ ಪ್ರಣೀತವಾದ ಶಾಸ್ತ್ರವು ಸಿದ್ಧಾಂತ ವೆಂದು ಪ್ರತಿಪಾದಿಸಲಾಗಿದೆ. ಶಿವಾಗಮೋಕ್ತ ಶಿವಸಿದ್ಧಾಂತವು ಸಮಸ್ತ ವೇದೋಪನಿಷದರ್ಥದಿಂ ಗರ್ಭಿತವಾಗಿದೆ. ಆಗಮಗಳು ಶೈವ, ಪಾಶುಪತ, ಸೋಮ, ಲಾಕುಲ ಎಂದು ನಾಲ್ಕು ವಿಧವಿದೆ. ಇದರಲ್ಲಿ ಮೊದಲನೇ ಶೈವಾ ಗಮವು ನಾಲ್ಕು ಪ್ರಭೇದವುಳ್ಳದ್ದಾಗಿದೆ.

**ವಾಮಂ ಚ ದಕ್ಷಣಂ ಚೈವ । ಮಿಶ್ರಂ ಸಿದ್ಧಾಂತ ಸಂಜ್ಞಕಂ ||**

ವಾಮವು ಶಕ್ತಿ ಪ್ರಧಾನವಾಗಿಯೂ, ದಕ್ಷಿಣ ತಂತ್ರಭಾಗ ಭೈರವೇಶ್ವರ ಪರವಾ ಗಿಯೂ, ಮಿಶ್ರ ತಂತ್ರವು ಸಪ್ತಮಾತೃದೇವತಾಪರವಾಗಿಯೂ ನಾಲ್ಕನೆಯ ಶಿವಸಿದ್ಧಾಂತವು, ವೇದಗಳ ಆಗಮಗಳ ಉತ್ತರಭಾಗದಲ್ಲಿ ಪ್ರೋಕ್ತವಾದ ಶಿವಾ ದ್ವೈತ ಸಿದ್ಧಾಂತದ ತಿರುಳನ್ನು ಬೋಧಿಸುವುದಾಗಿದೆ. ಇಂತಪ್ಪ ಶಿವಶಕ್ತಿಯುತ ವಾದ ಶಾಂಭವೀ ತತ್ವವು ಆಚಾರ ಸಂಪನ್ನರಾದ ಶಿವಶರಣರ ಅನುಭವದ ಸ್ವಾನುಭೂತಿಯಲ್ಲಿ ಕಂಡುಂಡನುಭವಿಸಿ ಆನಂದಿಸಿ "**ಸ್ವಾನುಭೂತ್ಯೇ ಕಮಾ**

**ನಾಯ ನಮಃ ಸಾಂಬಾಯ ಶಂಭುವೇ"** ಅಂತರಂಗದಲ್ಲಿ ಅನುಸಂಧಾನ ಮಾಡುವ ಶಿವಾತ್ಮವಿದ್ಯೆ ಸಿದ್ಧಾಂತಾಗಮ. ಇಂತಪ್ಪ ಗೂಢಾತಿ ಗೂಢವಾದ ವಿದ್ಯೆ ಸಾಮಾನ್ಯ ಜನರಿಂದ ಅಂದರೆ ಕನಕ, ಕಾಮಿನಿ, ಕಾಂಚನಗಳೆಂಬ ಈ ಷಣತ್ರಯಗಳಿಗೆ ಹಾತೊರೆಯುವವರು ಅರ್ಥ ಮಾಡಿ ಕೊಳ್ಳಲು ಕಠಿಣವೆನಿಸಿದೆ.

**ತತ್ವವ್ಯಕ್ತ ತಯಾ ಸುದುರ್ಗಮ ತಮಂ । ಚಿತ್ತಸ್ಯ ತಸ್ಮಾದ್ವಿ ಭೋ!॥**

ಶಿವಶಕ್ತಿ ಸಂಪುಟದಿಂದ ವಿರಾಜಿಸುವ ಪರಮೋತ್ಕೃಷ್ಠವಾದೀ ಸಿದ್ಧಾಂತಾಗಮವು ಸುಲಭದಿಂದ ಅರ್ಥವಾಗುವುದಿಲ್ಲವಾದ್ದರಿಂದ,

**ತ್ವತ್ಪಾದಾತ್ಮಕ ಭಕ್ತಿರೇವ ಸತತಂ । ಸ್ವಾಧೀಯಸೀ ಶ್ರೇಯಸೀ ॥**

ಶಂಭೋ ! ನಿನ್ನ ಪಾದಾರವಿಂದಂಗಳಲ್ಲಿನ ಅನನ್ಯ ಭಾವದ ಭಕ್ತಿಯೊಂದಿದ್ದರೆ, ಭಕ್ತಿಕಾಂತಾಮಣಿಯ ಅಂತಃಪುರದ ಮಹಾದ್ವಾರದಲ್ಲಿ, ಮುಕ್ತಿಕಾಂತಾಮಣಿ, ಭಕ್ತಿ ದೇವಿಯ ಸೇವೆಗಾಗಿ ಬದ್ಧಾಂಜಲಿಪುಟಳಾಗಿ ನಿಂತಿರುವಳೆಂದು ಪರಮಾಚಾರ್ಯ ಶ್ರೀ ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿರುವರು. ತಪೋಧನರಾದ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಶ್ರೀ ಆದಿ ಜ॥ ರೇಣುಕಾಚಾರ್ಯರು ಏಕೋತ್ತರ ಶತಸ್ಥಲಸಿದ್ಧಾಂತ **"ತತ್ವಾನಾಮಹದಾದೀನಾಂ"** ಆದಿಗಾದಿಯಾದ ಸಿದ್ಧಾಂತಾಗಮ ತತ್ವವಿದು. ಜಗತ್ತಿನಲ್ಲಿ ಎದ್ದು ಕಾಣುವ ಅನೇಕಾನೇಕ ಸಿದ್ಧಾಂತಗಳ ಮಧ್ಯೇ, ಶ್ರೀ ಸಿದ್ಧಾಂತ ಶಿಖಾಮಣಿ ತತ್ವ, ಮಧ್ಯಮಣಿ ನ್ಯಾಯದಂತೆ ರತ್ನಪ್ರಾಯವಾಗಿ ಜೀವಂತ ಚಿಂತಾಮಣಿ ಎನಿಸಿ, ಸರ್ವರಿಂದ ಆದರಣೀಯವಾಗಿ ಪ್ರೇಮಾಸ್ಪದವೆನಿಸಿ, ಮೂರು ಲೋಕದ ದೇವ, ದಾನವ, ಮಾನವರನ್ನು ಉದ್ಧರಿಸುವಂಥಾ,

**ಏಕೇನ ಜನ್ಮನಾ ಮುಕಿಃ । ವೀರಾ ಣಾಂತು ಮಹೇಶ್ವರೀ ॥**

ಎನ್ನುವಷ್ಟು ಮಧುರಾತಿ ಮಧುರವಾದ ಧರ್ಮ ಶಕ್ತಿ ವಿಶಿಷ್ಟಾ ದ್ವೈತ ಸಿದ್ಧಾಂತ. ಇದಕ್ಕನುಗುಣವಾಗಿ,

**ಷಟ್ಸ್ಥಲ ಜ್ಞಾನವಾನೇವ । ಪರಮೋತ್ಕೃಷ್ಟಂಚ ॥**

ಎಂದು ಶ್ರೀ ವೇದವ್ಯಾಸಾಚಾರ್ಯರು ತಮ್ಮ ಶಂಕರ ಸಂಹಿತೆಯಲ್ಲಿ ಘೋಷಿಸಿರುವರು.

ಅಂಗ ಲಿಂಗ ಸಂಗಗಳ ಸಮರಸದನುಭವವೇ ಲಿಂಗಾಂಗ ಸಾಮರಸ್ಯ ಸಾಯುಜ್ಯ ಮೋಕ್ಷವೆನಿಸುವುದು. ವೈದಿಕ ಪಾಶುಪತರು, ತಾಂತ್ರಿಕ ವೈದಿಕ ರಾದ ಶಿರೋವ್ರತರು ಈ ವಿದ್ಯೆಗೆ ಅಧಿಕಾರಿಗಳೆನಿಸಿರುವರು. ಇಂತಪ್ಪ ಜಿಜ್ಞಾಸೆ ಯನ್ನು ಅವಶ್ಯ ಮಾಡ ಬೇಕೆಂದು ಶ್ರೀ ವ್ಯಾಸಾಚಾರ್ಯರು **"ಅಥಾ ತೋ ಬ್ರಹ್ಮ ಜಿಜ್ಞಾಸ"** ಎಂದು ಘೋಷಿಸಿರುವರು ಮಾನವ ತನ್ನ ಉದ್ಧಾರಾರ್ಥ. ಆದಿಯಲ್ಲಿ ತಾನಾರೆಂಬ ಬ್ರಹ್ಮ ಚಿಂತನೆ ಮಾಡಬೇಕೆಂಬುದು ವ್ಯಾಸ ಮುನಿಯ ಅನಿಸಿಕೆ. ಶ್ರೀ ಜೈಮುನ್ಯಾಚಾರ್ಯರು ಆರಂಭದ ದಿಶೆಯಲ್ಲಿ ಬ್ರಹ್ಮಜ್ಞಾನ ಕಷ್ಟವಿರುತೆಂದು **॥ಅಥಾತೋ ಕರ್ಮಜಿಜ್ಞಾಸ॥** ಅಂದರೆ, ನಿಷ್ಕಾಮ ಕರ್ಮಯೋಗ ಸರ್ವರಿಗೂ ಸುಲಭ ಸುಖ ಪ್ರದವಿರುತ್ತೆಂದಿರುವರು. ಶ್ರೀ ನಾರ ದರು ವಿಶಾಲ ಹೃದಯಿಗಳಾದ್ದರಿಂದ ತಾವು,

**॥ ಅಥಾತೋ ಭಕ್ತಿಂ ವ್ಯಾಖ್ಯಾಸ್ಯಾಮಃ ॥** ಭಕ್ತಿ ಪಂಥವನ್ನು ಎತ್ತಿಹಿಡಿದು, ಮಾನವ ಆರಂಭದಲ್ಲಿ ಭಕ್ತಿ ಮಾರ್ಗವನ್ನು ಅವಲಂಭಿಸ ಬೇಕೆಂದು ಬೋಧಿಸಿರುವರು.

ಮೇಲುಕ್ತವಾದ ವಿವಿಧ ಸಿದ್ಧಾಂತಗಳು ಜಗತ್ತಿನಲ್ಲಿ ತಲೆದೋರುವುದಕ್ಕೆ ಪೂರ್ವವೇ, ಜಗದಾದಿ ಪರಮ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾ ರ್ಯರು, ಸರ್ವಸಿದ್ಧಾಂತಗಳನ್ನು ಗರ್ಭೀಕರಿಸಿಕೊಂಡಿರುವ, ಸರ್ವಧರ್ಮ ಸಮನ್ವಯವೆನಿಸಿ, ಅಖಿಲ ಸಿದ್ಧಾಂತಗಳಿಗೆ ಶಿಖಾಮಣಿಯೆನಿಸಿದ–

**॥ ಅಥಾತೋ ಧರ್ಮ ಜಿಜ್ಞಾಸ ॥** ವೆಂದು ಪ್ರತಿಪಾದಿಸಿರುವರು. ಸನಾತನವಾದ ಸದ್ಧರ್ಮದ ಹೃದಯದಲ್ಲಿ ಕ್ರಿಯ ಭಕ್ತಿಜ್ಞಾನಗಳು ಸಮಾಲೋಚ ನದಿಂದ ಸಮನ್ವಯ ಗೊಂಡಿರುವುವು. ಭಗವಂತನು **"ಧರ್ಮಧ್ವಮ** ನೆನಿಸಿರುವನು. ಯಾವುದು ಧರ್ಮ ? **"ಧರ್ಮಂತು ಭಗವದ್ ಪ್ರಣೀತಂ"** ಭಗವಂತನು, **"ಪ್ರತ್ಯಕ್ಷೋ ಗುರು ರೂಪೇಣ"**, ಅಪ್ರತ್ಯಕ್ಷನಾದ ಶಿವನು ಭಕ್ತಜನೋದ್ಧಾರಾರ್ಥ ಕರುಣೆಯಿಂದ ಗುರು ರೂಪದಲ್ಲಿ ಚಿನ್ಮಯ ಸ್ವರೂಪದಿಂದ ಶಿಷ್ಯರ ಮಧ್ಯೇ ಪ್ರತ್ಯಕ್ಷನಾಗಿ, **"ಧರ್ಮೋ ಧಾರಯತಿ ಜಗತಃ ಪ್ರತಿಷ್ಠಾ"** ಧರ್ಮ ಸೂತ್ರಾಧಾರದ ಮೇಲೆ ಸಕಲವೂ ನಿಂತಿದೆ. ಸಮಸ್ತಕ್ಕೂ ಧರ್ಮವೇ ಆಧಾರ ಎಂದು ಬೋಧಿಸಿ ಭಕ್ತಿ ಮಾರ್ಗ ಕ್ರಿಯಾ ಜ್ಞಾನ ಮಾರ್ಗಗಳನ್ನು

ಧರ್ಮ ವಂದು ಗೂಡಿಸುವ ಮಧುರ ಸೇತುವೆ. ಇವು ಮೂರು ಬೇರೆ ಬೇರೆ ಫಲ ವನ್ನು ಕೊಡುವ ಮಾರ್ಗಗಳು ಭಕ್ತಿ ಧರ್ಮದ ಹೃದಯದಲ್ಲಿ ಜನ್ಮ ತಾಳುವುದು ಕ್ರಿಯಾಜ್ಞಾನ ಶಕ್ತಿಗಳ ಆವಿರ್ಭಾವಕ್ಕೆ ಧರ್ಮ ಮೂಲಭೂತ ಶಕ್ತಿಯೆನಿಸಿದೆ. ಇಂತು ಕ್ರಿಯ ಭಕ್ತಿ ಜ್ಞಾನಗಳೆಂಬ ಯೋಗಗಳಿಗೆ "ಧರ್ಮ" ತ್ರಿವೇಣಿ ಸಂಗಮವೆನಿಸಿದೆ. "**ಸತ್ಯಂ ಜ್ಞಾನ ಮನಂತಂ ಬ್ರಹ್ಮ**" ವೆಂಬ ಉಪನಿಷದ್ ತತ್ವಕ್ಕೆ ಧರ್ಮವೇ ಅರ್ಥವಾಗಿದೆ. ಈ ಕಾರಣಗಳಿಂದ ನಾವು "**ಅಥಾತೋ ಧರ್ಮ ಜಿಜ್ಞಾಸ**" ವೆಂದು ಸಾರಿರುವೆವು ಎಂಬುದು ಶ್ರೀ ಜ|| ರೇಣುಕಾದಿ ಪಂಚಾಚಾರ್ಯರ ನಿರ್ಣಯ. ಸಿದ್ಧಾಂತ ಶಿಖಾಮಣಿಯಲ್ಲಿ ಬೋಧಿತವಾದ ವಿಶ್ವಧರ್ಮವೂ ಇದೇ ಆಗಿರುತ್ತೆ.

**ಧರ್ಮವೇವ ಸಮಸ್ಥಾನಾಂ । ಮಃಖಾನಾಂ ಶಮನೌಷಧಂ ।**
**ತಸ್ಮಾತ್ ಧರ್ಮಾಮೃತಂ ಪೀತ್ವಾ। ಸುಖಿನಃ ಸಂತುಮಾನವಾಃ॥**

**ಹರಶಂಭೋ ಮಹಾದೇವ । ವಿರೂಪಾಕ್ಷ ತ್ರಿಲೊಚನಃ ।**
**ದಯಾಸಿಂಧೋ ದೀನಬಂಧೋ । ರಕ್ಷ ರಕ್ಷ ಮಹೇಶ್ವರ ॥**

**ಮಾಯಾ ಸಮುದ್ರ ಪತಿತಮನಂತ । ಕಲುಷಾಯ ನಂ ।**
**ಮಾಮುದ್ಧರ ಮಹೇಶಾನ । ಭಕ್ತವತ್ಸಲ ಶಂಕರ ॥**

**ಅಮೃತಾರ್ಥಂ ಪ್ರಪನ್ನಾನಾಂ । ಯಾಸುವಿದ್ಯಾಪ್ರದಾಯಿನೀ ।**
**ಅಹರ್ನಿಶ ಮಹಂವಂದೇ । ಶಾಮ್ಭೋ ಶಾನ ಮನೋರಮಾಂ ॥**

ಷಟ್ಸ್ಥಲಗಳ ಅರಿವು ಅನುಭವ ಆಗಬೇಕಾದರೆ ಪ್ರಥಮತಃ ಇದಕ್ಕೆ ಅಂಗ ಭೂತವಾಗಿರುವ "**ಅಷ್ಟಾವರಣ ಮತ್ತು ಪಂಚಾಚಾರಗಳ**" ಸ್ವರೂಪಾನು ಭವಗಳನ್ನು ಸ್ವಲ್ಪ ಶ್ರೀ ಗುರುಮುಖದಿಂದ ಕೇಳಿ ತಿಳಿಯಬೇಕು. ಇದರೊಂದಿಗೆ ಸಾಧಕನು ಯಥಾಶಕ್ತಿ ನಿತ್ಯಜೀವಿತದಲ್ಲಿ ಆಚರಿಸಿ ಪವಿತ್ರಾತ್ಮನಾಗ ಬೇಕು. ಧರ್ಮ ಬೋಧೆ, ನಿತ್ಯಾಚರಣೆಗೆ ತಂದು, ಆ ಸತ್ವವನ್ನು ಜೀವಿತದಲ್ಲಿ ಅಳವಡಿಸಿ ಮಾನವ ಪ್ರಬುದ್ಧನಾಗ ಬೇಕು. ವೀರಶೈವ ತಾತ್ವಿಕ ಮಹಾಪುರುಷನ ದೇಹ, "ಅಷ್ಟಾವರಣವೆನಿಸಿದೆ". ಇವನ ಪಂಚಪ್ರಾಣಗಳು "ಪಂಚಾಚಾರಗಳಂತಿವೆ". "ಷಟ್ಸ್ಥಲ", ಈ ಮಹಾಪುರುಷನ ಆತ್ಮವೆನಿಸಿದೆ. ಆತ್ಮ ಪರಮಾತ್ಮರುಗಳ

ಸಂಬಂಧ ನಿತ್ಯ ನಿರತಿಶಯುವೆನಿಸಿದೆ. ಬಂಗಾರ ಮತ್ತೂ ಅದರ ಸಹಜ ಸಂಪರ್ಕ ದಿಂದ ಬೆಳಗುವ ಪ್ರಕಾಶದಂತೆ, ಅವಿನಾಭಾವ ಸಂಬಂಧ ಅದ್ವಿತೀಯವಿರುತ್ತೆ. ಬಂಗಾರ ಆದರಲ್ಲಿನ ಪ್ರಕಾಶ ಬೇರ್ಪಡಿಸಲು ಸಾಧ್ಯವಿಲ್ಲ. ಇದರಂತೆ ಆತ್ಮ ಬಂಗಾರದಂತಿದೆ. ಪರಮಾತ್ಮ ಅದರೊಳಗಿನ ತೇಜೋಮಯ ದಿವ್ಯ ಹಾಗೂ ದೇದೀಪ್ಯ ಪ್ರಕಾಶಮಾನವಾಗಿರುವನು. ಇಂತಪ್ಪ ಶಿವಶಕ್ತಿ ಸಂಪುಟದಿಂದನಿರಂತರ ರಾರಾಜಿಸುವ, ಪರತತ್ವವನ್ನು ಅಷ್ಟಾವರಣಗಳು ಆವರಿಸಿರುವುವು. **ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷ, ಮಂತ್ರ ಪಾದೋದಕ ಮತ್ತು ಪ್ರಸಾದಗಳೆಂಬ** ಎಂಟು ಹೊದ್ದಿಕೆಗಳು, ಆತ್ಮನ ಸುತ್ತಲೂ ಹಮ್ಮಿಕೊಂಡಿರು ವುವು. ಕಾರ್ಮೋಡಗಳು ಸೂರ್ಯನನ್ನು ಸುತ್ತಿದ್ದರೂ, ಹೇಗೆ ಸೂರ್ಯನು ನಿರ್ಲಿಪ್ತನಾಗಿಯೇ ಪ್ರಕಾಶಿಸುತ್ತಲಿರುವನೋ, ಅದರಂತೆ ಪರಮಾತ್ಮನು ಅಷ್ಟಾವರಣಗಳಿಂದ ನಿರ್ಲಿಪ್ತನಿರುವನು. ಗುರು ಲಿಂಗ ಜಂಗಮರು, ಏಕ ಮೂರ್ತಿ, **ತ್ರಯೋಭಾಗಃ । ಗುರುರ್ಲಿಂಗಂತು ಜಂಗಮಃ ॥** ಎಂದು ಶಿವಾಗಮಗಳು ಘೋಷಿಸುತ್ತಲಿವೆ. ಶಿವಲಿಂಗದಲ್ಲಿ ಗುರುಜಂಗಮರು, ಗುರು ವಿನಲ್ಲಿ, ಲಿಂಗಜಂಗಮ ಮತ್ತೂ ಜಂಗಮನಲ್ಲಿ ಗುರು ಲಿಂಗಗಳು, ತ್ರಿವೇಣಿ ಸಂಗಮದಂತೆ ಅವಿನಾಭಾವ ಸಂಬಂಧದಿಂದ ಏಕಪ್ರಕಾರವಾಗಿ ಹಾಸುಹೊಕ್ಕಾ ಗಿರುವುವು. ಸಾಧಕರಿಗೆ ಈ ಮೂರು ತತ್ವಗಳು ಆರಾಧ್ಯ ದೇವವೆನಿಸಿವೆ. ವಿಭೂತಿ, ರುದ್ರಾಕ್ಷ ಮತ್ತೂ ಪ್ರಣವ ಸಹಿತ ಶಿವ ಪಂಚಾಕ್ಷರೀಮಂತ್ರ ಈ ಮೂರು ಗುರುಲಿಂಗ ಜಂಗಮರನ್ನು ಅರ್ಚನ ವಿಧಾನದಿಂದ ಸಂಪ್ರೀತರನ್ನಾಗಿ ಸಲು ಆವರ ಪೂಜಾ ದ್ರವ್ಯಗಳೆನಿಸಿವೆ. ಪಾದೋದಕ ಪ್ರಸಾದಗಳು, ನಿತ್ಯ ಪೂಜೆಯ ಫಲವಾಗಿ ಅರಾಧಕನು ಆರಾಧ್ಯ ದೇವತೆಗಳಿಂದ ಪಡೆದ ಅನುಗ್ರಹ ರೂಪ ಫಲವಿರುತ್ತೆ. ಇಂತಪ್ಪ ಅಷ್ಟಾವರಣ ಸಂಪನ್ನ, ಷಟ್ಸ್ಥಲಾತ್ಮಕ ತತ್ವದ ಶ್ರವಣ, ಮನನ, ಚಿಂತನೆಗಳಿಗೆ ಅಧಿಕಾರಿಯೆನಿಸುವನು. ಪಂಚಾಚಾರ ವೆಂದರೆ, ಆರಾಧಕನು[ಜ್ಞಾನಿಯಾಗಿರುವುದರೊಂದಿಗೆ ಆಚಾರವಂತನಾಗಿರಬೇಕು. ವೈದಿಕ ಧರ್ಮದಲ್ಲಿ ಆಚಾರಕ್ಕೆ ಪ್ರಾಧಾನ್ಯವಿದೆ. ಆಚಾರ ರಹಿತನನ್ನು ದಾನವ (ರಾಕ್ಷಸ) ನೆಂದು ಭಾವಿಸಲಾಗಿದೆ. ಶಿವನು ಆಚಾರ ಪ್ರಿಯನು.

**ಆಚಾರ ಪ್ರಿಯಃ ಶಂಭು । ಆಚಾರೇಣ ತುಷ್ಯತಿ । ಆಚಾರಂ ವಿನಾ ತಸ್ಯ, ಪ್ರಸಾದೋ ನೈವ ಜಾಯತೇ ॥**

ಆಚಾರ, ಆಚಾರಲಿಂಗವೆನಿಸಿದೆ. ವೀರಶೈವದಲ್ಲಿ ಪಂಚಾಚಾರವನ್ನು ಅಳವಡಿಸಿರುತ್ತೆ. ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ ಮತ್ತೂ ಭೃತ್ಯಾಚಾರಗಳ ಅನುಷ್ಠಾನ ಅವಶ್ಯಕವಿರುತ್ತೆ. ನಂತರದ ಹಂತ, ಷಟ್ಸ್ಥಲ. ಸ್ಥಲವೆಂದರೆ ಪರಮ ಆಧಾರ ಭೂತನಾದ ಪರಶಿವ ಬ್ರಹ್ಮವೆಂದರ್ಥ, ಇಂತಪ್ಪ ಪರಶಿವ ತತ್ವದ ಸಾಕ್ಷಾತ್ಕಾರವನ್ನು ಪೊಳಗಾಣಲು, ಲಿಂಗಾಂಗಿ ಸಾಧಕನು, ಅಂತರ್ಮುಖದಲ್ಲಿ ಧ್ಯಾನಾರೂಢನಾಗಿ ಆರು ಊರ್ಧ್ವಪಡಿಗಳನ್ನು ಹತ್ತ ಬೇಕಾಗಿದೆ. ಈ ಆರು ಹಂತಗಳನ್ನು ಷಟ್ಸ್ಥಲವೆಂದು ನಿರೂಪಿತವಾಗಿದೆ. ಅಂಗಷಟ್ಸ್ಥಲ, ಲಿಂಗಷಟ್ಸ್ಥಲಗಳೆಂದು ಎರಡು ವಿಧವಿರುತ್ತೆ ಅಂಗಷಟ್ಸ್ಥಲ ವನ್ನು ಸಾವಯವ ಅಥವಾ ಆಮಯವೆಂದೂ, ಲಿಂಗಷಟ್ಸ್ಥಲವನ್ನು ನಿರವಯವ ಅಥವಾ ನಿರಾಮಯವೆಂದೂ ಕರೆಯುತ್ತಾರೆ. ಷಟ್ಸ್ಥಲವೆಂದರೆ, ಸ್ವಸ್ವರೂಪ ದರ್ಶನ ಅಥವಾ ಆತ್ಮ ಸಾಕ್ಷಾತ್ಕಾರ ಮಾರ್ಗದ ವಿಧಾನವೆಂದರಿಯಬೇಕು.

## ಕಾಮಿಕಾದಿ ವಾತುಲ ಪರ್ಯಂತವಿರುವ ೨೮ ಶಿವಾಗಮಗಳು

**ವೇದ ಧರ್ಮಾಭಿಧಾಯಿತ್ವಾತ್। ಸಿದ್ಧಾಂತಾಖ್ಯಃ ಶಿವಾಗಮಃ॥**

ಅಂದರೆ, ಸಿದ್ಧಾಂತಾಗಮ ಮೊದಲಾದವುಗಳು ವೇದಸಮ್ಮತವಾದ ಮಾರ್ಗಾ ನುವರ್ತಿಗಳೆನಿಸಿವೆ. ವೇದಾಗಮ ಸಂಪ್ರದಾಯದಲ್ಲಿ ಏಕಾರ್ಥ ಪ್ರತಿಪಾದನೆಯ ಏಕ ರೂಪವಿರುತ್ತೆ.

**ವೇದ ಸಿದ್ಧಾಂತಯೋ ರೈಕ್ಯ । ಮೇಕಾರ್ಥ ಪ್ರತಿಪಾದನಾತ್ ॥**

ಎಂದು ಶ್ರೀ ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದರು. ಶಿವ ನಿಂದ ಶ್ರೀ ಗಿರಿಜೆಗೆ ಬೋಧಿಸಿದ ಘನ ತತ್ವವಿದು. ಈ ಸಿದ್ಧಾಂತ,

**ನಿರ್ದಿಷ್ಟ ಮುತ್ತರೇ ಭಾಗೇ । ವೀರಶೈವ ಮತಂ ಪರಂ ॥**

ಶಿವಾಗಮಾಮ್ನಾಯಾದಿಗಳ ಉತ್ತರ ಭಾಗದಲ್ಲಿ ಪ್ರತಿಪಾದಿತವಾಗಿದೆ. ವೀರ ಶೈವವು ಇತ್ತೀಚಿನದೇನಲ್ಲ. ಸಂಕುಚಿತ ಮತವಲ್ಲ. ಜಾತಿಸೂತಕವಿದಕ್ಕಿಲ್ಲ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ವಿಶ್ವಧರ್ಮವನ್ನೊಳಗೊಂಡ ಸನಾತನ ಅತಿವರ್ಣಾಶ್ರಮ ಮತ ವೀರಶೈವವೆಂದು ಚತುರ್ಯುಗಗಳಿಂದಲೂ ಪ್ರಸಿದ್ಧವಿರುತ್ತೆ. ಶ್ರೀ ಮಹಾ ಚಾರ್ಯ ರೇಣುಕರು, ವೀರಶೈವವೆಂಬ ಶಬ್ಧವನ್ನು ಉದ್ಧರಿಸುತ್ತಾ—

**ವಿಶಬ್ದೇನೋಚ್ಯತೇ ವಿದ್ಯಾ । ಶಿವಜೀವೈಕ್ಯ ಬೋಧಿಕಾ ।**

**ತಸ್ಯಾಂ ರಮಂತೇ ಯೇ ಶೈವಾ । ವೀರಶೈವಾ ಸ್ತುತೇ ಮತಾಃ॥**

**(ಸಿ. ಶಿ. ಪರಿ. ೫ ಶ್ಲೋ. ೧೫)**

ಲಿಂಗಾಗ ಸಾಮರಸ್ಯ ಅಥವಾ ಜೀವ ಬ್ರಹ್ಮೈಕ್ಯಾನು ಸಂಧಾನ ವಿಧಾನ ವನ್ನು, ಶ್ರೀ ಗುರು ಮುಖೇಣ ಅರಿಯುವ ಶಿವಜ್ಞಾನಾರ್ಜನ ವಿದ್ಯೇ ವೀರಶೈವ ವೆನಿಸಿದೆ. "ವಿ" ಯೆಂದರೆ, ಪರಮಾತ್ಮ ತತ್ವ ವಿಚಾರ ವಿನಿಮಯವೆಂದರ್ಥ. ಶೈವಸಿದ್ಧಾಂತ ಮತ್ತೂ ಶಿವಾದ್ವೈತ ಸಿದ್ಧಾಂತಗಳ ರಸಾಸ್ವಾದನೆಯನ್ನು ಅಂತರಂಗದಲ್ಲಿ ಮಥಿಸಿ, ಶಿವಾತ್ಮ ವಿದ್ಯೆಯಲ್ಲಿ ದಿಟ್ಟ ತನದಿಂದ ನಲಿದಾಡಿ, ರಂಜಿತನಾದ ಲಿಂಗಾಂಗಿಯನ್ನು "ವೀರ" ಎಂಬ ಶಬ್ಧಕ್ಕೆ ಅರ್ಥ ಎಂಬುದಾಗಿ ರೇಣುಕರು ಅರ್ಥೈಸಿರುವರು. ಮುಂದುವರಿದು,

**ಯಥಾ ವೀರೋ ರಣೇ ಶೂರೋ । ವೀರಶೈವ ಮತೇ ತಥಾ ।**

**ಭಕ್ತ್ಯಾವೀರೋ ಸ ವೈರೇಣ । ನ ಬಲೇನಚ, ಕಾರ್ಯತಃ ॥**

**ವೀರತ್ವಮಸ್ಯ ನ ಧಸೇನ । ನವಾ ಬಲೇನ । ನೋ ಕಾರ್ಯ**

**ತಚ್ಚ ॥ ವಿಹಿತಂ ದೃಢ ಶಂಭು ಭಕ್ತ್ಯಾ ॥**

ರಣರಂಗದಲ್ಲಿ ವೀರ ಅಭಿಮನ್ಯು ವಿನಂಥಾ ಶೂರನು ಹೇಗೆ ಅದ್ವಿತೀಯ ನೆನಿಸಿರುವನೋ ಅದರಂತೆ ಪರಮ ವೀರಶೈವ ಧರ್ಮದಲ್ಲಿ " **ಭಕ್ತ್ಯಾವೀರಃ** ", ವೀರತ್ವವು ಲೋಕ, ಕಲ್ಯಾಣಕ್ಕಾಗಿ, ಸಕಲ ಜೀವಾವಳಿಗೆ ಲೇಸನೆ ಬಯಸುವ ಸಾಹಸ ಕಾರ್ಯಗಳಲ್ಲಿ **ವಿಹಿತಂ ದೃಢಶಂಭು ಭಕ್ತ್ಯಾ** ತನ್ನ ಆತ್ಮೋದ್ಧಾರಾರ್ಥ ಶಂಭುವಿನಲ್ಲಿಟ್ಟ ಅಸದೃಶವಾದ ಭಕ್ತಿಯನ್ನು ನೆಲೆ ಗೊಳಿಸುವುದರಲ್ಲಿನ ದಿಟ್ಟತನ ವನ್ನು, " **ವೀರ** " ಶಬ್ಧಕ್ಕೆ ಅರ್ಥವನ್ನು ನೀಡಲಾಗಿದೆ. ಶ್ರೀ ಜ॥ ರೇಣುಕಾ ಚಾರ್ಯರು ವಿಶ್ವಾಚಾರ್ಯರಾದ್ದರಿಂದ, "**ವೀರಶೈವ**" ಶಬ್ಧಕ್ಕೆ ವಿಶಾಲಾ ರ್ಥವನ್ನು ಗಂಭೀರವಾಗಿ ಹೊರಗೆಡಹುತ್ತಾ,

**ವಿದ್ಯಾಯಾಂ ಶಿವರೂಪಾಯಾಂ। ರಮಂತೇ ಯೇ ವಿಶೇಷತಃ।**

**ತಸ್ಮಾ ದೇತೇ ಮಹಾಭಾಗಾ । ವೀರಶೈವಾ ಇತಿ ಸ್ಮೃತಾಃ ॥**

ಎಂದು ಮತ್ತು **ವಿದ್ಯಾಯಾಂ ರಮತೇ ಯಸ್ಮಾನ್ಮಾಯಾಂ ।**
**ಹೇಯಾಂ । ಶ್ಚಮದ್ರಹೇತ್, ಅನೇನೈವ ನಿರುಕ್ತೇನ ।**
**ವೀರಮಾಹೇಶ್ವರ ಸ್ಮೃತಃ ॥**

**(ಸಿ. ಶಿ. ಅ. ೫ ಶ್ಲೋ ೧೬, ೧೭)**

**"ಉಮೆಯಾ ಸಹವರ್ತತೇ ಸಾಂಬಃ"** ಎಂಬ ಶೃತಿವಾಣಿಯಂತೆ, ಉಮೇಶನಲ್ಲಿ ಯಾರು ಅತ್ಯಂತ ವ್ರತ ಶೀಲರಾಗಿ ಪ್ರೇಮದಿಂದ ಅಹರ್ನಿಶಗಳಲ್ಲೂ ಪೂಜಿಸಿ ಕಾಯಾರ್ಪಣ ಕರಣಾರ್ಪಣ ಮಾಡುತ್ತಾರೋ ಅವರು ವೀರಶೈವ ರೆನಿಸುವರು. ಷಟ್ಸ್ಥಲ ಜ್ಞಾನಾನುಭವದಲ್ಲಿ, ಲಿಂಗಾಂಗ ಸಾಮರಸ್ಯದ ಶಿವ ಯೋಗದಲ್ಲಿ ಅಸಕ್ತಿಯುಳ್ಳವರಾಗಿ ಧನ, ಕನಕ, ವಸ್ತು ವಾಹನಾದಿ ಮಾಯಾ ವಿಡಂಬನದಿಂದ ದೂರವಿದ್ದು, ಆಶಾಪಾಶಾದಿ ಮೋಹವ ತ್ಯಜಿಸಿ, ವೀರವ್ರತಿ ಗಳಾಗಿ, ಇಷ್ಟಲಿಂಗಾರಾಧನೆಯಲ್ಲಿ ತತ್ಪರರಾಗಿರುವರೋ ಅವರು ವೀರ ಮಾಹೇಶ್ವರರೆಂದು ಪ್ರಸಿದ್ಧರಿರುವರು. ಶಿವ ದೀಕ್ಷಿತರಾದ ವೀರಶೈವರಲ್ಲಿ ಉಚ್ಚ ನೀಚ ಭಾವವಿಲ್ಲ. ಸ್ತ್ರೀ ಪುರುಷ, ಉಭಯತ್ರರೂ, ಶಿವಾರಾಧನೆ, ಶಿವದೀಕ್ಷೆಗೆ ಅರ್ಹರಿರುವರು. ಈ ವಿಷಯದಲ್ಲಿ ತಾರತಮ್ಯವಿಲ್ಲ. ಜಾತಿಸೂತಕದಿಂದ ಮುಕ್ತರಾಗಿ, ಲಿಂಗಾಂಗ ಸಂಗಿಗಳಾದ ವೀರಮಾಹೇಶ್ವರರು, ಕ್ರಿಯಾವಂತ ಶ್ರೋತ್ರೀಯ ಬ್ರಹ್ಮ ನಿಷ್ಠರಾದ್ದರಿಂದ, ಇವರು ಶಿರೋವ್ರತರೆನಿಸಿ ಮತ್ತೂ ವೈದಿಕ ಪಾಶುಪತರೆನಿಸಿ, ಅತಿ ವರ್ಣಾಶ್ರಮಿಗಳೆಂದೂ ವಸುದೈವ ಕುಟುಂಬ ವ್ರತವುಳ್ಳ ಧರ್ಮೀಯರು ಪರಮ ವೀರಶೈವರು. ಇವರು ಅಹಿಂಸಾ, ಅಸ್ತೇಯ, ಸತ್ಯ, ಸದ್ಧರ್ಮ, ಸಹನೆ, ಸಹೋದರ ಭಾವವುಳ್ಳ ಸಂಯಮಿಗಳು. ವೀರ ಶೈವರು ಶಿವಪೂಜೆಯಿಂದಲೇ ಜೀವ ಶಿವನಾಗುವನು ಎಂಬ ನಿಶ್ಚಯ ಬುದ್ಧಿ ಯುಳ್ಳವರು. ಶಿವಾಗಮಗಳಲ್ಲಿ ಮೇಲುಕ್ತವಾದ ಮಹದಂಶಗಳನ್ನು ಧೃಢೀ ಕರಿಸುವಂತೆ,

**ಲಿಂಗಧಾರಣ ಮಾತ್ರೇಣ । ಶಿವತ್ವಂ ಪ್ರಾಪ್ತಿ ರೇವಹಿ ॥** ಮತ್ತೂ
**ಲಿಂಗಾಂಗಿ ಸಂಗಿನೋವತ್ಸಾ । ಪುನರ್ಜನ್ಮ ನ ವಿದ್ಯತೇ ॥**

ಎಂಬ ರತ್ನ ಪ್ರಾಯವಾದ ಜೀವಂತ ಸರ್ವಾದರಣೀಯ ಮಹದುಕ್ತಿಗಳು, ವೀರಶೈವ ವಿಶ್ವಧರ್ಮದಲ್ಲಿ, ವೇದಪೂರ್ವಕಾಲದಿಂದಲೂ ಭಾರತದ ಅಸೇತು

ಶೀತಾಚಲ ಪರ್ಯಂತ ಹಚ್ಚ ಹಸುರಾಗಿ ಹಬ್ಬಿ, ಉಚ್ಛ್ರಾಯ ಸ್ಥಿತಿಯಲ್ಲಿ ಬೆಳೆದು ಶೋಭಿಸುತ್ತಿತ್ತು ಈ ಪರಮ ವೀರಶೈವ ಧರ್ಮ.

**ಆಪಾತಾಳ ನಭಃ ಸ್ಥಲಾಂತ । ಭುವನ ಬ್ರಹ್ಮಾಂಡ ಮಾವಿಸ್ಫುರ।**
**ಜ್ಯೋತಿ ಸ್ಫಾಟಿಕ ಲಿಂಗಮೌಳಿ । ವಿಲಸತ್ಪೂರ್ಣೇಂದು ವಾಂತಾ**
**ಮೃತೈಃ ॥ ಅಸ್ತೋ ಕಾಪ್ಲುತ ಮೇಕವಾರ ಮನಿಶಂ ।**
**ರುದ್ರಾನು ವಾಕಾನ್ ಜಪನ್ । ಧ್ಯಾಯೇ ದೀಪ್ಸಿತ ಸಿದ್ಧಯೇ**
**ಧ್ರುವ । ಪದಂ ವಿಪ್ರೋಭಿಷಿಂಚೇ ಚ್ಛಿವಂ ॥**
**ವಿಭೂತಿದಂ ವಿಮೋಹದಂ ವಿಶುದ್ಧ ಸಿದ್ಧ ಸಿದ್ಧಿ ದಂ ॥**
**ಶುಭಪ್ರದಂ ಸುಖಪ್ರದಂ । ಸುರೌಘ ದತ್ತ ಸತ್ಪದಂ ॥**
**ಶಮಪ್ರದಂ ದಮಪ್ರದಂ । ಬಲಪ್ರದಂ ಫಲಪ್ರದಂ ॥**
**ಧೃತಿಪ್ರದಂ ಶ್ರುತಿಪ್ರದಂ । ಭಜಾಮಿ ಸನ್ಮತಿ ಪ್ರದಂ ॥**

## ಭಕ್ತಸ್ಥಲ (೪೪ ಅಂಗಸ್ಥಲಗಳು)

(ಶ್ರೀ ಸಿ. ಶಿ. ಪರಿ. ೫ ಶ್ಲೋ. ೨೫, ೨೬)

**ಭಕ್ತಸ್ಥಲಂ ಪ್ರವಕ್ಷ್ಯಾಮಿ । ಪ್ರಥಮಂ ಕಲಶೋದ್ಭವ ।**
**ತದವಾಂತರ ಭೇದಾಂಶ್ಚ ಸಮಾಹಿತ ಮನಾಃ ಶೃಣು ॥**
**ಶಿವೇ ಭಕ್ತಿಃ ಸಮುತ್ಪನ್ನಾ । ಯಸ್ಯಾಸೌ ಭಕ್ತ ಉಚ್ಯತೇ ।**
**ತಸ್ಯಾನುಷ್ಠೇಯ ಧರ್ಮಾಣಾ । ಮುಕ್ತಿರ್ಭಕ್ತ ಸ್ಥಲಂ ಮತಂ॥**

"ಸ್ಥಲ" ವೆಂದರೇನು ? ನಿಲ್ಲಲು, ವಿಶ್ರಮಿಸಲು, ಆಸರೆಯಾಗಿರುವ ಪರಮ ವಿಶ್ರಾಂತಿ ಸ್ಥಾನ. **ವಿಶ್ರಾಮ ಸ್ಥಾನ, ಮೇಕಂ। ಕವಿವರ ವಚಸಾಂ। ಜೀವನಂ ಸಜ್ಜನಾನಾಂ ॥** ಸಾಧು, ಸಜ್ಜನರ, ವಚನಾಮೃತದ ಸೊಬಗಿನ ಶೋಭೆಯಲ್ಲಿ ವಿರಮಿಸಿ, ಶಾಂತನಾಗುವ ಸ್ಥಿತಿ. ಅನಿರ್ವಚನೀಯ ಮುಮುಕ್ಷು ಗಳ ಜೀವನ ಧ್ಯೇಯವಿದು. **" ಮೂಲಂ ಯಃ ಪ್ರಾದುರಾಸೀತ್ "** ಶಿವ

ಯೋಗಿಗಳು ಪಶ್ಚಿಮ ಶಿಖಾಚಕ್ರದಲ್ಲಿ ದೇದೀಪ್ಯಮಾನವಾಗಿ ಪ್ರಜ್ವಲಿಸುವ ಅಖಂಡಾಕಾರದ ಕೇಂದ್ರೀಕೃತ ಚಿಜ್ಜ್ಯೋತಿಯನ್ನು, ಧ್ಯಾನದ ಒಳಗಣ್ಣಿನಿಂದ ಕಂಡು ಪರಶಿವ ಬ್ರಹ್ಮದರ್ಶನದಿಂದ "**ತೃಪ್ತೋಭವ**" ಸದಾ ತೃಪ್ತರಾಗಿರುವ ಸ್ಥಿತಿಸ್ತುತ್ಯ. ಈ ಘನ ಲಿಂಗನೇ ಮೂಲಾಧಾರವೆನಿಸಿದ ಪ್ರಣವಮಯ ಓಂಕಾರ ವೆನಿಸಿರುವುದು. "**ಓಂಕಾರಃ ಸರ್ವವೇದೇಷು**" **ವೇದ್ಯಂ ಪವಿತ್ರಮೋಂಕಾರಂ | ಯತ್ ಸಾಮ ಯಜು ರಾಯಚ ||** ವೆಂಬ ಶೃತಿ ಪ್ರಮಾಣಾನುಸಾರ, ಸಮಸ್ತ ವೇದ, ಶಾಸ್ತ್ರ, ಪುರಾಣ, ಇತಿಹಾಸಗಳ ಸಂಪದ್ಯುಕ್ತವಾದ ಉದಯಕ್ಕೆ ಉಗಮದಂತೆ, ಓಂಕಾರ ಏಕಾಕ್ಷರವು ಹೇಗೆ ಜನ್ಮಸ್ಥಾನವೋ, ಅದರಂತೆ ಅಖಿಲ ಸ್ಥಾವರ ಜಂಗಮಾತ್ಮಕ ವಾದೀ ವಿಚಿತ್ರಾಮಯ ಮಾನಕರ ಅಖಂಡ ಸೃಷ್ಟಿಗೆ, ಭಿತ್ತಿ (ಬೀಜ) ವೆನಿಸಿ, ಪರಮಾಧಾರಸ್ತಂಭದಂತೆ ನಿರಂತರ ಪರಿಶೋಭಿಸುವ ಚಿನ್ಮಯ ಪರಶಿವತತ್ವವನ್ನು "**ಸ್ಥಲ**" ವೆಂದು ತತ್ವವೇತ್ತರು ಮನಗಂಡಿರುವರು. ಇದೇ ಅಂಶವನ್ನು ಶೃತಿಮಾತೆ ಹೊರಗೆಡಹುತ್ತಾ,

**ಅಧಿಷ್ಠಾನಂ ಸಮಸ್ತಸ್ಯ | ಸ್ಥಾವರಸ್ಯ, ಚರಸ್ಯ ಚ | ಜಗತೋ ಯದ್ಭವೇ ತ್ತತ್ವಂ | ತದ್ದಿವ್ಯೈ ಸ್ಥಲ ಮುಚ್ಯತೇ || (ಶಿವಸೂತ್ರ).**

ಅನಾದಿಯೆನಿಸಿದ ಪರಮ ವೀರಶೈವ ಧರ್ಮದಲ್ಲಿ ಪವಿತ್ರವಾದ ಸ್ಥಲ ತತ್ವವನ್ನು ಆರು ಹಂತಗಳಾಗಿ ವಿಂಗಡಿಸಿ ಪ್ರತಿಪಾದಿಸಲಾಗಿದೆ. ಆಚಾರ್ಯ ಶ್ರೀ ರೇಣುಕ ಪರಂಜ್ಯೋತಿ, ಅಗಸ್ತ್ಯ ಮಹಾ ಮುನಿಗೆ ಆತ್ಮೀಯ ಭಾವದಿಂದ ಬೋಧಿಸುತ್ತಾ, ಷಟ್ಸ್ಥಲ ಸಿದ್ಧಾಂತ ಅಂಗಷಟ್ಸ್ಥಲ ಮತ್ತು ಲಿಂಗಷಟ್ಸ್ಥಲ ವೆಂದು ಇಬ್ಬಗೆ ಇರುವುದನ್ನು ವಿವರಿಸುತ್ತಾ, ಅಂಗಷಟ್ಸ್ಥಲ ೪೪ ವಿಧವಿರಲು ಲಿಂಗಷಟ್ಸ್ಥಲ ೫೭ ತೆರನಾಗಿ, ಒಟ್ಟಿನಲ್ಲಿ ೧೦೧ ಸ್ಥಲಗಳ ವ್ಯಾಪ್ತಿಯಿಂದ ಈ ದೇಹದಲ್ಲಿ ದೀಪ್ತಿ ಗೊಂಡು ರಂಜಿತವಾಗಿರುವ ಗೋಪ್ಯ ಅಂಶಗಳನ್ನು ಮನಂಬುಗುವಂತೆ ಬೋಧಿಸಿದರು. "**ಸ್ಥಲರೂಪಿ ಪರಶಿವ ಬ್ರಹ್ಮ**" ಬಾಹ್ಯಾಭ್ಯಂತರ ಗಳಲ್ಲೂ, **ಅಂತರ್ಬಹಿಶ್ಚ ತತ್ಸರ್ವಂ | ವ್ಯಾಪ್ತಂ ಯೇನ ಚರಾಚರಂ ||** ಎಂಬಂತೆ, ಸ್ಥಾವರ ಜಂಗಮ ಚರಾಚರಾತ್ಮಕ ಅಖಂಡ ವಿಶ್ವವನ್ನು ವ್ಯಾಪಿಸಿ ಆದಿ ಮಧ್ಯಾಂತವಿಲ್ಲದ ಘನ ತತ್ವವೆನಿಸಿರುವುದು. ವೀರಶೈವ ಧರ್ಮದಲ್ಲಿ

ಎದ್ದು ಕಾಣುವ ವೈಶಿಷ್ಟ್ಯವೆಂದರೆ, ೧ ಸ್ಥಲ ನೂರೊಂದಾಗಿ ಮತ್ತದೇ ನೂರೊಂದು ಒಂದಾಗಿ ಪರಿಣಮಿಸುವ ನೈಪುಣ್ಯ ಅದ್ವಿತೀಯವೆನಿಸಿರುತ್ತೆ. ಏಕತ್ವದಲ್ಲಿ ಬಹುತ್ವ ಬಹುತ್ವದಲ್ಲಿ ಏಕತ್ವ ಶಿವಾದ್ವೈತಸಿದ್ಧಾಂತದಲ್ಲಿ ಸ್ವಚ್ಛಂದ ವಾಗಿ ಎದ್ದು ಕಾಣುವ ಗುಹ್ಯಾದ್ಗುಹ್ಯತಮ ತತ್ವಾನ್ವೇಷಣವೆನಿಸಿರುವುದು.

ಅಂಗಸ್ಥಲದ ಆರು ವಿಧ ಸ್ಥಲಗಳಲ್ಲಿ "ಭಕ್ತಸ್ಥಲ" ಮೊದಲನೆಯ ಸ್ಥಲವಿರುತ್ತೆ,

**ಅವಾಂತರ ಸ್ಥಲಾನ್ಯತ್ರ । ಪ್ರಾಹುಃ ಪಂಚದಶೋತ್ತಮಾಃ ॥**

ಅಂದರೆ ಭಕ್ತಸ್ಥಲದಲ್ಲಿ (೧೫) ಹದಿನೈದು ಉಪಸ್ಥಲಗಳು ವಿರಾಜಿತವಾಗಿವೆ ಎಂದು ಶ್ರೀ ರೇಣುಕಾಚಾರ್ಯರು ಅಗಸ್ತ್ಯರಿಗೆ ಅರುಹಿದರು.

## ಭಕ್ತ ಸ್ಥಲ (೪೪ ಅಂಗಸ್ಥಲಗಳು)

ಅಂಗ ಷಟ್ಸ್ಥಲಗಳಲ್ಲಿ ಭಕ್ತಸ್ಥಲ ಮೊದಲನೆಯದು. ಇದು ಬಹು ವ್ಯಾಪ್ತಿ ದೀಪ್ತಿಯಿಂದ ರಂಜಿತವಾಗಿದೆ ಉಳಿದ ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತೂ ಐಕ್ಯಸ್ಥಳಗಳಲ್ಲಿನ ಉಪಸ್ಥಲಗಳಲ್ಲಿ, ಪ್ರಥಮ ಉಪಸ್ಥಲ ಭಕ್ತ ಸ್ಥಲಕ್ಕೆ ಮೀಸಲಿರುತ್ತೆ ಇದರಿಂದ ಭಕ್ತಸ್ಥಲದ ಹಿರಿಮೆ ಗರಿಮೆ ಎಷ್ಟು ಉನ್ನತವೆಂಬುದು ಅರ್ಥವಾಗುತ್ತೆ. ಭಗವಂತನಲ್ಲಿ ಅವ್ಯಾಜ ವಾದ ಪ್ರೇಮಾತಿಶಯ, ಅನುರಾಗ ಪುನಃ ಪುನಃ ಮನದಲ್ಲಿ ಉಕ್ಕುವ ಸಹಜ ಭಾವವನ್ನು ಭಕ್ತಿ ಎನ್ನಲಾಗಿದೆ. ಶ್ರೀ ನಾರದರು ಸಭಕ್ತಿಃ ಪರಮ ಪ್ರೇಮ ರೂಪಾಚ ॥ **ಅನಿರ್ವಚನೀಯಂ ಅಮೃತ ಸ್ವರೂಪಾಚ**॥ ಎಂದು ಕೊಂಡಾಡಿರುವರು. **"ಭಗವಂತ ಭಕ್ತ ಭಕ್ತಿ"** ಈ ಮೂರೂ ವಂದೇ ಮೂಲದ ಶುದ್ಧ ಸ್ಫಟಿಕಮಯ ದಿವ್ಯ ವಿದ್ಯುದ್ ಕವಲುಗಳು. ಅಂಗನನ್ನು ಭಕ್ತಿ ಲಿಂಗ ದೇವನೊಂದಿಗೆ ಕೊಡಿಸಿ, ಸಮರಸಗೊಳಿಸುವುದು. ಭಕ್ತಿ ಮಾನವರನ್ನು **"ಅ ಸತೋ ಮಾ ಸದ್ಗಮಯ"** ಅಸದ್ವಸ್ತುಗಳಿಂದ ಸತ್ಸ್ವರೂಪದತ್ತ, **ತಮಸೋ ಮಾ । ಜ್ಯೋತಿರ್ಗಮಯಾ** ॥ ಅಜ್ಞಾನ ರೂಪ ಕತ್ತಲಿನಿಂದ ಜ್ಞಾನಾನಂದ ಪರಂ ಜ್ಯೋತಿಯತ್ತ, ಮತ್ತೂ ॥**ಮೃತ್ಯೋರ್ಮಾ ಅಮೃತಂ**

**ಗಮಯಾ** ॥ ಮೃತ್ಯುವಿನ ಕರಾಳ ದವಡೆಯಿಂದ ಅಮೃತ ಸ್ವರೂಪ ದತ್ತ ಆಕರ್ಶಿಸಿ ಕೊಂಡೊಯ್ಯುವುದು. ಪರಭಕ್ತಿ ಪರಶಿವ ಸದೃಶ ದೇವಾಮೃತವೆನಿಸಿದೆ. ಇದು ಕಾರಣ, ಭಕ್ತ ಭಕ್ತಿಯ ನಿತ್ಯ ಸಂಪರ್ಕದ ಸ್ವಸ್ವರೂಪಾನು ಸಂಧಾನ ದಿಂದ ಅಮೃತಮಯನೆನಿಸುವನು. ಭಕ್ತಸ್ಥಲದ ಹಿರಿಮೆ ಭಗವಂತನ ಹಿರಿಮೆ ಯಷ್ಟೇ ಗರಿಷ್ಠವೆನಿಸಿದೆ. ಇತ್ಯಾದಿ ಕಾರಣಗಳಿಂದ,

**ಶಿವೇ ಭಕ್ತಿಃ ಸಮುತ್ಪನ್ನಾ । ಯಸ್ಯಾಸೌ ಭಕ್ತ ಉಚ್ಯತೇ ।**
**ತಸ್ಯಾನುಷ್ಠೇಯ ಧರ್ಮಾಣಾ । ಮುಕ್ತಿರ್ಭಕ್ತಸ್ಥಲಂ ಮತಂ ॥**

**(ಸಿ. ಶಿ. ಅ ೫ ಶ್ಲೋ ೨೬)**

ಯಾವಾತನ ಹೃದಯದಲ್ಲಿ ಶಿವಭಕ್ತಿ ಹಾಲುಕ್ಕುವಂತೆ ಸಹಜವಾಗಿ ಅವ್ಯಾಜ ಪ್ರೇಮದಿಂದ ಉಕ್ಕೇರುತ್ತಿರುವುದೋ ಆತನನ್ನು ಭಕ್ತನೆನ್ನುವರು. ಇಂತಪ್ಪ ಪರಮ ಭಕ್ತನು ನಿತ್ಯದ್ವಿಸಂಧ್ಯಾ ಕಾಲಗಳಲ್ಲಿ ಈಶ್ವರಾರ್ಪಿತ ಮನೋ ಬುದ್ಧಿ ವಾಕ್ಕಾಯ ಭಾವಗಳಿಂದ ಅನುಷ್ಠಾನ ಮಾಡತಕ್ಕ ಧರ್ಮಸೂಕ್ಷ್ಮಗಳ ಸದುಪದೇಶದ ಶಿವಜ್ಞಾನ ಭಂಡಾರ, ಭಕ್ತಸ್ಥಲವೆನಿಸಿದೆ.

ಶಿವಸಂಬಂಧವಾದದ್ದು ಶೈವ. ಶೈವವು ಪ್ರಧಾನವಾಗಿ ನಾಲ್ಕು ತೆರನಾಗಿ ಹುದು.

**ಶೈವಂ ಚತುರ್ವಿಧಂ ಜ್ಞೇಯಂ। ಸಾಮಾಸಾಚ್ಛೃಣುಷಣ್ಮುಖಾ॥**
**ಸಾಮಾನ್ಯಂ ಮಿಶ್ರಕಂ ಚೈವ ಶುದ್ಧಂ ವೀರಂ ಯಥಾ ಕ್ರಮಂ॥**
**ಸರ್ವೇಷಾಮಪಿ ಶೈವಾನಾಂ । ವೀರಶೈವಂ ಮಹತ್ತರಂ ।**
**ಅಲ್ಪಕ್ರಿಯಾ ಬಹುಫಲಂ । ವೀರಶೈವಂ ಚ ಷಣ್ಮುಖ ॥**

(ವಾತುಲ ಶಿವಾಗಮ). ಶೈವವು ಸಾಮಾನ್ಯ, ಮಿಶ್ರ, ಶುದ್ಧ ಮತ್ತೂ ವೀರಂ, ಎಂಬಿವೇ ನಾಲ್ಕು ವಿಧ. ಇವುಗಳಲ್ಲಿ ॥ **ವೀರಶೈವಂ ಮಹತ್ತರಂ** ॥ ವೀರಶೈವ ಮಹತ್ವವುಳ್ಳದ್ದಾಗಿದೆ. ಶೈವಧರ್ಮ ಜಗತ್ತಿನಲ್ಲಿ ಬಹು ಸನಾತನವಾದ ಮತ್ತೂ ಅಷ್ಟೇ ವಿಶಾಲವಾದ ಮತ. ಶಿವನಷ್ಟೇ ಮಹತ್ವ ವುಳ್ಳ ಮತ. ಪರಮ ವೀರಶೈವ ಶೈವಧರ್ಮದ ಹೃದಯವೆನಿಸಿದೆ. ಶೈವ ಹಾಲಿನಂತೆ ಪರಿಶುದ್ಧವಾದ ಮತ. ಹಾಲಿನೊಳಗಿನ ನವನೀತ ವೀರಶೈವ.

ಷಟ್ಸ್ಥಲ ಸಿದ್ಧಾಂತ ಮಥಮಥಿಪ ತುಪ್ಪದಂತೆ ಅತಿ ಶ್ರೇಷ್ಠವಿರುತ್ತೆ. ಈ ಕಾರಣದಿಂದ ವಾತುಲಾಗಮ, ವೀರಶೈವವನ್ನು ಮುಕ್ತ ಕಂಠದಿಂದ ಪ್ರಶಂಸಿಸುತ್ತಾ ॥ ಅಲ್ಪಕ್ರಿಯೆ ಬಹುಫಲಂ । ವೀರಶೈವಂ ಮಹತ್ತರಂ ॥

ಎಂಬುದಾಗಿ ಘೋಷಿಸಿದೆ. ಈ ಕಾರಣದಿಂದ ವೀರಶೈವ ಮತ್ತೂ ಶೈವ ಧರ್ಮಗಳು ಶಿವನಷ್ಟೇ ಮಹತ್ವವುಳ್ಳವುಗಳು. ಶೈವ, ಪರಮೇಶ್ವರನ ಹೊರ ವೈಯಂತಿದ್ದರೆ ವೀರಶೈವ ಆ ಪರಶಿವನ ಚಿನ್ಮಯವಾದ ಆತ್ಮವೆಂದು ಸ್ತುತ್ಯ ವಿರುತ್ತೆ. ಶೈವ ವೀರಶೈವ ಧರ್ಮಗಳ ನಿಕಟ ಸಂಬಂಧ ಸಂಪರ್ಕಗಳು ಅವಿನಾ ಭಾವವೆನಿಸಿವೆ. ವಿಷಯ ಹೀಗಿದ್ದರೂ, ಶೈವ ಸಂಪ್ರದಾಯದಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಸ್ಥಿತಿಗಳನ್ನೇ ಮೋಕ್ಷವೆಂದು ಅಂಗೀಕರಿಸಲಾಗಿದೆ. ಈ ಸಂಪ್ರದಾಯದಲ್ಲಿ ಐಕ್ಯ ಅಥವಾ ಸಾಯುಜ್ಯ ಮೋಕ್ಷ ಅಂಗೀಕಾರವಿಲ್ಲ. ಹೀಗಿದ್ದರೂ ವೀರಶೈವ ಧರ್ಮದಲ್ಲಿನ ೩೬ ತತ್ವ ಮಾತ್ರ ಶೈವರಿಗೆ ಒಪ್ಪಿಗೆಯಾಗಿದೆ.

॥ತಮಿಳು ನಾಡಿನ ಶೈವರು ಶಿವಾಗಮಗಳ ಪೂರ್ವಭಾಗವನ್ನು ಅವಲಂಭಿಸಿದ, ಶೈವ ವಿಶಿಷ್ಟಾದ್ವೈತಿಗಳೆಂದು ಹೇಳಲಾಗಿದೆ. ॥

॥ ಓಂ ಇತ್ಯೇ ಕಾಕ್ಷರಂ ಬ್ರಹ್ಮಂ । ನಮಃ ಶಿವಾಯೇತ್ಯ ಜಾಯತ ॥

(ಶಿವ ಸೂತ್ರ)



ಒಡಲಿಲ್ಲದ ಪೊಡಲುಳ್ಳ ಓಂಕಾರ ನಿಷ್ಕಲ ಬ್ರಹ್ಮದ, ಗರ್ಭಾಂಬುದಿಯಲ್ಲಿ ಶಿವ ಪಂಚಾಕ್ಷರೀ ಬೀಜಾ ಮಹಾಮಂತ್ರಾಕ್ಷರಗಳು ಅಂತರ್ಗತವಾಗಿವೆ.

**ನಕಾರೋ ತಾರಕಾಕಾರಃ ಮಕಾರೋ ದಂಡ ಉಚ್ಯತೇ ; ಶಿಕಾರೋ ಕುಂಡಲಾಕಾರೋ, ವಕಾರಶ್ಚಾರ್ಧ ಚಂದ್ರಿಕಂ | ಯಕಾರೋ ದರ್ಪಣಾಕಾರೋ | ಇತ್ಯೋಂಕಾರ ಮುಚ್ಯತೆ ||**

ಅಖಂಡಾದ್ವಿತೀಯ ನಿತ್ಯ ನಿರವಯ ಪರಿಪೂರ್ಣ ಸಚ್ಚಿದಾನಂದ ನಿಷ್ಕಲ ಓಂಕಾರ ಪರಶಿವ ಬ್ರಹ್ಮ, ತಾನೊಂದೆಯಲ್ಲದೆ, ಅನ್ಯವಾಗಿ ತೋರುವ ತತ್ವಂಗಳೇನೂಯಿಲ್ಲದೆ, ಸರ್ವವೂ ಅಗೋಚರವಾಗಿ (ಶೂನ್ಯವಾಗಿ) ಮತ್ತೇನೂ ಏನೂಯಿಲ್ಲದೆ, ತಾನು ತಾನೇಯಾಗಿ, ತಾನೆಂಬ ಅರಿವಿನ ತೋರಿಕೆ ತೋರದೆ, ತನ್ನ ಸ್ವಸ್ವರೂಪ ನಿಜ ಸ್ವಭಾವದಲ್ಲಿರ್ಪ ನಿರಂಜನ ನಿಷ್ಕಲ ಪ್ರಣವಮಯ ಓಂಕಾರ ನಿಷ್ಕಲ ಸ್ವಯಂ ಜ್ಯೋತಿರ್ಲಿಂಗವನ್ನು "ಸ್ಥಲ"ವೆಂದು ನಿರ್ದೇಶಿಸಲಾಗಿದೆ.




ಇಂತು ೧ ಸ್ಥಲ ಎರಡಾಗಿ, ಆರಾಗಿ, ಹನ್ನೆರಡಾಗಿ, ೧೦೧ ಸ್ಥಲ ರೂಪದಲ್ಲಿ ಆವಿರ್ಭಾವ ಗೊಂಡಿದೆ. ಪುನಃ ೧೦೧ಸ್ಥಲಗಳು, ಒಂದರಲ್ಲಿ ಅಂತರ್ಗತವಾಗಿ ಮೊದಲಿನಂತೆ ವಿಜೃಂಭಿಸುವುದು. ಇದು ಅಭೂತ ಪೂರ್ವ-ಲಿಂಗ ಲೀಲಾವಿಲಾಸ

ವೆನಿಸಿದೆ. ಒಂದು ಹನಿ ಪಾದರಸ ಎತ್ತರದಿಂದ ನೆಲಕ್ಕೆ ಬಿದ್ದರೆ. ತಕ್ಷಣ ಅದು ೧೦೧ ತುಂತುರುಗಳಾಗಿ ಹರಡಿ, ಚದುರಿ ಹೋಗುವುದು. ಮಿಣಿಗುಟ್ಟುವ ಆ ಪಾದರಸ ಜಾರುವ ಸ್ವಭಾವವುಳ್ಳದ್ದರಿಂದ ಕೈಗೆ ಸಿಗುವುದಿಲ್ಲ. ಪ್ರಯಾಸದಿಂದ ನೆಲದಲ್ಲಿ ಚದುರಿದ ೧೦೧ ತುಂತುರುಗಳನ್ನು ಒಂದು ಗೂಡಿಸಿದಾಗ, ಪಾದರಸ ಮೊದಲಿನಂತೆ ಒಂದೇ ಹನಿಯಾಗುವುದು ಸರಿಯಷ್ಟೆ. ಇಂತು ಏಕತ್ವದಲ್ಲಿ ಬಹುತ್ವ, ಬಹುತ್ವದಲ್ಲಿ ಏಕತ್ವಗಳು, ಏಕೀಕರಿಸಿರುವುವು. (Diversity in unity and unity in diversity). ಸ್ಥಲರೂಪಿ ಪರಶಿವಬ್ರಹ್ಮವು ತಾನು ಅನಂತಕಾಲ ಏಕಾಂತದಲ್ಲಿದ್ದು ತದನಂತರವೊಮ್ಮೆ **॥ ಸ ಏಕಾಕೀನ ರಮತೇ ॥** ಒಬ್ಬನೆಯಿದ್ದು ರಮಿಸಲು ಸಾಧ್ಯವಿಲ್ಲವೆಂದು ಭಾವಿಸಿ, **॥ ಸದ್ವಿತೀಯಮೈ ಚ್ಛತ್ ॥** ಜೊತೆಗೊಬ್ಬರು ಬೇಕೆಂದು ಇಚ್ಛಿಸಿತು. **॥ಸ್ವಕ್ರೀಡಾರ್ಥಂ ವಿಶ್ವಭುವನ ನಿರ್ಮಾಣೇ ॥** ಹಾಗೂ ತಾನು ಪ್ರಥಮತಃ ಅಂಗಸ್ಥಲ ಮತ್ತೂ ಲಿಂಗಸ್ಥಲವೆಂಬ ಎರಡು ದಿವ್ಯ ಕವಲಾಗಿ ಒಡೆಯಿತು.

**ಘನ ಲಿಂಗಂ ಮಹಾ ಭಾಸಂ । ಸಚ್ಚಿದಾನಂದ ಲಕ್ಷಣಂ ॥**

**ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡಾ ದ್ವಿತೀಯ ಪರ ವಸ್ತು ಸ್ವೇಚ್ಛೆಯಿಂ ; ॥ ಸ್ವಶಕ್ತಿಕ್ಷೋಭ ಮಾತ್ರೇಣ । ಸ್ಥಲಂ ತದ್ವಿ ವಿಧಂ ಭವೇತ್ ॥ ಏಕಂ ಲಿಂಗ ಸ್ಥಲಂ ಪ್ರೋಕ್ತಮನ್ಯ ದಂಗ ಸ್ಥಲಂ ಸ್ಮೃತಂ ॥**

ಲಿಂಗಸ್ಥಲವೆಂತಲೂ, ಅಂಗಸ್ಥಲವೆಂತಲೂ ಎರಡಾಗಿ ವಿಜೃಂಭಿಸಿ ಪರಿಶೋಭಿಸಿತು.

**ಲಿಂಗವು ತತ್ರಾಧಿಕಭಾವಾಪನ್ನ ಸ್ವಪ್ರಕಾಶತಾಯಾಂ ।
ಪ್ರತಿಸ್ಫುರಣ ಗತ್ಯಾಪ್ರವಿಷ್ಟ ಮೂಲಪ್ರಣವ ।
ರೂಪ ಶಿವ ಚೈತನ್ಯಮೇವ ಲಿಂಗತತ್ವಂ ಭವತಿ ॥**

ಅಂದರೆ ಸ್ವಪ್ರಕಾಶತ್ವಾಂಶದಲ್ಲಿ ಅತ್ಯಂತ ಸಮರಸದಿಂದ ಅಧಿಕ ಭಾವವನ್ನ ಹೊಂದಿರುವ ಸರ್ವತಂತ್ರ ಸ್ವತಂತ್ರ ಸ್ವಪ್ರಕಾಶತ್ವಾಂಶದಲ್ಲಿ ಅಧಿಕಭಾವಾಪನ್ನ ಹೊಂದಿರುವ, ಸರ್ವತಂತ್ರ ಸ್ವತಂತ್ರ ಪ್ರಕಾಶತ್ವಾಂಶದಲ್ಲಿ ಪ್ರತಿಫಲನ

ಕ್ರಮದಿಂದ ಪ್ರವೇಶಿಸಿ, ಸ್ಫುರಿಸುತ್ತಿರುವ ಮೂಲ ಪ್ರಣವಮಯ ಶಿವಚೈತನ್ಯವೇ ಲಿಂಗತತ್ತ್ವವೆನಿಸಿದೆ.

**ನ್ಯೂನೀಭೂತ ಸ್ವಪ್ರಕಾಶತಾಯಾಂ | ತಥೈವ ಪ್ರವಿಷ್ಟ ಶಿವಚೈತನ್ಯಮೇ ವ। ಅಂಗತತ್ವಂ ಭವತಿ ॥**

ಅಂದರೆ, ಕಿಂಚಿತ್ ನ್ಯೂನೀ (ಕೊರತೆ) ಭಾವದಿಂದ ಸ್ವಪ್ರಕಾಶತ್ವಾಂಶದಲ್ಲಿ ಅದೇ ರೀತಿಯಾಗಿ ಪ್ರತಿಫಲಿಸಿ ಸ್ಫುರಿಸುವ ಆ ಶಿವಚೈತನ್ಯ ಅಂಗತತ್ವವೆನಿಸಿದೆ.

**ಅಂಗಲಿಂಗಗಳ ಸುಮಧುರ ಸಂಘಸಾಹಿತ್ಯಾನುಭವದ ಅಂತರಂಗದ ಅಧಿಕ ಸ್ವಪ್ರಕಾಶಾನಂದವೇ ಲಿಂಗಾಂಗ ಸಾಮರಸ್ಯವೆಂದು ಶ್ರುತಿದೇವಿ** ನಮ್ಮನ್ನು ಎಚ್ಚರಿಸಿರುವಳು.

**"ಪ್ರಣವ್ಯ ಪ್ರಕೃತಿಂ ನಿತ್ಯ । ಪರಮಾತ್ಮ ಸ್ವರೂಪಿಣೀಂ ॥**
**ಸ್ವಸ್ವರೂಪೈಕ ಚಿಚ್ಛಕ್ತಿಯಿಂ । ಸ್ಫುರಿಸುತಿರ್ದ್ಧದ ದ್ವೈತ**
**ಪರಮಾತ್ಮ ತತ್ವಂ ॥**

## ಭಕ್ತ ಸ್ಥಲ

### (ಅಂಗ. ೧ನೇ ಉಪಸ್ಥಲ ಪಿಂಡಸ್ಥಲ)

### ॥ ಪಿಂಡ ಸ್ಥಲಂ ॥

ಷಡಂಗ ಸ್ಥಲಗಳಲ್ಲಿ ಭಕ್ತಸ್ಥಲ ಮೊದಲನೆಯದು. ಭಕ್ತ ಸ್ಥಲದಲ್ಲಿ ಹದಿನೈದು ಉಪಸ್ಥಲಗಳಿವೆ. ಇವುಗಳಲ್ಲಿ ಪಿಂಡಸ್ಥಲ ಪ್ರಥಮ ಉಪಸ್ಥಲ. ಅಂಗಷಟ್ಸ್ಥಲದಲ್ಲಿ ೪೪ ಉಪ ಸ್ಥಲಗಳಿವೆ. ಇವುಗಳಲ್ಲಿ ಪಿಂಡಸ್ಥಲ ಮೊಟ್ಟ ಮೊದಲ ಸ್ಥಲ. ಪಿಂಡವೆಂದರೇನು ? ಋಗ್ವೇದದಲ್ಲಿ ಪಿಂಡ ಶಬ್ದ ಬಂದಿದೆ. ಪಿಂಡವೆಂದರೆ ಆದಿ ಅಂತ್ಯಗಳಿಲ್ಲದ ಕಾಲಾತೀತವಾದ ವಂದು ಪರವಸ್ತು ಇದಕ್ಕೆ ಶಿರಸ್ಸಿಲ್ಲ. ಹಸ್ತ ಪಾದಾದಿ ಅವಯವಗಳಿಲ್ಲ, ರೂಪಿಲ್ಲ, ಹೆಸರಿಲ್ಲದ ಅರಿವುಮಯ

ಚಿಚ್ಛೈತನ್ಯ, ಚಿನ್ಮಯ ಸ್ವರೂಪವುಳ್ಳದ್ದೆಂದು ವರ್ಣಿತವಾಗಿದೆ. ಎರಡನೆಯದಾಗಿ ಶ್ರೀ ಸಿದ್ಧಾಂತ ಶಿಖಾಮಣಿಯ ಐದನೆಯ ಪರಿಚ್ಛೇದದ ೩೧, ೩೨ ನೇ ಶ್ಲೋಕದಲ್ಲಿ ಪಿಂಡ ಶಬ್ಧ ಉಕ್ತವಾಗಿದೆ.

**ಬಹು ಜನ್ಮ ಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪ ಪಂಜರೇ ।**
**ಶುದ್ಧಾಂತಃ ಕರಣೋ ದೇಹೀ । ಪಿಂಡ ಶಬ್ಧೇನ ಗೀಯತೇ ॥**
**ಶಿವಶಕ್ತಿ ಸಮುತ್ಪನ್ನೇ । ಪ್ರಪಂಚೇ ಸ್ಮಿನ್ ವಿಶಿಷ್ಯತೇ ।**
**ಪುಣ್ಯಾಧಿಕಃ ಕ್ಷೀಣಪಾಪಃ ಶುದ್ಧಾತ್ಮಾ ಪಿಂಡನಾಮಕಃ ॥**

ಶಿವಾಗಮಗಳಲ್ಲಿ ಉಕ್ತವಾದ ಪಿಂಡನಾಮಕ ತತ್ವಾರ್ಥವನ್ನು ಭಗವತ್ಪಾದ ಶ್ರೀ ಜ॥ ರೇಣುಕಾಚಾರ್ಯರು ಅಗಸ್ತ್ಯಮುನಿ ಪುಂಗವರಿಗೆ ವಿಸ್ತಾರವಾಗಿ ವಿವರಿಸಿರುವರು.

**ಏಳೇಳು ಜನ್ಮಂಗಳಲ್ಲಿ ಗಳಿಸಿದ । ಪುಣ್ಯ ಪುಂಜದಿಂದೆ ।**
**ತನ್ನ ಬಳಸಿರ್ಪ ಪಾಪ ಪಂಜರಕ್ಕೆ । ಪಂಚಿಕ್ಕಿ ಪರಿಶುದ್ಧಾಂತಃ**
**ಕರಣನೆನಿಸಿರ್ಪ ಅಂಗನಿಗೆ ಪಿಂಡನೆನ್ನುವರು ॥**

ಅಂದರೆ ಸಕಲ ದುರಿತಂಗಳನೀಗಿ, ಸರ್ವದುಃಖ ನಿವೃತ್ತಿಯಿಂದ, ಪರಮಾನಂದ ಪ್ರಾಪ್ತಿಗೆ ಅರ್ಹನೆನಿಸಿದ ಅಂಗನನ್ನು ಪಿಂಡವೆಂದು ಅರುಹಿರುವರು. ಪಾಪವಳಿದು ಪುಣ್ಯ ಬಲಿತು ಶುದ್ಧಾಂತಃಕರಣನಾದ ಜೀವಾತ್ಮ ಪಿಂಡನೆನಿಸಿರುವನು. ಋಗ್ವೇದದಲ್ಲುಕ್ತವಾದ ವ್ಯಾಖ್ಯಾನ ಇಲ್ಲೂ ಅನ್ವಯವಾಗುವುದು. ಭಗವದ್ಗೀತೆಯ ಪ್ರಥಮಾಧ್ಯಾಯದ ೪೨ನೇ ಶ್ಲೋಕದಲ್ಲಿ,

**ಸಂಕರೋ ನರಕಾಯೈವ । ಕುಲಘ್ನಾನಾಂ ಕುಲಸ್ಯಚ ।**
**ಪತಂತಿ ಪಿತರೋ ಹ್ಯೇಷಾಂ । ಲುಪ್ತ ಪಿಂಡೋದಕ ಕ್ರಿಯಾಃ ॥**

ಅರ್ಜುನನು ಇಲ್ಲಿ ಪ್ರತಿಪಾದಿಸಿರುವ ಪಿಂಡ ಶಬ್ಧಾರ್ಥಗೌಣವಿರುತ್ತೆ. ಪಿತೃ ದೇವತೆಗಳಿಗೆ ಶ್ರಾದ್ಧ ಕಾಲದಲ್ಲಿ ಬ್ರಾಹ್ಮಣರು ಪಿಂಡ ಪ್ರದಾನ ಮಾಡುತ್ತಾರೆ. ಸಂಕರ ಜಾತಿಯ ಪ್ರಜೆಗಳು ಪಿತೃದೇವತೆಗಳಿಗೆ ನೀಡುವ ಅನ್ನದುಂಡೆ ನೀರನ್ನು ಪಿಂಡವೆಂದು ಅರ್ಥೈಸಲಾಗಿದೆ. ಪಿಂಡ ಶಬ್ಧಕ್ಕೆ ಮೇಲು

ಕ್ತವಾವ ಶಾಸ್ತ್ರೀಯ ಅಂದರೆ ಶಿವಾಗಮೋಕ್ತ ಮಹಾಚಾರ್ಯರು ನೀಡಿರುವ ಅರ್ಥ ಸಮಂಜಸವಿರುತ್ತೆ. ಸುಂದರವೂ ಅರ್ಥಪೂರ್ಣವಿರುತ್ತೆ.

## ಪಿಂಡದ ವಿವರಣೆ

ಷಟ್ಸ್ಥಲ ಸಾಧನೆಗೆ ಪ್ರಪ್ರಥಮ ಸೋಪಾನ ಪಿಂಡ ಸ್ಥಲವೆನಿಸಿದೆ. ಪಿಂಡವು ಶಿವ, ತಾಯಿ, ತಂದೆಯರ ಮೂರಂಶಗಳಿಂದಾದುದು ಪಿಂಡೆವೆನಿಸಿದೆ.

**ಮಾತೃತ್ರೀಣಿ । ಪಿತೃತ್ರೀಣಿ । ಶಿವಾಂಶತ್ರೀಣಿ ಚೋಚ್ಯತೇ ॥**
**ತತ್ ತ್ರಿಧಾಮಿಶ್ರ ಸಂಖ್ಯಾನಾಂ । ನವಾಂಶಃ ಪಿಂಡ ಸಂಜ್ಞಕಃ॥**
**ರುಧಿರಂ ಮಾಂಸಕಂ ತ್ವಕ್ ಚ । ಮಾತೃಕಾಂಶಾ ಇತಿಸ್ಮೃತಾಃ॥**
**ಅಸ್ಥಿನಾಡ್ಯಶ್ಚ ರೋಮಾಣಿ । ಪಿತ್ರಂಶಾಃ ಪರಿ ಕೀರ್ತಿತಾಃ ॥**
**ಅಗ್ನಿಶ್ಚವಾಯುರಾತ್ಮಾಚ । ಶಿವಾಂಶಾ ಪರಿ ಕೀರ್ತಿತಾಃ ॥**

ಪಿಂಡ ಶರೀರವುಳ್ಳಾತನ, ರಕ್ತ ಮಾಂಸ ಚರ್ಮಗಳು ತಾಯಿಯ ಅಂಶಗಳು. ಮೂಳೆ, ನಾಡಿ, ರೋಮಗಳು ತಂದೆಯ ಅಂಶಗಳು. ತೇಜಸ್ಸು; ವಾಯು (ಪಂಚ ಪ್ರಾಣಗಳು) ಮತ್ತೂ ಆತ್ಮ ಇವು ಶಿವಾಂಶಗಳು. ಈ ಒಂಭತ್ತರ ಸಂಪರ್ಕದಿಂದ, ಪ್ರಾಕೃತ ಪಿಂಡವೆನಿಸಿದೆ. ಪಿಂಡ ಮೂರು ತರನಾಗಿದೆ. ಸಾಮಾನ್ಯ ಪಿಂಡ ಇದನ್ನೇ ಪ್ರಾಕೃತಿಕ ಪಿಂಡವೆಂದೂ ಕರೆಯಲಾಗಿದೆ. ವಿಶೇಷ ಪಿಂಡ ಮತ್ತೂ ಬ್ರಹ್ಮಪಿಂಡ ಅಥವಾ ಶಿವಪಿಂಡವೆಂದು ಮೂರು ವಿಧವೆನಿಸಿದೆ. ದೇಹ ಜೀವನ, ಬೆಸುಗೆ ಸಾಮಾನ್ಯ ಪಿಂಡ. ಜೀವಾತ್ಮ ಮತ್ತೂ ದೇವನ ಬೆಸುಗೆ ವಿಶೇಷ ಪಿಂಡವೆನಿಸಿದೆ. ಜೀವಾತ್ಮನೊಳಗೆ ಪರಮಾತ್ಮ, ಪರಮಾತ್ಮನೊಳಗೆ ಜೀವಾತ್ಮ ಹೀಗಾಗಿ ಅಂಗವೇ ಲಿಂಗಮಯವಾದಾಗ ಆ ಪಿಂಡವನ್ನು ಬ್ರಹ್ಮ ಪಿಂಡ ಅಥವಾ ಶಿವಪಿಂಡಯೆನ್ನಲಾಗಿದೆ. ಶಿವನ ಸೃಷ್ಠಿ ಕ್ರಮವು ನಾಲ್ಕು ತೆರನಾಗಿದ್ದು—ಶ್ವೇತಜ, ಉರ್ವಿಜ, ಅಂಡಜ ಮತ್ತೂ ಪಿಂಡಜ ಎಂಬುವುದರಲ್ಲಿ ಪಿಂಡಶಬ್ಧ ಬಂದಿದೆ. ತಾಯಿ ಗರ್ಭದಲ್ಲಿ ಪಿಂಡವಾಗಿ ಬೆಳೆವ ಜೀವಾತ್ಮನು ಭೂಪತನವಾಗುತ್ತಾನೆ. ಈ ಪಿಂಡ ಸಾಮಾನ್ಯ ಪಿಂಡವೆನಿಸಿದೆ. ಅಸ್ತು.

## ಅಂಗ. ೨ ನೇ ಉಪಸ್ಥಲ ಪಿಂಡಜ್ಞಾನ ಸ್ಥಲಂ

**ಶರೀರಾತ್ಮ ವಿವೇಕೇನ । ಪಿಂಡಜ್ಞಾನೀ ಸ ಕಥ್ಯತೇ ॥**

**ಶರೀರೇಂದ್ರಿಯ ಬುದ್ಧಿಭ್ಯೋ । ವ್ಯತಿರಿಕ್ತಃ ಸನಾತನಃ ।**

**ಆತ್ಮಸ್ಥಿತಿ ವಿವೇಕೀ ಯಃ । ಪಿಂಡಜ್ಞಾನೀ ಸ ಕಥ್ಯತೇ ॥**

**(ಶ್ಲೋ. ೫೧, ೫ಳ ಪರಿಚ್ಛೇದ ೫)**

ನಾನು ಶರೀರವಲ್ಲ. ಶರೀರ ಆತ್ಮನ ಸೌಕರ್ಯಕ್ಕಾಗಿ, ಈಶನಿಂ ನಿರ್ಮಿಸಿರುವ ಒಂದು ಬಾಡಿಗೆ ಮನೆಯಿದ್ದ ಹಾಗೆ. ಬಾಡಿಗೆದಾರ ಆ ಮನೆಯೇ ನಾನೆಂದು ಹೇಳದೆ ಆ ಮನೆಯಲ್ಲಿ ವಾಸ ಮಾಡುವವ ನಾನು, ಮನೆಯಿಂದ ಪ್ರತ್ಯೇಕವಿರುವೆನೆಂದು ಅರಿತಿದ್ದಾನೆ. ಇದರಂತೆ ಜೀವಾತ್ಮನಿಗೆ ಈ ದೇಹ ಅಸ್ಥಿರವಾದ ಬಾಡಿಗೆ ಮನೆಯೆಂದು ಅರಿತಿರುವನು.

**"ಅಹಂ ನ ದೇಹಃ ; ನ ಅಂತಃಕರಣಃ ; ಅಯಮಾತ್ಮ ಬ್ರಹ್ಮ ॥**

ಎಂದರಿತ ಸುಜ್ಞಾನಿಯನ್ನು ಪಿಂಡಜ್ಞಾನ ಸ್ಥಲದವನೆಂದು ತಿಳಿಸಿದರು ದೇಹಾತ್ಮ ಬುದ್ಧಿ ತಾಮಸ ಗುಣದ ಪ್ರತೀಕ. ಆತ್ಮನಿಂದ ದೇಹ ಅನ್ಯವಿರುವುದು. ಆತ್ಮಸ್ವರೂಪ, ನಿತ್ಯ ಸತ್ಯ ಸುಂದರ, ಸಿದ್ಧ ಶುದ್ಧ ವೆನಿಸಿರುವುದು.

**ನೈನಂ ಛಿಂದಂತಿ ಶಸ್ತ್ರಾಣಿ । ನೈನಂ ದಹತಿ ಪಾವಕಃ ॥**

**ನ ಚೈನಂ ಕ್ಲೇದಯಂತ್ಯಾಪೋ । ನ ಶೋಷಯತಿ ಮಾರುತಃ॥**

ಎಂದಿದೆ ಗೀತೆ. (ಗೀತ. ಅ. ೨. ಶ್ಲೋ. ೨೩)

ಅನಾತ್ಮವಾದ ದೇಹದ ವಿಷಯದಲ್ಲಿ ॥ ಅಂತವಂತ ಇಮೇ ದೇಹಾ ॥ ದೇಹವು ದುಃಖಮಯ, ಜಡ, ಜನನ, ಮರಣ ಧರ್ಮಕ್ಕೊಳಗಾಗಿ ಅಂತ್ಯವುಳ್ಳದ್ದು. ದೇಹಿಯೆನಿಸಿದ ಆತ್ಮ ದೇಹ ಧರ್ಮಕ್ಕೆ ವಿಲಕ್ಷಣದಿಂದಿದ್ದು,

**ನ ಜಾಯತೇ ಮ್ರಿಯತೇ ವಾ । ಕದಾ ಚಿತ್‌ನಾಯಂ। ಭೂತ್ವಾ**

**ಭವಿತಾ ವಾ ನ ಭೂಯಃ । ಅಜೋ ನಿತ್ಯಃ ಶಾಶ್ವತೋಯಂ ।**

**ಪುರಾಣೋ । ನ ಹನ್ಯತೇ । ಹನ್ಯಮಾನೇ ಶರೀರೇ ॥**

(ಗೀ. ಅ. ೨. ಶ್ಲೋ ೨೦)

ಈ ವಿಧವಾಗಿ ಆತ್ಮ ಹಾಗೂ ಕ್ಷಣ ಭಂಗರ (ನೀರ್ಗುಳ್ಳೆಯಂತಿರುವ) ವಾದ, ಮಿಂಚಿನಂಕುರದಂತಿರುವ ದೇಹ ಧರ್ಮಗಳನ್ನು ಚೆನ್ನಾಗಿ ಅರಿತಿರುವಾತನನ್ನು ಪಿಂಡಜ್ಞಾನ ಸ್ಥಲದ ಪಿಂಡ ಜ್ಞಾನಿ ಯೆಂದೆನಿಸಿರುವನು.

**ಬ್ರಹ್ಮಾಂಡ ವ್ಯಾಪ್ತ ದೇಹಾ ಭಸಿತ। ಹಿಮರುಚಾಭಾಸ ಮಾನಾ**
**ಭುಜಂಗೈಃ ॥ ಕಂಠೇ ಕಾಲಾಃ ಕಪರ್ದಾ ಕಲಿತ ಶಶಿಕಲಾ।**
**ಶ್ಚಂಡ ಕೋದಂಡ ಹಸ್ತಾಃ । ತ್ರ್ಯಕ್ಷಾ ರುದ್ರಾಕ್ಷ ಭೂಷಾಸ್ಸು**
**ಲಲಿತ । ವಿಭವಾಶ್ಯಾಂಭವಾ ಮೂರ್ತಿ ಬೇದಾ । ರುದ್ರಾಃ ಶ್ರೀ**
**ರುದ್ರ ಸೂಕ್ತ ಪ್ರಕಟಿತ।ವಿಭವಾ ನಃ ಪ್ರಯಚ್ಛಂತು ಸೌಖ್ಯಂ॥**

**ಕ್ಷಮಾಕರಂ ಪ್ರಮಾಕರಂ । ಪ್ರಭಾಕರ ಪ್ರಭಾಕರಂ ॥**
**ಮಹಸ್ಕರಂ ಯಶಸ್ಕರಂ । ಶಿವಾ ಮನೋಬ್ಜ ಭಾಸ್ಕರಂ ॥**
**ಶಿವಂಕರಂ ಪರಾತ್ಪರಂ । ದಿಗಂಬರಂ ಚಿದಂಬರಂ ॥**
**ಮಹೇಶ್ವರಂ ನಟೇಶ್ವರಂ । ಭಜಾಮಿ ಚಂದ್ರಶೇಖರಂ ॥**

## ॥ಸಂಸಾರ ಹೇಯ ಸ್ಥಲಂ॥

(ಭಕ್ತ ಸ್ಥಲ-ಅಂಗ ಉಪಸ್ಥಲ ಸಿ. ಸಿ. ಶಿ. ಪರಿ. ೫)

**ನಿರಸ್ತಹೃತ್ಕಲಂ ಕಸ್ಯ । ನಿತ್ಯಾನಿತ್ಯ ವಿವೇಕಿನಃ ॥**
**ಸಂಸಾರ ಹೇಯತಾ ಬುದ್ಧಿ । ರ್ಜಾಯತೇ ವಾಸನಾ ಬಲಾತ್॥**
**ಜಾತಸ್ಯ ಹಿ ಧ್ರುವೋ ಮೃತ್ಯು । ಧ್ರುವಂ ಜನ್ಮ ಮೃತಸ್ಯ ಚ ।**
**ಜಂತುರ್ಮರಣ ಜನ್ಮಾಭ್ಯಾಂ ಪರಿಭ್ರಮತಿ ಚಕ್ರವತ್ ॥**

ಬಹು ಜನ್ಮ ಪೂರ್ವಕೃತ ಘೋರ ಪಾತಕ ರಾಶಿ ಸಂಚಿತ ಕರ್ಮ ರೂಪದಲ್ಲಿ ಜೀವಾತ್ಮನ ಹೇಗಲೇರಿರುವುದು. ಈ ಪಾಪರಾಶಿಯಿಂದ ಹೊರಬಿದ್ದವಂದು ಕರ್ಮ, ಪ್ರಾರಬ್ಧವೆನಿಸಿರುವುದು. ಈ ಪ್ರಾರಬ್ಧ ಕರ್ಮ ಮುಗಿಯುವುದರೊಳಗಾಗಿ, ಜೀವಾತ್ಮನು ಅಸಂಖ್ಯಾತ ಹೊಸಕರ್ಮಗಳನ್ನು ಪುನಃ ಪುನಃ

ಮಾಡುತ್ತಲಿರುವನಾದ್ದರಿಂದ, ಇವು ಆಗಾಮಿ ಕರ್ಮಗಳೆನಿಸಿ, ಸಂಚಿತ ಕರ್ಮದ ರಾಶಿಯಲ್ಲಿ ಸೇರುವುವು. ಈ ಕರ್ಮಗಳನ್ನೆಲ್ಲಾ ಜೀವಾತ್ಮನು ವಂದೊಂದನ್ನೂ

**॥ ಅವಶ್ಯ ಮನುಭೋಕ್ತವ್ಯಂ । ಕೃತಂ ಕರ್ಮ ಶುಭಾಶುಭಂ ॥**

ಅವಶ್ಯ ಅನುಭವಿಸಿಯೇ ತೀರಬೇಕು. ಬೇರೆ ವಿಧಿಯಿಲ್ಲ. ಭೂತಾಕಾರವಾಗಿ ಬೆಳೆಯುತ್ತಿರುವ ಸಂಚಿತ ಕರ್ಮವನ್ನು ನಾಶ ಮಾಡುವುದು ತಾನೇ ಹೇಗೆ ? ಮಡದಿ, ಮಕ್ಕಳು, ಧನ ಕನಕ ವಸ್ತುವಾಹನಾದಿಗಳ ಮೋಹ ಜಾಲ ಸೂರ್ಯನನ್ನು ಕಾರ್ಮೋಡಗಳು ಆವರಿಸುವಂತೆ,

**"ಅಜ್ಞಾನೇನಾ ವೃತಂ ಜ್ಞಾನಂ । ತೇನ ಮುಹ್ಯಂತಿ ಜಂತವಃ।**

ದುರ್ಭರವಾದೀ ಹೃದಯದಲ್ಲಿನ ಅಜ್ಞಾನ ಗ್ರಂಥಿಗಳು, ಅನಾದಿ ಕಾಲದಿಂದ ಬಲವತ್ತರವಾಗಿ ನೆಲಸಿರುವುವು. ಇಂತಪ್ಪ ಅಸಂಖ್ಯಾತ ಪಾಪಾದಿ ಮಹಾ ಪಾಪಗಳನ್ನು ಪೂರ್ಣ ನಾಶಗೊಳಿಸಲು ಶಿವಜ್ಞಾನವೆಂಬ ಮಹದಗ್ನಿಯನ್ನು ಅಂತಃಕರಣದಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಪುಟವಿಟ್ಟಂತೆ ಸತತ ಉಜ್ಜ್ವಲ ಗೊಳಿಸುತ್ತಲಿರಬೇಕು,

**"ಜ್ಞಾನಾಗ್ನಿದಗ್ಧ ಕರ್ಮಾಣಂ । ತಮಾಹುಃ ಪಂಡಿತಂ ಬುಧಾಃ ॥**

(ಗೀತೆ ಅ. ೪. ಶ್ಲೋ ೧೯)

ಅಖಿಲ ಪಾಪಕೋಟಿಗಳು, ಶಿವಜ್ಞಾನಾಗ್ನಿಯಿಂದ ದಹಿಸಿ ಬೂದಿಯಾಗುವುವು.

**"ಜ್ಞಾನಾಗ್ನಿಃ ಸರ್ವ ಕರ್ಮಾಣಿ । ಭಸ್ಮಸಾತ್ಕುರುತೇ ತಥಾ ॥**

(ಗೀ. ಅ. ೪. ಶ್ಲೋ. ೩೭)

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಜ॥ ರೇಣುಕಾಚಾರ್ಯರು,

**ಜ್ಞಾನಾಗ್ನಿನಾ ದಹೇತ್ಸರ್ವಂ । ಪಾಶಜಾಲಂ ಜಗನ್ಮಯಂ ॥**

ಎಂದೂ ಮತ್ತೂ, **ಶಿವಧ್ಯಾನಂತು ಸಂಸಾರ । ತಮ್ಮ ಸಚ್ಚಂಡ ಭಾಸ್ಕರಃ॥**

(ಪರಿಚ್ಛೇದ ೧೨ ಶ್ಲೋ ೨೪, ೨೬)

**ಮತ್ತೂ ಸಂಸಾರ ವಿಷವೃಕ್ಷಸ್ಯ । ಪಂಚಕ್ಲೇಶ ಪಲಾಶಿನಃ । ಛೇದನೇ ಕರ್ಮ ಮೂಲಸ್ಯ । ಪರಶುಃ ಶಿವಭಾವನಾ ॥** ಎಂದು ಬೋಧಿಸಿರುವರು.

(ಪರಿ ೧೨. ಶ್ಲೋ ೨೫)

ಸಂಸಾರ ವೃಕ್ಷ ತ್ರಿಗುಣಾತ್ಮಕ ಗುಣಮಯಿ ತ್ರಿವರ್ಣ ರಂಜಿತ.ವಾಗಿದೆ.

**ಗುಣಪ್ರವೃದ್ಧಾಃ ವಿಷಯ ಪ್ರವಾಲಾಃ । ಕರ್ಮಾನು ಬಂಧೀನಿ।**

**ಮನುಷ್ಯಲೋಕೇ ॥**

ಆಶಾಪಾಶಾದಿ ವಿಷಯಗಳ ಬಲೆಯಲ್ಲಿ ನಮ್ಮನ್ನು ಸಿಗಿಸಿ, ಈ ಸಂಸಾರ ನಮ್ಮನ್ನು ಅನಂತ ದುಃಖಕ್ಕೀಡು ಮಾಡುವುದು. ಸಂಸಾರ ಸಾಗರದಲ್ಲಿ ಹೆಂಡತಿ ಮಕ್ಕಳು, ಮೊಸಳೆ, ತಿಮಿಂಗಿಲಗಳಂತೆ ಬಾಧಕರಿರುವರು. ಇಂತಪ್ಪ ಹೇಯ ವೆನಿಸಿದ ಸಂಸಾರ ಮಹಾ ವೃಕ್ಷವನ್ನು ನಾಶಮಾಡುವುದೆಂತು ? ಅಂದರೆ ಮನದ ಅಶಾಪಾಶಾದಿ ರಾಗದ್ವೇಶಗಳನ್ನೂ, ಸ್ವಾರ್ಥತೆ ಇತ್ಯಾದಿ ಪ್ರತಿಬಂಧಕ ವಾದ ಆಸಕ್ತಿಗಳನ್ನು ನಾಶ ಮಾಡುವುದೆಂತು ? ಶ್ರೀ ಕೃಷ್ಣನು ಗೀತೆಯಲ್ಲಿ

**ಅಧಶ್ಚ ಮೂಲಾನ್ಯನು ಸಂತತಾನಿ | ಕರ್ಮಾನು ಬಂಧೀನಿ**

**ಮನುಷ್ಯ ಲೋಕೇ । ಅಶ್ವತ್ಥಮೇನಂ ಸುವಿರೂಢ ಮೂಲ ।**

**ಮಸಂಘ ಶಸ್ತ್ರೇಣ । ದೃಢೇನ ಛಿತ್ವಾ ॥**

(ಅ. ೧೬. ಗೀ. ಶ್ಲೋ. ೩)

ಸಂಸಾರ ವೃಕ್ಷದ ಬೇರುಗಳು ಭೂಮಿಯಲ್ಲಿ ಆಳವಾಗಿ ಹೂತಿರುವುದ ರಿಂದ ಅಸಂಘವೆಂಬ ಹರಿತವಾದ ಖಡ್ಗದಿಂದ ॥ **ಧೃಢೇನ ಛಿತ್ವಾ** ॥ ಬಲ ವಾಗಿ ಬೇರು ಸಹಿತ ಕಡಿದು ಕತ್ತರಿಸಿ ನಾಶಗೊಳಿಸ ಬೇಕು. ಅರ್ಥಾತ್ ಅನಿತ್ಯ ವಾದ ಸಂಸಾರ ರೂಪ ಅಶ್ವತ್ಥ ವೃಕ್ಷದ ನಿತ್ಯ ಸಂಬಂಧ ಸಂಪರ್ಕಗಳಿಂದ ನಾವು ದೂರವಿದ್ದು ಇವುಗಳಲ್ಲಿ ಅಸಕ್ತಿಯನ್ನು ಅತಿಯಾಗಿಡಬಾರದೆಂಬುದು ತಾತ್ಪರ್ಯ ನಮ್ಮ ಚಿಂತನೆ ಪೂಜಾ, ಧ್ಯಾನಗಳೆಲ್ಲಾ ಶಿವ ಪರವಾಗಿ ; ಕ್ರಿಯೆ ಕಾಯ ಕಾದಿಗಳು ಸತ್ಯ, ಧರ್ಮ, ರೀತಿ, ನೀತಿಗಳಿಂದ ಪುಷ್ಟಿ ಗೊಂಡು, ದುಡಿಮೆಯ ದಾರಿಯಲ್ಲಿ ಯಶಸ್ವಿಯಾಗಿ ಮುಂದುವರಿಯುತ್ತಿರಬೇಕು. ಜನನ ಮರಣ ಧರ್ಮವುಳ್ಳ ಈ ಸಂಸಾರದಲ್ಲಿ ಹೇಯ ಭಾವ ಸಹಜವಾಗಿ ಅಂತರಂಗದಲ್ಲಿ ಪುನಃ ಪುನಃ ಉದಯಿಸುತ್ತಿರ ಬೇಕು.

**“ಕೋಹಂ ಕಥಮಯಂ । ದೋಷಸ್ಸಂಸಾರಾಖ್ಯ ಉಪಾಗತಃ ॥**

ನಾನ್ಯಾರು, ಜನನ ಮರಣ ರೂಪ ಸಂಬಂಧ ದೋಷ ನನಗೆ ಎಂದಿನಿಂದ ಹೇಗೆ ಸಂಭವಿಸಿತು ಎಂಬುದಾಗಿ ಚಿಂತಿಸಬೇಕು. ಗುರುವಿನಿಂದ ಅರಿಯ ಬೇಕು.

**ಜನ್ಮನ್ಯತ್ರ ಮಹಾದುಃಖಂ । ಮ್ರಿಯಮಾಣಸ್ಯ ಚಾಪಿಯತ್ ।**
**ಯಾತ ನಾಸು ಯಮ ಸ್ಯ್ರೋಗ್ರಂ । ಗರ್ಭಸಂಕ್ರಮಣೇಷು ಚ॥**

ಇಹಲೋಕದ ಬಾಳು ದುಃಖಾತಿ ದುಃಖವೆನಿಸಿದೆ. ಹುಟ್ಟುವಾಗಲೂ ದುಃಖ, ಸಾಯುವಾಗಲೂ ದುಃಖ, ಬಾಳಿನ ಉದ್ದಕ್ಕೂ ಅಡಿಗಡಿಗೆ ದುಃಖವೇ ದುಃಖ. ಸಾಯುವಾಗ ಅತಿ ದುಃಖ. ಯಮನ ಕೈಯಲ್ಲಿ ಸಿಕ್ಕಿ ನರಳುವ ದುಃಖ ಘೋರವಿರುತ್ತೆ. ಮರಣ ದುಃಖ ವರ್ಣನಾತೀತವಾದುದು. ಪ್ರಾಣವು ಆಪಾದ ಮಸ್ತಕ ಪರ್ಯಂತರ ಸೂಕ್ಷ್ಮದಿಂದ ದಟ್ಟವಾಗಿ ವ್ಯಾಪಿಸಿದೆ. ಬದುಕಿರುವ ಒಂದು ಪ್ರಾಣಿಯ ಮೈ ಚರ್ಮವನ್ನು ಮೆಲ್ಲಗೆ ಸುಲಿದು ಕಿತ್ತಾಗ, ಎಷ್ಟು ನೋವಾಗುವುದೋ ಅದರಂತೆ ಆಪಾದ ಮಸ್ತಕಪರ್ಯಂತ ವ್ಯಾಪಿಸಿರುವ ಪ್ರಾಣ, ಒಂದು ಕಡೆ ಮೆಲ್ಲಗೆ ಸಂಗ್ರಹವಾಗಲು ೨, ೩ ಘಂಟೆ ಕಾಲ ಬೇಕಾಗುತ್ತೆ. ಹೀಗೆ ಪ್ರಾಣ ಸಂಕೋಚವಾಗುವಾಗ ಆಗುವ ಯಾತನೆ ಯಮಯಾತನೆ, ಆ ಕಾಲದಲ್ಲಿ ದೇಹಕ್ಕೆ ವಸ್ತ್ರ ತಗಲಿದರೆ ಅಪಾರ ಯಾತನೆ ಮತ್ತಷ್ಟು ಜಾಸ್ತಿಯಾಗುವುದು. ಅಂಥಾ ಸಮಯದಲ್ಲಿ ಆ ದೇಹದ ಮೇಲೆ ನೊಣ ಕುಂತರೆ ಬೆಟ್ಟ ಮೇಲೆ ಬಿದ್ಧಂತಾಗುವುದು. ಅಂಥಾ ಪ್ರಾಣೋತ್ಕ್ರಮಣ ಕಾಲದಲ್ಲಿ ಮಡದಿ ಮಕ್ಕಳು ಹೋ ಯಂದು ಅವನ ಮೇಲೆ ಬಿದ್ದು ಅಳುವಾಗ ಸಾಯುವ ಪ್ರಾಣಿಗೆ ಆಗುವ ನೋವು ವರ್ಣಿಸಲಸಾಧ್ಯವಿರುತ್ತೆ. ಅಂಥಾ ಸಂದರ್ಭದಲ್ಲೂ ವೈದ್ಯರು ನೀಡುವ ಚಿಕಿತ್ಸೆ, ಯಮಲೋಕದ ಯಾತನೆಗಿಂತಲೂ ಘೋರವಿರುತ್ತೆ. ಜನನ ದುಃಖಕ್ಕಿಂತಲೂ ಮರಣ ದುಃಖ ಶತಾಂಶ ಘೋರ ಭೀಕರವಿರುತ್ತೆ,

**ಹಾಯ್ ಹಾಯ್ । ತಸ್ಮಾದತ್ರ ಸುಖಂ ನೈವ । ವಿದ್ಯತೇ ದೋಷ ಹೇತುವೇ ॥**

ಸಾವು ತಡವಲ್ಲ ನರಕ ದೂರವಲ್ಲ. ಆದ್ದರಿಂದ ಇದನ್ನರಿತು ಬಾಳಬೇಕು. ಹಾವಿನ ಬಾಯೊಳಗಿನ ಕಪ್ಪೆಯಂತೆ ಈ ಸಂಸಾರದಲ್ಲಿ ನಾವು ಸಿಕ್ಕಿ ಸಂಕಟಕ್ಕೀಡಾಗಿರುವೆವು. ಇತ್ಯಾದಿ ಕಾರಣಗಳಿಂದ,

**ತಥಾ ಶರೀರಂ ನಿಸ್ಸಾರಂ । ಯೋನಿ ಯಂತ್ರ ಪ್ರಪೀಡನಂ ॥**

ನವ ಮಾಸಗಳು ತಾಯಿ ಗರ್ಭಕಾರಾ ಗೃಹದಲ್ಲಿ ಜೀವಾತ್ಮನು ಖೈದಿಯಾಗಿ ಸಿಕ್ಕಿ ಬಿದ್ದಿರುವನು. ಪ್ರಥಮ ಏಳು ತಿಂಗಳು ತುಂಬುತ್ತಲೆ ಆ ಪಿಂಡದಲ್ಲಿ ಶಿವನು ಜೀವ ಪ್ರತಿಷ್ಠೆ ಮಾಡುವನು. ಆಗ, **॥ ಪೀವತೇ ಸಪ್ತಮೇ ಮಾಸೇ ॥** ಆ ಶಿಶು ತಾಯಿ ಗರ್ಭದಜರಾಯು ಕೋಶದಲ್ಲಿ ಚಲಿಸಲಾರಂಭಿಸುವುದು. ಒಂಭತ್ತು ತಿಂಗಳು ತುಂಬುತ್ತಲೇ ಸರ್ವಾಂಗಗಳಿಂದ ಬಲಿತ ಶಿಶುವಿಗೆ ತಾಯಿ ಗರ್ಭದಲ್ಲಿ ಅತಿ ಇಕ್ಕಟ್ಟಾಗುವುದು. ಗರ್ಭಕೋಶ ಚಿಕ್ಕದು. ಇದರ ಸುತ್ತಲೂ ಪಿತ್ತಕೋಶ, ಜಲಕೋಶ, ಅನ್ನಕೋಶ, ಮಲಕೋಶಗಳು ತುಂಬಿ ಉಬ್ಬಿದಾಗ, ಶಿಶುವು ಇಕ್ಕಟ್ಟಿನ ಬಾಧೆಯಿಂದ, ರಕ್ತ ಮೂತ್ರನಾಳಗಳ ಬಿಸಿ ತಗುಲಿ ತತ್ತರಿಸಿಸುವುದು. ಮಲಕೋಶದ ಕ್ರಿಮಿಜಾಲ ಸಂಕುಲ ಶಿಶುವಿನ ಕೋಮಲವಾದ ಅಂಗನನ್ನು ಕಡಿದು ದುಃಖಕ್ಕೀಡು ಮಾಡುವುವು. ಮಲದ ದುರ್ವಾಸನೆ ಬೇರೆ, ಕ್ಷಣೆ ಕ್ಷಣೆ ತಾಯಿ ಮಾಡುವ ಕೆಲಸಗಳಿಂದ ಏಳುವಾಗ ಕೂತಿರುವಾಗ, ಊಟ ಮಾಡುವಾಗ, ಬಡತನದ ಬೇಗೆಯಿಂದ ತಾಯಿ ನೊಂದಾಗ ಶಿಶು ಸಹ ನಂದಿ ಕುಂದಿ ಹೋಗುವುದು.

ಇಂತು ಸಹಿಸಲಸಖ್ಯವಾದ ಅನಂತ ವಿಧ ದುಃಖಗಳಿಂದ ಅಡಿಗಡಿಗೆ ಬಳಲಿ ಬೆಂದು ಬೆಂಡಾದ ಆ ಶಿಶು ಕಣ್ಣೀರಿನಿಂದ ತೋಯ್ದು ಗೋಳಿಡುತ್ತ, ತನ್ನ ರಕ್ಷಕರನ್ನು ಕಾಣದೆ ಶಿವನನ್ನು ಧ್ಯಾನಿಸುತ್ತ ತನ್ನ ಎರಡು ಪುಟ್ಟ ಕರಗಳನ್ನು ಶಿರದಲ್ಲಿಟ್ಟು ಬಂದ್ಧಾಂಜಲಿ ಪುಟಭಾವದಿಂದ ಶಿವನನ್ನು ಪ್ರಾರ್ಥಿಸುತ್ತಾ **ಭೋ ಆಪದ್ಬಾಂಧವನೇ! ಆರ್ಥ ತ್ರಾಣ ಪರಾಯಣನೇ! ದೀನದಯಾಪರನೆ! ಪ್ರಭೋ !** ನನ್ನನ್ನು ಈ ನರಕದ ಗರ್ಭವಾಸ ದುಃಖದಿಂದ ದಯಾಳುವಾದ ನೀನು ನನ್ನನ್ನು ಹೊರತಳ್ಳಿ ರಕ್ಷಿಸು, ರಕ್ಷಿಸು, ಭೂ ಪತನಗೊಳಿಸೆಂದು ಕಣ್ಣೀರಿಟ್ಟು ಹೋ ! ಎಂದು ಅಳುತ್ತಿರುವುದನ್ನು ಶಿವನು ಕಂಡನು. ಶಿಶು ತಾಯಿ ಗರ್ಭದಲ್ಲಿ ಶಿವನನ್ನು ಕಾಣುತ್ತಲೇ ಅನಂತ ರೀತಿಯಲ್ಲಿ ತನ್ನ ಕಷ್ಟವನ್ನು ನಿವೇದಿಸಿ, ಮೃಡನೇ, ಪಶುಪತಿಯೇ, ಚಂದ್ರಾರ್ಧ ಶೇಖರನೆ, ಗಂಗಾಧರನೇ, ಹರನೇ ! ನನ್ನನ್ನು ಕೂಡಲೇ ಗರ್ಭವಾಸ ಕಡು ದುಃಖದಿಂದ ಬಿಡುಗಡೆಮಾಡಿ ಕೃಪೆಮಾಡಿ ಹೊರದೂಡಿದರೆ, ನಾನು ಭೂಲೋಕದಲ್ಲಿ ಜೀವಂತನಾಗಿರುವವರೆವಿಗೂ ನಿನ್ನ ಪೂಜೆ, ನಿನ್ನ ವ್ರತ ಶೀಲನಾಗಿ, ನಿನ್ನ ಜ್ಞಾನದಲ್ಲಿದ್ದು, ನಿನ್ನನ್ನೇ

ಅನವರತ ಧ್ಯಾನಿಸುತ್ತ, ನಿನಗಾಗಿ ನಾನು ಮಾಡುವ ಎಲ್ಲಾ ಕರ್ಮಗಳನ್ನೂ ಅರ್ಪಿಸಿ, ನಿನ್ನ ಪಾದಸ್ಮರಣೆಯೊಂದಿಗೆ ನನ್ನ ಆತ್ಮವನ್ನು ನಿನಗೆ ಅರ್ಪಿಸುತ್ತೇನೆಂದು ನೂರಾರು ಸಾರಿ ತನ್ನನ್ನೇ ತಾನು ಶಿವನಿಗೆ ಅರ್ಪಿಸಿಕೊಂಡು **ಸತ್ಯ ವಚನದೊಂದಿಗೆ ಮಾತೃಗರ್ಭಕ್ಷೇತ್ರದಲ್ಲಿ ಶಿವನಿಗೆ ಭಾಷೆಕೊಟ್ಟು ಶಿವನ ಹಸ್ತದ ಮೇಲೆ ತನ್ನ ಹಸ್ತವಿಟ್ಟು ಕಣ್ಣೀರಿಟ್ಟು ಪ್ರಾರ್ಥಿಸಲು ಶಿವನ ಕೃಪೆಯಿಂದ, ಪ್ರಸೂತಿ ಕಾಮಾಯುವಿನ ತಾಡನದಿಂದ "ಯೋನಿ ಯಂತ್ರ ಪ್ರಪೀಡನಂ" ಯಂತ್ರಕ್ಕೆ** ಸಿಕ್ಕಿದ ಕಬ್ಬು ಜಜ್ಜಿ, ಜರ್ಝರಿತವಾಗಿ ಹಿಪ್ಪೆಯಾಗಿ ಹೊರಬರುವಂತೆ, ಮೂರ್ಛಾಕ್ರಾಂತನಾಗಿ ಭೂ ಪತನವಾದ ಶಿಶು, **"ಕ್ವಾಕ್ವಾ"** ಎಂದಳಲುಪಕ್ರಮಿಸುವುದು **"ಕ್ವಾಕ್ವಾ"** ಯೆಂದರೆ, ಗರ್ಭದಲ್ಲಿ ಕಂಡ ಶಿವನು **"ಎಲ್ಲಿ ಎಲ್ಲಿ"** ಎಂದು ಅಳುವುದು. ಇತ್ಯಾದಿ ಅನಂತ ಕಷ್ಟ ಪರಂಪರೆ, ಸಂಸಾರದಲ್ಲಿದೆ. ಆದ್ದರಿಂದ ಇದನ್ನು ಸಂಸಾರ ಹೇಯ ಸ್ಥಲವೆಂದು ಶ್ರೀ ಜಗದ್ಗುರು ರೇಣುಕಾಚಾರ್ಯರು ವರ್ಣಿಸಿರುವರು.

**॥ ಗರ್ಭೋಪನಿಷತ್ತಿನ ವಿಷಯ ॥** ಈ ಪುಟದಲ್ಲಿ ಸಂಗ್ರಹವಾಗಿ ಉಲ್ಲೇಖಿಸಲಾಗಿದೆ. ನಾವೆಲ್ಲರೂ ಶಿವನಲ್ಲಿ ಕೊಟ್ಟ ಇಂಥಾ ಭಾಷೆಯನ್ನು ಈಗ ಸ್ಮರಿಸ ಬೇಕು. (ಸಿ. ಶಿ. ೫ ನೇ ಪರಿಚ್ಛೇದ ಮುಗಿದಿದೆ.)

ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಮೂರು ತಾಪತ್ರಯಗಳು ಸಂಸಾರ ಜೀವನದಲ್ಲಿ ಪ್ರಬಲವಾದ ದುಃಖಗಳೆನಿಸಿವೆ. ಸಮುದ್ರದ ಅಲೆಗಳಂತೆ ಈ ಮೂರು ದುಃಖಗಳು ಮನಸೆಂಬ ದಡವನ್ನು ಅಹರ್ನಿಶಗಳಲ್ಲೂ ಬಡಿಯುತ್ತ ಲಿರುವುವು.

**ಜೀವೇ ವಾರಿ ತರಂಗ ಚಂಚಲತರೇ । ಶಾಂತಿಃ ಕುತಃ ಪ್ರಾಣಿನಃ ॥**

ಮನಸ್ಸು ಸತತ ನೀರಿನಂತೆ ಚಲಿಸುತ್ತಲಿದ್ದರೆ, ಶಾಂತಿಯೆಲ್ಲಿಯದು॥ ಅಂದ ಮೇಲೆ ಮನಸ್ಸಿಗೆ ವಿಶ್ರಾಂತಿಯೆಂಬುದಿಲ್ಲ. ವಾತ ಪಿತ್ತ ಶ್ಲೇಷ್ಮ ಜ್ವರ ಇತ್ಯಾದಿ ದೈಹಿಕ ದುಃಖ ಮತ್ತೂ ರಾಗದ್ವೇಶ, ಅಸೂಯ ಕಾಮ ಕ್ರೋಧಾದಿ ಅರಿಷಡ್ವರ್ಗದ ಉಪಟಳಗಳು, ಬಾಹ್ಯಾಭ್ಯಂತರ ಆಧ್ಯಾತ್ಮಿಕ ದುಃಖವೆನಿಸಿರುವುವು. ರಾಜನಿಂದ, ಸರ್ಕಾರದಿಂದ, ಕಳ್ಳಕಾಕರ ಧರೋಡೆಕಾರರಿಂದ, ಮೃಗಗಳಿಂದ, ಆಗಾಗ ಏರ್ಪಡುವ ವಿವಿಧ ದುಃಖಗಳು ಆಧಿಭೌತಿಕವೆನಿಸಿವೆ. ಗ್ರಹಪೀಡೆ, ಭೂತಪ್ರೇತಗಳಿಂದ ಗುಡುಗು ಮಿಂಚು, ಸಿಡಲು,

ಭೂಕಂಪ, ಅತಿವೃಷ್ಟಿ ಇಂತಪ್ಪ ಅಕಸ್ಮಿಕ ದುರ್ದೈವೀ ಘಟನೆಗಳು ಅಧಿ ದೈವಿಕವೆಂಬ ತಾಪತ್ರಯಗಳೂ ಸಹ ಮಾನವರನ್ನು ಕಾಡಿಸಿ ಪೀಡಿಸುತ್ತಲಿವೆ. ಕಾರ್ಮಿಕ ಮಲ, ಮಾಯಾ ಮಲ ಮತ್ತೂ ಆಣವ ಮಲಗಳು ಅಂಗನನ್ನು ಅನಾದಿ ಕಾಲದಿಂದ ಬೆನ್ನಟ್ಟಿ ಕೊಂಡು ಬಂದಿವೆ. ಈ ಮೂರು ವಿಧದ ಮಲಗಳು ಕರಡಿಯು ಹಿಡಿತದಂತೆ ಬಿಗಿಯಾಗಿ ಹಿಡಿದಿವೆ. ತ್ರಿವಿಧ ತಾಪತ್ರಯಗಳೂ ಮತ್ತೂ ತ್ರಿವಿಧ ಮಲಗಳೂ ಜೀವಾತ್ಮನನ್ನು ಅನಾದಿ ಕಾಲದಿಂದ ನರಕ ಯಾತನೆಗೆ ಗುರಿಮಾಡಿವೆ. ಅಂಗನು ಈ ಉಪದ್ರವ್ಯಗಳಿಂದ ಮುಕ್ತನಾಗಬೇಕಾದರೆ—ಚಂದ್ರಶೇಖರನಲ್ಲಿ ಶರಣಾಗ ಬೇಕು.

**ನಿತ್ಯಾನಂದ ಪದೇ ನಿರಾಕೃತ । ಜಗತ್ಸಂಸಾರ ದುಃಖೋದಯೇ ॥**
**ಸಾಂಬೇ ಚಂದ್ರ ಶಿರೋಮಣೌ । ಸಮುದಯೇದ್ಭಕ್ತಿರ್ಭವಧ್ವಂಸಿನೀ ॥**
(ಸಿ. ಶಿ. ೫ ನೇ ಪರಿಚ್ಛೇದ ಮುಕ್ತಾಯೆ)

**ಓಂ ಶಾಂತಿ ಶಾಂತಿ ಶಾಂತಿಃ । ತ್ರಿರುಚ್ಚಾರಣಂ ತಾಪತ್ರಯ ಶಮನಾರ್ಥಂ । ತ್ರಿಮಲ ವಿಲಯಾರ್ಥಂ । ವೇತ್ತಿಬೋಧ್ಯಂ ।**
**ಇತಿ ಶಾಂತಿ ಮಂತ್ರಭಾಷ್ಯಂ ಸಮಾಪ್ತಂ ॥**

## ॥ ಗುರು ಕಾರುಣ್ಯ ಸ್ಥಲಂ ॥

(ಸಿ. ಶಿ. ಪರಿ ೬)

**ತತೋ ವಿವೇಕ ಸಂಪನ್ನೋ । ವಿರಾಗೀ ಶುದ್ಧ ಮಾನಸಃ ।**
**ಜಿಜ್ಞಾಸುಃ ಸರ್ವ ಸಂಸಾರ ದೋಷ ಧ್ವಂಸ ಕರಂ ಶಿವಂ ॥**
(ಶ್ಲೋ. ೧)

ನಿತ್ಯಾನಿತ್ಯ ವಸ್ತು ವಿವೇಕ ಸಂಪನ್ನ, ಶಮ ದಮಾದಿ ಸಾಧನ ಸಂಪನ್ನ ಹಾಗೂ ಅನೇಕ ಜನ್ಮಾರ್ಜಿತ ಶಿವಪೂಜಾದಿ ಸತ್ಕರ್ಮ ಮಹಿಮ್ನಾಸಂಪ್ರಾಪ್ತ ಶಿವಲಿಂಗಾನು ಸಂಧಾನ ಯೋಗದಿಂದ ಮೋಕ್ಷ ವಿಷಯಕ ಅತ್ಯುತ್ಕಟೇಚ್ಛಾ ಪ್ರಭಾವಕ್ಕೊಳಗಾದ ಅಧಿಕಾರಿ, ವಿವೇಕ ಸಂಪನ್ನ, ಶುದ್ಧಾಂತಃಕರಣವುಳ್ಳವನಾಗಿ, ಸರ್ವಸಂಸಾರ ದೋಷಗಳಿಂದ ಪೂರ್ಣ ಮುಕ್ತನಾಗಲು, ಕ್ರಿಯಾವಂತ

ಶ್ರೋತ್ರೀಯ ಬ್ರಹ್ಮನಿಷ್ಠನಾದ ಮಹಾ ಗುರುವಿನ ಬಳಿ ಸೇರಿ, ಶ್ರೀ ಗುರು ಮುಖದಿಂದ ಜ್ಯೋತಿರ್ಮಯ ಆತ್ಮಲಿಂಗದ ಸ್ವರೂಪಾನುಭವವನ್ನರಿಯಲು ಗುರುವನ್ನು ಭಕ್ತಿ ಪೂರ್ವಕ ನಮಸ್ಕರಿಸಿ, ಬದ್ಧಾಂಜಲಿ ಪುಟನಾಗಿ ಸದ್ಭಾವ ದಿಂದ ಪ್ರಾರ್ಥಿಸುತ್ತಾ, **ಭೋ ಭೋ ಗುರುದೇವ ! ಬಾಲ ರವಿ ಶಶಿ ಕೋಟಿ । ಕಾಲಾಗ್ನಿ ತೇಜನೇ । ಕಾಲಹರ ಕರ್ಮ ದುರಿತ । ಹರ ಶ್ರೀ ಮಹಾ ಗುರುವೇ । ಬಾಲೇಂದು ಧರನೇ ಕೃಪೆಯಾಗು ॥** ಎಂದು ವಿನಯ ಪೂರ್ವಕ ಸ್ತುತಿಸಿ, **ರಕ್ಷಮಾಂ ಭವ ರೋಗಿಣಂ ।** ಭವ ರೋಗಿ ಯಾದ ನನ್ನನ್ನು ರಕ್ಷಿಸೆಂದು ಶ್ರೀ ಗುರುಚರಣಂಗಳಲ್ಲಿ ಶರಣಾಗತನಾಗಬೇಕು.

## ಗುರುಕಾರುಣ್ಯ ಸ್ಥಲಂ

**ಪ್ರಸನ್ನಂ ಪರಮಾಚಾರ್ಯಂ । ಭುಕ್ತಿ ಮುಕ್ತಿ ಪ್ರದಾಯಕಂ।**
**ಪ್ರಾರ್ಥಯೇದಗ್ರತಃ । ಶಿಷ್ಯಃ ಪ್ರಾಂಜಲಿರ್ವಿನಯಾನ್ವಿತಃ ॥**

(ಸಿ. ಶಿ. ಪರಿ ೬. ಶ್ಲೋ. ೩)

ಪರಮ ವೀರಶೈವಾಚಾರ ಸಂಪನ್ನನೂ, ಕ್ರಿಯಾವಂತ ಶ್ರೋತ್ರಿಯ ಬ್ರಹ್ಮನಿಷ್ಠನೂ, ಶಿವಾದ್ವೈತ ತತ್ವಜ್ಞಾನ ನಿಷ್ಠಾಗರಿಷ್ಠನೂ, ಸತ್ಯ ಶೌಚ ಸದ್ಧರ್ಮ ಪೋಷಕ ವ್ರತಶೀಲನೂ, ನಿತ್ಯ ನಿಯಮ ಸತ್ಕರ್ಮ ವಿಧಾಯಕನೂ, ಚಿತ್ತಚಾರಿಯ ಪದ ಜಲಜಾರಾಧಕನೂ ಮತ್ತೂ ಶಾಂತ ವಿಮಲ, ಸುಸ್ವಾಂತ ಪರಮವೇದಾಂತ, ನಿಖಿಲ ನಿಗಮಾಗಮ ಕೋವಿದನಾದ ಶ್ರೀ ಮಹಾ ಗುರುವಿನ ಬಳಿ ಸೇರಿದ ಶಿಷ್ಯನು ; ಗುರು ಪ್ರಸನ್ನ ಮುಖದಿಂದ ಹರ್ಷಿತನಾಗಿರುವ ಘಳಿಗೆ ಯಲ್ಲಿ, ಬದ್ಧಾಂಜಲಿ ಪುಟನಾಗಿ ನಿಂತು, ನಮಸ್ಕರಿಸಿ, ಶಿರಬಾಗಿ ಪ್ರಾರ್ಥಿಸ ಬೇಕು. "ಭೋ ಗುರುವೇ ! ಕಲ್ಯಾಣ ಮಹಾಭಾಗ, ಶಿವಜ್ಞಾನ ಸಮುದ್ರನೇ ಆಚಾರ್ಯನೇ ವಂದಿಪೆನು. ಶಿವಜ್ಞಾನ ಭಿಕ್ಷೆಗಾಗಿ ನಿಮ್ಮಲ್ಲಿ ಪ್ರಾರ್ಥಿಸು ತ್ತೇನೆ. ಭವರೋಗಿಯಾದ ನನ್ನನ್ನು ಕೃಪೆಯಾ ರಕ್ಷಿಸ ಬೇಕೆಂದು" ಪ್ರಾರ್ಥಿಸ ಬೇಕು. ಇಂತಪ್ಪ ಜ್ಞಾನ ಬೋಧೆಗೆ,

**ಅಧಿಕಾರಿ, "ಮೇಧಾವಿ ಪುರುಷೋ ವಿದ್ವಾನ್ । ಉಹಾ ಪೋಹ**

**ವಿಚಕ್ಷಣಃ | ಅಧಿಕಾರಿ ಆತ್ಮ ವಿದ್ಯಾನಾಂ । ಉಕ್ತ ಲಕ್ಷಣ ಲಕ್ಷಿತಃ ||**

ಅಂದರೆ ಶಿಷ್ಯನು ಮೇಧಾವಿಯೂ, ವಿದ್ಯಾರ್ಜನಾಸಕ್ತನೂ, ಶಾಂತನೂ ಊಹಾಪೋಹ ವಿಚಕ್ಷಣ ಸಂಪನ್ನನೂ, ವಿನಯಾನ್ವಿತನಾಗಿರಬೇಕು. ಆಗ

**ತದ್ವಿದ್ಧಿ ಪ್ರಣಿ ಪಾತೇನ । ಪರಿಪ್ರಶ್ನೇನ ಸೇ ವ್ಯಯಾ । ಉಪ ದೇಶ್ಯಂತಿತೇ ಜ್ಞಾನಂ । ಜ್ಞಾನಿನಃ ತತ್ವದರ್ಶಿನಃ ||**

(ಗೀ. ಅ. ೪ ಶ್ಲೋ. ೩೪)

"**ಆಚಾರ್ಯ ದೇವೋ ಭವ**" ಎಂದು ನಮ್ರ ಭಾವದಿಂದ ಶಿರಬಾಗಿ ನಮಸ್ಕರಿಸಿ ; ಶಾಸ್ತ್ರಾರ್ಥಗಳನ್ನು ಆಗಾಗ ಕೇಳಿ ತಿಳಿದುಕೊಳ್ಳಬೇಕು. ಸುಮಾರು ೬ ತಿಂಗಳ ಕಾಲ ಗುರು ಕುಲಾಶ್ರಮದಲ್ಲಿದ್ದು ಕಿಂಕರಭಾವದಿಂದ ಎಲ್ಲಾ ಕೆಲಸಗಳನ್ನೂ ನಿತ್ಯವೂ, ಉತ್ಸಾಹದಿಂದ ನಿರ್ವಹಿಸಿ ವಿನಯದಿಂದಿರ ಬೇಕು. ಇಂಥ ವರ್ತನೆಯಿಂದ ಗುರುವು ಸಂಪ್ರೀತನಾಗಿ ಆ ಶಿಷ್ಯನಿಗೆ ಸರ್ವ ವಿದ್ಯೆಯನ್ನು ಧಾರೆಯೆರೆದು, ಶಿಷ್ಯನ ಉತ್ತರೋತ್ತರದ ಅಭ್ಯುದಯವನ್ನು ಹರಸುವನು. ಶ್ರೀ ರಾಮ ಲಕ್ಷ್ಮಣರು ವಸಿಷ್ಠ ಮಹರ್ಷಿಗಳ ಗುರುಕುಲ ವಾಸಿಗಳಾಗಿದ್ದಾಗ ಅವರ ಸೇವೆಯನ್ನು ಮಾಡಿ, ತಮ್ಮ ಮನದ ಅನೇಕ ಸಂದೇಹಗಳನ್ನು ಹೋಗಲಾಡಿಸಿ ಕೊಂಡರು. ಇವರ ವಿನಯಾದಿ ಸದ್ಗುಣ ಗಳಿಂದ ಸಂಪ್ರೀತರಾದ, ವಸಿಷ್ಠರು, ಜ್ಞಾನವಾಸಿಷ್ಟ ವೇದಾಂತ ಗ್ರಂಥದ ಸಾರಾಮೃತವನ್ನು ಮನಂಬುಗುವಂತೆ ಉಪದೇಶಿಸಿದರು. ಶ್ರೀ ಕೃಷ್ಣ, ಸುಧಾ ಮರು (ಕುಚೇಲ) ಶ್ರೀ ಸಾಂದೀಪನಿಮುನಿಗಳ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗ, ಒಂದು ದಿವಸ ಸೌದೆ ಹೊತ್ತು ಇಬ್ಬರು ಹಿಂದಿರುಗಿ ಬರುತ್ತಿ ರುವಾಗ ಮಳೆ ಗಾಳಿಗಳಿಗೆ ಸಿಕ್ಕಿ, ಒಂದು ಚಾವಣಿಯಲ್ಲಿ ನಿಂತು, ಸಂಜೆ ಹೊತ್ತಿಗೆ ಆಶ್ರಮವನ್ನು ಸೇರಿದರು. ಇವರು ಗುರು ಸಿಶ್ರೂಷೆ ಮಾಡಿ ಸಕಲ ವಿದ್ಯೆಗಳಲ್ಲಿ ಪಾರಂಗತರಾಗಿದ್ದರು. ಶ್ರೀ ಬಸವಣ್ಣನವರು ಶ್ರೀ ಜಾತ ವೇದ ಮುನಿಗಳ ಪಾದ ಸೇವೆ ಮಾಡುತ್ತ ಸುಮಾರು ಹತ್ತು ವರ್ಷ ಶ್ರೀ ಗುರುಗಳ ಪಾದ ಸೇವೆ, ಮತ್ತೂ ಶ್ರೀ ಕೂಡಲ ಸಂಗಮ ನಾಥನ ನಿತ್ಯ ಪೂಜಾ ದರ್ಶನ ಗಳೊಂದಿಗೆ, ಇಷ್ಟಲಿಂಗಾರಾಧನೆಯಲ್ಲಿ ಆಸಕ್ತರಾಗಿ. ಸಕಲ ನಿಗಮಾಗಮಗಳ

ತಿರುಳನ್ನು ಶ್ರೀ ಜಾತವೇದ ಮುನಿಗಳ ಅನುಗ್ರಹದಿಂದ ತಿಳಿದು ಆಚರಿಸಿ ಅನುಭವಿಯಾಗಿದ್ದರು.

ಇದೇ ರೀತಿ ಶ್ರೀ ಗುರುಕಾರುಣ್ಯ ಸ್ಥಲದಲ್ಲಿ ಹೆಜ್ಜೆಯೂರಿ, ದೀರ್ಘಕಾಲ ಅಸ್ಖಲಿತ ಬ್ರಹ್ಮಚಾರಿಗಳಾಗಿ ತ್ರಿಕರಣ ಪೂರ್ವಕ ಹರಪೂಜೆ ಗುರುಸೇವೆ ಮಾಡಿದ ಮಹನೀಯರು, ಧರ್ಮ ಕ್ಷೇತ್ರವಾದ ನಮ್ಮೀ ಭಾರತದಲ್ಲಿ ಅನೇಕ ರುಂಟು. ಆ ಮಹನೀಯರೆಲ್ಲರೂ ಪ್ರಾತಃ ಸ್ಮರಣೀಯರು.

ಗುರು ಬ್ರಹ್ಮ ಗುರು ರ್ವಿಷ್ಣುಃ ॥ ಗುರುದೇವೋ ಮಹೇಶ್ವರಃ ॥
ಗುರು ಸಾಕ್ಷಾತ್ಪರ ಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ ॥
ಗುರುದೇವೋ ಮಹಾದೇವೋ | ಗುರುದೇವಃ ಸದಾ ಶಿವಃ ॥
ಗುರು ದೇವಃ ಪರಂ ತತ್ವಂ । ತಸ್ಮೈ ಶ್ರೀ ಗುರುವೇ ನಮಃ ॥
(ಇತಿವೇದಃ) ಗುರುವೇ ಸರ್ವ ಲೋಕಾನಾಂ । ಭಿಷಜೇ ಭವ ರೋಗಿಣಾಂ । ನಿಧಯೇ ಸರ್ವ ವಿದ್ಯಾನಾಂ । ದಕ್ಷಿಣಾ ಮೂರ್ತ ಯೇ ನಮಃ ॥

## ॥ ಅಂಗಸ್ಥಲ ೪ ಗುರುಕಾರುಣ್ಯಸ್ಥಲಂ ॥

ಇತಿ ಶುದ್ಧೇ ನ ಶಿಷ್ಯೇಣ ಪ್ರಾರ್ಥಿತಃ । ಪರಮೋ ಗುರುಃ ॥
ಶಕ್ತಿ ಪಾತಂ ಸಮಾಲೋಕ್ಯದೀಕ್ಷೆಯಾ ।ಯೋಜಯೇ ದಮಂ॥
ದೀಯತೇ ಚ ಶಿವಜ್ಞಾನಂ । ಕ್ಷೀಯತೇ ಪಾಶ ಬಂಧನಂ ।
ಯಸ್ಮಾದತಃ ಸಮಾಖ್ಯಾ ತಾ । ದೀಕ್ಷೇತೀಯಂ ವಿಚಕ್ಷಣೈಃ ॥

(ಸಿ. ಶಿ. ಪರಿಚ್ಛೇದ ೬ ಶ್ಲೋ ೧೦, ೧೧)

ಯಾವ ಶಿಷ್ಯನ ಮೇಲೆ ಶಿವನ ಮತ್ತೂ ಗುರುವಿನ ಕಟಾಕ್ಷ ಪ್ರಕಾಶ ವಾಗಿದೆಯೋ, ಆತ ಇಷ್ಟಲಿಂಗ ಪೂಜಾ ವ್ರತಧಾರಿಯಾಗಿ. ಹರ ಗುರು ಜಂಗಮರಲ್ಲಿ ಭಕ್ತಿಯಿಂದ ನಡೆದು ಕೊಳ್ಳುತ್ತಾನೆ. ಸಂಸಾರದಲ್ಲಿ ಅನಾಸಕ್ತ ನಾಗಿ ಮೋಕ್ಷವನ್ನು ಬಯಸಿ, ವಿನಯ ಶೀಲನಾಗಿರ್ಪನೋ ಅವನು ಶಿವನ ಶಕ್ತಿ ಪಾತಕ್ಕೆ ಅರ್ಹನೆನಿಸಿಹನು. ಇದನ್ನರಿತ ಶ್ರೀ ಗುರು ಇವನನ್ನು ಕರುಣಾರಸ

ಭಾವದಿಂದ, ಕಾಂಬನೆಂದು, ಮೃಗೇಂದ್ರಾಗಮದಲ್ಲಿ ಉಕ್ತವಾಗಿದೆ. ಇಂತಪ್ಪ ಶುದ್ಧ ಹೃದಯದ ಶಿಷ್ಯನ ಪ್ರಾರ್ಥನೆಯನ್ನು ಲಾಲಿಸಿ ; ಶಿಷ್ಯ ಪರಿಪಕ್ವನಿರುವ ನೆಂದರಿತು, ಇವನಿಗೆ ಸುಮುಹೂರ್ತದಲ್ಲಿ ಶಿವದೀಕ್ಷೆಯನ್ನೀಯಲು ಸಂಕಲ್ಪಿಸು ವನು. ಶಿವದೀಕ್ಷೆಯೆಂಬುದು ಗೌರೀ ಶಂಕರ ಶಿಖರದಂತೆ ಧಾವಳ್ಯವಾದುದು. ಶಿಷ್ಯನ ಚಿತ್ತಾಪಹಾರವನ್ನು ತನ್ನತ್ತ ಮಾಡಿ, ಮೋಕ್ಷ ಮಾರ್ಗವನ್ನು ತೋರಿಸಿ ಕೊಡುವಾತ ಗುರು. ಶಿಷ್ಯನು ಕರ್ಪೂರದಂತೆ ಶುದ್ಧಾಂತಃಕರಣ ಗಳಿಂದ ಪರಿಶೋಭಿಸುವುದನ್ನರಿತ ಶ್ರೀ ಗುರು, ಅತನನ್ನು ಉದ್ಧರಿಸಲು ನಿಶ್ಚೈಸು ಸುವನು. ಈ ತತ್ವವರಿತ ಶಿಷ್ಯ ಗುರು ಪಾದವ ಮುಟ್ಟಿ ನಮಸ್ಕರಿಸುವನು.

**ಉರಿವ ಕೆಂಡದ ಮೇಲೆ । ತೃಣವ ನಿರಿಸಿದರೆ । ಆ ತೃಣವನ್ನು ಕೆಂಡ ನುಂಗಿತ್ತು ॥**

ಇದರಂತೆ ಮುಮುಕ್ಷುವಾದ ಶಿಷ್ಯ ತೃಣಪ್ರಾಯವಾದ ತನ್ನ ತನುವನ್ನು ಗುರುವಿನ ಶ್ರೀಪಾದ ಸ್ಪರ್ಶಿಸುವಂತಿಡಲು, ಶ್ರೀ ಗುರು ಕಟಾಕ್ಷದಿಂದ ಶಿಷ್ಯನ ತನು ಕರಣಂಗಳೆಲ್ಲಾ ಲಿಂಗವಾಯಿತ್ತು ನೋಡಾ, ದೀಕ್ಷಾತ್ರಯವೆಂದರೆ ದೇಹ ತ್ರಯಂಗಳನ್ನು ಆವರಿಸಿರುವ ಮಲತ್ರಯಂಗಳನ್ನು ನೀಗಿಸಿ ಉದ್ಧರಿಸುವ ಕಾರ್ಯ. ಇದಕ್ಕೆ ಶಿಷ್ಯನು,

**ಮೇಧಾವಿ ಪುರುಷೋ ವಿದ್ವಾನ್ । ಉಹಾ ಪೋಹ ವಿಚಕ್ಷಣಃ ॥**
**ಅಧಿಕಾರಿ ಆತ್ಮ ವಿದ್ಯಾನಾಂ । ಉಕ್ತ ಲಕ್ಷಣ ಲಕ್ಷಿತಃ ॥**

ಪುರುಷನು ಮೇಧಾವಿಯಾಗಿರಬೇಕು, ಊಹಾಪೋಹ ವಿಚಕ್ಷಣ ಸಂಪನ್ನನಾ ಗಿಯೂ ಇರಬೇಕು. ಪರಮ ವೀರಶೈವಾಚಾರ ಸಂಪನ್ನರು ಬಾಲ್ಯಾವಸ್ಥೆಯ ಎಂಟನೇ ವಯಸ್ಸಿನಲ್ಲಿ ತ್ರಿವಿಧ ದೀಕ್ಷಾ ಸಂಸ್ಕಾರವನ್ನು ಅವಶ್ಯ ನೆರವೇರಿಸ ಬೇಕು. ಶಿವದೀಕ್ಷಾ ಮುಂಖಾಂತರ ಪ್ರಾಕೃತ ಕರಣಗಳನ್ನು ಶಿವಕರಣಗಳನ್ನಾಗಿ ಪರಿವರ್ತಿಸುವ ದೈವೀ ಲೀಲೆಯಿದು.

**ದೀಯತೇ ಚ ಶಿವಜ್ಞಾನಂ । ಕ್ಷೀಯತೇ ಪಾಶ ಬಂಧನಂ ॥**

"ದೀ" ಯೆಂದರೆ ದೀಪ್ತಿಯಿಂದ ರಾರಾಜಿಸುವ ಶಿವಜ್ಞಾನವನ್ನು ಶಿಷ್ಯನ ಶುದ್ಧಾಂತಃಕರಣಗಳಲ್ಲಿ ಉದ್ದೀಪನ ಗೊಳಿಸುವ ಉಪದೇಶದಿಂದ ಶಿಷ್ಯನ ಬಹು ಜನ್ಮ ಕೃತ ಘೋರ ಪಾಪ ರಾಶಿಯನ್ನು ಭಸ್ಮಗೊಳಿಸಿ ನಿರ್ನಾಮ ಗೊಳಿಸುವ

ಪವಿತ್ರ ಕಾರ್ಯ ದೀಕ್ಷೆಯೆನಿಸಿದೆ. ದೇಹತ್ರಯಂಗಳು ಅಂದರೆ ತ್ಯಾಗಾಂಗ, ಭೋಗಾಂಗ ಮತ್ತೂ ಯೋಗಾಂಗಗಳಲ್ಲಿ ಅನಾದಿ ಕಾಲದಿಂದ ಗ್ರಸ್ತವಾಗಿರುವ ಕಾರ್ಮಿಕ ಮಲ, ಮಾಯಾಮಲ ಆಣವ ಮಲಗಳನ್ನು ನಾಶಗೊಳಿಸುವುದನ್ನು **॥ ಕ್ಷೀಯಂತೇ ಪಾಶ ಬಂಧನೈಃ ॥** ಎನ್ನಲಾಗಿದೆ. ಶುದ್ಧಾಂತಃಕರಣನಾದ ಅಧಿಕಾರಿಗೆ ವೇಧಾದೀಕ್ಷೆ, ಮಂತ್ರ ದೀಕ್ಷೆ ಮತ್ತೂ ಕ್ರಿಯಾದೀಕ್ಷೆಗಳನ್ನು ವಿಧಿವತ್ತಾಗಿ ಶ್ರೀ ಗುರು ಹಸ್ತದಿಂದ ಅನುಗ್ರಹಿಸುವವನು. ತನು ತ್ರಯಗಳನ್ನು ಗುರು ಕ್ರಮೇಣ ತಿದ್ದಿ ತೀಡಿ ಶಿವದೀಕ್ಷೆಗೆ ಅರ್ಹವಾಗುವಂತೆ ಪವಿತ್ರಗೊಳಿಸುವನು. ಯೋಗಾಂಗವೆಂಬ ಕಾರಣ ದೇಹಕ್ಕೆ,

**ಗುರೋ ರಾಲೋಕ ಮಾತ್ರೇಣ । ಹಸ್ತಮಸ್ತಕಯೋಗತಃ ।**
**ಯಃ ಶಿವತ್ವ ಸಮಾವೇಶೋ । ವೇಧಾ ದೀ ಕ್ಷೇತಿ ಸಾ ಮತಾ ॥**

ಗುರು ಶಿಷ್ಯನ ದೃಷ್ಟಿಯಲ್ಲಿ ತನ್ನ ಕೃಪಾ ದೃಷ್ಟಿಯನ್ನು ಸಮಾವೇಶಗೊಳಿಸಿ, ಅವನ ಮಸ್ತಕದ ಮೇಲೆ ಅಮೃತ ಹಸ್ತವನ್ನಿಟ್ಟು ಈ ಎರಡರ ಸಂಯೋಗದಿಂದ ಅವನ ಭ್ರೂಮಧ್ಯದಲ್ಲಿನ ಭಾವಲಿಂಗವನ್ನು ಸನ್ನಿಹಿತ ಗೊಳಿಸಿ, **॥ಪ್ರಜ್ಞಾನಂ ಬ್ರಹ್ಮ ॥** ಎಂಬ ಅಂತರಂಗದ ಅರಿವನ್ನು ಉದ್ದೀಪನಗೊಳಿಸುವುದು ವೇಧಾದೀಕ್ಷೆಯೆನಿಸಿರುತ್ತೆ.

ಸೂಕ್ಷ್ಮದೇಹ ಅಂದರೆ ಭೋಗಾಂಗಕ್ಕೆ ಅನ್ವಯಿಸಿದ,

**ಮಂತ್ರದೀಕ್ಷೇತಿ ಸಾ ಪ್ರೋಕ್ತಾ । ಮಂತ್ರ ಮಾತ್ರೋಪದೇಶಿನೀ॥**

ಅಂದರೆ ಶ್ರೀ ಗುರು ಶಿಷ್ಯನ ಬಲ ಕರ್ಣಮುಖದಿಂದ ಮನಸ್ಸಿಗೆ ಅಚ್ಚೊತ್ತುವಂತೆ ಪ್ರಣವ ಸಹಿತ ಶಿವ ಪಂಚಾಕ್ಷರ ಮಹಾಮಂತ್ರೋಪದೇಶವನ್ನು ಅನುಗ್ರಹಿಸಿ, ಹೃದಯದ ಪ್ರಾಣಲಿಂಗವನ್ನು ಸ್ವಾಯತಗೊಳಿಸಿ, ಮಂತ್ರಮಯ ದೇಹಿಯನ್ನಾಗಿ ಮಾಡುವ ವಿಧಾನ ಮಂತ್ರದೀಕ್ಷೆಯೆನಿಸಿದೆ. ಸ್ಥೂಲಶರೀರವೆಂಬ ತ್ಯಾಗಾಂಗ ದೀಕ್ಷೆಯಾದರೋ,

**ಕುಂಡಮಂಡಲಿ ಕೋಪೇತಾ । ಕ್ರಿಯಾ ದೀಕ್ಷಾ ಕ್ರಿಯೋತ್ತರಾ॥**

ಕ್ರಿಯಾ ದೀಕ್ಷೆಯನ್ನು ಶುಭ ಮಾಸ ಶುಭ ಘಳಿಗೆಯಲ್ಲಿ ಶ್ರೀ ಜ॥ ಪಂಚಾಚಾರ್ಯರ ಪುಣ್ಯ ನಾಮಂಗಳಲ್ಲಿ ಪಂಚಕಲಶಗಳನ್ನು ವಿಧಿವತ್ತಾಗಿ ಸ್ಥಾಪಿಸಿ, ಶಿಷ್ಯನ ಅಂಗದ ಮೇಲೆ ಸಂಸ್ಕೃತ ಗೊಳಿಸಿದ ಕ್ರಿಯಾ (ಇಷ್ಟ) ಲಿಂಗವನ್ನು

ಆಯತಗೊಳಿಸಿ, ಲಿಂಗಾಂಗಿಯನ್ನಾಗಿಸುವರು. ಶುಭ ಮುಹೂರ್ತದಲ್ಲಿ ಮಂಗಳ ಸ್ನಾನಾ ನಂತರ, ಶುಚಿರ್ಭೂತನಾದ ಶಿಷ್ಯನನ್ನು ಕರತಂದು ವಿಭೂತಿ ರುದ್ರಾಕ್ಷವ ಧರಿಸಿದ ವಟುವಿನಿಂದ ಆ ಸಭೆಯಲ್ಲಿ ನೆರೆದಿರುವ, ವೀರಮಾಹೇಶ್ವರ ಪ್ರಮಥರಿಗೆ, ವೀಭೂತಿ, ವೀಳ್ಯೆ ಕೊಟ್ಟು ಶರಣೆಂದ ಬಳಿಕ ಬ್ರಹ್ಮಚಾರಿಯನ್ನು ಮಂಟಪ ದೊಳಗೆ ಪೂರ್ವಾಭಿಮುಖವಾಗಿ ಕುಳಿತು ಯಥಾ ವಿಧಿ ಯಥಾ ಯೋಗಗಳಿಂದ ಶಿವ ಭಜನೆ, ಶಿವ ಧ್ಯಾನ ಮಾಡಿಸಿ, ಪಂಚಬ್ರಹ್ಮರನ್ನೂ ಪಂಚಕಲಶಗಳನ್ನೂ ವಟು ಪೂಜಿಸಿ ವಂದಿಸಿ ಬಳಿಕ, ಅ ಕಲಶೋದಕವನ್ನು ಮೂರು ಸಾರಿಸಂಪ್ರೋಕ್ಷಿಸಿ ಶಿಷ್ಯನನ್ನು ಶಿವಾಚಾರ್ಯ ಸಂಪನ್ನನಾಗೆಂದು ಹರಸಿ, ವೀಭೂತಿ, ರುದ್ರಾಕ್ಷ ಮಾಲೆಗಳಿಂದ ವಿಭೂಷಿತನಾದ ಶಿಷ್ಯನ ಬಲಗಿವಿಯಲ್ಲಿ ದೇಶಿಕೇಂದ್ರನು, ಪ್ರಣವ ಸಹಿತ ಶಿವ ಪಂಚಾಕ್ಷರೀ ಮಹಾಮಂತ್ರವನ್ನು ರಹಸ್ಯದಿಂದ ಬೋಧಿಸಿ ಆಶೀರ್ವ ದಿಸ ಬೇಕು. ಮತ್ತೂ ಯಾವ ಜ್ಜೀವವೂ ನೀನು ನೈಷ್ಠಿಕ ಬ್ರಹ್ಮಚಾರಿ ಯಾಗಿದ್ದು, ಆಚಾರವಂತನಾಗಿ ಆಚಾರ ಲಿಂಗವೇ ಆಚಾರವೆಂದರಿತಿರಬೇಕೆಂದು ತಿಳಿಸಬೇಕು. ನಿತ್ಯಾರಾಧನೆಗಾಗಿ, ನಿನ್ನ ಕರಸ್ಥಲಕ್ಕೆ ಅನುಗ್ರಹಿಸಿರುವ ಕ್ರಿಯಾ (ಇಷ್ಟ) ಲಿಂಗ ನಿನ್ನ ಹೃದಯದಲ್ಲಿ ಹುದುಗಿದ್ದ ಪರಮ ಕಳೆಯ ಹೊರತೆಗೆದು, ಮಂತ್ರಯೋಗದಿಂದ ಶಿವಲಿಂಗ ಮೂರ್ತಿಯ ಮಾಡಿ, ಕರಸ್ಥಲಕ್ಕೆ ಗುರು ಕೊಟ್ಟಿಹನೆಂದು ನಂಬಿ, ದ್ವಿಸಂಧ್ಯಾ ಕಾಲಗಳಲ್ಲಿ ಪೂಜಿಸುತ್ತಲಿರ ಬೇಕೆಂದು ಅರುಹುವನು ಗುರು, ಇಷ್ಟಲಿಂಗವಿದು ನಿನ್ನ ಸ್ವಸ್ವರೂಪವೆಂದರಿ. ಕ್ಷಣಾರ್ಧವೂ ಲಿಂಗವನ್ನು ಅಗಲಿರ ಬಾರದು. ಅಗಲಿದರೆ, ಉಸಿರಾಟವಿಲ್ಲದ ಅಮಂಗಳ ದೇಹ ದಂತಾಗುವುದು ತಿಳಿ ಅಂಗ ಸತಿ ಲಿಂಗ ಪತಿಯೆಂಬ ಭಾವ ಬಲಿತು, ಕ್ರಮೇಣ ಲಿಂಗ ಅಂಗ ಸಂಗವೇ ಲಿಂಗಾಂಗ ಸಾಮರಸ್ಯವೆಂಬ ಮಹದಂಶವನ್ನು ಗುರು ಶಿಷ್ಯನಿಗೆ ಮನಂಬುಗುವಂತೆ ಬೋಧಿಸುತ್ತಾನೆ." ವತ್ಸಾ ! ಓಂ ನಮಃ ಶಿವಾ ಯವೆಂಬ ಮಂತ್ರ ಬೀಜಾಕ್ಷರೆಗಳು ಅಂಗವೆನಿಸಿರುವುವು. ಈ ಮಹಾಮಂತ್ರಾರ್ಥ ಲಿಂಗವೆನಿಸಿದೆ. ಇಂತಪ್ಪ ಲಿಂಗಾಂಗಗಳ ಮಧುರ ಸಂಘ ಸಂಪರ್ಕ ಲಿಂಗಾಂಗ ಸಾಮರಸ್ಯವೆಂಬರು ನೋಡಾಯೆಂದರುಹಿ ಶಿಷ್ಯನನ್ನು ತನ್ನಂತೆ ಕೋವಿದನ ನ್ನಾಗಿ ಮಾಡುವನು ಶ್ರೀ ಗುರು, ದೇಶಿಕನು ಕರುಣಾಮಯಿಯಲ್ಲವಾ !. ಸವಿ ಸಕ್ಕರೆಗಳಂತೆ ಶಿವ ಶಕ್ತಿಯರು ಇದರಂತೆ ಲಿಂಗಪತಿ ತಾ ಮಹಾಸತಿಯೆಂದೆನಿಸಿದ ಲಿಂಗಾಂಗಗಳ ಅವಿನಾಭಾವ ಸಂಬಂಧ ಚಂದ್ರಕಾಂತ ಶಿಲೆಯಲ್ಲಿನ ಸಲಿಲದಂತೆ,

ಸೂರ್ಯಕಾಂತ ಶಿಲೆಯಲ್ಲಿನ ಅನಲದಂತೆ ಅನಾದಿ ಅವಿನಾಭಾವ ಸಂಬಂಧವುಳ್ಳದ್ದು. ಮತ್ತು ಬೀಜದೊಳಗಣ ಅಂಕುರದಂತೆ ಎಳ್ಳಿನೊಳಗಣ ಎಣ್ಣೆಯಂತೆ, ಹಾಲಿನೊಳಗಣ ತುಪ್ಪದಂತೆ, ಲಿಂಗರೂಪಿ ಪರಶಿವನು ನಿನ್ನೊಳಗಿಹನು. ಎಂಬುದಾಗಿ, ಕ್ರಿಯಾವಂತ ಬ್ರಹ್ಮನಿಷ್ಠಾ ಸಮಿತ್ಪಾಣಿಯಾದ ಶ್ರೀ ಗುರು ಕ್ರಿಯಾ ದೀಕ್ಷ ಕಾಲದಲ್ಲಿ, ಚತುರನಾದ ಬ್ರಹ್ಮಚಾರಿ ಶಿಷ್ಯನಿಗೆ ಮನದೆರೆದು ಬೋಧಿಸುವನು.

ಶಾಂತ ಮನಸ್ಸಿನಿಂದ ಎಲ್ಲವನ್ನೂ ಶ್ರದ್ಧಾ ಭಕ್ತಿಯಿಂದ ಶ್ರವಣ ಮಾಡಿದ ಸಚ್ಛಿಷ್ಯನು, ಪ್ರದೀಪ್ತನಾಗಿ ಎದ್ದು ನಿಂತು ಗುರುವಿನ ಅಡಿದಾವರೆಗಳಲ್ಲಿ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸಿ, ತಾನು ಗುರುವಿನ ಅಮೃತಹಸ್ತದಿಂದ ನೆರವೇರಿಸಿದ ಶಿವದೀಕ್ಷಾತ್ರಯಗಳ ಪ್ರಭಾವದಿದ ಧನ್ಯನಾದೆನೆಂದು ಹೇಳಿ, ಶ್ರೀ ಗುರು ಬೋಧೆಯಂತೆ ನೆಡೆದು ಕೊಳ್ಳುತ್ತೇನೆಂದು ಭಾಷೆಯನ್ನು ಕೊಡುವನು. ಇಂತು ಶರಣಾಗತನಾದ ಶಿಷ್ಯನನ್ನು ಪರಮಾಚಾರ್ಯನು, ಪ್ರೀತಿ ಪುರಸ್ಸರಭಾವದಿಂಪ ತನ್ನ ಕರಗಳಿಂದ ಮೇಲೆತ್ತಿ ಹೃದಯಾರ ಹರಸಿ, "ಸುಖೀ ಭವ" ಎಂದು, ಆಶೀರ್ವದಿಸುವನು. ಅಸ್ತು. ಗುರುಕಾರುಣ್ಯ ಸ್ಥಲ ಸಮಾಪ್ತಿ.

ಪ್ರಣವಾರೂಢನು ಪ್ರಣವಸ್ವರೂಪನು । ಪ್ರಣವ ಪ್ರಕೃತಿ
ಸಂಜ್ಞನು ಪ್ರಣವ । ಷಡಂಗ ಸಮರಸ ನಮ್ಮ ಕೂಡಲ
ಸಂಗಮ ದೇವನು ॥ ಪರತತ್ವ ಗೋಳಾಕಾರಂ ! ಚಿನ್ಮಯಂ
ಸದ್ವಿಲಾಸಿತಂ । ಶರಣ್ಯಂ ಸರ್ವಂಚರಾಚರಂ । ಲಿಂಗಾಕಾ
ರೇಣವರ್ತತೇ ॥

ಲೀಯತೇ ಗಮ್ಯತೇ ಯತ್ರ । ಯೇನ ಸರ್ವ ಚರಾ ಚರಂ ।
ತದೇತಲ್ಲಿಂಗಮಿತ್ಯುಕ್ತಂ । ಲಿಂಗ ತತ್ವ ಪರಾಯಣ್ಯೈಃ ॥
ಲಯಂಗಚ್ಛತಿ ಯತ್ರೈವ । ಜಗದೇತ ಚ್ಚರಾ ಚರಂ ।
ಪುನಃ ಪುನಃ ಸಮುತ್ಪತ್ತಿಂ । ತಲ್ಲಿಂಗಂ ಬ್ರಹ್ಮ ಶಾಶ್ವತಂ ॥

ಲಿಂಗಂ ಸತ್ಯಂ ನಿಷ್ಕಲಂ ಬ್ರಹ್ಮ ಸ್ವರೂಪಂ । ಧಾರ್ಯಂ
ಪೂಜ್ಯಂ ಹೃದಯೇ ಜ್ಯೋತಿರಾದ್ಯಂ ॥ ಅಂತರ್ಲಿಂಗಂ

ಜ್ಯೋತಿಷಾ ಸಂ ವಿಭಾತಂ । ಬಾಹ್ಯಲಿಂಗಂ ಹೃದಯೇ ಸನ್ನಿವಿಷ್ಟಂ ॥.

॥ ಲಿಂಗಧಾರಣ ಸ್ಥಲಂ ॥ ಅಂಗಸ್ಥಲ ೫

ಸ್ಫಾಟಿಕಂ ಶೈಲಜಂ ವಾಪಿ । ಚಂದ್ರಕಾಂತ ಮಯಂತು ವಾ । ಬಾಣಂ ವಾ । ಸೂರ್ಯ ಕಾಂತಂ ವಾ । ಲಿಂಗಮೇಕಂ ಸಮಾಹರೇತ್ ॥ ಮಂತ್ರ ಪೂತೇ ಕಲಾಂ ಶೈವೀಂ । ಯೋಜಯೇದ್ವಿಧಿನಾ ಗುರುಃ । ಶಿಷ್ಯಸ್ಯ ಪ್ರಾಣಮಾ ದಾಯ । ಲಿಂಗೇ ತತ್ರ ನಿಧಾಪಯೇತ್ ॥ ಪ್ರಾಣವ ದ್ಧಾರಣೀಯಂ । ತತ್ಪ್ರಾಣ ಲಿಂಗ ಮಿದಂ ತ ವಾ । ಕದಾ ಚಿತ್ಕುತ್ರ ಚಿದ್ವಾಪಿ । ನ ವಿಯೋ ಜಯ ದೇಹತಃ ॥ ಲಿಂಗಸ್ಯ ಧಾರಣಂ ಪುಣ್ಯಂ । ಸರ್ವ ಪಾಪ ಪ್ರಣಾಶನಂ । ಆದೃತಂ ಮುನಿಭಿಃ ಸರ್ವೈರಾಗಮಾರ್ಥ ವಿಶಾರದೈಃ ॥

(ಸಿ. ಶಿ. ಪರಿ. ೬ ಶ್ಲೋ ೨೧, ೨೫, ೨೮)

" ಸರ್ವಲಿಂಗಂ ಸ್ಥಾಪಯತಿ " ಎಂಬ ಯಜುರ್ವೇದ ಮಂತ್ರವು ಲಿಂಗಧಾರಣದನ್ನು ಬೋಧಿಸುತ್ತಲಿಹುದು. "ಲಿಂಗಾಧಾರಿ ಸದಾ ಶುಚಿಃ" ಯೆಂಬುದು ಶಾಸ್ತ್ರ ಪ್ರಸಿದ್ಧವಿದೆ.

॥ ಲಿಂಗಧಾರಣ ಮಾತ್ರೇಣ । ಶಿವತ್ವಂ ಪ್ರಾಪ್ತಿ ರೇವಹಿ ॥

ಅಂಗದ ಮೇಲೆ ಗುರುವಿತ್ತ ಲಿಂಗವನ್ನು ಧರಿಸಿರುವ ಮಾತ್ರದಲ್ಲಿ ಜೀವಾತ್ಮನಿಗೆ ಶಿವತ್ವ ಸಕಲ ಸನ್ಮಂಗಳತ್ವಾದಿಗಳು ಪ್ರಾಪ್ತಿಯಾಗುವುವು.

ಲಿಂಗಾಂಗ ಸಂಗಿನೋವತ್ಸ । ಪುನರ್ಜನ್ಮನ ವಿದ್ಯತೇ ॥

ಅಂದರೆ ಲಿಂಗಾಂಗಗಳ ಸ್ವರೂಪ ಸಾನ್ನಿಧ್ಯಗಳನ್ನು ಶ್ರೀ ಗುರುಮುಖದಿಂದ ಅರಿತು ಅಂಗಲಿಂಗಗಳ ಸಂಗ ಸಮರಸದೊಂದಿಗೆ ಸಂಗಿಯಾದಾತಂಗೆ, ಪುನರ್ಜನ್ಮವಿಲ್ಲ. ಇಂತಪ್ಪ ಮಹಾಶರಣನು,

ಏಕೇನ ಜನ್ಮನಾ ಮುಕ್ತಿಃ । ವೀರಾಣಾಂತು ಮಹೇಶ್ವರೀ ॥

ಎಂಬ ಶಿವಾಗಮೋಕ್ತಿ ಇದಕ್ಕೆ ಬಲವಾದ ಸಾಕ್ಷಿಯಾಗಿದೆ. ಅಂತಃಕರಣ ಮತ್ತೂ ಚಿತ್ತವೃತ್ತಿಗಳು ಶಿವಲಿಂಗ ತತ್ವದಲ್ಲಿ ರಮಿಸುತ್ತ ಸದಾ ಚಿತ್ತದಲ್ಲೂ ಲಿಂಗ ಸಂಪರ್ಕವನ್ನು ಸ್ವಾಯತ ಗೊಳಿಸಿ ಕೊಂಡ ಮಹಾತ್ಮನಿಗೆ ಪುನರ್ಜನ್ಮ ವಿಲ್ಲವೆಂಬ ಅಂಶವನ್ನು ಉಪನಿಷದ್ವಾಣಿ ಸಹ,

ನ ಚ ಪುನರಾವರ್ತತೇ । ನ ಚ ಪುನರಾವರ್ತತೇ ॥

ಎಂದು ಘೋಷಿಸುತ್ತಲಿದೆ. ಇತ್ಯಾದಿ ಕಾರಣಗಳಿಂದ ಇಷ್ಟಲಿಂಗವನ್ನು ಅಂಗದ ಮೇಲೆ ನಿರಂತರ ಸುಮ್ಮನೆ ಧರಿಸಿರ್ಪುದು ಅತ್ಯಧಿಕಂ ಅತ್ಯಧಿಕವೆಂದು ಪ್ರಶಂಸಿಸಲಾಗಿದೆ. ಲಿಂಗಾಂಗಿಯು ಅಂಗದ ಮೇಲೆ ಶ್ರೀ ಗುರು ಹಸ್ತದಿಂದ ಅನು ಗ್ರಹೀತವಾದ ಸ್ಫಟಿಕ ಲಿಂಗವಾಗಲಿ ಶ್ರೀಶೈಲ ಶಿವಲಿಂಗವಾಗಲಿ, ಶಶಿಕಾಂತ ಶಿಲಾಲಿಂಗವಾಗಲಿ, ಅಥವಾ ನರ್ಮದಾ ನದಿಯ ಬಾಣಲಿಂಗವನ್ನಾದರೂ, ಗುರು ವಿನ ಅಮೃತ ಹಸ್ತದಿಂದ ವಿಧಿವತ್ತಾಗಿ ಪಡೆದು ನಿತ್ಯ ದ್ವಿಸಂಧ್ಯಾರಾಧನೆಗೆ ಅರ್ಪಿಸಿ ಕೊಳ್ಳಬೇಕು. ಕರಸ್ಥಲದಲ್ಲಿ ಪೂಜಾವೇಳೆ ಅಲಂಕೃತವಾದುದು ಇಷ್ಟಲಿಂಗ. ಹೃದಯಾಂತರಾಳದ ಹೃನ್ಮಂದಿರದಲ್ಲಿ ಜ್ಯೋತಿರೂಪದಲ್ಲಿ ಪ್ರಜ್ವಲಿ ಸುವ ಲಿಂಗ ಪ್ರಾಣಲಿಂಗವೆನಿಸಿದೆ. ಭ್ರೂಮಧ್ಯ ಸ್ಥಾನದಲ್ಲಿ ಕಾಮನ ಬಿಲ್ಲಿನಂತೆ ಉಜ್ವಲವಾಗಿ ಬೆಳಗುವ ಪರಂಜ್ಯೋತಿ ಭಾವಲಿಂಗವೆನಿಸಿದೆ. ಲಿಂಗ ಸಕಲ ನಿಷ್ಕಲ ವಹುದು. ಶಿವಲಿಂಗಾರಾಧನೆಯಿಂದ, ಪಾಪಾದಿ ಮಹಾಪಾಪಗಳು ನಶಿಸಿ ಹೋಗುವುವು. ಶಿಖಾಚಕ್ರದ ನಿರವಯವ ನಿರಂಜನ ಶಿವಕಳೆಯನ್ನು ಶ್ರೀ ಗುರುವು ತನ್ನ ಶಿವಯೋಗ ಪ್ರಭಾವದಿಂದ ಹೊರತೆಗೆದು ಆಕರ್ಷಿಸಿ ಲಿಂಗದಲ್ಲಿ ನಿಕ್ಷೇಪ ಗೊಳಿಸುವನು. ಇದನ್ನು ಶಿಷ್ಯನ ಆಜ್ಞಾಚಕ್ರದಲ್ಲಿ ಭಾವಲಿಂಗ ರೂಪ ದಲ್ಲಿ ಸನ್ನಿಹಿತಗೊಳಿಸುವನು. ಭಾವಪುಷ್ಪದಿಂದ ಭಾವಲಿಂಗವನ್ನು ನಿತ್ಯಾರಾಧ ನೆಗೆ ಗುರುವು ಅಣಿ ಮಾಡಿ ಕೊಡುವನು. ಈ ಲಿಂಗದ ಚಿಚ್ಚೈತನ್ಯವನ್ನು ಎದೆಯ ಹೃನ್ಮಂದಿರದಲ್ಲಿನ ಪ್ರಾಣಲಿಂಗವಾಗಿಸಿ ಸ್ವಾಯತಗೊಳಿಸಿ ಧ್ಯಾನಾನು ಸಂಧಾನಕ್ಕೆ ನಿತ್ಯ ಆರಾಧಿಸಲು ಸಿದ್ಧ ಗೊಳಿಸಿ ಕೊಡುವನು ಮಹಾಗುರು. ಕರುಣಾಮೂರ್ತಿ ಶ್ರೀಮದಾಚಾರ್ಯನು ಪ್ರಾಣಲಿಂಗದ ಚಿತ್ಕಳೆಯನ್ನು ಶಿಷ್ಯನ ಮನಕ್ಕೆ ವೇದಿಸಿ ಪ್ರದೀಪ್ತ ಗೊಳಿಸಿ ಅಲ್ಲಿಂದ ಶಿಷ್ಯನ ಕರಪೀಠದಲ್ಲಿ ಕ್ರಿಯಾ ಲಿಂಗವಾಗಿ ಆಯತಗೊಳಿಸಿ ನಿತ್ಯ ಪೂಜೆಗೆ ಅಣಿ ಮಾಡಿ ಕೊಡುವನು. ಲಿಂಗ

ಧಾರಣ ನಿತ್ಯಾರಾಧನ ಪಾದೋದಕ, ಪ್ರಸಾದಗಳಿಂದ ಲಿಂಗಾಂಗಿ ಕ್ರಮೇಣ ಶುದ್ಧಾಂತಃಕರಣಗಳುಳ್ಳ ಶಿವಯೋಗಿಯಾಗುವನು.

**"ಲಿಂಗಧಾರಣ ಮಾತ್ರೇಣ ಶಿವತ್ವ ಪ್ರಾಪ್ತಿ ರೇವಹಿ"** ಇಷ್ಟಲಿಂಗ ಧಾರಣದಿಂದ ಶಿವತ್ವವು ಪ್ರಾಪ್ತಿಯಾಗುತ್ತೆ. ಸರ್ವಮಂಗಳವುಂಟಾಗುತ್ತೆ. ನುಡಿ ನಡೆ ಮನಸ್ಸು, ಭಾವಗಳು ಶುದ್ಧವಾಗುವುವು. ಅರಿವು ಶಿವಾನುಭವಗಳೂ, ಭುಕ್ತಿ, ಭಕ್ತಿ, ಮುಕ್ತಿಗಳು ಕೈಗೂಡುವುವು. ಸರ್ವಾನಿಷ್ಟಗಳು ನಶಿಸುವುವು. **॥ ಲಿಂಗಂತು ಶಿವಯೋರ್ದೇಹಃ ॥** ಲಿಂಗವೆಂದರೆ ಶಿವನ ಕಾಣುವ ಮಂಗಳ ದೇಹ ಪೂಜ್ಯವೆನಿಸಿಹುದು. ಇಂತಪ್ಪ ಶಿವಲಿಂಗ ಭಕ್ತನ ಸ್ಥಿರಚಿತ್ತದಲ್ಲಿ ಅಚ್ಚೊತ್ತಿದಂತೆ ಪ್ರತಿಫಲಿಸಿ ನಿತ್ಯ ಪೂಜಾರಾಧನೆಗೆ ಅಳವಡಿಸಿ ಕೊಂಡರೆ, ಬಹು ಜನ್ಮ ಪೂರ್ವಕೃತ ಘೋರಪಾತಕ ರಾಶಿ ನಶಿಸಿ ಕಣ್ಮರೆಯಾಗುವುದು. ತ್ಯಾಗಾಂಗ ಭೋಗಾಂಗ ಯೋಗಾಂಗಗಳೆಂಬ ದೇಹತ್ರಯಂಗಳಲ್ಲಿ ಇಷ್ಟಲಿಂಗ, ಪ್ರಾಣಲಿಂಗ ಮತ್ತೂ ಭಾವಲಿಂಗಗಳೆಂಬ ಲಿಂಗತ್ರಯಂಗಳನ್ನು ಧರಿಸಿ, ಪೂಜಿಸಿ, ಧ್ಯಾನಿಸುವುದರಿಂದ, ಪೂಜಕನು ಬಾಹ್ಯಾಭ್ಯಂತರಗಳಲ್ಲೂ ಶುಚಿರ್ಭೂತನಾಗಿ ಕ್ರಮೇಣ ತಾಪತ್ರಯಗಳಿಂದಲೂ, ಮಲತ್ರಯಗಳಿಂದಲೂ ಮುಕ್ತನಾಗಿ ಮುಮುಕ್ಷುವೆನಿಸುವನು. **"ಲಿ"** ಯೆಂದರೆ, ಚರಾಚರವಾದೀ ಜಗತ್ತನ್ನು ಗರ್ಭೀಕರಿಸುವ ಮಹಾಶಕ್ತಿ **"ಗ"** ಯೆಂದರೆ ಅಖಂಡವಾದೀ ಜಗತ್ತನ್ನು ಕಾಣುವಂತೆ ಸದಾಗಮನಾಗಮನ ಕರ್ತೃತ್ವವುಳ್ಳದೆಂದೂ, **"ಂ"** ಪೂಜ್ಯವಾದೀ ಬಿಂದು, ಚಿನ್ಮಯ ಚಿದ್ಬೆಳಗುವೆನಿಸಿರಲು ಈ ತ್ರಯಂಗಳ ಕೂಟವೇ "ಲಿಂಗ" ವೆನಿಸಿರುವುದು.

**ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣ ರೂಪಿಣಿ ॥**

ಇಷ್ಟಲಿಂಗವು ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡಾ ದ್ವಿತೀಯವೆನಿಸಿದೆ. ಶಾಂಭವೀ ಶಕ್ತಿ ಲಿಂಗದ ಮಹಾಪ್ರಾಣವೆನಿಸಿದೆ.

**ಲೀಯತೇ ಗಮ್ಯತೇ ಯತ್ರ । ಏನ ಸರ್ವಂ ಚರಾ ಚರಂ ।**
**ತದೇತಲ್ಲಿಂಗ ಮಿತ್ಯುಕ್ತಂ । ಲಿಂಗತತ್ವ ಪರಾಯಣೈಃ ॥**
**ಲಯಂಗಚ್ಛತಿಯತ್ರೈವ ಜಗದೇತ ಚರಾ ಚರಂ ।**
**ಪುನಃ ಪುನಃ ಸಮುತ್ಪತ್ತಿಂ । ತಲ್ಲಿಂಗಂ ಬ್ರಹ್ಮ ಶಾಶ್ವತಂ ॥**

**ತಸ್ಮಾಲ್ಲಿಂಗಮಿತಿ ಖ್ಯಾತಂ । ಸತ್ತಾನಂದ ಚಿದಾತ್ಮಕಂ ।**

**ಬೃಹತ್ವಾದ್ಬೃಂಹಣ ತ್ವಾಚ್ಚ । ಬ್ರಹ್ಮ ಶಬ್ದಾಭಿ ಧೇಯಕಂ ॥**

ಇತ್ಯಾದಿ ವೇದಾಗಮೋಪ ನಿಷದಾದಿಗಳ ಆಧಾರಗಳಿಂದ ಶ್ರೀ ಗುರುಹಸ್ತ ದಿಂದ ಅನುಗ್ರಹೀತವಾದ ಲಿಂಗ ಪರಶಿವ ಬ್ರಹ್ಮವೆನಿಸಿದೆ. ಲಿಂಗಧಾರಣ ಲಿಂಗ ಪೂಜೆ, ಲಿಂಗಾನು ಸಂಧಾನಗಳು ಜೀವಾತ್ಮನನ್ನು ಬದುಕಿರುವಾಗಲೇ ಅಮರ ನನ್ನಾಗಿಸುವ ಶಕ್ತಿಯುಳ್ಳ ಸಾಧನೆಗಳು ಇದರಿಂದಾಗಿ,

**ನ ಹಿ ವೀರಶೈವ ಸದೃಶ ಮತಮಸ್ತಿ ಜಗತ್ರಯೇ ।ಸರ್ವ ಭೋಗ ಪ್ರದಂ ಪುಣ್ಯಂ । ಶಿವ ಸಾಯುಜ್ಯ ದಾಯಕಂ ॥.**

ಎಂದು ಉಗ್ಗಡಿಸಿದೆ ಪಾರಮೇಶ್ವರ ಶಿವಾಗಮ. ನಿತ್ಯ ದ್ವಿಸಂಧ್ಯಾ ಕಾಲಗಳಲ್ಲಿ ಇಷ್ಟಲಿಂಗವನ್ನು ಕರಕಮಲದಲ್ಲಿರಿಸಿ ಪೂಜಿಸುವುದು ಸರ್ವಶ್ರೇಷ್ಠ ವೆನಿಸಿದೆ,

**ಕರಾಬ್ಜ ಪೀಠೇ ವಿನ್ಯಸ್ಯ । ತಧ್ಯಾನಾಸಕ್ತ ಮಾನಸಃ । ಲಿಂಗಾಂಗಿ ಸಂಗಿನೋವತ್ಸ । ಪುನರ್ಜನ್ಮ ನ ವಿದ್ಯತೇ ॥**

ಇಂತಪ್ಪ ಪೂಜಾ ವಿಧಾನದಿಂದ, ಅಂಗನು ಜನನ ಮರಣ ರೂಪ ಘೋರ ವ್ಯಾಧಿಯಿಂದ ನಿವೃತ್ತನಾಗಿ ಇದೇ ಜನ್ಮದಲ್ಲಿ ಜೀವಂತ ಕಾಲದಲ್ಲೇ ಅಮೃ ತತ್ವವನ್ನು ಹೊಂದುವನು.

**ನ ಚ ಪುನರಾವರ್ತ ತೇ । ನ ಚ ಪುನರಾ ವರ್ತ ತೇ ॥**

ಎಂದು ಉಪನಿಷತ್ತುಗಳು ಇದನ್ನೇ ಸಾರುತ್ತಲಿವೆ.

ಅನಂತ ಕೋಟಿ ಜನ್ಮಗಳಲ್ಲಿ ಮಾಡಿದ ಪುಣ್ಯ ವಿಶೇಷದಿಂದ ಜೀವಾತ್ಮ ವೀರಶೈವನಾಗಿ ಹುಟ್ಟುವನು. ಆದರೂ ಮಾನವ ಜನ್ಮ ನೀರ್ಗುಳ್ಳೆಯಂತೆ ಅಸ್ಥಿರ, ಕ್ಷಣಭಂಗುರವಾದ್ದರಿಂದ, **"ಯಮಸ್ಯ ಕರುಣಂ ನಾಸ್ತಿ"** ಯಮನಿಗೆ ಕರುಣೆಯೆಂಬುದಿಲ್ಲವಾದ್ದರಿಂದ ಎಚ್ಚೆತ್ತ ಮಾನವನು ಲಿಂಗಧಾರಣ ಇಷ್ಟಲಿಂಗ ಪೂಜಾದಿಗಳನ್ನು ಕ್ರಮವರಿತು ಯಥಾಶಕ್ತಿ ಅನಧಾನ ಭಕ್ತಿಯಿಂದ ತಪ್ಪದೆ ಮಾಡುತ್ತಲಿರ ಬೇಕು. ಈ ವಿಷಯವನ್ನು ಶಿವನು ಶಿವೆಗೆ ಅನೇಕ ಶಿವಾಗಮ ಗಳಲ್ಲಿ ಶ್ರಾವ್ಯವಾಗಿ ಬೋಧಿಸಿರುವನು.

**ಧಾರಯೇ ದ್ಯಸ್ತು ಹಸ್ತೇನ । ಲಿಂಗಾಕಾರಂ ಶಿವಂ ಸದಾ ।**
**ತಸ್ಯ ಹಸ್ತ ಸ್ಥಿತಂ ವಿದ್ಧಿ । ಮತ್ಪದಂ ಸಂಪದಾಂ ಪದಂ ॥**

ಅಂದರೆ ಯಾವಾತನು ಕರಕಮಲದಲ್ಲಿಟ್ಟು ಇಷ್ಟಲಿಂಗವನ್ನು ಭಕ್ತಿಯಿಂದ ಪೂಜಿಸುವನೋ ಅವನ ಹಸ್ತದಲ್ಲಿ ಶೈವೀ ಸಂಪತ್ತು ಉಕ್ಕೇರುವುದು. ನಿರ್ಭಾಗ್ಯನಾದ ಯಾವಾತನು ಹುಟ್ಟುತ್ತಲೇ ಶ್ರೀಗುರುವಿನ ಹಸ್ತದಿಂದ ಆದ ಲಿಂಗಧಾರಣೆಯನ್ನು ದೂರೀಕರಿಸಿ ಭವಿಯಾಗಿ ಅಲೆದಾಡುವನೋ, ಆತ ಅಂತ್ಯದಲ್ಲಿ ಪಶ್ವಾದಿ ಮೃಗಜನ್ಮಗಳಲ್ಲಿ ಹುಟ್ಟಿ ಸಾಯುತ್ತ ಕೋಟಿ ಕ್ಷುದ್ರ ಜನ್ಮಗಳಲ್ಲಿ ತೊಳಲಿ ಬಳಲಬೇಕಾಗುತ್ತೆ.

**ಲಿಂಗಸ್ಯ ಧಾರಣಾ ಯಸ್ಯ । ಸ್ಥೂಲ ದೇಹೇ ನ ವಿದ್ಯತೇ ॥**

ಯಾರ, ದೇಹದ ಮೇಲೆ ಇಷ್ಟಲಿಂಗಧಾರಣೆ ಸದಾ ಇರುವುದಿಲ್ಲವೋ,

**ತದ್ದೇಹಂ ನಿಷ್ಫಲಂ ಜ್ಞೇಯಂ । ಜೀವತ್ಯಕ್ತಕಲೇ ವರಂ ॥**

ಆ ದೇಹ, ಮೃತ ದೇಹಕ್ಕೆ ಸಮಾನವೆನಿಸಿ, ಅಮಂಗಳ, ಅಶುಭ, ಅಪ್ರಶಸ್ತವೆನಿಸಿದೆ. ಆತ ಎಷ್ಟೇ ವಿದ್ಯಾವಂತನಾಗಿರಲಿ, ಶ್ರೀಮಂತನಾಗಿರಲಿ, ಅಧಿಕಾರ ಸ್ಥಾನದಲ್ಲಿ ಪ್ರಬಲನಾಗಿರಲಿ, ಅಂಗದಲ್ಲಿ ಲಿಂಗ ವಿಹೀನನಾದ ಮನುಷ್ಯ, ಸತ್ಯ ಧರ್ಮಗಳಿಗೆ ದೂರ, ನಿಂದ್ಯನಿರುವನು. ಆಡಿನ ಕೊರಳಲ್ಲಿರುವ ಎರಡು ನೇತಾಡುವ ಮೊಲೆಗಳಂತೆ, ಅಪ್ರಯೋಜಕನೆನಿಸಿರುವನು. ಆದ್ದರಿಂದ ಮನುಷ್ಯನು ಎಚ್ಚೆತ್ತು, ತಕ್ಷಣ ತನ್ನ ಆತ್ಮ ಉದ್ಧಾರಕ್ಕಾಗಿ, ಶ್ರೇಯಸ್ಸಿಗಾಗಿ, ಮೋಕ್ಷಾರ್ಥ ಇಂದೇ ಈಗಲೇ,

**ತಸ್ಮಾದ್ಧಾರಣಂ ಪ್ರೋಕ್ತಂ ಯಾವಜ್ಜೀವಾಗ್ನಿ ಹೋತ್ರವತ್ ॥**

ತ್ರಿವಿಧ ಅಗ್ನಿ ಹೊತ್ರ ವ್ರಥಧಾರಿಗಳು ಯಾವಜ್ಜೀವವೂ ಆ ವ್ರತವನ್ನು ಶ್ರದ್ಧಾಪೂರ್ವಕ ನೆರವೇರಿಸುತ್ತಲಿರುವಂತೆ, ಲಿಂಗಾಂಗಿ ತನ್ನ ದೇಹದ ಮೇಲೆ ಲಿಂಗವನ್ನು ಅಗಲದೆ ಸದಾಲಿಂಗಧಾರಣ, ಪೂಜಾವ್ರತವನ್ನು ಉಸಿರಿನಂತೆ ನೆರವೇರಿಸುತ್ತಲಿರಬೇಕು.

**ಯಥಾ ಸ್ಮಶಾನಗಂ ಕಾಷ್ಠ । ಮನರ್ಹಂ ಸರ್ವ ಕರ್ಮಸು ।**
**ತಥಾ ಲಿಂಗ ವಿಹೀ ನಸ್ತು । ಸರ್ವ ಕರ್ಮ ಬಹಿಷ್ಕೃತಃ ॥**

ಸ್ಮಶಾನದಲ್ಲಿ ಬಿದ್ದಿರುವ ಹೆಣದ ಮಂಟಪದ ಕಟ್ಟಿಗೆ ಬೊಂಬುಗಳನ್ನು ಯಾರೂ ಮನೆಗೆ ತರದೆ, ತಿರಸ್ಕೃತವಾಗಿರುವುವೋ, ಅದರಂತೆ ದೇಹದಲ್ಲಿ ಲಿಂಗ ಧಾರಣೆಯಿಲ್ಲದ ಅಲಿಂಗಿ ಮನುಷ್ಯ ಮನೆಯ ಮಂಗಳ ಕಾರ್ಯಗಳಲ್ಲಿ ಭಾಗವಹಿಸಲು ಅನರ್ಹನಿರುವನೆಂದು ಶಿವಾಗಮಗಳು ಎಚ್ಚರಿಸಿವೆ.

ಉತ್ತಿಷ್ಠತ ಉತ್ತಿಷ್ಠತ । ಜಾಗ್ರತ ಜಾಗ್ರತ । ಪ್ರಾಪ್ಯವರಾನ್ನಿಭೋಧತಾ ॥

ಓಂ ನಮೋ ಲಿಂಗರೂಪಾಯ । ಜಗಜ್ಜನ್ಮಾದಿ ಹೇತವೇ ।
ನಿಗಮಾಗಮ ವೇದ್ಯಾಯ । ಭಕ್ತಿಸಿದ್ಧಿ ಪ್ರದಾಯಿನೇ ॥
ದಿಕ್ಕಾಲಾದ್ಯಾನವಚ್ಛಿನ್ನಾನಂತ ಚಿನ್ಮಾತ್ರಮೂರ್ತಯೇ ।
ಸ್ವಾನುಭೂತ್ಯೇಕಮಾನಾಯ। ನಮಃ ಶಾಂತಾಯತೇಜಸೇ॥
ಶ್ರೀಮಚ್ಛಾಂಬವ ಭಕ್ತಿಯೋಗ। ವಿಲಸನ್ನಿರ್ವಾಣನಿತ್ಯೋತ್ಸವ।
ಪ್ರೇಮಾನಂದ ರಸಾಬ್ಧಿ ವರ್ಧನ । ಸದಾಚಾರ ಕ್ರಿಯಾಕೌಶಲಾ।
ರಾಮೋದ್ದಾಮಗುಣ ಪ್ರಭೂತ । ಮಹದೈಶ್ವರ್ಯಾ ಸುಭೂತಿಪ್ರಭಾ । ಧಾಮಂ ತತ್ಪರಮಂ ಪದಂ ಗುರು । ಪದಂ ವಂದೇ ಶಿವಾವಲ್ಲಭಾ ॥

## ಭಸ್ಮಧಾರಣ ಸ್ಥಲಂ (ಭ. ಅಂಗಸ್ಥಲ ೬)

(ಸಿ. ಶಿ. ಪರಿ.೭.)

ಭಸ್ಮ ಧಾರಣ ಸಂಯುಕ್ತಃ । ಪವಿತ್ರೋ ನಿಯತಾಶಯಃ ।
ಶಿವಾಭಿಧಾನಂ ಯತ್ಪ್ರೋಕ್ತಂ । ಭಾಸನಾದ್ಭಸಿತಂ ತಥಾ ॥
ಮಹಾಭಸ್ಮೇತಿ ಸಂಚಿಂತ್ಯ । ಮಹಾದೇವಂ ಪ್ರಭಾಮಯಂ ।
ವರ್ತಂತೇ ಯೇ ಮಹಾಭಾಗಾ । ಮುಖ್ಯಾಸ್ತೇ ಭಸ್ಮಧಾರಿಣಃ॥
(ಸಿ. ಶಿ. ಪರಿ. ೭. ಶ್ಲೋ ೧. ೨.)

"ಶಿವನ ಮೈ ಬೆಳಗು, ತಾನಾದ ಭಸಿತವನು" ಎಂದು ಶ್ರೀ ನಿಜ ಗುಣ ಶಿವಯೋಗಿಗಳು ಭಸಿತದ ಮಹಿಮೆಯನ್ನು ಮುಕ್ತಕಂಠದಿಂದ ಸ್ತುತಿಸಿ.

ರುವರು. ಭಸ್ಮವಿದ್ದೆಡೆ ಶಿವನಿರುವನೆಂದು, ಭಸ್ಮಜ್ಯೋತಿಯನ್ನು, ಭಕ್ತ್ಯಾ ಧರಿಸಿ ಭದ್ರಪಡಿಸಬೇಕು. ಪರುಷ ಮುಟ್ಟಿದ ಕಬ್ಬಿಣ ಬಂಗಾರವಾಗುವಂತೆ, ಜ್ಯೋತಿ ಸ್ಪರ್ಶಿಸಿದ ಕರ್ಪೂರ ಜ್ಯೋತಿಯಾಗಿ ಬೆಳಗುವಂತೆ. ಭಸಿತದಿಂ ವಿಭೂಷಿತವಾದ ಅಂಗ ಲಿಂಗಮಯವಾಗಿ ಬೆಳಗುವುದು. ತ್ರಿರೇಖೆಗಳಿಂ ರಾಜಿಸುವ ತ್ರಿಪುಂಡ್ರವನ್ನು ಯಾರು ಹಣೆಯಲ್ಲಿ "**ಶಿವಶಿವ**" ಯೆಂಬ ಮಂತ್ರವನ್ನು ಜಪಿಸುತ್ತಾ ಧರಿಸುವರೋ, ಅಂಥ ಶಿವ ಭಕ್ತರು, ಶಿವಶರಣರು "**ಅತೀವ ಮೇ ಪ್ರಿಯಃ**" ತನಗೆ ಅತಿ ಪ್ರಿಯರೆಂದು ಶಿವನು ಶಿವೆಗೆ ಅರುಹಿರುವನು. ಶಿವಾಗಮಗಳು "**ಧಿಕ್ಫಾಲ ರಹಿತಂ ಭಸ್ಮಂ। ಧಿ ಗ್ರಾಮ ಮಶಿವಾಲಯಂ**" ಅಂದರೆ, ಯಾರ ಹಣೆಯಲ್ಲಿ ಸದಾ ಪ್ರಕಾಶಮಯ ವಿಭೂತಿ ಇರುವುದಿಲ್ಲವೋ ಆದಕ್ಕೆ ಧಿಕ್ಕಾರ ವಿರಲೆಂದು ಎಚ್ಚರಿಸಿವೆ.

ಚಂದ್ರಜ್ಞಾನಾಗಮದಲ್ಲಿ "**ಭಸ್ಮಜ್ಯೋತಿಸ್ಸಮಾಖ್ಯಾ। ತಮುಪಸ್ಯಂ ತಸ್ಯ ಧಾರಣಾತ್। ಸಂಸಾರ ಸಾಗರಂ ತೀರ್ತ್ವಾನ್। ಕೈವಲ್ಯ ಫಲಮಶ್ನುತೇ॥ ಭಸ್ಮೇದಂ ಶಾಂಭವಂ ಜ್ಯೋತೀಸ್ತ ಧ್ಯಾನಾ ಧ್ಯಾತ ಈಶ್ವರಃ। ಭಸ್ಮ ಸಂದರ್ಶನಾ ದೇವಾ। ಶಿವದರ್ಶನ ಮಶ್ನುತೇ॥**"

ಅಂದರೆ ಸೂರ್ಯದರ್ಶನ ಮಾತ್ರೇಣ, ಜಗವ ಕವಿದಿರುವ ಕತ್ತಲು ಕಣ್ಮರೆಯಾಗುವಂತೆ, ನಿತ್ಯ ಭಸ್ಮಸ್ನಾನ ಭಸ್ಮ ಧಾರಣೆಗಳಿಂದ ಸಮಸ್ತ ಪಾಪಕೋಟಿಗಳು ನಶಿಸಿ ಕಣ್ಮರೆಯಾಗುವುವು. ವಿಭೂತಿ ಧಾರಣೆಯಿಂದ ಸಂಸಾರ ರೋಗ ದೂರವಾಗುವುದು. ಶಿವನ ಕಟಾಕ್ಷಕ್ಕೆ ಪಾತ್ರನಾಗುವನು. ಎಲ್ಲಾ ಕಾರ್ಯಗಳೂ ಸಿದ್ಧಿಸಿ ಐಶ್ವರ್ಯವಂತನಾಗುವನು. ತಾಪತ್ರಯಗಳಿಂದ ದೂರಾಗುವನು. ಈ ಕಾರಣಗಳಿಂದ,

"**ದಾರಣೀಯಂ ಸಮಸ್ತಾನಾಂ। ಶೈವ ವೀರಶೈವಾನಾಂ। ವಿಶೇಷತಃ**"

ಎಲ್ಲಾ ಶೈವ ವೀರಶೈವರು ಅವಶ್ಯ ಅಂಗದಲ್ಲಿ ಪರಮ ಪವಿತ್ರವಾದ ವಿಭೂತಿಯನ್ನು ಧರಿಸಿರಬೇಕು, ಹೀಗೆ ವಿಭೂತಿಯಿಂದ ಶೋಭಿತರಾದವರನ್ನು ಯಮನು ಮುಟ್ಟನು. ಸರ್ವ ದುಃಖ ನಿವೃತ್ತಿಯಾಗಿ, ಪರಮಾನಂದ ಪ್ರಾಪ್ತಿಯಾಗುವುದು. ಮನಸ್ಸಿನಂತೆ ಮಹಾದೇವ ಎಂಬಂತೆ ಎಲ್ಲವೂ ಶುಭಕರವಾಗುವುವು.

**ಶ್ರೀಕರಂಚ ಪವಿತ್ರಂಚ । ಶೋಕ ರೋಗ ನಿವಾರಣಂ ಶ್ರೀಕರಂ**
**ಪುಣ್ಯಂ ಭಸ್ಮಂ ತ್ರೈಲೋಕ್ಯಪಾವನಂ ॥**
**ವಿಭೂತಿರ್ಭಸಿತಂ ಭಸ್ಮ । ಕ್ಷಾರಂ, ರಕ್ಷೇತಿ ಭಸ್ಮನಃ ।**
**ಏತಾನಿ ಪಂಚನಾಮಾನಿ । ಹೇತುಭಿಃ ಪಂಚಭಿರ್ಭೃಶಂ ॥**

(ಶ್ಲೋ॥ ೪)

ಭಸ್ಮ ಇತ್ತೆರನಾಗಿದೆ. ನಿರುಪಾಧಿಕ ಮತ್ತೂ ಸೋಪಾಧಿಕ ನಿರುಪಾಧಿಕ ವನ್ನು ಜ್ಞಾನ ಭಸ್ಮವೆಂದೂ ಕರೆಯಲಾಗಿದೆ. ಮಹಾದೇವನ ಪರಂಜ್ಯೋತಿ ಪ್ರಭೆ ನಿರುಪಾಧಿಕ ಭಸ್ಮವೆನಿಸಿದೆ. ಶಿವನ ಚಿನ್ಮಯ ಚಿಲ್ಲಿಂಗ ಹಾಗೂ ಶರಣನ ಚಿದಂಗ ನಿರುಪಾಧಿಕ ಭಸ್ಮವೆನಿಸಿವೆ.

"ಭಾಸನಾದ್ಭಸಿತಂ" ಶ್ರೀ ಜ॥ ರೇಣುಕಾಚಾರ್ಯರು ಭಸ್ಮವನ್ನು ಚಿಜ್ಯೋತಿಸ್ವರೂಪವೆಂದೂ, ಇದು ಶಿವಾಗ್ನಿ ಜನ್ಯವಾಗಿ ಪರಂಜ್ಯೋತಿಯೆಂದೂ ಕರೆದಿರುವರು. ಅಂತರಂಗವನ್ನು ಸ್ವಯಂ ಬೆಳಗುವಲ್ಲಿ ಅಪ್ರಮೇಯ ಭಸಿತ ನಿರುಪಾಧಿಕ ಭಸ್ಮವೆಂದು ಪ್ರಸಿದ್ಧವಿರುವುದು. ಸೋಪಾಧಿಕ ಭಸ್ಮವನ್ನು ಕ್ರಿಯಾಭಸ್ಮವೆನ್ನುವರು.

ಇಂತಪ್ಪ ದೇದೀಪ್ಯಮಾನವಾದ ಚಿಜ್ಯೋತಿ ಭಸ್ಮ ಬಹಿರ್ಮುಖವಾದಾಗ ಅದೇ ಸೋಪಾಧಿಕ ಭಸ್ಮವೆನಿಸುವುದು. ಶಿವಾಗಮಗಳ ಮಂತ್ರನ್ಯಾಸಗಳಿಂದ ಅಯಿದು ತೆರನಾಗಿರುವುದು. ಮೇಲಿನ ಶ್ಲೋಕದಲ್ಲಿ ಕಂಡಂತೆ ವಿಭೂತಿ, ಭಸಿತ, ಭಸ್ಮ ಕ್ಷಾರ ಮತ್ತೂ ರಕ್ಷಾ. ವಿಭೂತಿ ಮಹಿಮೆ ಬಹು ವಿಸ್ತಾರವಾದುದು. "ವಿ" ಎಂದರೆ, ಅವಿದ್ಯೆಯನ್ನು ವಿಚ್ಛೇದನಗೊಳಿಸಿ ಹೃನ್ಮಂದಿರದ ಚಿಜ್ಯೋತಿ ಯನ್ನು ಉದ್ದೀಪನಗೊಳಿಸುವ ಚಿನ್ಮಯಸ್ವರೂಪವಿಭೂತಿ, ಅಷ್ಟೈಶ್ವರ್ಯ ಸಂಪದ್ಯುಕ್ತ ಶಿವಜ್ಞಾನ ಭಂಡಾರವೆಂದು ತಿಳಿಯ ಬೇಕು.

ನಮ್ಮ ಅಂತಃಕರಣವನ್ನು ಧ್ಯಾವಳ್ಯವಾಗಿಸುವುದು ಭಸಿತ. ಅನೇಕ ಜನ್ಮಗಳಲ್ಲೆಸಗಿದ ಪಾಪರಾಶಿಯನ್ನು ಸುಟ್ಟುರಿಪುದು ಭಸ್ಮ ಆಧ್ಯಾತ್ಮಿಕಾದಿ ತಾಪತ್ರಯಗಳನ್ನು ನೀಗಿಸುವುದು ಕ್ಷಾರ, ಸಕಲ ವಿಧ ದುಷ್ಟ ಚರ್ಯೆಗಳ ಉಪದ್ರವಗಳಿಂದ ರಕ್ಷಿಸುವುದು ರಕ್ಷ.

**ವಿಭೂತಿ ರ್ಭೂತಿ ಹೇತುತ್ವಾ । ದ್ಭಸಿತಂ ತತ್ತ್ವ ಭಾಸನಾತ್ ।**
**ಪಾಪಾನಾಂ ಭರ್ತ್ಸನಾದ್ಭಸ್ಮ ।ಕ್ಷಾರಣಾತ್ ಕ್ಷಾರಮಾಪದಾಂ॥**

**ರಕ್ಷಣಾತ್ಸರ್ವಭೂತೇಭ್ಯೋ । ರಕ್ಷೇತಿ ಪರಿಗೀಯತೇ ॥**

ಇಂತಪ್ಪ ರಕ್ಷಾಕವಚದಿಂದ ನಮ್ಮನ್ನು ಭಸ್ಮಧಾರಣ ಸದಾ ರಕ್ಷಿಸುವುದು.

**ಭೂತಿರ್ಭೂತಿಕರೀ ಪವಿತ್ರ ಜನನೀ ಪಾಪೌಘವಿಧ್ವಂಸಿನೀ ।**
**ಸರ್ವೋಪದ್ರನಾಶಿನೀ । ಶುಭಕರೀ ಶೋಕಂಚ ವಿಚ್ಛೇದಿನೀ ।**
**ಭೂತಪ್ರೇತ ಪಿಶಾಚ ರಾಕ್ಷಸಹರೀ । ಇಷ್ಟಾರ್ಥಸಂಪತ್ಕರೀ ।**
**ತೇಜೋರಾಜ್ಯ ವಿಶೇಷ ಮೋಕ್ಷ ಫಲದಾ । ಭೂತಿ ಸದಾಧಾರ್ಯತಾಂ ॥**

ಇದರಿಂದ ವಿಭೂತಿಗಿರುವ ಅದ್ಭುತ ದೈವೀಶಕ್ತಿ ಏನೆಂಬುದು ಕಂಡು ಬರುತ್ತೆ. ವೀಭೂತಿ ಧಾರಣದಿಂದ ವೀಭೂತಿ ಪುರುಷನಾಗುವನು. ಅಂದರೆ ಮಹಾತ್ಮನೆನಿಸುವನು. "ವಿ" ಎಂದರೆ ಮಂದಕ್ಷರವೆನಿಸಿದೆ. ಅದು ಒಂದು ಪದವೂ ಹೌದು. "ವಿ" ಎಂದರೆ ವಿದ್ಯಾ, ವಿನಯ, ವಿಜಯ, ಶಿವಾದ್ವೈತ ವಿದ್ಯಾನುಭವದ ಸಂಪತ್ತು ಹಾಗೂ ಆತ್ಮಾನಾತ್ಮ ವಿಚಾರ ತರಂಗ ಸುಜ್ಞಾನವೆಂದು ಅರ್ಥ. ವೀಭೂತಿ ಶಿವನ ಪಂಚಮುಖಗಳಿಂದ ಉದ್ಭವಿಸಿದ ಪಂಚಗೋವುಗಳ ಗೋಮಯದಿಂದ ಲಭಿತವಾಗುವ ಅಂಶದ ವಿವರಗಳನ್ನು ಶ್ರೀ ಜ॥ ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ವಿವರಿಸುತ್ತಾ,

**ನಂದಾ ಭದ್ರಾ ಚ ಸುರಭಿಃ । ಸುಶೀಲಾ ಸುಮನಾಸ್ತಥಾ ।**
**ಪಂಚಗಾವೋ ವಿಭೋರ್ಜಾತಾ । ಸದ್ಯೋಜಾತಾದಿ ವಕ್ತ್ರತಃ ॥**
**ಕಪಿಲಃ ಕೃಷ್ಣ ಧವಲ । ಧೂಮ್ರ ರಕ್ತಾಸ್ತಥೈವ ಚ । ನಂದಾದೀನಾಂ ಗವಾಂ ವರ್ಣಾಃ । ಕ್ರಮೇಣ ಪರಿಕೀರ್ತಿತಾಃ ॥ ಸದ್ಯೋಜಾತಾದ್ವಿಭೂತಿಶ್ಚ । ವಾಮಾದ್ಭಸಿತಮೇವ ಚಾ । ಅಘೋರಾದ್ಭಸ್ಮ ಸಂಜಾತಂ ಕ್ಷಾರಂ ತತ್ಪುರುಷಾತ್ತಥಾ । ರಕ್ಷಾಚೇಶಾನವಕ್ತ್ರಾಚ್ಚ । ನಂದಾದಿದ್ವಾರತೋ ಭವತ್ ॥**

(ಸಿ. ಶಿ. ಪರಿ. ಶ್ಲೋ ೬, ೭, ೮

ಸದಾ ಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಪಂಚಮುಖಗಳಿಂದ ಅನುಕ್ರಮವಾಗಿ ನಂದಾ, ಭದ್ರಾ, ಸುರಭಿ,

ಸುಶೀಲಾ, ಸುಮನ ಎಂಬ ಅಯಿದು ಗೋವುಗಳು ಆವಿರ್ಭವಿಸಿದವು. ಇವುಗಳ ವರ್ಣ ಕಪಿಲ (ಕಂದು ಬಣ್ಣ), ಕಪ್ಪು, ಬಿಳಪು, ನೀಲಿ ಮತ್ತು ಕೆಂಪು, ನಂದಾ ಗೋವಿನಿಂದ ವಿಭೂತಿ ; ಭದ್ರೆಯಿಂದ ಭಸಿತ ; ಸುರಭಿಯಿಂದ ಭಸ್ಮ ; ಸುಶೀಲಾ ಗೋವಿನಿಂದ ಕ್ಷಾರ ಮತ್ತೂ ಸುಮನಾ ಗೋವಿನಿಂದ ರಕ್ಷ ಎಂಬ ಪಂಚವಿಧ ಪವಿತ್ರವಾದ ಭಸ್ಮಗಳು ಉತ್ಪನ್ನವಾಗುವುವು. ಜಗತ್ತಿಗೆ ಗೋವುಗಳಿಂದ ಅಪಾರ ಸಹಾಯವಾಗುವುವು. ಹಾಲು, ಮೊಸರು, ಮಜ್ಜಿಗೆ, ಕೋವಾ, ಬೆಣ್ಣೆ, ಇಂತಹ ಪ್ರಮುಖ ವಸ್ತುಗಳು ಲಭಿತವಾಗುತ್ತಲಿವೆ. ಮಾನವನ ಜೀವನಾಧಾರದ ಮಹದಂಶಗಳಿವು. ಕ್ಷೀರ ಆಯುವೃದ್ಧಿಕರವಾದರೆ ತುಪ್ಪ ಜ್ಞಾನವೃದ್ಧಿಕರವೆನಿಸಿದೆ. ಹಾಲು ಅತ್ಯಂತ ಉಪಯುಕ್ತವಾದ ಪ್ರಾಣದಂತ ಅಂಶವುಳ್ಳ ವಸ್ತು. ಗೊವುಗಳಿಂದ ಮಾನವ, ದೇವ, ದಾನವರಿಗೆ ಉಪಕಾರವೆನಿಸಿದೆ. ಗೋವು ತಾಯಿಗೆ, ತಾಯಿ ಸ್ಥಾನದಲ್ಲಿ ಪೂಜ್ಯವೆನಿಸಿದೆ. ಇದರಿಂದ **"ಗಾವೋ ಲೋಕಸ್ಯಮಾತರಃ"** ಎಂದು ವೇದದಲ್ಲಿ ಸ್ತುತಿಸಲಾಗಿದೆ. ಮಾನವನಿಗೆ ಹುಟ್ಟುತ್ತ ಹಾಲು ಬೇಕು ಸಾಯುತ್ತ ಹಾಲು ಬೇಕು ಉಳಿದ ಕಾಲದಲ್ಲೂ ಹಾಲಿನ ಅವಶ್ಯಕತೆ ಅಪಾರವಿರುತ್ತೆ.

ವಿಭೂತಿಯನ್ನು ನಿತ್ಯ ಶಿವಸ್ಮರಣೆಯೊಂದಿಗೆ ಲಲಾಟದಲ್ಲಿ ಧರಿಸಿದರೆ, ದೈಹಿಕ ಹಾಗೂ ಮಾನಸಿಕ ಆರೋಗ್ಯ ಸಂಪತ್ತು ವೃದ್ಧಿಸುವುದು. ಸಂವರ್ಧಿಸುವುದು. ಶಿವಭಕ್ತರ ಹಣೆಯಲ್ಲಿ ವಿಭೂತಿಯನ್ನು ಕಂಡ ಮಾತ್ರದಲ್ಲಿ ಯಮಭಟರಾಗಲಿ, ಯಮನಾಗಲಿ, ಸಮೀಪಿಸುವುದಾಗಲಿ ಮುಟ್ಟುವುದಾಗಲಿ ಮಾಡುವಂತಿಲ್ಲ. **"ಕೂಡಲ ಸಂಗನ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ"** ವಿಭೂತಿ ಯೋಗದ ಪ್ರಭಾವ, ವರ್ಣನಾತೀತವಾದುದು. ಕಾಲ ರುದ್ರನ ಪ್ರಭಾವಕ್ಕೆ ಸಮಾನವೆನಿಸಿದೆ. ಭಸಿತ ನಾಲ್ಕು ವಿಧವಿರುತ್ತೆ. ಕಲ್ಪ, ಅನುಕಲ್ಪ, ಉಪಕಲ್ಪ, ಮತ್ತು ಅಕಲ್ಪ, ಇವುಗಳಲ್ಲಿ ಕಲ್ಪ ಭಸ್ಮ ಸರ್ವಶ್ರೇಷ್ಠವಿರುತ್ತೆ. ಶಿವಯೋಗ ಮಂದಿರದಲ್ಲಿ ಮೇಲ್ಕಂಡ ಭಸ್ಮಗಳನ್ನು ಶಾಸ್ತ್ರೀಯವಾಗಿ ತಯಾರಿಸುತ್ತಾರೆ. ಇಂತಪ್ಪ ಪವಿತ್ರವಾದ ಭಸ್ಮ ಧಾರಣೆಯಿಂದ ನಮ್ಮಲ್ಲಿ ಕ್ರಮೇಣ ದೈವಶಕ್ತಿ ಮೂಡುವುದು. ತತ್ಫಲವಾಗಿ ಶುದ್ಧಾಂತರಂಗದಲ್ಲಿ ಶಿವಜ್ಯೋತಿ ಬೆಳಗುವ

ಅಂಶ ಚಿತ್ತಕ್ಕೆ ವೇದ್ಯವಾಗುವುದು. ಎಡ ಅಂಗೈಯಲ್ಲಿ ವಿಭೂತಿಯನ್ನು ಭದ್ರವಾಗಿರಿಸಿ, ಬಲಗೈಯಿಂದ ಮುಚ್ಚಿ, "**ಅಗ್ನಿ ರಿತಿಭಸ್ಮ । ವಾಯುರಿತಿಭಸ್ಮ । ಜಲಮಿತಿ ಭಸ್ಮ । ಸ್ಥಲಮಿತಿ ಭಸ್ಮ ವ್ಯೋಮೇತಿ ಭಸ್ಮ । ಭಸ್ಮೇತಿ ಭಸ್ಮ। ಸರ್ವಗ್ಂ ಹ ವಾ ಇದಂ ಭಸ್ಮ ಮನಇತ್ಯೇತಾನಿ ಚಕ್ಷೂಗ್ಂ ಷಿ ಭಸ್ಮಾನಿ ॥** ಎಂಬ ಮಂತ್ರವನ್ನುಚ್ಚರಿಸುತ್ತಾ, ಜಲಮಿಶ್ರ ಭಸ್ಮವನ್ನು ಶಿವಮಂತ್ರೋಚ್ಚಾರಣೆಯೊಂದಿಗೆ ೧೫ ಸ್ಥಾನಗಳಲ್ಲಿ ಅಂಗದ ಮೇಲೆ ಭಸ್ಮೋದ್ಧಾರಣ ಮಾಡಬೇಕು ಮಸ್ತಕ, ಹಣೆ, ಎರಡು ಕಿವಿಗಳು, ಕಂಠ, ಎರಡು ಭುಜಗಳು, ಹೃದಯ ನಾಭಿ, ಬೆನ್ನು, ಎರಡು ಬಾಹುಗಳು, ಹೆಗಲು, ಮುಂಗೈಗಳೆರಡು, ಇಂತು ಮೂಲ ಶಿವಮಂತ್ರೋಚ್ಚಾರಣೆಯೊಂದಿಗೆ ತ್ರಿಪುಂಡ್ರವನ್ನು ಧರಿಸಬೇಕು.

**ಅನಾದಿ ಶಾಶ್ವತಂ ಶಾಂತಂ । ಚೈತನ್ಯಂ ಚಿತ್ಸ್ವರೂಪಕಂ ।**
**ಚಿದಂಗಂ । ವೃಷಭಾಕಾರಂ । ಚಿದ್ಭಸ್ಮ ಲಿಂಗ ಧಾರಣಂ ॥**

ಎಂದು ಸ್ತುತಿಸ ಬೇಕು.

**ಯ ಇದಂ ತ್ರಿಪುಂಡ್ರಂ ಧರತೆ । ಸ ವೇದತ್ರಯ ಧಾರೀ ಭವತಿ। ಸ ಸಂತತಂ ತ್ರೇತಾಗ್ನಿ ಭವತಿ । ಸ ಪುಷ್ಕರತ್ರಯ ಸ್ನಾತೋ ಭವತೀ ಯ ಸ್ತ್ರಿ ಪುಂಡ್ರ ಧಾರೀ ಪುರುಷಾಃ ಸ ರುದ್ರಃ ॥**

ಎಂಬುದಾಗಿ, ಭಸ್ಮಧಾರಣ ಸ್ಥಲದ ಮಹತ್ವವನ್ನೂ ಭಸ್ಮಧಾರಿಯನ್ನೂ ಮಹಾ ರುದ್ರನಿಗೆ ಸಮಾನನೆಂದು ಶೃತಿಮಾತೆ ಶ್ಲಾಘಿಸಿರುವಳು

ರುದ್ರನೆಂದರೆ, "**ರುದಂ-ಸಂಸಾರ ದುಃಖಂ ದ್ರಾವಯ ತೀತಿ ರುದ್ರಂ" "ಅಶುಭದ್ರಾವಯ ತೀತಿ ರುದ್ರಂ । ರುದ್ರಃ ಸ್ತೇಜಸ್ವೀತಿ ॥".**

ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯನ್ನುಂಟು ಮಾಡುವ, ಜ್ಞಾನಭಸ್ಮಾಗ್ನಿ ಸದೃಶ ನೆಂದರ್ಥ.

**ತ್ರಿರೇಖಾ, ವಿಭೂತಿ, ತ್ರಿಣೆ ವೇದ್ಯಂ ಋಕ್ ಸಾಮ ಯಜುರೇವ ಚ ॥**

ವೇದತ್ರಯಗಳ ತೇಜಸ್ಸು, ತ್ರಿರೇಖಾ ವಿಭೂತಿ. ತ್ರಿಮೂರ್ತಿಗಳ ಸಂಕೇತ, ತ್ರಿನೇತ್ರಗಳ ಸ್ಮರಣಾರ್ಥ, ತ್ರಿವೇಣೀ ಸಂಗಮ ಸ್ನಾನದ ಫಲ ಭಸ್ಮ ಧಾರಣೆಯಿಂದ ಲಭಿಸುವುದು. ಪುಣ್ಯ ಪುರುಷನೆನಿಸುವನು. ಪುಣ್ಯವೆಂದರೆ–

**ಪುಣ್ಯಂತು ಪಾವನೇ | ಸುಕೃತೇ ಸುಂದರೇ ||**

ಎಂದು ವರ್ಣಿಸಿರುವರು. ವಿಭೂತಿಧಾರಿ ಪುಣ್ಯವಂತನು.

**ಬಾಲ ರವಿ ಶಶಿಕೋಟಿ ಕಾಲಾಗ್ನಿ ತೇಜನೇ | ಕಾಲಹರ ಕರ್ಮ ದುರಿತಹರ | ಶ್ರೀ ಗುರುವೇ ಬಾಲೇಂದು ಧರನೇ ಕೃಪೆಯಾಗು||**

**ಭಕ್ತಿಃ ಶೈವೀಮಹಾ | ಘೋರ ಸಂಸಾರ ಭಯ ಹಾರಿಣೀಂ || ಭಕ್ತಿಃ ಮುಕ್ತಿ ವಿಧಾಯಿನೀ | ಭಗವತಃ ಶ್ರೀ ಚಂದ್ರಾರ್ಧಶೇಖರಸ್ಯ | ಹೇ ! ಲೋಕಾಃ ಕಾಮದುದಾಂಘ್ರಿ | ಪದ್ಮ ಯುಗಳಂ ಸೇವಧ್ವ ಮತ್ಯುತ್ಸಕಾಃ | ನಾನಾ ಜ್ಞಾನ ಶಾಸ್ತ್ರ ವಿಚಾರ ಮಂತ್ರ ವಿತತಿಂ | ತ್ಯಕ್ತ್ವಾಸುದೂರೇ ಭೃಷಂ | ಸಾಂಬಂ ಹಿರಣ್ಮಯ ತನುಂ | ಸ್ಮರಕಾಮಾರಿ ಹೃದಯೇ ಭಾಂತಂ ಭಜಧ್ವಂ ಬುದಾಃ||**

## ಅಂಗಸ್ಥಲ ೩. || ರುದ್ರಾಕ್ಷಧಾರಣ ಸ್ಥಲಂ ||

**ಭಸ್ಮನಾ ವಿಹಿತ ಸ್ನಾನ ಸ್ತ್ರಿ ಪುಂಡ್ರಾಂಕಿತ ಮಸ್ತಕಂ |**
**ಶಿವಾರ್ಚನ ಪರೋ ನಿತ್ಯಂ ರುದ್ರಾಕ್ಷ ಮಪಿಧಾರಯೇತ್ ||**
**ರುದ್ರಾಕ್ಷ ಧಾರಣಾದೇವ, ಮುಚ್ಯಂತೇ ಸರ್ವ ಪಾತಕೈಃ ||**
**ದುಷ್ಟ ಚಿತ್ತಾ ದುರಾಚಾರಾ | ದುಷ್ಪ್ರಜ್ಞಾ ಆಪಿಮಾ ನವಾಃ ||**
**ಪುರಾತ್ರಿ ಪುರ ಸಂಹಾರೇತ್ರಿನೇತ್ರೋ ಜಗತಾಂ ಪತಿಃ |**
**ಉದಪಶ್ಯತ್ಪರಾಂ ಯೋಗ ಮುನ್ಮೀಲಿತ ವಿಲೋಚನಃ ||**
**ನಿಪೇತು ಸ್ತಸ್ಯನೇತ್ರೇಭ್ಯೋ | ಬಹವೋ ಜಲ ಬಿಂದವಃ |**
**ತೇಭ್ಯೋ ಜಾತಾ ಹಿ ರುದ್ರಾಕ್ಷಾ ರುದ್ರಾಕ್ಷಾ ಇತಿ ಕೀರ್ತಿತಾಃ||**

(ಸಿ. ಶಿ. ಪರಿ. ೭ ಶ್ಲೋ. ೪೪ ರಿಂದ ೪೭)

ಲಿಂಗ, ಭಸ್ಮ, ರುದ್ರಾಕ್ಷ, ಶಿವಪಂಚಾಕ್ಷರೀ ಮಹಾ ಮಂತ್ರ ಈ ನಾಲ್ಕು ಪರಶಿವನ ಅಂಗಭೂತ ನಿತ್ಯೈಶ್ವರ್ಯಗಳೆನಿಸಿವೆ. ಶಾಶ್ವತ ಸಂಪತ್ತೂ ಶಿವನ ಅಮೋಘತರ ಆಭರಣಗಳೆನಿಸಿವೆ. ಮಹಾರುದ್ರನ ಅಕ್ಷಿ (ಕಣ್ಣು) ರುದ್ರಾಕ್ಷಿ ನಿತ್ಯ ಭಸ್ಮ ಸ್ನಾನಯುತನೂ, ತ್ರಿಪುಂಡ್ರಾಂಕಿತ ಮಸ್ತಕನೂ, ಇಷ್ಟಲಿಂಗಾರ್ಚನಾ ಸಕ್ತನೂ ಅದ ಲಿಂಗಾಂಗಿ ಶರಣನು ವಿಭೂತಿ, ರುದ್ರಾಕ್ಷಿಗಳಿಂದ ವಿಭೂಷಿತನಾಗಿ ರಂಜಿತನಾಗಿರಬೇಕು. ಇವು ಅನಾದಿ ಕಾಲದಿಂದ ಕಾಲ ರುದ್ರನ ಪ್ರಭಾವಮಯವೆನಿಸಿರುವುವು. ಆದಿ ಶ್ರೀ ಅಗಸ್ತ್ಯ, ವಸಿಷ್ಟ, ಗೌತಮ, ಭೃಗು, ಭಾರ್ಗವ, ಅತ್ರಿ, ಕಶ್ಯಪ್ಯ, ದಧೀಚಿ, ವೇದವ್ಯಾಸ, ಸಾನಂದ, ದೂರ್ವಾಸ, ಭರದ್ವಾಜ; ಉಪಮನ್ಯು ಮಾರ್ಕಂಡೇಯಾದಿಗಳೂ, ವೀರ, ನಂದಿ, ಭೃಂಗಿ, ವೃಷಭ, ಸ್ಕಂದ, ಮೊದಲಾದ ಪ್ರಭೃತಿಗಳು ಭಸ್ಮ ರುದ್ರಾಕ್ಷಿಗಳಿಂದ ವಿಭೂಷಿತರಾಗಿ ಶಿವಪಂಚಾಕ್ಷರೀ ಮಹಾಮಂತ್ರವನ್ನುಚ್ಚರಿಸಿ, ಶಿವಾನು ಗ್ರಹಕ್ಕೆ ಪಾತ್ರರಾಗಿರುವರು. ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರರು, ತಮ್ಮೊಂದು ವಚನದಲ್ಲಿ ಮೇಲುಕ್ತವಾದ ವಿಷಯದ ಬಗೆಗೆ ವಿವರಿಸುತ್ತಾ,

ಪರಶಿವನ ಜ್ಞಾನ ಚಕ್ಷುವಿನಲ್ಲಿ । ಉದಯುವಾದ ರುದ್ರಾಕ್ಷಿಯು । ಹಸ್ತ, ತೋಳು, ಉರ, ಕಂಠ, ಕರ್ಣ, ಮಸ್ತಕದಲ್ಲಿ । ಧರಿಸಿದ ಶಿವಶರಣನೇ ರುದ್ರನು ॥ ಆ ರುದ್ರಾಕ್ಷಿಯು ಜಪಿಸಿದಾತನೇ । ಸದ್ಯೋನ್ಮುಕ್ತನು ಇದು ಕಾರಣ ಅಜಹರಿಸುರ ಮನುಮುನೀಶ್ವರರು । ಶ್ರೀವೀಭೂತಿ ರುದ್ರಾಕ್ಷಿಯುನೆ ಧರಿಸಿ । ಶಿವಲಿಂಗಾರ್ಚನೆಯು ಮಾಡುತಿಪ್ಪರು। ಪ್ರಮಥಗಣ, ರುದ್ರಗಣ, ಮುಖ್ಯವಾದ ಗಣಾಧೀಶ್ವರರು ಶ್ರೀವಿಭೂತಿ ರುದ್ರಾಕ್ಷಿಯುನೆ ಧರಿಸಿ । ಪ್ರಣವ ಸ್ವರೂಪಿಗಳಾಗಿಪ್ಪರು। ನೋಡಿದವರು ಮುಟ್ಟಿದವರು। ಧರಿಸಿದವರು ಜಪಿಸಿದವರೆಲ್ಲಾ ಸಕಲ ಪ್ರಪಂಚವನಳಿದು । ಪರಶಿವ ಸ್ವರೂಪ ರಪ್ಪುದು ತಪ್ಪದು । ನೋಡಾ ! ಇದು ಕಾರಣ. ನಾನು ಶ್ರೀ ವಿಭೂತಿ ರುದ್ರಾಕ್ಷಿಯುನೆ ಧರಿಸಿ । ಶಿವ

**ಲಿಂಗಾರ್ಚನೆಯನೆ ಮಾಡಿ । ಪ್ರಣವ ಪಂಚಾಕ್ಷರಿಯ ಜಪಿಸುತ್ತಿದ್ದೆನಯ್ಯಾ।ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ॥**

ಎಂದು ಹಾಡಿರುವರು. ಸಮಸ್ತ ಲಿಂಗಾಂಗಿಗಳು ಇದನ್ನು ಮನಗಂಡು, ಇತರರ ತಪ್ಪು ದಾರಿಯಲ್ಲಿ ಹೆಜ್ಜೆಯೂರ ಬಾರದು. ಅವ್ಯವಸ್ಥಿತ ಚಿತ್ತವುಳ್ಳ ಕೆಲವು ಶರಣ ಶರಣೆಯರು ಇತ್ತೀಚಿಗೆ ಜನಸ್ತೋಮವನ್ನು ಶಿವಪಂಚಾಕ್ಷರೀ ಮಹಾಮಂತ್ರ ಜಪವನ್ನು ಧಿಕ್ಕರಿಸಿ, ಕೆಸರಿನತ್ತ ಮೋಹವಶಾತ್ ಆಕರ್ಷಿಸುತ್ತಲಿದ್ದಾರೆ. ಅಂದೋ ! ಹೀಗಾಗ ಬಾರದು. ರುದ್ರಾಕ್ಷಿ ತತ್ವ ಆಧ್ಯಾತ್ಮಿಕ ಭೌತಿಕನೆಂದು ಇತ್ತೆರನಾಗಿದೆ.

**ರುದ್ರಾಕ್ಷ ಮೂಲ ಮೋಂಕಾರಂ । ಮುಖಂ ಪಂಚಾಕ್ಷರಂ ವಿದುಃ ॥**

ರುದ್ರಾಕ್ಷಿ ಆಧ್ಯಾತ್ಮಿಕವಾಗಿ, ಮೂಲ ಓಂಕಾರ ಮಹಾಮಂತ್ರವೇ ಚಿನ್ಮಯ ಚಿದ್ಬಿಂದು ಚಿತ್ಕಳಾರೂಪ ಚಿದಕ್ಷಿಯೆನಿಸಿದೆ. ಶಿವಶರಣರ ಒಳಗಣ್ಣು ಶ್ರೀ ರುದ್ರಾಕ್ಷಿ (Divine insight). ರುದ್ರಾಕ್ಷಿಯ ಪಂಚಮುಖಗಳೇ ಶಿವಪಂಚಾಕ್ಷರೀ ಬೀಜಾಕ್ಷರಗಳು, ರುದ್ರಾಕ್ಷಿ ಸರ್ವಪಾವನ, ಸರ್ವಸಿದ್ಧಿಕರ, ಸರ್ವರೋಗಹರ. ಆಧ್ಯಾತ್ಮಿಕ ರುದ್ರಾಕ್ಷಿ ಭಕ್ತಿಜ್ಞಾನ ಮುಕ್ತಿಗಳಿಗೆ, ಶಿವ ಜ್ಞಾನಸಿದ್ಧಿಗೆ, ಆತ್ಮ ಸಾಕ್ಷಾತ್ಕಾರಕ್ಕೆ ಹೇತುವೆನಿಸಿದೆ. ತತ್ವಮಯವಾದ ರುದ್ರಾಕ್ಷಿಗಳನ್ನು ಭಕ್ತಿಯೆಂಬ ದಿವ್ಯಸೂತ್ರದಲ್ಲಿ ಪೋಣಿಸಿ ಧರಿಸಿರಬೇಕು. ಶ್ರೀ ಗುರುವಿನ ದಿವ್ಯ ಕಟಾಕ್ಷ ರಸಬಿಂದುಗಳು, ಚಿದ್ರೂಪ ರುದ್ರಾಕ್ಷಿಗಳು. ಇಂತಪ್ಪ ಚಿದ್ರೂಪ ರುದ್ರಾಕ್ಷಿಗಳನ್ನು ಅಂತರಂಗದಲ್ಲಿ ಧರಿಸಿ ಸ್ಮರಿಸುವಾತ ಮಹಾರುದ್ರನಿಗೆ ಸಮಾನನೆನಿಸಿ ರುದ್ರಗಣಗಳಲೊಬ್ಬನಾಗಿ ರಾರಾಜಿಸುವನು. ಇಂತಪ್ಪ ಶರಣನನ್ನು. ರುದ್ರಲೋಕದ ಏಕಾದಶ ಶತರುದ್ರರು ಪ್ರೀತಿಯಿಂ ಸ್ವಾಗತಿಸುವರು. ಇದು ಆಧ್ಯಾತ್ಮಿಕ ರುದ್ರಾಕ್ಷಿಯ ಘನ ತತ್ವವೆನಿಸಿದೆ.

ಭೌತಿಕ ರುದ್ರಾಕ್ಷಿಗಳು ಪ್ರಭಾವವುಳ್ಳವುಗಳಾಗಿವೆ. ವಿಭೂತಿ ಮತ್ತು ರುದ್ರಾಕ್ಷಗಳು ಮಹತ್ವವುಳ್ಳವಾಗಿವೆ. ನೆಲ್ಲಿಕಾಯಿ ಗಾತ್ರದಲ್ಲಿರುವ ರುದ್ರಾಕ್ಷಿಗಳನ್ನು ಧರಿಸುವುದು ಒಳ್ಳೆಯದು ಜಪದ ರುದ್ರಾಕ್ಷಿಗಳು ಇದಕ್ಕಿಂತಲೂ ಸಣ್ಣ ಸೈಜಿನಲ್ಲಿರ ಬೇಕು. ಜಪಸರ ೧೦೮ ರುದ್ರಾಕ್ಷಗಳಿಂದಲೂ, ಕೊರಳಿನಲ್ಲಿ ಧರಿ

ಸುವ ಸರದಲ್ಲಿ ೩೨ ರುದ್ರಾಕ್ಷಗಳೂ ಇರಬೇಕು. ಲಿಂಗಾಂಗಿ ವೀರಶೈವನು ಒಂದು ರುದ್ರಾಕ್ಷಿಯನ್ನಾದರೂ ಶಿವದಾರದಲ್ಲಿ ಪೋಣಿಸಿ ಶಿವಪೂಜಾ ಕಾಲದಲ್ಲಿ ನಿತ್ಯ ಪೂಜಿಸಿ ಧನ್ಯನಾಗ ಬೇಕು. ಸಮಸ್ತ ಶೈವ, ವೀರಶೈವರಿಗೆ ವಿಭೂತಿ ರುದ್ರಕ್ಷ ಧಾರಣಗಳು ಅತಿಪವಿತ್ರವೆನಿಸಿವೆ. ಶಿವಾನುಗ್ರಹಕ್ಕೆ ಇವು ಪ್ರೇರಕ ಶಕ್ತಿಯೆನಿಸಿವೆ. ರುದ್ರಾಕ್ಷಗಳು ಶ್ರೀ ಗುರು ಹಸ್ತಗಳಿಂದ ಪಡೆದು ಧರಿಸ ಬೇಕು. ಅನ್ಯರು ಧರಿಸಿದ ರುದ್ರಾಕ್ಷಗಳನ್ನು ಧರಿಸಬಾರದು. ರುದ್ರಾಕ್ಷಾಜಾ ಬಾಲೋಪನಿಷತ್ತಿನಲ್ಲಿ ಹಾಗೂ ಚಂದ್ರಜ್ಞಾನಾಗಮದಲ್ಲೂ ರುದ್ರಾಕ್ಷಿ ಧಾರಣ ದಿಂದ, ದೀರ್ಘಾಯುಷ್ಯ ಆರೋಗ್ಯ ಭಾಗ್ಯಾದಿಗಳು ವೃದ್ಧಿಸುವುವೆಂದೂ, ಮನೋಶಾಂತಿ, ಕಾರ್ಯಸಿದ್ಧಿಗಳುಂಟಾಗುವುವೆಂದು ಪ್ರಶಂಸಿಸಲಾಗಿದೆ.

**ಸರ್ವ ವ್ಯಾಧಿ ಹರಂ ಚೈವ । ಸರ್ವದಾರೋಗ್ಯ ಮಾಪ್ನು**
**ಯಾತ್** ॥ ಎಂದೂ ಮತ್ತೂ, **ರುದ್ರಾಕ್ಷ ಧಾರಣಾ ದೇವ ।**
**ಮುಚ್ಯಂತೇ ಸರ್ವಪಾತಕೈಃ ।**

ದುಷ್ಟ ಚಿತ್ತ ದುರಾಚಾರಗಳು ದೂರವಾಗುವುವೆಂದು ಶೃತಿ ಬೋಧಿಸುತ್ತಲಿದೆ

**ಪುರಾತ್ರಿಪುರ ಸಂಹಾರೇ । ತ್ರಿನೇತ್ರೋ ಜಗತಾಂ ಪತಿಃ ॥**

ಅಂದರೆ ಬಹು ಪೂರ್ವದಲ್ಲಿ ಭಯೋತ್ಪಾದಕರಾದ ತ್ರಿಪುರಾಸುರರನ್ನು ಸಂಹರಿಸಲು, ಕಾಲಾಗ್ನಿ ರುದ್ರನು ತನ್ನ ಸೂರ್ಯ ಚಂದ್ರ ಅಗ್ನಿನೇತ್ರಗಳನ್ನು ಊರ್ಧ್ವ ದೃಷ್ಟಿಯೋಗದಿಂದ ನಿಡುಕಾಲ ಅಂತರಿಕ್ಷದಲ್ಲಿನ ತ್ರಿಪುರಗಳನ್ನೂ ತ್ರಿಪುರಾಸುರರುಗಳನ್ನೂ ಒಂದೇ ಸಮನೆ ದುರಿದುರಿಯೆಂದು ನೋಡುತ್ತಿರುವಾಗ, ಮಹಾರುದ್ರನ ಕಣ್ಣುಗಳಿಂದ ಥಳಥಳನೆ ಅನೇಕ ಜಲ ಬಿಂದುಗಳು ಧರಣಿಯ ಮೇಲೆ ಉರುಳಿದವು.

ಅಂತರಿಕ್ಷದಲ್ಲಿ ದುರುಳರಾದ ತ್ರಿಪುರಾಸುರರು ಬಂಧುರವಾದ ಮೂರು ಪಟ್ಟಣಗಳನ್ನು ತಮ್ಮ ತಪಃ ಶಕ್ತಿಯಿಂದ ನಿರ್ಮಿಸಿ ಆಳುತ್ತಿದ್ದರು. ಇವರಲ್ಲಿ ಹಿರಿಯನಾದ ಕಮಲಾಕ್ಷನೆಂಬ ರಾಕ್ಷಸನು ಅಂತರಿಕ್ಷದಲ್ಲಿ ಬಂಗಾರದ ಕೋಟೆ ಕೊತ್ತಳಗಳಿಂದ ಭದ್ರಪಡಿಸಿದ ಪುರವನ್ನು ಆಳುತ್ತಲಿದ್ದನು. ಇವನ ತಮ್ಮ ತಾರಕಾಕ್ಷನು ನೂರಾರು ಮೈಲಿಗಳ ಅಂತರದಲ್ಲಿ ತನ್ನ ಪಟ್ಟಣವನ್ನು ಬೆಳ್ಳಿ

ಯಿಂದ ನಿರ್ಮಿತವಾದ ಕೋಟೆ ಕಂದಕಗಳ ಮಧ್ಯೇ ರಚಿಸಿಕೊಂಡು ಆಳುತ್ತಿದ್ದನು. ೩ನೇ ವಿದ್ಯುನ್ಮಾಲಿಯೆಂಬ ರಕ್ಕಸನು ಅಲ್ಲಿಂದ ನೂರಾರು ಮೈಲಿಗಳ ಅಂತರದಲ್ಲಿ ತನ್ನ ಪಟ್ಟಣವನ್ನು ಕಬ್ಬಿಣದ ಕೋಟೆಗಳಿಂದ ನಿರ್ಮಿಸಿ ಆಳುತ್ತಿದ್ದನು. ದುಷ್ಟದೂರ್ತರಾದೀ ತ್ರಿಪುರಾಸುರರು. ಸದಾ ದೇವ ಮಾನವರಿಗೆ ತೊಂದರೆಗಳನ್ನುಂಟು ಮಾಡುತ್ತಾ ಅಡಿಗಡಿಗೆ ಪೀಡಿಸುತ್ತಲಿದ್ದರು. ಈರಾಕ್ಷಸರ ಅಗಣಿತ ಕ್ರೂರ ಕೃತ್ಯಗಳಿಗೆ ಭಯಗ್ರಸ್ಥರಾದ ಅಖಿಲ ದೇವ ಮಾನವರು. ಪರಶಿವನಲ್ಲಿ ತಮ್ಮ ಭಯವನ್ನು ನಿವೇದಿಸಿ, ತ್ರಿಪುರಾಸುರರು ಅಭೇದ್ಯವಾದ ಪಟ್ಟಣಗಳನ್ನು ಅಂತರಿಕ್ಷದಲ್ಲಿ ನಿರ್ಮಿಸಿಕೊಂಡು ಕಂಟಕ ಪ್ರಾಯರಾಗಿರುವ ತ್ರಿಪುರಾಸುರರನ್ನು ಸಂಹರಿಸಿ, ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದರು. ಆಪದ್ಬಂಧುವಾದ ಭಗವಂತನು ಇವರ ಮೊರೆಯನ್ನು ಲಾಲಿಸಿ,

**ಅಭಯಂ ಸರ್ವ ಭೂತೇ ಭ್ಯೋ । ದ ಧಾಮ್ಯೇ ತದ್ ವ್ರತಂ ಮಮ ॥**

ಎಂಬ ವ್ರತಧಾರಿ ಪರಮಾತ್ಮ ; ಹೆದರಬೇಡಿ, ತ್ರಿಪುರಾಸುರರನ್ನು ತಾನು ಸಂಹಾರ ಮಾಡುವುದಾಗಿ ಅಭಯ ವಚನ ವಿತ್ತನು.

ಇಂತಪ್ಪ ಕಮಲಾಕ್ಷ, ತಾರಕಾಕ್ಷ, ವಿದ್ಯುನ್ಮಾಲಿಯೆಂಬ ತ್ರಿಪುರಾಸುರರನ್ನು ಸುಟ್ಟು ಭಸ್ಮ ಮಾಡಲು, ಮಹಾರುದ್ರನು ದೃಢಭಾವದಿಂದ,

**ಉದಪಶ್ಯತ್ಪುರಾಂ । ಯೋಗ ಮುನ್ಮೀಲಿತ ಲೋಚನಃ ॥**

ಮೇಲ್ಗಣ್ ನೋಟದಿಂದ ಬಹುಕಾಲ ದಿಟ್ಟಿಸಿ ಅಂತರಿಕ್ಷದ ತ್ರಿಪುರಗಳನ್ನು ನೋಡುತ್ತಿರುವಾಗ, ರುದ್ರನ ಸೂರ್ಯ ನೇತ್ರದಿಂದ ೧೨ ವಿಧ ಕಂದು ಬಣ್ಣದ ರುದ್ರಾಕ್ಷಿ ವೃಕ್ಷಗಳು, ಹನ್ನೆರಡು ಜಲ ಬಿಂದುಗಳು ನೆಲದಲ್ಲಿ ಬೀಳುತ್ತಲೇ ಉಂಟಾದವು. ಚಂದ್ರ ನೇತ್ರದಿಂದ ನೆಲಕ್ಕೆ ಉರುಳಿದ ಜಲಬಿಂದುಗಳು ೧೬ ತರ ರುದ್ರಾಕ್ಷ ವೃಕ್ಷಗಳಾಗಲು, ಫಾಲಾಕ್ಷನ ಉರಿಗಣ್ಣಿನಿಂದ ಉರುಳಿದ ಜಲ ಬಿಂದಗಳಿಂದ ೧೦ ವಿಧದ ಕಪ್ಪು ಬಣ್ಣದ ರುದ್ರಾಕ್ಷಿ ವೃಕ್ಷಗಳೂ ಆಗಿ, ಒಟ್ಟು ೩೮ ವಿಧ ರುದ್ರಾಕ್ಷಿ ವೃಕ್ಷಗಳುಂಟಾದವೆಂದು ಶ್ರೀ ಜ॥ ರೇಣುಕರು ಅಗಸ್ತ್ಯರಿಗೆ ಅರುಹಿದರು. ಈ ತ್ರಿಪುರಾಸುರರು ತಾರಕಾಸುರನ ಮಕ್ಕಳು.

ರುದ್ರಾಕ್ಷ ವೃಕ್ಷ ಬೀಜಾಯ । ಭೂತಿ ಸಂಭೂತಿ ಹೇತವೇ ।
ನೇತ್ರ ತ್ರಯಾಯ ರುದ್ರಾಯ। ನಮೋ ಲೋಕ ಹಿತಾರ್ಥಿನೇ॥
ಯಥಾವಿಧಿಃ । ರುದ್ರಾಕ್ಷ ಧಾರಣಂ ವಕ್ಷೇ । ರುದ್ರ ಸಾಯುಜ್ಯ
ಸಿದ್ಧಯೇ ॥

ಅಷ್ಟಾವರಣಾಂತರ್ಗತ, ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದಾದಿ ಎಂಟು ಆವರಣಗಳು ಅಂಗನ ಸಾಯುಜ್ಯ ಮೋಕ್ಷಕ್ಕೆ ಕಾರಣೀ ಭೂತ, ಶಿವ ಕವಚಗಳೆನಿಸಿವೆ.

ನಮಃ ಶಿವಾಯ ಶಾಂತಾಯ।ನಮಃಸ್ಸೋಮಾಯ ಶಂಭವೇ॥
ನಮಃ ಶಿವಾಯ ಕಲ್ಯಾಣಿ ಪತಯೇ । ತೇ ನಮೋ ನಮಃ ॥
ಓಂಕಾರ ಬಿಂದು ಸಂಯುಕ್ತಂ । ನಿತ್ಯಂ ಧ್ಯಾಯಂತಿ ಯೋ
ಗಿನಃ ॥ ಕಾಮದಂ ಮೋಕ್ಷದಂ ತಸ್ಮೈ ।ಓಂಕಾರಾಯ ನಮೋ
ನಮಃ ॥

ರೇ ಜಿಹ್ವೇ ರಸ ಸಾರಜ್ಞೇ । ಸರ್ವದಾ ಮಧುರ ಪ್ರಿಯೇ।
ಶ್ರೀ ಮದ್ರೇಣುಕಾಖ್ಯಾನ ಪೀಯೂಷಂ | ಪಿಬ ಪಿಬ ಸತತಂ
ಜಿಹ್ವೇ ॥

ಮದ್ ಜಿಹ್ವ ಸಿಂಹಾಸನಾಘ್ರೇ । ಉಪನಯತು ಸೋಕ್ತಿದಾರಾ
ಮುದಾರ । ಮದ್ ಶಿವಾದ್ವೈತಾಚಾರ್ಯ । ಪಾದ ಸ್ತುತಿ
ಸುಕೃತೋ । ದಾರತಾ ಶಾರದಾಂಬಾ ॥

## ಅಂಗಸ್ಥಲ ೪೪.೮. ಪಂಚಾಕ್ಷರ ಜಪಸ್ಥಲಂ

### ಪರಿಚ್ಛೇದ ೮. (ಪೂರ್ವಾರ್ಧ)

ಧೃತ ಶ್ರೀಭೂತಿ ರುದ್ರಾಕ್ಷಃ । ಪ್ರಯತೋ ಲಿಂಗ ಧಾರಕಃ |
ಜಪೇತ್ಪಂಚಾಕ್ಷರೀ ವಿದ್ಯಾಂ ಶಿವತತ್ವ ಪ್ರಬೋಧಿನೀಂ |

**ಶಿವತತ್ತ್ವಾತ್ಪರಂ ನಾಸ್ತಿ । ಯಥಾ ತತ್ತ್ವಾಂತರಂ ಮಹತ್,**
**ತಥಾ ಪಂಚಾಕ್ಷರೀ ಮಂತ್ರಾನ್ನಾಸ್ತಿ ಮಂತ್ರಾಂತರಂ ಮಹತ್॥**
(ಸಿ. ಶಿ. ಪರಿ, ೪ ಶ್ಲೋ. ೮. ೨.)

ಲಲಾಟದಲ್ಲಿ ಶ್ರೀ ವಿಭೂತಿ, ಕಂಠದಲ್ಲಿ ಶ್ರೀ ರುದ್ರಾಕ್ಷಿ ಧರಿಸಿದ ಭಕ್ತನು ಇಷ್ಟಲಿಂಗಾರಾಧನೆಗೆ ಅರ್ಹನಿರುವನು ಇವನು ಅನುದಿನ ಪ್ರಣವಸಹಿತ ಓಂ ನಮಃ ಶಿವಾಯ ಮೂಲ ಮಂತ್ರವನ್ನು ಭಕ್ತ್ಯಾ ಜಪಿಸುವುದರ ಮೂಲಕ, ಮಾನಸಿಕವಾಗಿ ಶಿವಾರಾಧಕನು ತನ್ನ ಹೃನ್ಮಂದಿರದಲ್ಲಿ ಪ್ರಜ್ವಲಿಸುವ ಪ್ರಾಣ ಲಿಂಗದೊಡನೆ ಸಂಪರ್ಕವನ್ನು ಪಡೆಯಲು ಸಾಧ್ಯವಿದೆ. ಶಿವಪಂಚಾಕ್ಷರೀ ಮಹಾ ಮಂತ್ರಕ್ಕೂ ಇಷ್ಟಲಿಂಗಕ್ಕೂ ನಿಕಟವಾದ ಅವಿನಾಭಾವ ಸಂಬಂಧವಿದೆ ಯೆಂಬುದು ಶಿವಾಗಮಗಳಿಂದ ಸ್ಪಷ್ಟ ಪಟ್ಟಿದೆ. ಮೂಲಮಂತ್ರದ ಪಂಚಾಕ್ಷರ ಗಳೇ ಇಷ್ಟಲಿಂಗದ ಪಂಚ ಸೂತ್ರಗಳೆನಿಸಿವೆ.

**"ಪಂಚಾಕ್ಷರಸ್ಯೈವ ಸೂತ್ರನಾಮ ಪ್ರಸಿದ್ಧತಃ ॥"**

ಶಿವಲಿಂಗಕ್ಕೆ **"ನಮಃ ಶಿವಾಯ"** ಎಂಬ ಅಕ್ಷರಗಳೇ ಪಂಚಸೂತ್ರಗಳೆ ನಿಸಿವೆ.

**ಸೂತ್ರಂ ಪಂಚಾಕ್ಷರ ಸ್ತಥಾ ॥"**

ಎಂದಿದೆ ಶಿವಾಗಮ. ಪಂಚಾಕ್ಷರಂಗಳೇ ಇದರರ್ಥವೇ ಪರಶಿವಲಿಂಗ ವೆಂದು ಶ್ರೀ ಗುರು ರೇಣುಕರು ಅಗಸ್ತ್ಯ ಮಹರ್ಷಿಗೆ ಬೋಧಿಸಿರುವರು, ಓಂ ನಮಃ ಶಿವಾಯವೆಂಬ ಮಂತ್ರ ಶ್ರೀ ಗುರುವಿನಿಂದ ಸಕ್ರಮವಾಗಿ ಬೋಧಿಸಿದಾಗ ಅದು ಉಜ್ವಲ ಮಂತ್ರವೆನಿಸಿ ಮೋಕ್ಷದಾಯಕವಾಗುವುದು. ಮಂತ್ರವೆಂದರೆ—

**"ಮನನ ತ್ರಾಣ ಧರ್ಮತ್ವಾನ್ಮಂತ್ರಃ ॥"** ಮತ್ತೂ ॥ **ಮನನಾತ್ ತ್ರಾಯತೇ । ಯಸ್ಮಾತ್ತಸ್ಮಾಂತ್ರೋ । ಯ ಮೀರಿತಃ ॥** ಅಂದರೆ **ಮನನಾತ್ ತ್ರಾಯತೇ ಇತಿ ಮಂತ್ರಃ ॥**

ಮನಸ್ಸಿನಲ್ಲಿ ಧರಿಸಿ, ಸ್ಮರಿಸಿ, ಜಪಿಸಿ, ಶಿವಧ್ಯಾನಾರೂಢನಾಗಿರುವ ಚೈತನ್ಯವನ್ನು ಮಂತ್ರ ವೆನ್ನಲಾಗಿದೆ. ಮತ್ತು ಈ

**ಮಂತ್ರ ಪ್ರಯೋಗೇಣ । ಶಿವಃ ಸನ್ನಿಹಿತೋ ಭವೇತ್ ॥**

ಸದಾ ಕಾಲ ಶುದ್ಧಾಂತ ರಂಗದಲ್ಲಿ ಶಿವಪಂಚಾಕ್ಷರೀ ಮೂಲಮಂತ್ರ ವನ್ನು ಭಕ್ತ್ಯಾ ಜಪಿಸುತ್ತಿರುವುದರಿಂದ, ಮಾನಸಿಕವಾಗಿ ಅಂತರಂಗದಲ್ಲಿ ಶಿವ

ನೊಂದಿಗೆ ನೇರವಾಗಿ ಮಾತಾಡುತ್ತಿರುವಂಥಾ ದಿವ್ಯಾನುಭವವು ಕ್ರಮೇಣ, **ಪಂಚಾಕ್ಷರ ಜಪೋದ್ಯೋಗಿ ಸಾಧಕನ ಚಿತ್ತಕ್ಕೆ ವೇದ್ಯವಾಗುವುದು.**

ಇಂತಪ್ಪ ವ್ರತಧಾರಿ ಅಂಗದಲ್ಲಿ ಲಿಂಗವನ್ನು ಯಾವ ಜ್ಜೀವವೂ ಅಗಲ ದಂತೆ ಧರಿಸಿ ಶಿವಾರಾಧನ ಚಿತ್ತ ವೃತ್ತಿಗಳುಳ್ಳವನಾಗಿರಬೇಕು. ಲಿಂಗವ ಧರಿಸಿ ರದೆ, ಬರಿಮಂತ್ರ ಜಪದಿಂದ ಏನು ಪ್ರಯೋಜನವಾಗದು. ಗಂಡಿಲ್ಲದೆ ಮದುವೆಯ ಸಂಭ್ರಮ ಯೆಂತು ವ್ಯರ್ಥವೋ ಇದರಂತೆ ಶರೀರದ ಮೇಲೆ ಶ್ರೀ ಗುರು ಹಸ್ತದಿಂದ ಅನುಗ್ರಹೀತವಾದ ಇಷ್ಟಲಿಂಗವ ಧರಿಸಿ, ಪೂಜಿಸದೆ ಬರೀ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸಿದರೆ ಫಲವಿಲ್ಲ. ವೀರಶೈವ ಧರ್ಮ **"ಲಿಂಗ ಪತಿ ಅಂಗಸತಿ"** ಎಂಬ ತಳಹದಿಯ ಮೇಲೆ ಸ್ಥಾಪಿತವಾಗಿದೆ. ಲಿಂಗಪತಿ ದೇವ ನಿಲ್ಲದ, ವಿವಾಹ ಸಂಭ್ರಮ ಗಗನ ಕುಸುಮವ ಪಡೆಯುವ ಪ್ರಯತ್ನದಂತೆ ನಿಷ್ಫಲವಾಗುವುದು. **"ಲಿಂಗಪತಿ ತಾ ಮಹಾ ಸತಿ"** ಯೆಂಬ ಧೃಢಭಾವದಿಂದ ಲಿಂಗಾಂಗಿ, ಶಿವಪಂಚಾಕ್ಷರೀ ಮಂತ್ರವನ್ನು ತಾನು ಉಸಿರಾಡುವಂತೆ, ತನ್ನ ಪ್ರಾಣವನ್ನು ಆ ಮಹಾ ಪ್ರಾಣದೊಂದಿಗೆ ಏಕೀಕರಿಸಿ, ಕಾಯಾ, ವಾಚಾ ಮನಸಾ ಹಾಗೂ ಭಾವೇನ ಶಿವಪಂಚಾಕ್ಷರೀ ಮಹಾ ಮಂತ್ರವನ್ನು ಅಂತರಿಕ ವಾಗಿ ಜಪಿಸುತ್ತಿದ್ದರೆ, ಶಿವನೊಂದಿಗೆ ಸಂಪರ್ಕವೇರ್ಪಟ್ಟು ಪರಶಿವನೊಂದಿಗೆ ಮಾತಾಡುತ್ತಿರುವಂಥಾ ಅನುಭವ ಚಿತ್ತದಲ್ಲಿ ಬೋಧವಾಗುವುದು. ಶ್ರೀ ಷಡಾ ಕ್ಷರೀ ಮೂಲ ಮಂತ್ರ ಜಪಾನುಷ್ಠಾನವು. ಆತ್ಮಸಾಕ್ಷಾತ್ಕಾರದ ಪರವಿದ್ಯೆ. ಸ್ವಸ್ವರೂಪಾನು ಸಂಧಾನದ ಪ್ರಣವೋಪಾಸನೆಯ ಮಹಾವಿದ್ಯೆ. ಪ್ರಣವ ಮಂತ್ರದ ಗರ್ಭದಲ್ಲಿ ಶಿವಪಂಚಾಕ್ಷರೀ ಬೀಜ ಮಂತ್ರಗಳು ಗರ್ಭಿತವಾಗಿವೆ.

**ಓಂ ಇತ್ಯೇಕಾಕ್ಷರಂ ಬ್ರಹ್ಮ । ನಮಃ ಶಿವಾಯೇ ತ್ಯ ಜಾಯತ ॥**

ಎಂಬ ಸತ್ಯಾಂಶವನ್ನು ಶಿವಾಗಮಗಳು ಹೊರ ಸೂಸುತ್ತಲಿವೆ. ಇದ ರಿಂದಾಗಿ ಸಪ್ತಕೋಟಿ ಮಂತ್ರಗಳಿಗೆ ಶಿವ ಪಂಚಾಕ್ಷರೀ ಮಂತ್ರ ಮಕುಟ ಪ್ರಾಯವೆನಿಸಿ ರಾರಾಜಿತವಾಗಿದೆ.

ಒಂದು ಲಕ್ಷ ಮಹಾ ವೃಕ್ಷಗಳನ್ನು ಬಣ್ಣಿಸಿದರೂ ಕಲ್ಪವೃಕ್ಷಕ್ಕೆ ಸಮ ವಾಗವು. ಒಂದು ಲಕ್ಷ ಗೋವುಗಳನ್ನು ವರ್ಣಿಸಿದರೂ ಕಾಮಧೇನುವಿಗೆ ಸಮಬಾರವು. ಒಂದು ಕೋಟಿ ವಾಪೀ ಕೂಪ, ತಟಾಕ, ನದನದಿಗಳು, ಕ್ಷೀರ

ಸಾಗರವಾಗಲಾರವು, ಮೂರು ಕೋಟಿ ದೇವತೆಗಳು ವಿಷ್ಣು ಬ್ರಹ್ಮೇಂದ್ರಾದಿ ಗಳು ಶಿವಸಮಾನವಾಗಲಾರರು ಇದರಂತೆ,

**ಸಪ್ತ ಕೋಟಿಷು ಮಂತ್ರೇಷು। ಮಂತ್ರಃ ಪಂಚಾಕ್ಷರೋ ಮಹಾನ್ । ಬ್ರಹ್ಮವಿಷ್ಣ್ವಾದಿ ದೇವೇಷು। ಯಥಾ ಶಂಭು ರ್ಮಹತ್ತರಃ ॥**

ಬ್ರಹ್ಮ ವಿಷ್ಣ್ವಾದಿ ಅನಂತ ದೇವತೆಗಳಲ್ಲಿ ಮಹಾದೇವನಾದ ಶಂಭು ಯಂತು ದೇವತಾ ಸಾರ್ವಭೌಮನೋ, ಅಂತು ಸಪ್ತಕೋಟಿ ಮಂತ್ರಗಳಿಗೆ ಅಧಿಕವೆನಿಸಿ ರಾರಾಜಿಸುವ ಶಿವಪಂಚಾಕ್ಷರೀ ಮಹಾಮಂತ್ರ, ಅತ್ಯಧಿಕ ಅತ್ಯಧಿ ಕವೆಂದು ಶೃತಿ ದೇವಿ ಉಗ್ಗಡಿಸಿಹಳು. ಚತುರ್ವೇದಗಳಲ್ಲಿ ಹಾಗೂ ಇಪ್ಪತ್ತೆಂಟು ಶಿವಾಗಮಗಳಲ್ಲಿ ಶಿವಪಂಚಾಕ್ಷರೀ ಮಹಾ ಮಂತ್ರಕ್ಕೆ ಪರಮೋತ್ಕೃಷ್ಠ ಸ್ಥಾನ ವಿದೆ.

**ವರ ಯಜುರ್ವೇದವದು। ವೇದನಿಕರದೆ ಮಿಗಿಲದರಲ್ಲಿ,**
**ರುದ್ರವು। ಪರಮ ಪಂಚಾಕ್ಷರೀಯದರಲ್ಲಿ। ಮಿಗಿಲು ;**
**ಭಾವಿಸಲು ಮಿಗಿಲದರಲ್ಲಿ "ಶಿವ" ಯೆಂಬೆರಡಕ್ಷರಂಗಳು ॥**

**ಶಿವ ಇತ್ಯಕ್ಷರದ್ವಂ ದ್ವಂ ಪರಬ್ರಹ್ಮಪ್ರಕಾಶಕಂ ತಸ್ಮಾತ್ ಶಿವ ಏವ ಸದಾಧ್ಯೇಯಃ ॥**

ಪಂಚಾಕ್ಷರೀ ವಿದ್ಯೆಯನ್ನು ಶ್ರೀ ಜ॥ ರೇಣುಕಾಚಾರ್ಯರು ಅಗಸ್ತ್ಯರಿಗೆ ಬೋಧಿಸುತ್ತಾ,

**ಹೇ ಮುನೇಶೃಣು ॥ ಜಪೇತ್ ಪಂಚಾಕ್ಷರೀ ವಿದ್ಯಾಂ | ಶಿವತತ್ವ ಪ್ರಬೋಧಿನೀಮ್ ॥**

ಇದು ಶಿವಶಕ್ತಿ ಸಂಪುಟದಿಂದ ತಾನೇ ತಾನಾಗಿ ವಿರಾಜಿಸುವ, ಸರ್ವಶಾಸ್ತ್ರಾ ರ್ಥಗಳಿಗೆ ಮೂಲವಾದ ಪ್ರಮುಖ ಹಾಗೂ ಗೂಢವಾದ ಶಿವತತ್ವವನ್ನು ಪುಂಖಾನು ಪುಂಖವಾದ ವಿವರಣೆಗಳಿಂದ ಪ್ರಬೋಧಿಸುವ ಆಧ್ಯಾತ್ಮಿಕ ವಿದ್ಯೆ ಯೆಂದು ಪ್ರಶಂಸಿಸಿರುವರು. ೧೪ ವಿದ್ಯೆಗಳನ್ನು ಒಳಕೊಂಡಿದೆ ೪ ವೇದ. ಶ್ರೀ

ರುದ್ರ ಮಂತ್ರ ನಾಲ್ಕು ವೇದಗಳನ್ನು ಗರ್ಭೀಕರಿಸಿ ಕೊಂಡಿದೆ. ಶ್ರೀ ರುದ್ರವ ನೊಳ ಕೊಂಬುದು ಅಷ್ಟಮಾನುವಾಕ. ಇದನ್ನು ಒಳಕೊಂಬುದು **"ನಮಃ ಶಿವಾಯ ಮಂತ್ರ''** ಈ ಮಹಾ ತಾರಕ ಮಂತ್ರಾರ್ಥಸ್ವರೂಪಿ ಪರಮ ಪರಶಿವನಹುನು. ಪರಮೇಶ್ವರನ ವಾಚಕವು ಪಂಚಾಕ್ಷರೀ ಪರಮ ಪಂಚಾಕ್ಷರೀ ಮಂತ್ರಾರ್ಥದಲ್ಲಿ ನಿಗೂಢವಾಗಿಹನು ಪರಶಿವನು ಇದರಿಂದ ಶ್ರೀ ರುದ್ರದ ಅಷ್ಟನೂನು ವಾಕದ ಸಾರ ಸರ್ವಸ್ವ **"ಓಂ ನಮಃ ಶಿವಾಯ"** ಮಹಾ ಮಂತ್ರ ಈ ಮಹಾಮಂತ್ರದೊಳಗಿನ ರಸಭರಿತ ಸಾರಾಮೃತ **"ಶಿವ"** ಎಂಬೆರಡಕ್ಷರಗಳು ಇವು ಶಿವತತ್ವ ಪ್ರಬೋಧಿನಿ ಎಂದು ರೇಣುಕರು ಬೋಧಿಸಿ ರುವರು. ಶಿವಯೆಂಬೆರಡಕ್ಷರಗಳು, ಪರಶಿವ ಬ್ರಹ್ಮವ ಪ್ರಬೋಧಿಸುತ್ತಿಹವು. ಶಿವ ಯೆಂದರೆ,

**ಶಿವ ಇತ್ಯಕ್ಷರ ದ್ವಂ ದ್ವಂ । ಪರ ಬ್ರಹ್ಮ ಪ್ರಕಾಶಕಂ ॥**

ಎಂಬುದು ಅರ್ಥ ಪೂರ್ಣವೆನಿಸಿದೆ.

**ಸಚ್ಚಿದಾನಂದ ರೂಪಸ್ಯ । ಶಂಭೋ ರಮಿತ ತೇಜಸಃ ॥** ಅಂದರೆ ಶಂಭುವಿನ ಸಚ್ಚಿದಾನಂದರೂಪ, ಪರಮ ಅಖಂಡ ಸ್ವಪ್ರಕಾಶ ಸರ್ವಮಂಗಳ ಸ್ವರೂಪ ಎಂದು ಮಹಾಚಾರ್ಯ ರೇಣುಕರು ಬೋಧಿಸಿರುವರು. ಶಿವಯೆಂದರೆ **"ಮಂಗಳಂ ಸರ್ವಮಂಗಳಾನಾಂ"** ಎಂದು ಅರ್ಥ. **"ಶಿಕಾರ"** ಅಗ್ನಿತತ್ವ ವನ್ನು ಪ್ರತಿನಿಧಿಸಿ ಮಹಾರುದ್ರಾಂಶದಿಂದ ಬೆಳಗುತ್ತಲಿದೆ. **"ವಕಾರ"** ವಾಯು ತತ್ವವನ್ನು ಗರ್ಭೀಕರಿಸಿ ವಾಯು ಲಿಂಗದ ಪ್ರತೀಕವೆನಿಸಿದೆ. ಅಗ್ನಿ ವಾಯು ವಿನಲ್ಲಿ ಸಖತ್ವದ ಸಹಕಾರದಿಂದ ವಿಲೀನವಾಗಲು, ವಾಯುವು ಆಕಾಶತತ್ವದಲ್ಲಿ ವಿಲೀನ ಗೊಂಡಿರುವುದು. **''ನಮಃ''** ಶಬ್ಧ **"ಪೃಥ್ವಿ ಆಪ್"** ತತ್ವಳಿಗಗೆ ಆಗರವೆನಿಸಿದರೆ, **"ಶಿವಾಯ"** ಮಂತ್ರವು, ಅಗ್ನಿ, ವಾಯು ಆಕಾಶಗಳಿಗೆ ತಾಯ್ಮನೆಯಂತಿರುವ **"ಪರಾಕಾಶ ಅಥವಾ ಚಿದಾಕಾಶದಲ್ಲಿ''** ಅಂತರ್ಗ ತವಾಗಿರುವುವು.

**ಓಂ ಇತ್ಯೇಕಾಕ್ಷರಂ ಬ್ರಹ್ಮ । ನಮಃ ಶಿವಾಯೇ ತ್ಯಜಾಯತ ॥**

**ಪ್ರಥಮಂ ತಾರಕರೂಪಂ । ದ್ವಿತೀಯಂ ದಂಡ ಉಚ್ಯತೇ ।**

ತೃತೀಯಂ ಕುಂಡಲಾಕಾರಂ । ಚತುರ್ಥಂ ಚಾರ್ಧ ಚಂದ್ರಕಂ।
ಪಂಚಮಂ ದರ್ಪಣಾಕಾರಂ । ಷಷ್ಠಂ ಜ್ಯೋತಿ ಸ್ವರೂಪಕಂ ॥
ನಕಾರ ಸ್ತಾರ ಕಾರೂಪೋ । ಮಕಾರೋ ದಂಡ ಉಚ್ಯತೇ ।
ಶಿಕಾರಃ ಕುಂಡ ಲಾಕಾರೋ । ವಾಕಾರ ಶ್ಚಾರ್ಧ ಚಂದ್ರಕಃ ।
ಯಕಾರೋ ದರ್ಪಣಾಕಾರ । ಓಂಕಾರಃ ಪಂಚವರ್ಣರಾಟ್ ॥

ಷಡಕ್ಷರಗಳ ಸ್ವರೂಪವನ್ನು ಶಿವಾಗಮ ಸೂಕ್ತಿಗಳು ಸ್ವಚ್ಛಂಧವಾಗಿ ನಿರ್ದೇಶಿಸಿರುವುವು. ನಿಷ್ಕಲ ಬ್ರಹ್ಮ ಓಂಕಾರ ಪ್ರಣವ ಮಂತ್ರದ, ಮೊಡಲಿಲ್ಲದ ದಿವ್ಯ ಮೊಡಲಿನಲ್ಲಿ ರಾಜಿಸುವ ನಕಾರ ಬೀಜಾಕ್ಷರ ಮಂತ್ರ ತಾರಕಾಕಾರ, ಮಕಾರ ದಂಡವೆನಿಸಿದೆ. ಶಿಕಾರ ಕುಂಡಲಾಕಾರ ವಕಾರಾರ್ಧಚಂದ್ರಿಕ ಯಕಾರ ದರ್ಪಣಾಕಾರವಾಗಿ ಬೆಳಗಲು ಓಂಕಾರ ಚಿಜ್ಯೋತಿಯಿಂದ ರಂಜಿತ ವಾಗಿದೆ. **"ಓಂ ನಮಃ ಶಿವಾಯ ನಮಃ".**

"ಪ್ರಣವಃ ಸರ್ವವರ್ಣಾನಾಂ ಬೀಜ ಮಿತಿ ಶ್ರುತಂ"
ಅಪಾತಾಳ ನಭಃ ಸ್ಥಲಾಂತ ಭುವನ । ಬ್ರಹ್ಮಾಂಡ ಮಾವಿ
ಸ್ಫುರ । ಜ್ಯೋತಿ ಸ್ಫಾಟಿಕ ಲಿಂಗ ಮೌಳಿವಿಲಸ । ಸ್ಪೂರ್ಣೇಂದು
ವಾಂತಾಮೃತೈಃ । ಅಸ್ತೋಕಾಪ್ಲುತ ಮೇಕಮಾರ ಮನಿಶಂ ।
ರುದ್ರಾನುವಾಕಾರ್ನ್ ಜಪನ್ ಧ್ಯಾಯೇ ದೀಪ್ಸಿತ ಸಿದ್ಧಯೇ
ಧೃವ ಪದಂ । ವಿಪ್ರೋಭಿ ಷಿಂ ಚೇಚ್ಛಿವಂ ॥೧॥

ಬ್ರಹ್ಮಾಂಡ ವ್ಯಾಪ್ತದೇಹಾ ಭಸಿತ ಹಿಮ ।ರುಚಾ ಭಾಸಮಾನಾ
ಭುಜಂಗೈಃ । ಕಂಠೇ ಕಾಲಾಃ ಕಪರ್ದಾ ಕಲಿತ ಶಶಿಕಲಾ ।
ಶ್ಚಂಡ ಕೋದಂಡ ಹಸ್ತಾಃ । ತ್ರ್ಯಕ್ಷಾ ರುದ್ರಾಕ್ಷ ಭೂಷಾ
ಸ್ಸುಲಲಿತ ವಿಭವಾ । ಶ್ಯಾಂಭವಾ ಮೂರ್ತಿ ಭೇದಾ । ರುದ್ರ
ಸೂಕ್ತ ಪ್ರಕಟಿತ ವಿಭವಾ । ನಃ ಪ್ರಯಚ್ಚಂತು ಸೌಖ್ಯಂ ॥೨॥

## ಅಂಗಸ್ಥಲ ೮ ಪಂಚಾಕ್ಷರ ಜಪಸ್ಥಲಂ
(ಉತ್ತರ ಭಾಗ)

**ಜಪೇದೇತಾಂ ಮಹಾವಿದ್ಯಾಂ । ಶಿವರೂಪಾಮನನ್ಯ ಧೀಃ ।**
**ಜಪಸ್ತು ತ್ರಿವಿಧಃ ಪ್ರೋಕ್ತೋ ವಾಚಿ ಕೋಪಾಂಶು ಮಾನಸಃ ॥**
**ಮಾಹಾತ್ಮ್ಯಂ ವಾಚಿಕಸ್ಯೈ । ತಜ್ಜ ಪಯಜ್ಞಸ್ಯ ಕೀರ್ತಿತಂ ।**
**ತಸ್ಮಾಚ್ಛತ ಗುಣೋಪಾಂಶುಃ। ಸಾಹಸ್ರೋ ಮಾನಸಃ ಸ್ಮೃತಃ॥**
**ವಾಚಿಕಾತ್ತದುಪಾಂ ಶೋಚ್ಚ । ಜಪಾದ ಸ್ಯ ಮಹಾಮನೋಃ ।**
**ಮಾನಸೋ ಹಿ ಜಪಃ ಶ್ರೇಷ್ಠೋ । ಘೋರ ಸಂಸಾರ ನಾಶಕಃ॥**
(ಸಿ. ಶಿ. ಪರಿ. ೮ ಶ್ಲೋ ೨೬, ೩೧, ೩೨)

**"ಓಂ ನಮಃ ಶಿವಾಯ"**ವೆಂಬ ಪರಮ ಪಂಚಾಕ್ಷರೀ ಮಹಾಮಂತ್ರವನ್ನು ಸಾಧಕನು ಕ್ರಮವರಿತು ನಿತ್ಯ ಶ್ರೀ ಗುರೂಕ್ತ ಮಂತ್ರಮಾರ್ಗವನ್ನನುಸರಿಸಿ, ಭಕ್ತಿಯಿಂದ ಉಚ್ಚರಿಸುತ್ತಲಿರ ಬೇಕು ಮಹಾಮಂತ್ರವನ್ನು ಸ್ಮರಿಸಿ, ಪಠಿಸುವುದು ಜಪವೆನಿಸುವುದು. ವ್ರತಧಾರಿಯಾಗಿ ಎಡ ಬಿಡದೆ ಏಕಾಗ್ರ ಭಾವದಿಂದ ಶಿವಪಂಚಾಕ್ಷರೀ ಮಹಾ ಮಂತ್ರವನ್ನು ಆತ್ಮೋದ್ಧಾರಾರ್ಥ ಜಪಿಸುವುದು ಜಪಯಜ್ಞವೆನಿಸುವುದು. ಉರಿಯುತ್ತಿರುವ ಕೆಂಡದಲ್ಲಿ ಕೋಲನ್ನಿಟ್ಟರೆ, ಆ ಕೋಲೂ ಕೆಂಡಾಕಾರವಾಗುವುದು ಸರಿಯಷ್ಟೆ. ಅದರಂತೆ ಶಿವಧ್ಯಾನದಲ್ಲಿ ತಲ್ಲೀನನಾಗಿ ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರವನ್ನು ಮಮತೆಯಿಂದ ದೀರ್ಘಕಾಲ ಜಪಿಸುವುದರಿಂದ ಅಂತಃಕರಣದಲ್ಲಿ ಶಿವತೇಜಸ್ಸು ಉದ್ಭವಿಸಿ ಸರ್ವಾಂಗಗಳೂ ಪರಂಜ್ಯೋತಿಯ ಪ್ರಕಾಶದಲ್ಲಿ ತೋಯ್ದು ರಂಜಿತಗೊಳ್ಳುವುವು. ದೈವ ಭಕ್ತಿ ಸಂಪನ್ನನಾದ ಆಸ್ತಿಕನು ತನ್ನ ಜೀವಿತಕಾಲದಲ್ಲಿ ಮೂರು ಕೋಟಿ ಶಿವಪಂಚಾಕ್ಷರೀ ಮೂಲ ಮಂತ್ರ ಜಪವನ್ನು ಜಪಿಸಿ, ಸಿದ್ಧಿ ಪಡೆದರೆ, ಸರ್ವಾಂಗ ಲಿಂಗಿಯಾಗಿ ಲಿಂಗ ಭೋಗೋಪ ಭೋಗಿಯಾಗಿ ಶರಣನೆನಿಸುವನು. ಎಲ್ಲರೂ ಶರಣರಾಗಲು ಸಾಧ್ಯವಿಲ್ಲ. ಕೋಟಿಗೊಬ್ಬ ಶರಣ ಸಿಗಬಹುದು. ಸಹಸ್ರಾರು ವಾಜಪೇಯ, ಯಜ್ಞಗಳನ್ನೂ, ಅಗ್ನಿ ಹೋತ್ರಾದಿ ಕ್ಲೇಶಕರ ಕರ್ಮಾಂಗಳನ್ನೂ ಆಚರಿಸಿದರೂ, ಕೃಚ್ಛ್ರಾಂದ್ರಾಯಣಾದಿ ವ್ರತ

ಗಳಿಂದಲೂ, ಏನು ಫಲ ? ಶಿವ ಪಂಚಾಕ್ಷರೀ ಜಪಕ್ಕೆ ಕೋಟಿಯಲ್ಲಿ ಒಂದು ಭಾಗ ಈ ವ್ರತಗಳು ಸರಿ ಬರಲಾರವು. ನಶ್ವರ ಪದಾರ್ಥಗಳನ್ನು ಮುಂದು ಮಾಡಿಕೊಂಡು ಫಲಾ ಪೇಕ್ಷಗಳಿಂದ ಆಚರಿಸುವ ಕಾಮ್ಯ ವ್ರತಗಳೂ, ಯಾಗಾದಿಯಜ್ಞಗಳು ಶಿವ ಪಂಚಾಕ್ಷರೀ ಮಂತ್ರ ಜಪಯಜ್ಞಕ್ಕೆ ಸರಿ ತೂಗಲಾರವು. ಎಂತು ಮೃಗರಾಜ ಸಿಂಹದ ಎದುರು ಇತರ ಪ್ರಾಣಿಗಳು ನಿಲ್ಲಲಾರವೋ ಅದರಂತೆ ಪಂಚಾಕ್ಷರೀ ಜಪ ವ್ರತದ ಎದುರು ಇತರ ವ್ರತಗಳು ಸರಿಸಾಟಿಯಾಗಲಾರವು. ಶುದ್ಧನಾಗಿರಲಿ ಅಶುದ್ಧನಾಗಿರಲ್ಲಿ, ಅಜ್ಞನಾಗಿರಲಿ, ಪತಿತನಾಗಿರಲಿ, ಪಂಚಾಕ್ಷರೀ ಮಹಾಮಂತ್ರ ಜಪದಿಂದ ಅವನ ಬಹುಜನ್ಮ ಕೃತ ಘೋರಪಾತಕ ರಾಶಿ ನಿರ್ನಾಮವಾಗಿ ನಶಿಸಿ ಹೋಗುವುವು. ಒಲವಿನಿಂದ ವೊಮ್ಮೆ ಭಾವ ಪೂರ್ವಕ **"ಓಂ ನಮಃ ಶಿವಾಯ"** ವೆಂದರೆ, ತನ್ನನ್ನು ಎಳೇಳು ಜನ್ಮಗಳಿಂದ ಬಳಸಿರ್ಪ, ಅನಂತ ಪಾಪ ಕೋಟಿಗಳು ಬಿಟ್ಟೋಡುವುವು **"ಜಪತೋ ನಾಸ್ತಿ ಪಾತಕಂ".**

ಜಪ ಯಜ್ಞ ಮೂರು ಪ್ರಕಾರವಾಗಿದೆ. ವಾಚಿಕ, ಉಪಾಂಶು, ಮಾನಸಿಕ. ವರ್ಣಮಾಲೆಯಿಂದ ಕೂಡಿ ಬೆಳಗುವ ಮಹಾಮಂತ್ರ ವಾಚಕವೆನಿಸಿದೆ. **"ಓಂ ನಮಃ ಶಿವಾಯ"** ಮಂತ್ರವನ್ನು ಸರ್ವರೂ ಕೇಳುಂತೆ ಪಠಿಸಿ, ಹಾಡಿ, ಪಾಡಿ, ನಲಿದಾಡುವುದು ವಾಚಕ ಜಪವೆನಿಸಿದೆ. ಇದರ ಮಹಿಮೆ ಮಾತು ಮನಗಳಿಗೆ ನಿಲುಕದು. ಇದಕ್ಕಿಂತಲೂ ನೂರ್ಮಡಿ ಮಿಗಿಲು ಉಪಾಂಶು ಜಪ. ಯಾರಿಗೂ ಕೇಳಿಸದಂತೆ ತುಟಿಗಳನ್ನು ಮೆಲ್ಲಗೆ ಅಲ್ಲಾಡಿಸುತ್ತ ಮಂತ್ರ ಲೋಪವಿಲ್ಲದೆ ನಿಶ್ಶಬ್ದವಾಗಿ ಮಮತೆಯಿಂದ ಜಪಿಸುವುದು ಉಪಾಂಶು ಜಪವೆನಿಸಿದೆ ಇದಕ್ಕಿಂತಲೂ ಸಹಸ್ರ ಪಟ್ಟು ಮಾನಸಿಕ ಜಪ ಅತ್ಯಧಿಕವೆನಿಸಿದೆ. ತುಟಿ, ನಾಲಿಗೆ ತುದಿ ಸಹ ಅಲುಗದಂತೆ, ಸಮಕಾಯ ಶಿರೋಗ್ರೀವಯುತನಾಗಿ ನಿಶ್ಚಲ ಭಾವದಿಂದ ಭಕ್ತ್ಯಾ ಮಹಾಮಂತ್ರಾಕ್ಷರ ರೂಪವನ್ನು ಧ್ಯಾನಿಸಿ ಮಾನಸಿಕವಾಗಿ ಅಸ್ಖಲಿತ ಭಾವದಿಂದ ಜಪಿಸುವುದು ಮಾನಸಿಕ ಜಪವೆನಿಸಿದೆ. ಈ ತ್ರಿವಿಧ ಜಪಾನುಷ್ಠಾನದಿಂದ, ಜನ್ಮಾರ್ಜಿತ ಅನಂತ ಘೋರ ಪಾಪ ರಾಶಿಗಳೂ, ಕಾಮಕ್ರೋಧಾದಿ ಅರಿಷಡ್ವರ್ಗಗಳೂ. ಆಣವಾದಿ ಮಲತ್ರಯಗಳೂ, ಆದಿ ಭೌತಿಕಾದಿ ತಾಪತ್ರಯಗಳೂ ಪೂರ್ಣನಶಿಸುವುವು ಆಗ, ಸಾಧಕನು ಶುದ್ಧ ಬ್ರಹ್ಮ ಪರಾತ್ಪರ ವಸ್ತುವಿನಂತೆ ವಿರಾಜಿಸುವನು. ಇವನ ಘೋರ ಸಂಸಾರ

ಸಂತಾಪ ಬಿಟ್ಟೋಡುವುದು. ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರ ಜಪಾನುಷ್ಠಾನದ ಹಿರಿಮೆ, ಅಗ್ಗಳಿಕೆ ಅನಿರ್ವಚನೀಯ. ಮಾನಸಿಕ ಮಂತ್ರಜಪ ಅತಿ ಮನೋಹರ. ಜಪದ ಪ್ರಭಾವ ಶಿವನಷ್ಟೇ ವರ್ಣನಾತೀತ. ಫಲ ಅನಂತ ಅಪಾರ. ನಿತ್ಯ ಪ್ರಣವ ಪಂಚಾಕ್ಷರೀ ಮಂತ್ರ ಜಪದಿಂದ, ಅಂತರಂಗ ಶುಭ್ರ ಸ್ಫಟಿಕದಂತೆ ನಿರ್ಮಲವಾಗುವುದು. ಮನೋ ಬುದ್ಧಿ ಜ್ಞಾನ ತತ್ವಗಳು, ಏಕೀಭವಸಿ, ಸ್ವಸ್ವರೂಪ ದರ್ಶನಕ್ಕೆ ಅಣಿ ಮಾಡಿ ಕೊಡುವುವು.

ಪ್ರಣವಮಯ ಓಂಕಾರನಾದ, ಅಂತಃಕರಣದಲ್ಲಿ ಚಿಮ್ಮಿ ಚಿನ್ನಾದ ಸ್ಫುರಿಸುವುದು. ಈ ಸ್ಪಂದನದಿಂದ ಪಂಚಾಕ್ಷರೀ ಮಂತ್ರಗತ ಅದ್ವಿತೀಯ ಶಿವ ತತ್ವ ಪಿಂಡಾಂಡವನ್ನೆಲ್ಲಾ ಸ್ಪರ್ಶಿಸಿ, ಶಿವಾಭಿಮುಖವಾಗುವಂತೆ ಅಂಗನನ್ನು ಜಾಗೃತಗೊಳಿಸುವುದು.

**ಅನೇನ ಮೂಲ ಮಂತ್ರೇಣ । ಶಿವಲಿಂಗಂ ಪ್ರಪೂಜಯೇತ್ ॥**

**ನಿತ್ಯಂ ನಿಯಮ ಸಂಪನ್ನಃ । ಪ್ರಯತಾತ್ಮಾ ಶಿವಾತ್ಮಕಃ ॥**

ಯಾವ ಜ್ಜೀವವೂ ಆಚಾರ ಸಂಪನ್ನನಾಗಿ ನಿಯಮದಿಂದ ಇಷ್ಟಲಿಂಗವನ್ನು ವಿಧಿವತ್ತಾಗಿ ಪೂಜಿಸುತ್ತಾ, ಮೂಲ ಮಂತ್ರೋಚ್ಚಾರಣೆಯನ್ನು ಶಿವ ಪ್ರೀತ್ಯರ್ಥ ಜಪಿಸ ಬೇಕು. ಈ ಕಾರಣದಿಂದ ಶ್ರೀ ಜ॥ ರೇಣುಕಾಚಾರ್ಯರು,

**ಜಪೇತ್ ಪಂಚಾಕ್ಷರೀ ವಿದ್ಯಾಂ । ಶಿವತತ್ವ ಪ್ರಬೋಧಿನೀಂ ॥**

ಯೆಂದು ಪ್ರತಿಪಾದಿಸಿರುವರು. ಪಿಂಡಾಂಡಗತ ಶಿವತತ್ವವನ್ನು ಬ್ರಹ್ಮಾಂಡಗತ ಶಿವತತ್ವದೊಂದಿಗೆ ಸಮಿಚೀನ ಗೊಳಿಸಿ, ಧ್ಯಾನ ಯೋಗದ ಪ್ರಭಾವದಿಂದ ಮನಸ್ಸಿನಲ್ಲಿ ಒಂದು ಗೂಡಿಸಿ, ಸ್ವಾನುಭೂತಿಯ ಬೆಳಗಿನಲ್ಲಿ ವಿರಾಜಿಸಿ, ನಿತ್ಯಾನು ಸಂಧಾನ ಮಾಡುವ ವಿಧಾನ, ಶಿವಯೋಗಾನಂದವನ್ನು ವೃದ್ಧಿ ಗೊಳಿಸಿ, ಸಂವರ್ಧಿಸುವ ಅಖಂಡ ಅನಂತ ದಿವ್ಯ ಶಕ್ತಿ ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರದಲ್ಲಿ ಸ್ಫೂರ್ತಿ ಗೊಂಡಿದೆ.

**ಸ್ವಾನುಭೂತ್ಯೇಕ ಮಾನಾಯ । ನಮಃ ಶಾಂತಾಯ ತೇಜಸೇ ॥**

ಈ ಘನ ತತ್ವ ಶ್ರೀ ಗುರು ಕಟಾಕ್ಷದಿಂದ ವೇದ್ಯವಾಗುತ್ತದೆ.

ಅನಂತ ಕೋಟಿ ಬ್ರಹ್ಮಾಂಡಗಳ ಒಡೆಯ ಶಿವ. ಶಿವನ ವಾಚಕ ಓಂ ನಮಃ ಶಿವಾಯ ಈ ಷಡಾಕ್ಷರೀ ಮಂತ್ರದಲ್ಲಿ ವಿದ್ಯುದ್ ಸ್ಫುರಣದಂತೆ ಶಿವನು ಪ್ರಸನ್ನನಾಗಿಹನು. ಶಿವ ಪಂಚಾಕ್ಷರೀ ಮಂತ್ರಗಳೇ ಅಂಗ. ಮಂತ್ರಾರ್ಥವೇ ಲಿಂಗ. ಲಿಂಗಪತಿ ದೇವನ ಮಹಾ ಸತಿ ಅಂಗ ಈ ಸತಿಪತಿಗಳ ಸಂಘ ಸಮರಸ ಸಂಪರ್ಕ, ಲಿಂಗಾಂಗ ಸಮರಸವೆನಿಸಿದೆ. ಅಂಗನು (ಜೀವಾತ್ಮನು) ಜೀವಿತ ಕಾಲವಲ್ಲಿ ಶ್ರೀ ಗುರು ಕಟಾಕ್ಷದಿಂದ, ತನ್ನೊಡೆಯ ಲಿಂಗಪತಿ ದೇವನೊಂದಿಗೆ ಸಾಗರ ತರಂಗ ಭಂಗಿ ನ್ಯಾಯದಂತೆ ಭಕ್ತ್ಯಾ ಕೂಡಿ, ಸಾಯುಜ್ಯ ಪದವಿ ಹೊಂದುವುದು ಪರಮ ಮೋಕ್ಷವೆನಿಸಿದೆ. ಇಂತಪ್ಪ ಅದ್ವಿತೀಯ ಮುಕ್ತ ಸ್ಥಾನವನ್ನು ತನ್ನೊಳಗೆ ತಾನು ಅರಿತು, ಆ ಅರಿವಿನ ಮೊನೆಯ ಕೊನೆಯಲ್ಲಿ ಜಾಜ್ವಲ್ಯ ಮಾನವಾಗಿ ಪ್ರಜ್ವಲಿಸುವ ಸ್ಥಿತಿ ಶಿವಾನಂದವೆನಿಸಿದೆ. ಮಾನವ ಜನ್ಮದ ಸಾರ್ಥಕತೆ ಈ ಗುರಿಯಲ್ಲಿ ಅಡಗಿದೆ. ಇದನ್ನೇ ಆತ್ಮಕಲ್ಯಾಣವೆನ್ನುತ್ತಾರೆ. ಮಹಾಜನರು ಒಂದು ಲಕ್ಷ ದೀನ ದಲಿತರ ಧಾರ್ಮಿಕ ಕಲ್ಯಾಣಗಳನ್ನು ಉಚಿತವಾಗಿ ನೆರವೇರಿಸಿದರು, ಲಿಂಗ ಪತಿ ಅಂಗ ಸತಿಯಂಥ ಆತ್ಮ ಕಲ್ಯಾಣವನ್ನು ಅಂತರಿಕವಾಗಿ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ವೊಮ್ಮೆ ನೆರವೇರಿಸಿದಷ್ಟು ಪ್ರತಿಫಲಕ್ಕೆ ಈಡಾಗಲಾರದು.

## ಅಂಗ ಸ್ಥಲ ೮. ಪಂಚಾಕ್ಷರ ಜಪ ಸ್ಥಲಂ
### (ಉತ್ತರ ಭಾಗ)

ಜೀವಿತ ಕಾಲದಲ್ಲಿ ಎಚ್ಚೆತ್ತ ಮಾನವ (ಶರಣ) ಲಿಂಗಾಂಗ ಸಮರಸ ಸೌರಭದವಲ್ಲಿ **"ಸಿಂಧೋ ಸರಿದ್ವಲ್ಲಭಂ"** ಎಂಬಂತೆ ವಂದಾದ ಬಳಿಕ, ಉಪನಿಷದ್ ಘೋಷದಂತೆ,

**ನ ಚ ಪುನರಾವರ್ತತೇ । ನ ಚ ಪುನರಾ ವರ್ತತೇ ॥**

ಎಂಬ ಪರಮ ಮುಕ್ತ ಸ್ಥಾನವನ್ನು ಹೊಂದಿ, ಗಂಗಾನದಿ ಶಿವ ಸಮುದ್ರದಲ್ಲಿ ಸಂಗಮ ಗೊಂಡಂತಾಗುವುದು. ಲಿಂಗಾಂಗ ಸಮರಸ ನಿತ್ಯ ನಿರತಿಶಯಾನಂದ ಆತ್ಮ ಕಲ್ಯಾಣ ಮಹೋತ್ಸವದ ಪರಮಾನಂದವನ್ನು ವರ್ಣಿಸಲಸಾಧ್ಯವಿ

ರುತ್ತೆ. "ಮೂಕಾಸ್ವಾದನವತ್" ಅನಿರ್ವಚನೀಯ, ಪ್ರೇಮ ಸ್ವರೂಪ ವಿದು. ಅರಮನೆಯ ರಾಜ ಕಲ್ಯಾಣ ವೈಭವೋತ್ಸವದಲ್ಲಿ ನೆಡೆದ ವೈಭವದ ಸಂತರ್ಪಣೆಯಲ್ಲಿ ಪಾಲ್ಗೊಂಡು ಹದ್ದೂರಿಯಾಗಿ ಊಟ ಮಾಡಿ ತೃಪ್ತನಾದ ಮೂಕನನ್ನು ಸಂಧಿಸಿ ರಾಜರ ಕಲ್ಯಾಣದ ಅರಮನೆ ಊಟ ಹೇಗಿತ್ತೆಂದು, ಕೇಳಿದಾಗ, ಸವಿಯೂಟ ಉಂಡ ಮೂಕ, ಹೌಹಾರಿ! ಮೈ ಮರೆತು, ಹುಬ್ಬಾರಿಸಿ, ನಾಲಗೆ ಚಾಚಿ ಚಪ್ಪರಿಸಿ "ಹಂ ಹಾ ಹೂ ಅಬ್ಬಬ್ಬಾ" ಎಂದು ಕುಣಿದಾಡುವನು. ವರ್ಣಿಸಲು ಆತ ಮೂಕನಷ್ಟೆ. ಇದರಂತೆ ಲಿಂಗಪತಿ ಅಂಗ ತಾ ಮಹಾಸತಿಯರ ಸಮರಸಾನಂದ ವರ್ಣನಾತೀತವಿರುತ್ತೆ. ಒಬ್ಬ ಐಕ್ಯಸ್ಥಲದ, ಐಕ್ಯಾಂಗನು ಲಿಂಗಪತಿ ದೇವನೊಂದಿಗೆ ಸಾಮರಸ್ಯವಾದರೆ, ಕೈಲಾಸದ ತೊಂಭತ್ತಾರು ಸಾವಿರ ಪ್ರಮಥ ಗಣಾಧೀಶ್ವರರು. ಅತುಲಾನಂದ ದಿಂದ ನಲಿದಾಡುವರು. ಶಿವಶಿವೆಯರು ಸಂಪ್ರೀತರಾಗುವರು. ಇಂತಪ್ಪ ದೈವೀ ರಹಸ್ಯವನ್ನು ಶ್ರೀ ಗುರು ಮುಖದಿಂದ ಶ್ರವಣ ಮಾಡಿ ಕೃತಾರ್ಥನಾಗ ಬೇಕು.

**ತಥಾ ಪಂಚಾಕ್ಷರೀ ಮಂತ್ರಾನ್ನಾಸ್ತಿ । ಮಂತ್ರಾಂತರಂ**
**ಮಹತ್ ॥**

ಇದರಿಂದಾಗಿ ಪಂಚಾಕ್ಷರೀ ಮಹಾಮಂತ್ರಕ್ಕಧಿಕವಾದ ಮಂತ್ರವಿಲ್ಲ.

**ಪಂಚಧಾ ಪಂಚಧಾ ಯಾನಿ । ಪ್ರಸಿದ್ಧಾನಿ ವಿಶೇಷತಃ ।**
**ತಾನಿ ಸರ್ವಾಣಿ ವಸ್ತೂನಿ । ಪಂಚಾಕ್ಷರ ಮಯಾನಿ ಹಿ ॥**

ಸೃಷ್ಠಿಯಲ್ಲಿ ಆಯಿದಯಿದಾಗಿ ಕಾಣುವ, ಪೃಥ್ವಿ, ಆಪ್, ಅಗ್ನಿ ಮೊದಲಾದ ಪಂಚ ಮಹಾ ಭೂತಗಳೂ ಕಣ್ಣು, ಮೂಗು, ಕಿವಿ ಮೊದಲಾದ ಪಂಚ ಜ್ಞಾನೇಂದ್ರಿಯಗಳೂ ಗಂಧ, ರಸ, ರೂಪ ಮೊದಲಾದ ಪಂಚ ತನ್ಮಾತ್ರೆಗಳೂ ವಾಕ್, ಪಾಣಿ, ಪಾದ ಇತ್ಯಾದಿ ಪಂಚ ಕರ್ಮೇಂದ್ರಿಯಗಳೂ, ಸದ್ಯೋಜಾತಾದಿ ಪಂಚ ಬ್ರಹ್ಮರೂ, ಸೃಷ್ಠಿ, ಸ್ಥಿತಿ, ಲಯ, ತಿರೋದಾನ ಅನುಗ್ರಹ ವೆಂಬ ಪಂಚ ಕೃತ್ಯಗಳೂ ಶಿವಪಂಚಾಕ್ಷರೀ ಮಂತ್ರಾಂತರ್ಗತ ಪಂಚ ಬೀಜಾಕ್ಷರಗಳಿಂದ ಪ್ರಾದುರ್ಭವಿಸಿವೆ.

ತ್ವಾಮಕ್ಷರಂ ಶಿವ ಮನಂತ ಮನೇಕ ರೂಪಂ । ಶಕ್ತ್ಯಾ
ವಿಶಿಷ್ಟ ಮುಭಯಾತ್ಮಕ । ಮೇಕಮಾದ್ಯಂ ॥

ಎಂಬಂತೆ ಪಂಚಾಕ್ಷರೀ ಸ್ವರೂಪದಿಂದ ಶಿವನು ಸ್ಫುರಿಸುತಿಹನು.

ಸಿದ್ಧ್ಯೈ ಪಂಚಾಕ್ಷರಸ್ಯಾಸ್ಯ । ಶತಾನಂದಃ ಪುರಾಮುನಿಃ ।
ನರಕಂ ಸ್ವರ್ಗ ಮಕರೋತ್ । ಸಿಂಗಿರ ಸ್ಯಾಪಿ ಪಾಪಿನಃ ॥
ಪುರಾಸಾನಂದ ಯೋಗೀಂದ್ರಃ । ಶಿವಜ್ಞಾನ ಪರಾಯಣಃ
ಪಂಚಾಕ್ಷರಂ ಸಮುಚ್ಚಾರ್ಯ । ನಾರಕಾನುದ ತಾರಯತ್ ॥
ಉಪಮನ್ಯುಃ ಪುರಾಯೋಗೀ ।ಮಂತ್ರೇಣಾ ನೇನಸಿದ್ಧಿವಾನ್ ।
ಲಬ್ಧವಾನ್ ಪರಮೇಶಾನಾಚ್ಛೈವಶಾಸ್ತ್ರ ಪ್ರವಕ್ತೃತಾಂ ॥

ಪೂರ್ವದಲ್ಲಿ ಪ್ರಣವಸಹಿತ ಶಿವಪಂಚಾಕ್ಷರೀ ಮಹಾಮಂತ್ರವನ್ನು ನಿಷ್ಠೆಯಿಂದ ಜಪಿಸಿದ ಸಿದ್ಧ ಪುರುಷ, ನರಕದಲ್ಲಿ ದೀರ್ಘಕಾಲದಿಂದ ನರಳುತ್ತಿದ್ದ ಪಾಪಿಗಳನ್ನು ಉದ್ಧರಿಸಲು ಸಾನಂದ ಯೋಗೀಂದ್ರ ಋಷಿ ಪಂಚಾಕ್ಷರೀ ಮಂತ್ರ ವನ್ನು ಎಲ್ಲರಿಗೂ ಬೋಧಿಸಿ ಮಂತ್ರೋಚ್ಚಾರಣೆಗೆಯುತ್ತಿದೆಂತೆ, ಆ ನರಕವನ್ನು ಸ್ವರ್ಗಗೊಳಿಸಿದನು. ಶ್ರೀ ಶತಾನಂದ ಮುನಿಯೆಂಬ ಬೇರೊಬ್ಬ ಮಹಾತ್ಮರು ಶರಣಾಗತನಾದ ಸಿಂಗಿರನೆಂಬ ಪಾಪಿಯನ್ನು ಉದ್ಧರಿಸಿದರು. ಆರ್ತದರ್ಶಿಗ ಳಾದ ಮಹಾತ್ಮರು ಕರುಣಾಳುಗಳಲ್ಲವಾ ! ಶಿವಯೋಗಿ ಶಿವಶರಣರು ಸಹಜ ವಾಗಿಯೇ ಕ್ಷಮಾ ವಿಭೂಷಿತರು. ಕ್ಷಮಾಶಕ್ತಾ (ಶಕ್ತೌ) ಎಂದಿದೆ ನೀತಿ ಶಾಸ್ತ್ರ, ಶ್ರೀ ಉಪಮನ್ಯು ಮಹಾಮುನಿ ಶ್ರೀ ಧೌಮ್ಯ ಋಷಿಗಳ ಶಿಷ್ಯ, ಮಹಾತ್ಮ ಶ್ರೀ ವ್ಯಾಘ್ರಪಾದ ಮಹರ್ಷಿಗಳ ಪುತ್ರ, ಉಪಮನ್ಯು ಋಷಿಗಳು ಸದಾ ಶಿವಪಂಚಾಕ್ಷರೀ ಮೂಲಮಂತ್ರವನ್ನು ಜಪಿಸುತ್ತಾ. ಶಿವನನ್ನು ಸಾಕ್ಷಾತ್ಕರಿಸಿಕೊಂಡು ಪರಮಾತ್ಮನ ಅನುಗ್ರಹದಿಂದ, ಶಿವಶಾಸ್ತ್ರಾಚಾರ್ಯ ತ್ವವನ್ನು ಪಡೆದರು. ತತ್ಫಲವಾಗಿ ಶಿವಜ್ಞಾನ ಸುಧಾ ಸಿಂಧುವಿನಲ್ಲಿ ಈಜಿ ಪ್ರವೀಣರೆನಿಸಿ, ಧರ್ಮೋದ್ಧಾರ ಕಾರ್ಯಗಳನ್ನು ಸಂಸ್ಮರಣೀಯವಾಗಿ ನೆರವೇ ರಿಸಿ ಪೂಜ್ಯರೆನಿಸಿರುವರು. ಇದರಂತೆಯೇ ಶ್ರೀ ವಸಿಷ್ಠ ವಾಮದೇವ, ಗೌತ

ಮಾದಿ ಮಹರ್ಷಿಗಳೂ ಸಹ ಶಿವಪಂಚಾಕ್ಷರೀ ಮಹಾಮಂತ್ರ ಜಪಾನುಷ್ಠಾನ ಸಿದ್ಧಪುರುಷರಾಗಿದ್ದರು. ಪೊನ್ನೆ ಶಿವಪಂಚಾಕ್ಷರೀ ಮಹಾಮಂತ್ರವನ್ನು ಭಕ್ತಿಯಿಂದ ಉಚ್ಚರಿಸಿ—

ಸ ಕೃದು ಚ್ಚಾರ ಮಾತ್ರೇಣ । ಪಂಚಾಕ್ಷರ ಮಹಾ ಮನೋಃ ।
ಸರ್ವೇಷಾ ಮಪಿ ಜಂತೂನಾಂ।ಸರ್ವಪಾಪ ಕ್ಷಯೋ ಭವೇತ್ ॥
ಸಕೃದುಚ್ಚಾರಣಾದೇವ । ಸರ್ವ ಸಿದ್ಧಿ ಪ್ರದಾಯಕಃ । ಪಂಚಾ
ಕ್ಷರೀಂ ಸಮುಚ್ಚಾರ್ಯ । ಪುಷ್ಪಂ ಲಿಂಗೇ ವಿನಿಕ್ಷಿಪೇತ್ ॥
ಕಿಮಿಹಬಹುಭಿರುಕ್ತೈ ರ್ಮಂತ್ರ । ಮೇನಂ ಮಹಾತ್ಮಾ ।
ಪ್ರಣವ ಸಹಿತ ಮಾದೌ । ಯಸ್ತು ಪಂಚಾಕ್ಷರಾಖ್ಯಂ ।
ಜಪತಿ ಪರಮ ಭಕ್ತ್ಯಾ । ಪೂಜಯನ್ ದೇವ ದೇವಂ ।
ಸ ಗತ ದುರಿತ ಬಂಧೋ । ಮೋಕ್ಷ ಲಕ್ಷ್ಮೀಂ ಪ್ರಯಾತಿ ॥

ಮಾನವ ಸಾಯುಜ್ಯ ಮೋಕ್ಷಾನಂದವನ್ನು ಈ ಜನ್ಮದಲ್ಲೇ ಹೊಂದಲು ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರವನ್ನು ಒಂದು ಸಾರಿ ಪರಮ ಭಕ್ತ್ಯಾ ಓಂ ನಮಃ ಶಿವಾಯ ಎಂದು ಶ್ರೀ ಗುರೂಕ್ತಿಯಂತೆ ಜಪಿಸುತ್ತಾ,

ಇಷ್ಟಲಿಂಗಕ್ಕೆ ॥ ಪುಷ್ಪಂ ಲಿಂಗೇ ವಿನಿಕ್ಷಿಪೇತ್ ॥

ಪುಷ್ಪವನ್ನು ಅರ್ಪಿಸಿ ಕೃತಾರ್ಥನಾಗ ಬೇಕೆಂದು ಮಹಾಚಾರ್ಯರು ತಾವು ಆಚರಿಸಿ ಬೋಧಿಸಿ ಮಾರ್ಗದರ್ಶನ ನೀಡಿರುವರು.

ಶಿವ ಸೈಷಾ ಪಂಚಾಕ್ಷರೀ ವಿದ್ಯಾ । ಸರ್ವಶೃತಿ ಶಿರೋಗತಃ ॥

ಶ್ರೀ ಮಚ್ಚಾಂಭವ ಭಕ್ತಿಯೋಗ । ವಿಲಸನ್ನಿರ್ವಾಣ ನಿತ್ಯೋ
ತ್ಸವಾ । ಪ್ರೇಮಾನಂದ ರಸಾಬ್ಧಿ ವರ್ಧನ । ಸದಾ ಚಾರಕ್ರಿಯಾ
ಕೌಶಲಾ | ಕಾಮೋದ್ದಾಮ ಗುಣ ಪ್ರಭೂತ । ಮಹದೈಶ್ವ
ರ್ಯಾನು ಭೂತಿ । ಪ್ರಭಾಧಾಮಂ ತತ್ಪರಮಂ ಪದಂ । ಗುರು
ಪದಂ ವಂದೇ ಶಿವಾವಲ್ಲಭಾ ॥

ಓಂ ಕಾರೋ ವದನಂ ದೇವೀ । ನಮಃ ಕಾರಾಭುಜದ್ವಯಂ ।
ಶಿಕಾರೋ ದೇಹ ಮಧ್ಯಸ್ತು । ವಾಯಕಾರಾ ಪದದ್ವಯಂ ।
ಪೀಠಂ ಪಾದಾದಿ ಜಾನಂತ । ಮಾನಾಭೇರ್ಮಧ್ಯ ಮೀರಿತಂ ॥
ಹೃದಯಾಂತಂ ವರ್ತುಳಂ ಸ್ಯಾತ್ಕಂ । ಠಾಂತಂ ಗೋಮುಖಂ ತಥಾ । ಭ್ರೂಮಧ್ಯಾಂತಂ ಲಿಂಗ ಕಂಠೋ । ಮಸ್ತಕೋ ಲಿಂಗ ಮಸ್ತಕಃ ॥

## ಅಂಗಸ್ಥಲ ೪೪-೯ ನೇ ಸ್ಥಲ ಭಕ್ತಮಾರ್ಗ ಕ್ರಿಯ ಸ್ಥಲ

(ಪೂರ್ವ ಭಾಗ ನವಮ ಪರಿಚ್ಛೇದ)

ಶ್ರವಣಂ, ಕೀರ್ತನಂ, ಶಂಭೋಃ ಸ್ಮರಣಂ, ಪಾದ ಸೇವನಂ ।
ಅರ್ಚನಂ, ವಂದನಂ, ದಾಸ್ಯಂ, ಸಖ್ಯಮಾತ್ಮ ನಿವೇದನಂ ।
ಏವಂ ನವ ವಿಧಾ ಭಕ್ತಿಃ । ಪ್ರೋಕ್ತಾ ದೇವೇಸ ಶಂಭುನಾ ।
ದುರ್ಲಭಾ ಪಾಪಿನಾಂ ಲೋಕೇ ಸುಲಭಾ ಪುಣ್ಯ ಕರ್ಮಣಾಂ॥
ಸಿಂಹಾಸನೇ ಶುದ್ಧ ದೇಶೇ । ಸುರಮ್ಯೇ ರತ್ನ ಚಿತ್ರಿತೇ । ಶಿವ ಲಿಂಗಸ್ಯ ಪೂಜಾ ಯಾ ಸಾ ಬಾಹ್ಯಾ ಭಕ್ತಿ ರುಚ್ಯತೇ ॥ ಲಿಂಗೇ ಪ್ರಾಣಂ ಸಮಾದಾಯ । ಪ್ರಾಣೇ ಲಿಂಗಂ ತು ಶಾಂಭವಂ । ಸ್ವಸ್ಥಂ ಮನಸ್ತಥಾ ಕೃತ್ವಾ ನ । ಕಿಂಚಿಚ್ಚಿಂತ ಯೇದ್ಯದಿ ಪ್ರಸಾದೋ ಭಕ್ತಿ ಸಂಭವಃ । ಯಥೈವಾಂಕುರತೋ ಬೀಜಂ । ಬೀಜತೋ ವಾ ಯಥಾಂ ಕುರಃ ॥

(ಶ್ಲೋ. ೨, ೩, ೭, ೮, ೧೧)

ಭಕ್ತನ ಮಾರ್ಗ ಭಗವನ್ಮೇಣ ಮಾರ್ಗ. ದಯಾ ಸಿಂಧುವಾದ ಭಗವಂತನು, ತನ್ನ ಭಕ್ತರಿಗಾಗಿ ತನ್ನನ್ನೇ ಅರ್ಪಿಸಿಕೊಂಡಿರುವನು.

ಮದ್ಭಕ್ತಕಾಯೋ ಮಮ ಕಾಯಃ ॥ ಎಂದೂ ಮತ್ತೂ
ಮದ್ಭಕ್ತೋ ಮಮಾಧಿಕಂ ॥

ಅಂದರೆ, ನನ್ನ ಭಕ್ತನ ಶರೀರ ನನ್ನ ಶರೀರ ಮತ್ತೂ ನನ್ನ ಭಕ್ತನು ನನಗಿಂತ ಅಧಿಕನಿರುವನೆಂದು ವಾತ್ಸಲ್ಯ ಭಾವದಿಂದ ಘೋಷಿಸಿರುವನು. ಭಕ್ತ, ಭಗವಂತ ಇವರ ಸಂಬಂಧ ಭಕ್ತಿ ವಿಶೇಷದಿಂದ ಸಹಜ ಸುಂದರವಿರುತ್ತೆ. ಶ್ರೀ ಸಿದ್ಧಾಂತ ಶಿಖಾಮಣಿಯ ಒಂಭತ್ತನೆ ಪರಿಚ್ಛೇದ, ಭಕ್ತಿ ಪರಭಕ್ತಿಯ ಔನ್ನತಿಯನ್ನೂ ಹಾಗೂ ಭಕ್ತ ಭಗವಂತನ ಸ್ವಸ್ವರೂಪವೆಂದೂ, ಪರಮಾತ್ಮನ ಅಮೃತ ಮಯ ಅನುಗ್ರಹ ರೂಪವೆಂದೂ, ಮಹಾಚಾರ್ಯರು ಪ್ರಕಾಶ ಪಡಿಸಿರುವ ಅವ್ಯಭಿಚಾರಿಣಿ ಭಕ್ತಿಗೆ ಅಂದರೆ, **"ಲಿಂಗಪತಿ ತಾ ಮಹಾಸತಿ"** ಎಂಬ ಅವಿನಾಭಾವ ಶಿವನೊಲುಮೆಗೆ ಪ್ರೇರಕವೆನಿಸಿದೆ. ಭಕ್ತ ಮಾರ್ಗವೆಂದರೆ ಗುರೂಕ್ತ ಮಂತ್ರ ಮಾರ್ಗೇಣ ಅಂದರೆ, ಕ್ರಿಯೆಯಿಂದೊಡಗೂಡಿದ ಶ್ರೀ ಗುರುವಿತ್ತ ಇಷ್ಟಲಿಂಗ ಕ್ರಿಯಾಶಕ್ತಿಯುತವಾದುದು. ಕ್ರಿಯಾಭಕ್ತಿ ಜ್ಞಾನಗಳ ಸಂಗಮ ಇಷ್ಟಲಿಂಗ. ಭಕ್ತನು ತನ್ನಿಷ್ಟ ಲಿಂಗವನ್ನು ದ್ವಿಸಂಧ್ಯಾಕಾಲಗಳಲ್ಲಿ, ನಿತ್ಯ ಅನನ್ಯ ಭಾವೇನ ಅಂದರೆ ಪರಶಿವ ಬ್ರಹ್ಮವೇ ಇಷ್ಟಲಿಂಗವೆಂದೂ, ಇದರ ಧಾರಣದಿಂದ ದೇಹತ್ರಯಂಗಳು ಪವಿತ್ರವಾಗಿ, ಪೂಜಾರಾಧನೆಯನ್ನು ನಿತ್ಯವೂ ನವವಿಧ ಭಕ್ತಿಯಿಂದ ವಿಧಿವತ್ತಾಗಿ ಯಥಾಶಕ್ತಿ ಅವಧಾನ ಭಕ್ತಿಯಿಂದ ನೆರವೇರಿಸಿ 'ಅಯಂ ಭಗವಾನ್ ಶಿವಲಿಂಗರೂಪಿ ಪರಮಾತ್ಮನೇ, ನನ್ನ ಕರಪೀಠವನ್ನಲಂಕರಿಸಿ ನನ್ನ ಸಕಲೈಶ್ವರ್ಯ ಸ್ವರೂಪನಾಗಿ, ನನಗೆ ಅನವರತ ಕಲ್ಯಾಣ ಶುಭಾಭ್ಯುದಯಗಳನ್ನು ಅನುಗ್ರಹಿಸುವ ಪ್ರಭುವಾಗಿ ಪ್ರಸನ್ನನಾಗಿದ್ದೀಯ' ಎಂದು ಸ್ವಾಮಿಯನ್ನು ನಿರಂತರ ಪೂಜಿಸಿ, ಸ್ತುತಿಸಿ, ಧ್ಯಾನಿಸಿ ಆರಾಧಿಸ ಬೇಕು ದೇಹ ರಕ್ಷಣೆಗೆ ಅನ್ನ ಪಾನಾದಿಗಳು ಆಧಾರವಾಗಿರುವಂತೆ. ಜೀವಾತ್ಮನಿಗೆ (ಅಂಗನಿಗೆ) ನಿತ್ಯ ನೈಮಿತ್ತಿಕಾದಿ ಪೂಜಾರಾಧನೆಗಳು ದೈವೀ ಶಕ್ತಿವರ್ಧಕವಾದ ಅನ್ನಾಹಾರಗಳೆನಿಸಿವೆ. ಶ್ರೀ ಕೃಷ್ಣಗೀತೆಯಲ್ಲಿ ಈ ಮಹದಂಶವನ್ನು ಪ್ರಕಾಶ ಪಡಿಸುತ್ತಾ,

**ಯಜ್ಞದಾನ ತಪಃ ಕರ್ಮ | ನ ತ್ಯಾಜ್ಯಂ ಕಾರ್ಯ ಮೇವ**
**ತತ್ | ಯಜ್ಞೋದಾನಂ ತಪಶ್ಚೈವ| ಪಾವನಾನಿ ಮನೀಷಿಣಾಂ||**

(ಗೀ. ಅ. ೧೭ ಶ್ಲೋ. ೫)

ಮನುಷ್ಯ ಜೀವಂತನಾಗಿರುವವರೆವಿಗೂ, ಉಭಯ ಸಂಧ್ಯಾ ಕಾಲಗಳಲ್ಲಿ ನಿತ್ಯ ತನ್ನ ಕರ್ತವ್ಯ ದೃಷ್ಟಿಯಿಂದ ಬಿಡದೆ, ಶ್ರದ್ಧಾಭಕ್ತಿಯಿಂದ, ಶಕ್ತ್ಯಾನುಸಾರ ಪೂಜಾಧ್ಯಾನಗಳನ್ನು ಈಶ್ವರಾರ್ಪಿತ ಭಾವದಿಂದ. ನವವಿಧ

ಭಕ್ತಿ ಮಾರ್ಗಗಳನ್ನು ಮೈಗೂಡಿಸಿ ಕೊಂಡು, ಈಶ್ವರಾರಾಧನೆಯಲ್ಲಿ ತತ್ಪರನಾಗಿರ ಬೇಕೆಂದು ಬೋಧಿಸಿಹನು. ಶ್ರೀ ಜ|| ರೇಣುಕಾಚಾರ್ಯರು ಸಹ,

**ಪಂಚಧಾ ಕಥ್ಯತೇ ಸದ್ಭಿ । ಸ್ತ ದೇವ ಭಜನಂ ಪುನಃ । ತಪಃ**
**ಕರ್ಮ ಜಪೋ ಧ್ಯಾನಂ ಜ್ಞಾನಂ ಚೇ । ತ್ಯನು ಪೂರ್ವಕಂ ||**
(ಸಿ ಶಿ. ಪರಿ. ೯ ಶ್ಲೋ. ೨೧)

ಮೇಲುಕ್ತವಾದ ಅಂಶವನ್ನು ಚಿತ್ತರಿಸಿರುವರು.

ಭಕ್ತಮಾರ್ಗ ಕ್ರಿಯಾಸ್ಥಲ ಅಂತರ್ಯಾಮಿ ಪರಶಿವನನ್ನು ಜ್ಞಾನದೃಷ್ಟಿಯಿಂದ ಸಂದರ್ಶಿಸಲು ರಾಜಮಾರ್ಗವೆನಿಸಿದೆ. ಇಂತಪ್ಪ ವಿದ್ಯೆಯನ್ನು ಶ್ರೀ ಗೀತಾಚಾರ್ಯನು ರಾಜ ವಿದ್ಯಾ ರಾಜ ಗುಹ್ಯವೆಂದು ಪ್ರತಿಪಾದಿಸಿರುವನು.

**ಶ್ರೇಯೋಹಿ ಜ್ಞಾನಮಭ್ಯಾಸಾ । ಜ್ಞಾನಾಧ್ಯಾನಂ ವಿಶಿಷ್ಯತೇ ||**
**ಧ್ಯಾನಾತ್ಕರ್ಮ ಫಲತ್ಯಾಗಾ ಸ್ತ್ಯಾಗಾ । ಚ್ಛಾಂತಿ ರ ನಂತರಂ ||**
(ಸಿ. ಅ. ೧೨, ಶ್ಲೋ. ೧೨)

ಶಿವಜ್ಞಾನಾಭ್ಯಾಸ ಶ್ರೇಯಸ್ಕರ. ಜ್ಞಾನಕ್ಕಿಂತಲೂ ಶಿವಧ್ಯಾನಾನುಸಂದಾನ ಉತ್ತಮ. ಧ್ಯಾನಕ್ಕಿಂತಲೂ ಕರ್ಮ ಫಲ ತ್ಯಾಗ ಉತ್ಕೃಷ್ಟವಾದುದು. ತದನಂತರ ತ್ಯಾಗ ಪರಮೋತ್ಕೃಷ್ಟವೆನಿಸಿದೆ. ತ್ಯಾಗದಿಂದ "**ತ್ಯಾಗೇನೈಕೇ ಅಮೃತತ್ವಮಾನಶುಃ**" ಎಂದರೆ "**ಮೃತ್ಯೋ ಮಾ ಅಮೃತಂ ಗಮಯ**"ಯೆಂಬ ಉಪನಿಷದ್ವಾಣಿಯಂತೆ ಮೃತ ಜೀವನು ಅಮರನೆನಿಸಿ, ಅಮೃತಮಯನಾಗುವನು ಆದ್ದರಿಂದ ಭಕ್ತಿಮಾರ್ಗಕ್ರಿಯಸ್ಥಲದ ಪರಭಕ್ತಿಯ ತಳಪಾಯದ ಮೇಲೆ, ನೆಲೆಯೂರಿ ನಿಂತು, ಲಿಂಗಾಂಗ ಸಮರಸ ಸಾಮರಸ್ಯ ಸಾಯುಜ್ಯ ಮೋಕ್ಷಾನಂದವನ್ನು, ಶರಣನು ಸಾಕ್ಷಾತ್ಕರಿಸಿಕೊಳ್ಳಲು ಭಕ್ತಿ ಮಾರ್ಗಕ್ರಿಯ ಸ್ಥಲ ನಾಂದಿಯೆನಿಸಿದೆ. ಕ್ರಿಯೆ ಎಂಬ ಶಬ್ಧ ಅರ್ಥಗರ್ಭಿತವಾಗಿದೆ. "**ಕರ್ಮ**"ಯೆಂಬ ಪದಕ್ಕೂ "**ಕ್ರಿಯೆ**"ಯೆಂಬ ಪದಕ್ಕೂ ಅರ್ಥ ಅಜಗಜಾಂತರ ವ್ಯತ್ಯಾಸವಿದೆ. ಯೋಗಶಾಸ್ತ್ರದಲ್ಲಿ ಕ್ರಿಯಾಪಾದವೆಂಬ ಒಂಬತ್ತು ಮಂಗಳ ಘಟ್ಟವಿರುತ್ತೆ. ನಾಲ್ಕು ಪಾದಗಳಲ್ಲಿ ಇದು ಮೊದಲನೇ ಪಾದ. ಇಷ್ಟ ಲಿಂಗ, ಆಚಾರಲಿಂಗ, ಗುರುಲಿಂಗ ಸ್ಥಲಗಳು, ಕ್ರಿಯಾಜ್ಞಾನ ಸಮಸಮು

ಚ್ಛಯ ಸಮನ್ವಯ ಧರ್ಮವನ್ನು, ನಭೋಮಂಡಲದೆತ್ತರ ಎತ್ತಿಹಿಡಿದು ಬೋಧಕವಾಗಿವೆ. ಕರ್ಮ ಎಂಬ ಶಬ್ಧ ತ್ರಿಗುಣಾತ್ಮಕವೆನಿಸಿ ಬಂಧನಕ್ಕೊಳ್ಳಪಟ್ಟಿದೆ, ಹಾಗೂ ಇದು ಪ್ರವೃತ್ತಿ ಮಾರ್ಗಾವಲಂಭಿಯಾಗಿದೆ ನಶ್ವರ ಫಲವುಳ್ಳದ್ದು. ಇದರಂತಲ್ಲದೆ, ಕ್ರಿಯ ತತ್ವ ತ್ರಿಗುಣಾತೀತ ಮಹತ್ತತ್ವವನ್ನು ಬೆಸ್ಥಿಧಿಸುತ್ತ ಬಂಧನಕ್ಕೊಳಗಾಗದೆ, ನಿವೃತ್ತಿ ಧರ್ಮವನ್ನು ಎತ್ತಿ ಹಿಡಿದಿದೆ. ಭಕ್ತಮಾರ್ಗ ಕ್ರಿಯಾಸ್ಥಲ ಪ್ರವೃತ್ತಿಯಲ್ಲಿ ನಿವೃತ್ತಿ ಮನೋಭಾವವನ್ನು ಬೆಳಸಿ ಅದರಂತೆ ಆಚರಿಸಿ ಕೃತಕೃತ್ಯನಾಗುವಂತೆ ಬೋಧಿಸುತ್ತೆ

ನವವಿಧ ಭಕ್ತಿಮಾರ್ಗಗಳಲ್ಲಿ (೧ ಶ್ರವಣಂ),ಶ್ರವಣವು ಆದಿಗಾದಿಯೆನಿಸಿದೆ ವೇದಕಾಲದ ಋಷಿಗಳು ಅಪೌರುಷೇಯವೆನಿಸಿದ ಋಗಾದಿವೇದತ್ರಯಗಳನ್ನು ಕರ್ಣಾಕರ್ಣಿಕೆಯಾಗಿ ಕಂಠೋಕ್ತವಾಗಿ ಬೋಧಿಸಲು, ಶಿಷ್ಯ ಪರಂಪರೆ, ಶ್ರವಣ ಭಕ್ತಿ ಮಾತ್ರದಿಂದ ಎಲ್ಲವನ್ನೂ ಹೃದ್ಗತಗೊಳಿಸಿ ಕೊಂಡರು ಈ ಅಂಶವನ್ನು

**|| ಅರೇ ಆತ್ಮ ವಾ ಶ್ರೋತವ್ಯಃ ಮಂಥವ್ಯಃ ನಿಧಿಧ್ಯಾಸಿತವ್ಯಃ ||**

ಎಂದು ಉಪನಿಷದ್ವಾಣಿ ನಮ್ಮನ್ನು ಎಚ್ಚರಗೊಳಿಸುತ್ತಲಿದೆ. ಧರ್ಮದ ದಶ ಮುಖಗಳಲ್ಲಿ **"ಅಹಿಂಸಾ ಮುಖ"** ಹೇಗೆ ಪ್ರಶಸ್ತವೋ ಅದರಂತೆ ಶ್ರೀ ಜ|| ರೇಣುಕಾಚಾರ್ಯರು ಬೋಧಿಸಿದ ಭಕ್ತಿಸಂಥದ ನವವಿಧಗಳಲ್ಲಿ **ಶ್ರವಣ ಭಕ್ತಿ** ಮಿಕ್ಕುಳಿದ ಎಂಟು ವಿಧ ಭಕ್ತಿಗಳಿಗೆ ಪ್ರೇರಕ ಶಕ್ತಿಯೆನಿಸಿದೆ ಶಿವತತ್ತ್ವ ವಿಚಾರದಲ್ಲಿ, ಆಚರಣೆಯಲ್ಲಿ ನಮ್ಮ ಮನೋಬುದ್ಧಿಗಳಿಗೆ ಆಪ್ಯಾಯನಕರವಾಗಿ ಹಿತವಾಗ ಬೇಕಾದರೆ, ಮೊದಲು ಪರಶಿವ ತತ್ತ್ವವಿಚಾರ ಬೋಧಾ ಮೃತವನ್ನು ಶ್ರೀ ಗುರುಮುಖದಿಂದ ಶ್ರದ್ಧಾಭಕ್ತಿಗಳಿಂದ, ಏಕಸಂದಿಗ್ರಾಹಿಯಾಗಿ ಶ್ರವಣ ಮಾಡಬೇಕು. ಶ್ರವಣ ಕಾಲದಲ್ಲಿ ಮನಸ್ಸು, ಬುದ್ಧಿ, ಚಿತ್ತಗಳೆಂಬ ಅಂತಃ ಕರಣ ಪರಿಶುದ್ಧವಿದ್ದು ಪವಿತ್ರವಾದ ವಿಷಯಗಳನ್ನು ಕೇಳುತ್ತಲೇ ಮನಸ್ಸಿನಲ್ಲಿ ಧಾರಣ ಮಾಡಿ, ಆ ಭಗವದ್ ತತ್ತ್ವವನ್ನು ಚಿಂತಿಸಿ ಅನುಸಂಧಾನ ಮಾಡುತ್ತಿರಬೇಕು. ಶ್ರವಣದಿಂದ ಭಾವವು ಶಿವಭಾವವಾಗಿ ಪ್ರಪುಲ್ಲಿತವಾಗಿ ಅರಳಿ ಮಘಮಘಿಸ ಬೇಕು ಇಂಥಾ ಪಾವನವಾದ ವಿಷಯಗಳನ್ನು ಕೇಳಲು ಭಾಗ್ಯ ವಂತರಾಗಿರ ಬೇಕು. ಕಲಿಯುಗದಲ್ಲಿ ಭಕ್ತಿ, ಪರಭಕ್ತಿಗಳ ವಿಷಯವಾಗಿ ಶ್ರವಣ ಮಾಡಲು ಸಹ ಭಾಗ್ಯವಿಲ್ಲದ ಪತಿತರು ವಿಪುಲವಾಗಿರುತ್ತಾರೆ. ಈ ಅಂಶವನ್ನು

ಶ್ರೀ ನಾರದರು ತಮ್ಮ ಭಕ್ತಿ ಸೂತ್ರದಲ್ಲಿ—**ಲೋಕೇಪಿ ಭಗವದ್ಗುಣ ಕೀರ್ತನಾತ್**" ಅಂದರೆ ಪ್ರಪಂಚದಲ್ಲಿ ನಾನಾ ಕೆಲಸಗಳಲ್ಲಿ ನಿರತರಾಗಿರುವಾಗಲೂ, ಭಗವಂತನ ಕಲ್ಯಾಣ ಗುಣ ಕಥನ ಕೀರ್ತನೆಗಳನ್ನು ಅವಶ್ಯಕೇಳುತ್ತಿರುವುದು ಶ್ರವಣ ಭಕ್ತಿಯೆಂದು ಉದಹರಿಸಿರುವರು. ಕಠೋಪನಿಷತ್ತು ಮುಂಡಕೋಪ ನಿಷತ್ತುಗಳಲ್ಲಿ ಹಾಗೂ ಬೃಹದಾರಣ್ಯೋಪ ನಿಷತ್ತುಗಳಲ್ಲಿ **"ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ"** ಎಂದೂ ಮತ್ತೂ **"ಶೃಣ್ವಂ ತೋಪಿ ಬಹವೋ ಯಂ । ನ ವಿದುಃ ॥** ಅಂದರೆ ಮಲತ್ರಯ ತಾಪತ್ರಯ ನಾನಾತ್ಮಕ ಆವರಣಗಳಿಂದ, ಪರಮಾತ್ಮನ ದಿವ್ಯ ಕಲ್ಯಾಣ ಗುಣ ಕಥನ ಶ್ರವಣದ ಭಾಗ್ಯ ಬಹು ಜನರಿಗೆ ಅವರ ಜೀವಮಾನ ಕಾಲದಲ್ಲಿ ಲಭಿಸುವುದು ದುರ್ಲಭವಿರುತ್ತೆ ಅಂಥವರು ದುರ್ಭಾಗ್ಯರು. ಮತ್ತೆ ಕೆಲವರು ಕ್ವಚಿತ್ ಸುಕೃತ ವಿಶೇಷದಿಂದ ಒಮ್ಮೆ ಶಿವತತ್ವ ರಹಸ್ಯವನ್ನು ಶ್ರವಣ ಮಾಡಿದರೂ ಅರ್ಥಮಾಡಿಕೊಳ್ಳಲಾರರು. ಇದರಿಂದ ಶ್ರೀ ಜ|| ರೇಣುಕರು ಇಂತಪ್ಪ ತತ್ವವಿಚಾರ,

**ದುರ್ಲಭಾ ಪಾಪಿನಾಂ ಲೋಕೇ । ಸುಲಭಾ ಪುಣ್ಯ ಕರ್ಮಣಾಂ ॥**

ಎಂದು ಉದ್ಘೋಷಿಸಿರುವರು, ಶ್ರೀ ಮದ್ಭಾಗವತದಲ್ಲಿ ಶ್ರೀ ಶುಕ ಬ್ರಹ್ಮರು ಪರೀಕ್ಷಿತ್ ಮಹಾರಾಜನನ್ನು ಉದ್ದೇಶಿಸಿ, ರಾಜನ್, ಭಗವದನುಗ್ರಹಕ್ಕಾಗಿ ಕೃತಯುಗದಲ್ಲಿ ಘೋರ ತಪಸ್ಸನ್ನು ಆಚರಿಸುತ್ತಲಿದ್ದರು, ತ್ರೇತಾ ಯುಗದಲ್ಲಿ ಅಪಾರ ಪರಿಶ್ರಮದಿಂದ ಅಶ್ವಮೇಧ, ಪುತ್ರಕಾಮೇಷ್ಟಿ ಯಾಗಗಳನ್ನು ಆಚರಿಸುತ್ತಲಿದ್ದರು, ದ್ವಾಪರಯುಗದಲ್ಲಿ ಕೃಚಾಂದ್ರಾಯಣಾದಿ ಮಹಾ ವ್ರತಗಳನ್ನು ಪ್ರತಿಜ್ಞಾ ಪೂರ್ವಕ ಮಾಡಿ ಶ್ರಮಿಸ ಬೇಕಾಗಿತ್ತು. ಆದರೆ ಕಲಿ ಯುಗದಲ್ಲಿ ಯಾವ ಶ್ರಮವೂ ಇಲ್ಲದೆ, ಕುಂತ ಸ್ಥಳದಲ್ಲಿ ಭಕ್ತ್ಯಾ ಭಗವದ್ ತತ್ವದ ಮಹತ್ವವನ್ನು ಮನೋ ಬುದ್ಧಿ ಭಾವೈಕ್ಯದಿಂದ ಶ್ರವಣ ಮಾಡಿದರೆ ಮುಕ್ತಿ ಲಭಿಸುವುದೆಂದು, ಅರ್ಥಪೂರ್ಣವಾಗಿ, ನೈಷ್ಠಿಕ ಬ್ರಹ್ಮಜ್ಞಾನಿ ಶ್ರೀ ಶುಕಾಚಾರ್ಯರು ಬೋಧಿಸಿರುವರು.

**ಶ್ರೀ ಗಿರೀಂದ್ರ ಪ್ರಿಯಸುತಾವರ । ವಾಗಧೀಶ್ವರ ವಿಧು ಮುಖಾ**

**ಮರ । ಪೂಗಹಿತಕರ ಗರಪುರಾಲಂಕಾರ । ಸುಖಸಾರಾ ರಾಗ**

**ದೂರಗಭೀರಸಾದರ । ನೈಗಮವ್ಯಾಹಾರ ಭಾಸುರ ಜಾಗು**

**ಮಾಡದೆ । ಸಲಹು ನಮ್ಮನು ವಿನತ ಮಂದಾರ ॥**

**ಕಾಲಕಾಲ ಪುರಾಣ ವಾಣೀ ಲೋಲ ನುತಯಮಿ। ಜಾಲ ನಮ**
**ದನುಕೂಲ । ಪೊರೆ ಕರುಣಾಲವಾಲ ಮೃಕಂಡು ಸುತಪಾಲಾ ।**
**ನೀಲಗಲ ನಿಖಿಲೇಷ್ಟ ವಿತರಣಶೀಲ । ನಿರ್ಮಲ ವಾರಣಾಜಿನ ।**
**ಚೇಲ ಭವ ಭಯ ಹರಣ । ಕೌಶಲ ಭೂತಿ ಸಿತಫಾಲಾ ॥**

## ಅಂಗಸ್ಥಲ ೯ ॥ಭಕ್ತಮಾರ್ಗ ಕ್ರಿಯಾ ಸ್ಥಲಂ ॥

### ೨. ಕೀರ್ತನಂ

ದಯಾಮಯನಾದ ಭಗವಂತನ ಅಗಣಿತ ಕಲ್ಯಾಣ ಗುಣಾವಳಿಗಳನ್ನು ಅನನ್ಯ ಭಕ್ತಿ ಭಾವೇನ ಹೃದಯಂಗಮವಾಗಿ; ಸಪ್ತರಾಗಾಲಾಪನೆಗಳಿಂದ ಸುಸ್ವರವಾಗಿ ಹಾಡಿ ಪಾಡಿ ಸಂಕೀರ್ತಿಸುವುದು, ಕೀರ್ತನ ಭಕ್ತಿಯೆನಿಸಿದೆ. ಗಾನರಸ ಮಾಧುರ್ಯದ ವಿದ್ಯೆ ಸಂಗೀತವೆಂದು ಪ್ರಸಿದ್ಧವಿದೆ.

**ಸಂಯಗ್ ಗೀತಃ ಸಂಗೀತಃ ॥ ಸರ್ವಾಂಗ ಸುಂದರವಾಗಿ ॥**
**ಗೀತಂ ವಾದ್ಯಂ ತಥಾ ನೃತ್ಯಂ । ತ್ರಯಂ ಸಂಗೀತ ಮುಚ್ಯತೇ ॥**

ಸಂಗೀತ ವಿದ್ಯಾ ಪರಿಣತರ ಮನೋ ಬುದ್ಧಿ ವಾಕ್ಕಾಯಾದಿಗಳು ಜಾಗೃತಗೊಂಡು, ಉಲ್ಲಾಸ ಭರಿತವಾಗಿ ರಂಜಿಸಿರ್ಪವು. ಸಂಗೀತಾಭ್ಯಾಸದಿಂದ ದೇಹಾರೋಗ್ಯ ಮನೋ ನೈರ್ಮಲ್ಯ ಬುದ್ಧಿ ದೈವೀಗತಿಯಲ್ಲಿ ಪ್ರಜ್ವಲಿಸುವುದು. ಕೀರ್ತನಕಾರರು ಸಹಜವಾಗಿ ಭಕ್ತಿ ಪರಾಯಣರಾದ್ದರಿಂದ ಸದಾ ಹರ್ಷ ಚಿತ್ತದಿಂದ ಮುಖಕಾಂತಿ ಹಾಗೂ ಮೃದು ಮಧುರ ಶಾರೀರದಿಂದ ಜನತೆಯನ್ನು ದೈವೀಯೋಗದತ್ತ ಆಕರ್ಷಿಸುವರು. ಸಂಗೀತ ಸಾಹಿತ್ಯ ಕೀರ್ತನಾ ಕಲಾ ಕೌಶಲ್ಯಾದಿಗಳು ಗಾಂಧರ್ವ ವಿದ್ಯೆಯೆಂದು ಸ್ತುತ್ಯವಿರುತ್ತೆ. ಶ್ರೀ ಲವ ಕುಶಾದಿಗಳು ಅಶ್ವಮೇಧಯಾಗ ಮಹಾಮಂಟಪದಲ್ಲಿ ಶ್ರೀ ಮದ್ರಾಮಾಯಣ ಮಹಾಕಾವ್ಯ ವಾಚನ ಗೈದಾಗ,

**ಶ್ರೀ ವಾಲ್ಮೀಕಿ ಮಹರ್ಷಿ ಪ್ರೋಕ್ತ।ಕುಶೀಲವೌತು ಧರ್ಮಜ್ಞೌ।**
**ರಾಜ ಪುತ್ರ ಯಶಸ್ವಿನೌ । ಭ್ರಾತರೌ ಸ್ವರ ಸಂಪನ್ನೌ ।**

**ದದರ್ಶಾಶ್ರಮ ವಾಸಿನೌ ॥ ಪಾಠ್ಯೇಗೇಯೇಚ ಮಧುರಂ ।**
**ಪ್ರಮಾಣೈ ಸ್ತ್ರಿ ಭಿರನ್ವಿತಂ । ಜಾತಿಭಿಸ್ಸಪ್ತಭಿರ್ಬದ್ಧಂ ।**
**ತಂತ್ರೀಲಯ ಸಮನ್ವಿತಂ । ರಸೈ ಶೃಂಗಾರ ಕಾರುಣ್ಯ ಹಾಸ್ಯ ।**
**ವೀರ ಭಯಾನಕೈಃ ॥**
**ರೌದ್ರಾದಿ ಸಂಯುಕ್ತಂ ಕಾವ್ಯಮೇ ತದಗಾಯತಾಂ ॥**
**ತೌತು ಗಾಂಧರ್ವ ತತ್ವಜ್ಞೌ ।ಮೂರ್ಛನಾ ಸ್ಥಾನ ಕೋವಿದೌ॥**
**ಭ್ರಾತರೌ ಸ್ವರ ಸಂಪನ್ನೌ ಗಂಧರ್ವಾವಿವ ರೂ ಪಿಣೌ ॥**

ಈ ಪ್ರಕಾರ ಭಕ್ತಿ ಭರಿತ ಹೃದಯಸ್ವಾಂತರಾಗಿ ಸಂಕೀರ್ತಿಸಲು, ಆ ದಿವ್ಯಯಾಗ ಮಂಟಪದಲ್ಲಿ ರತ್ನಸಿಂಹಾಸನಾರೂಢರಾಗಿದ್ದ ಶ್ರೀ ಸೀತಾರಾಮಾಂಜನೇಯ ಲಕ್ಷ್ಮಣಾದಿ ಪ್ರಾಜ್ಞ ಸಭಿಕರು, ಬಹು ಶ್ರಾವ್ಯವಾದ ಕೀರ್ತನ ಭಕ್ತಿಯಲ್ಲಿ ಮುಳುಗಿ ಆನಂದಿಸಿದರು. ಭಕ್ತರು ಭಗವಂತನ ಅನಂತ ಲೀಲಾ ವೈಭವಗಳನ್ನು ವರ್ಣಿಸಿ ಸಂಕೀರ್ತಿಸುವಾಗ,

**ಕಂಠಾವರೋಧ । ರೋಮಾಂಚಾಶ್ರುಭಿಃ । ಪರಸ್ಪರಂ**
**ಆಲಾಪಮಾನಾಃ । ಪಾವಯಂತಿ ಕುಲಾನಿ । ಪೃಥ್ವೀಂಚ ॥**

ಅಂದರೆ, ಭಕ್ತ್ಯುದ್ರೇಕದಿಂದ ಗದ್ಗದ ಸ್ವರವುಳ್ಳವರಾಗಿ ಭಗವಂತನ ಕಲ್ಯಾಣ ಗುಣಗಳನ್ನು ಇತರರಲ್ಲಿ ಸಂಕೀರ್ತಿಸುವಾಗ ರೋಮಾಂಚಿತರಾಗಿ ಆನಂದಾಶ್ರುಗಳನ್ನು ಸುರಿಸುತ್ತಾ ಭಕ್ತಿಯಲ್ಲಿ ತಲ್ಲೀನರಾಗುವರೆಂದು ಶ್ರೀ ನಾರದರು ತಮ್ಮ ಭಕ್ತಿ ಸೂತ್ರದಲ್ಲಿ ಪ್ರತಿಪಾದಿಸಿರುವರು. ಸಂಗೀತಕ್ಕೆ ಭಕ್ತಿಕೀರ್ತನೆಗಳಿಗೆ ವಶವರ್ತರಾಗದೆ ಇರುವವರಿಲ್ಲ.

**ಶಿಶು ರ್ವೇತ್ತಿ ಪಶುರ್ವೇತ್ತಿ । ವೇತ್ತಿ ಗಾನ ರಸಂ ಫಣಿಃ ॥**

ಎಂಬಂತೆ ಶಿಶು, ಪಶು, ಸರ್ಪಾದಿಗಳು ಗಾನರಸ ಶ್ರವಣ ಮಾತ್ರೇಣ ವಶವರ್ತಿಯಾಗಿ ಮೋಹಿಸುವವು. ಅಂದ ಬಳಿಕ ರಸಜ್ಞನಾದ ಮಾನವನು ಭಕ್ತಿಪರವಾದ ಕೀರ್ತನೆಗಳಿಗೆ ತನ್ನನ್ನೇ ಅರ್ಪಿಸಿಕೊಳ್ಳುವನು. ಶಿವನು ಸಾಮಗಾನ ಪ್ರಿಯನಷ್ಟೆ. ತಾಂಡವೇಶ್ವರನಾದ ಶ್ರೀ ನಟರಾಜ ರಾಜನು ಗಾನ ಪ್ರಿಯನು ಕೀರ್ತನಲೋಲನು ಆದ್ದರಿಂದ ನಾವು ನಿತ್ಯ ಶಿವನನ್ನು ಕೀರ್ತನ ಭಕ್ತಿಗೀತೆ

ಗಳನ್ನು ರಸವತ್ತರವಾಗಿ ಹಾಡುವುದರಿಂದ, ಬಹು ಶೀಘ್ರದಲ್ಲಿ ಶಿವಾನುಗ್ರಹಕ್ಕೆ ಪಾತ್ರರಾಗುವೆವು.

ಭಕ್ತನು ಭಕ್ತಿಯಿಂ ಪಾಡಿದರೆ, ಭಗವಂತನು ಅವನ ಹಿಂದಿದ್ದು ಅಕ್ಕರೆಯಿಂದ ಲಾಲಿಸುವನು. ಕುಳಿತು ಪಾಡಿದರೆ ನಿಂತು ಕೇಳುವನು. ನಿಂತು ಪಾಡಿದರೆ ನಲಿದು ನರ್ತಿಸುವನೆಂದು ಶ್ರೀಪುರಂಧರದಾಸರು ಭಕ್ತಿಯಿಂದ ಕೀರ್ತನೆಗೆಯ್ದಿರುವರು. ನಿತ್ಯವೂ ಪ್ರದೋಷ ಕಾಲಗಳಲ್ಲಿ ಭಕ್ತಿ ಕೀರ್ತನೆಗಳನ್ನು ಹೃದಯ ಕರಗುವಂತೆ ಹಾಡಿದರೆ, ತನ್ನೊಂದಿಗೆ ಶ್ರವಣ ಮಾಡುವ ಅನೇಕ ಶ್ರೋತೃಗಳು ಭಕ್ತಿ ಪರವಶ ವರ್ತಿಗಳಾಗುವರು. ಒಮ್ಮೆ ಶ್ರೀ ನಾರದರ ಪ್ರಶ್ನೆಗೆ ಶ್ರೀ ಮಹಾವಿಷ್ಣು—

**ನಾಹಂ ವಸಾಮಿ ವೈಕುಂಠೇ । ನ ಯೋಗೀ ಹೃದಯೇ ರವೌ ॥**
**ಮದ್ಭಕ್ತಾ ಯತ್ರಗಾಯಂತೀ । ತತ್ರ ತಿಷ್ಠಾಮಿ ನಾರದಾ ॥**

ಎಂದು, ನನ್ನ ಲೀಲಾ ವಿಭೂತಿ ಯೋಗದ ಮಹಿಮೆಯನ್ನು ಮೈಮರೆತು ಕೀರ್ತಿಸುವ ನನ್ನ ಪ್ರಿಯ ಭಕ್ತರ ಮಧ್ಯೇ ನಾನು ಪ್ರಸನ್ನನಾಗಿರ್ಪನೆಂದು ವಿವರಿಸಿರುವನು. ಭಕ್ತರು ಹಾಡುವ ಮನ ಮೋಹಕ ಭಕ್ತಿಗೀತೆಗಳಿಂದ ಸಮ್ಮೋಹಿತನಾದ ಶಿವನು, ಭಕ್ತರಿಗೆ ಬಹು ಶೀಘ್ರದಲ್ಲಿ ವಶವರ್ತಿಯಾಗಿ ಅವರ ಅಭೀಷ್ಟಗಳನ್ನು ನಲಿದೊಲಿದು ಅನುಗ್ರಹಿಸುವನು.

**ಗದುಗಿನ ವೀರನಾರಾಯಣನು ಹಾಡಿದನೆಂದರೆ । ಕಲಿಯುಗ**
**ದ್ವಾಪರವಾಗುವುದು ॥**

ಎಂಬ ಪ್ರತೀತಿಯಿದೆ. ಕೃತಯುಗದಲ್ಲಿ ಭಗಂವತನ ದರ್ಶನಾಶೀರ್ವಾದಗಳಿಗಾಗಿ ತಪಸ್ಸನ್ನು ದೀರ್ಘಕಾಲ ಮಾಡಬೇಕಾಗಿತ್ತು. ತ್ರೇತಾಯುಗದಲ್ಲಿ ಅಶ್ವಮೇಧಯಾಗ, ಪುತ್ರಕಾಮೇಷ್ಠಿ ಇತ್ಯಾದಿ ಯಾಗ ಯಜ್ಞಗಳನ್ನು ಬಹು ಶ್ರಮವಹಿಸಿ, ಲೋಪವಿಲ್ಲದೆ ಮಾಡ ಬೇಕಾಗಿತ್ತು. ಆ ಕಾಲದಲ್ಲಿ ಯಜ್ಞಗಳನ್ನು ಬಹು ಶ್ರಮವಹಿಸಿ, ಲೋಪವಿಲ್ಲದೆ ಮಾಡ ಬೇಕಾಗಿತ್ತು. ದ್ವಾಪರ ಯುಗದಲ್ಲಿ ಕೃಚ್ಛ್ರಾಂದ್ರಾಯಣಾದಿ ಕ್ಲೇಶಕರ ವ್ರತಗಳನ್ನು ಶ್ರಮದಿಂದ ನೆರವೇರಿಸ ಬೇಕಾಗಿತ್ತು. ಈ ಕಲಿಯುಗದಲ್ಲಿ ನರರು ನಿತ್ಯ ಶ್ರವಣ,

ಕೀರ್ತನ ಭಕ್ತಿ ಮಾತ್ರದಿಂದಲೇ ಭಗವಂತನ ಅಮೃತಮಯ ದಿವ್ಯ ಕೃಪೆಗೆ ಪಾತ್ರರಾಗ ಬಹುದು.

**ಸುಲಭದ ಭಕುತಿಗೆ । ಅತಿ ಸುಲಭ ನೆನಿಸಿದ ।**

**ಶಿವನ ಕಾಣಿರೋ ನಿಮ್ಮಂತರಂಗದಲಿ ಶಿವನ ಕಾಣಿರೋ॥ ಅಸ್ತು.**

## ಅಂಗ ಸ್ಥಲ ೯. ॥ ಭಕ್ತಮಾರ್ಗ ಕ್ರಿಯಾ ಸ್ಥಲಂ ॥

### ೩. ಶಂಭೋಃ ಸ್ಮರಣಂ

ಶ್ರವಣ, ಕೀರ್ತನಾದಿ ಬಾಹ್ಯೇಂದ್ರಿಯ ಭಕ್ತಿಗಳಿಗಿಂತಲೂ, ಅಂತಃರೇಂದ್ರಿಯ "ಭಕ್ತಿ ಶಂಭೋಃ ಸ್ಮರಣಂ", ಅತ್ಯಂತ ಅಮೋಘತರ ಭಕ್ತಿಯೆನಿಸಿದೆ. ಸ್ಮರಣಮಯವೆನಿಸಿ, ಚಿತ್ತದಲ್ಲಿ ಧಾರಣೆ ಮಾಡುವುದರಿಂದ, ಶಿವಾಗ್ನಿ ಕ್ರಮೇಣ ಉದ್ದೀಪನ ಗೊಂಡು ಪಾಪಾದಿ ಮಹಾ ಪಾಪಗಳನ್ನು ಸುಟ್ಟು ಬೂದಿಗೊಳಿಸುವುದು.

**ಶಿವ ಸ್ಮರಣಮಯ ಜ್ಞಾನಾಗ್ನಿನಾ । ದಹೇತ್ಸರ್ವಂ ।**
**ಪಾಶಜಾಲಂ ಜಗನ್ಮಯಂ ॥**

ಎಂಬುದಾಗಿ, ಭಗವತ್ಪಾದ ಶ್ರೀ ಜ॥ ರೇಣುಕಾಚಾರ್ಯರು ಅಪ್ಪಣೆ ಕೊಡಿಸಿರುವರು.

**ಯಸ್ಯ ಸ್ಮರಣ ಮಾತ್ರೇಣ । ನೃಣಾಂ ಮುಕ್ತಿಃ ಕರ ಸ್ಥಿತಂ ।**
**ತಂ ವಂದೇ ಜಗದಾಧಾರಂ । ಶ್ರೀ ರೇಣುಕಾರ್ಯಂ**
**ಜಗದ್ಗುರುಂ ॥**

### ೪. ಪಾದಸೇವನಂ

ಶ್ರೀ ಮಹಾಗುರುವಿನ ಪಾದ ಕಮಲದ್ವಯವೇ ಪ್ರತ್ಯಕ್ಷ ಶಿವಸ್ವರೂಪವೆಂದರಿತು, ನಿರಂತರ ಭಕ್ತ್ಯಾ ವಂದಿಸಿ ಪೂಜಿಸ ಬೇಕು.

**ಪೂಜಾ ಮೂಲಂ ಗುರೋರ್ಪಾದಂ॥** ಯೆಂದಿದೆ ಶೃತಿ.ಯಾಕೆಂದರೆ.

**ಪಾದೋಸ್ಯ ವಿಶ್ವಭೂತಾನಿ । ತ್ರಿಪಾದಸ್ಯಾಮೃತಂ ಧಿವಿ ॥**

ಎಂದಿದೆ ಪುರುಷ ಸೂಕ್ತ. ಪರಶಿವನ ಪರಮೋತ್ಕೃಷ್ಟವಾದ ಮೂರು ಪಾದಗಳು

ಊರ್ಧ್ವಗತಿಯಲ್ಲಿ, ಅನಂತ ಕೋಟಿ ಕೋಟಿ ಬ್ರಹ್ಮಾಂಡಗಳಿಂದತತ್ತ, ಅಗಮ್ಯ ಅಗೋಚರ, ಅಚಿಂತ್ಯವಾಗಿ ಹಬ್ಬಿ.

**ಅಣೋರಣೀಯಾನ್ । ಮಹತೋ ಮಹೀಯಾನ್ ॥**

ಎಂಬಂತೆ ಅತ್ಯುನ್ನತವಾಗಿ ಹೊರ ಹೊಮ್ಮಿ ಸೆಟೆದು ನಿಂತಿರುವುದರಿಂದ, ಶ್ರೀ ವಿಷ್ಣು ಬ್ರಹ್ಮಾದಿಗಳಿಗೂ ತ್ರಿಪಾದಗಳು ಇನ್ನೂ ಅಗಮ್ಯವಿರುವುವು. ಪರಮಾತ್ಮನ ಒಂದು ಪಾದ, ಇಳೆಯೊಳಗೆ ವಿಸ್ತರಿಸಿರಲು, ಇದರಲ್ಲಿನ ಸಹಸ್ರಾಂಶಗಳಲ್ಲಿ ಒಂದಂಶ, ಅನಂತ ಕೋಟಿ ಬ್ರಹ್ಮಾಂಡಗಳ ರೂಪದಲ್ಲಿ ಬೃಹದಾಕಾರವಾಗಿ ಬೆಳೆದು ನಿಂತಿದೆ. ಇಂತಪ್ಪ ದಿವ್ಯ ಪಾದವನ್ನು ನಾವು ಪೂಜಿಸುವುದು ತಾನೆ ಹೇಗೆ ಸಾಧ್ಯವಾದಿತು ? ಕರುಣಾಸಾಗರನಾದ ಶಿವನು ಶ್ರೀಗುರು ರೂಪದಲ್ಲಿ ನಮಗೆ ಪ್ರತ್ಯಕ್ಷನಿರುವನು, ಇಂತಪ್ಪ ಮಹಾಗುರುವಿನ ಶ್ರೀ ಪಾದವನ್ನು ನಮ್ಮ ಹೃನ್ಮಂದಿರದಲ್ಲಿ ಸದಾ ಭಾವೇನ ಧರಿಸಿ ಭಕ್ತ್ಯಾ ನಿರಂತರ ಪೂಜಿಸಿ ಮುಕ್ತರಾಗೋಣ. ಭರತ ಶ್ರೀ ರಾಮನ ಪಾದುಕೆಗಳನ್ನು ನಂದಿಗ್ರಾಮದಲ್ಲಿ ಸಿಂಹಾಸನಾರೋಹಣಗೈಸಿ, ೧೪ವರ್ಷ ಪೂಜಿಸಿ ಅನಂತ ಫಲವನ್ನು ಪ್ರಜೆಗಳಿಗೆ ನೀಡಿ ಸಂತೈಸಿಸಿದ್ದಾನೆ. ಶರಣ ಜನರ ಸಹೃದಯ ನಳಿನದೊಳು ಪರಿಶೋಭಿಸುವ ನಿನ್ನ ಪಾದಕ್ಕೆ ನಮೋ ನಮೋ ಎಂಬೇ.

## ೫. ಅರ್ಚನಂ

ಭಕ್ತಿಮಾರ್ಗ ಕ್ರಿಯಾಸ್ಥಲದಲ್ಲಿ ಕ್ರಿಯಲಿಂಗವನ್ನು ಲಿಂಗಾಂಗಿ, ತ್ರಿಕರಣ ಪೂರ್ವಕ ದ್ವಿಸಂಧ್ಯಾಕಾಲಗಳಲ್ಲಿ ಯಾವಜ್ಜೀವವೂ, ಉಜ್ಜೀವಿಸುವುದಕ್ಕಾಗಿ, ಭಕ್ತಿಪೂರ್ವಕ ಪೂಜಿಸುತ್ತಲಿರ ಬೇಕು. ಅರ್ಚನ ಪೂಜಾ ಪ್ರಾರ್ಥನೆಗಳು ನಮ್ಮನ್ನು ಪರಮಾತ್ಮನ ಯೆಡೆಗೆ ಶೀಘ್ರವಾಗಿ ಕೊಂಡೊಯ್ಯುವುವು. ಅರ್ಚನ ವಿಧಾನಗಳ ಭಕ್ತಿಯಿಂದ ಶಿವನನ್ನು ಬೇಗ ನಮ್ಮ ಹೃದಯದಲ್ಲಿ ಸಾಕ್ಷಾತ್ಕರಿಸಿ ಕೊಳ್ಳಬಹುದು.

## ೬. ವಂದನಂ

ಗುರುಲಿಂಗ ಜಂಗಮರನ್ನು ಮಾತಾ ಪಿತೃಗಳನ್ನು ಹಿರಿಯ ಸಾಧು ಸತ್ಪುರುಷರನ್ನೂ ಕಂಡಾಗ ನಮ್ರಭಾವದಿಂದ ಎದ್ದು ಎರಡು ಕರಗಳನ್ನು

ಹೃದಯ ಮಟ್ಟಕ್ಕೆ ಜೋಡಿಸಿ ಎತ್ತಿ ಶಿರಬಾಗಿ ವಿನಯ ಪೂರ್ವಕ ನಮಸ್ಕರಿಸು ವುದು. **ವಂದನ** ಭಕ್ತಿಯೆನಿಸಿದೆ.

**ಅಕ್ರೂರ ಸ್ತ್ವಭಿವದಂನಾತ್ ॥**

ಶ್ರೀ ಮದ್ಭಾಗವತದಲ್ಲಿ ಮಹಾತ್ಮ ಆಕ್ರೂರನು ಅಡಿಗಡಿಗೆ ಶ್ರೀ ಕೃಷ್ಣ ನನ್ನು ವಂದಿಸಿ, ಸ್ವಾಮಿಯ ಅನುಗ್ರಹಕ್ಕೆ ಪಾತ್ರನಾದನು. ಭಕ್ತಿಯುತ, ವಂದನಾರ್ಪಣ ನಮ್ಮ ಕೃತಜ್ಞತೆಗೆ, ಹೆಗ್ಗುರುತು.

## ೭. ದಾಸ್ಯಂ

ಸರಳ ಭಾವದ ಸೇವೆ. ಭಕ್ತಿ ಪೂರ್ವಕ ನಿಸ್ಪೃಹಭಾವದಿಂದ ಅನವರತ ಭೂತದಯ, ಪಶ್ಚಾತ್ತಾಪದಿಂದ ಉಚಿತವಾಗಿ ಸಲ್ಲಿಸುವ ಸೇವೆ, ದಾಸ್ಯಭಕ್ತಿ ಯೆನಿಸಿದೆ. ಶ್ರೀ ಅಂಜನೇಯನು ರಾಮಭಂಟನಾಗಿ ಸಲ್ಲಿಸಿದ ಮಹದ್ ಸೇವೆ ಯಿಂದ, ಶ್ರೀ ಸೀತಾರಾಮರು ಸಂಪ್ರೀತರಾಗಿ, ಆಂಜನೇಯನ ಹೃನ್ಮಂದಿರವನ್ನೇ ತಮ್ಮ ನಿಜ ಅವಾಸಸ್ಥಾನವನ್ನಾಗಿ ಮಾಡಿಕೊಂಡರು ಪಂಚಾಚಾರಗಳಲ್ಲಿ ಭೃತ್ಯಾಚಾರ ದಾಸ್ಯ ಭಕ್ತಿಗೆ ಮೂಲ ಸ್ಥಂಭವೆನಿಸಿದೆ. ಶಿವನೇ ! ನಾನು ನಿನ್ನ **"ತ್ವದ್ದಾಸಸ್ಯ, ದಾಸಸ್ಯ, ದಾಸಃ"**. ಎಂಬ ಭಾವ ದಾಸ್ಯ ಭಕ್ತಿಯೆನಿಸಿದೆ. **"ಎನಗಿಂತ ಕಿರಿಯರಿಲ್ಲ''** ಎಂಬುದನ್ನು ತೋರಿಸುತ್ತೆ.

## ೮. ಸಖ್ಯಂ

ಪೃಥ್ವಿ ಜಲಗಳು, ವಾಯು ಅಗ್ನಿ ತತ್ವಗಳ ಸ್ನೇಹ ನಿರಂತರವಾದ ಸಖ್ಯವೆನಿಸಿದೆ. ಅನನ್ಯ ಸೇವೆಯ ಫಲವಾಗಿ, ಸ್ನೇಹಭಾವ, ರೂಪಗೊಳ್ಳುತ್ತೆ. ಶ್ರೀಕೃಷ್ಣಾರ್ಜುನರ ಸಖ್ಯ ಸಂಸ್ಮರಣೀಯವಿರುತ್ತೆ. ಆಪತ್ಕಾಲದಲ್ಲಿ ತಾನಾಗಿ ಬಂದು ಸ್ಮರಣೀಯ ನೆರವನ್ನು ನೀಡಿ ಭುಜಕ್ಕೆ ಭುಜ ಕೊಟ್ಟು ಅಭಯ ವಚನ ಗಳನ್ನು ನೀಡುವಾತನನ್ನು ನಿಜ ಮಿತ್ರನೆಂದು ನಯ ಶಾಸ್ತ್ರಜ್ಞರ ಅಭಿಮತ.

## ೯. ಅತ್ಮ ನಿವೇದನಂ

ನವವಿಧ ಭಕ್ತಿಗಳಲ್ಲಿ ಇದು ಪರಮ ಶ್ರೇಷ್ಠವಾದುದು. ಅಖಿಲ ಸ್ಥಾವರ ಜಂಗಮಾತ್ಮಕ ವಸ್ತುಗಳೆಲ್ಲಾ ಸೃಷ್ಟಿಕರ್ತನಾದ ತ್ರ್ಯಂಬಕೇಶ್ವರನಿಗೆ ಸೇರಿದ ವಸ್ತು ಗಳಾದ್ದರಿಂದ, ನನ್ನದು ಎಂದು ಹೇಳಲು ಒಂದು ತೃಣವೂ ನಮಗೆ ಜಗತ್ತಿನಲ್ಲಿ ಇಲ್ಲದ್ದರಿಂದ, ಶಿವನಿಗೆ ಏನನ್ನು ತಾನೆ ಅರ್ಪಿಸಲು ನಮಗೆ ಸಾಧ್ಯವಾದೀತು.

ಹಾಗೂ ನನ್ನದೆಂಬ ಪರಮಾತ್ಮನಿಗೆ ಅರ್ಪಿಸಿದರೆ, ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಬೇಡಿದಂತಾಗುವುದು. ಪರಶಿವನ ದಿವ್ಯಾನುಗ್ರಹವನ್ನು ಪಡೆಯ ಬೇಕಾದರೆ, ನಮ್ಮ ನಿರ್ಮಲವಾದ ಹೃದಯ ಕಮಲದಲ್ಲಿನ ಶಿವತತ್ವ ಸ್ವರೂ ಪವೇ ತಾನಾದ ನಮ್ಮ ಆತ್ಮವನ್ನು ಭಕ್ತ್ಯಾ ಅರ್ಪಿಸಿದರೆ, ಸರ್ವಜ್ಞನಾದ ಪರಮಾತ್ಮನು ಸಂತೋಷಿಸಿ, ಸಾಯುಜ್ಯ ಮೋಕ್ಷವನ್ನು ಅನುಗ್ರಹಿಸುವನು. ಅಂದರೆ ಲಿಂಗಾಂಗ ಸಮರಸ ಸಾಮರಸ್ಯ ಮೋಕ್ಷವನ್ನು ಕೃಪೆಯಿಂ ಅನುಗ್ರಹಿ ಸುವನು. ಶ್ರೀ ವಾಮನ ಮೂರ್ತಿ ತನ್ನ ಮೂರನೇ ಹೆಜ್ಜೆಗೆ ಸ್ಥಳ ಕೇಳಲು, ದಾನಶೂರ ಬಲಿಚಕ್ರವರ್ತಿ ತಕ್ಷಣ ತನ್ನ ಶಿರವ ನೀಡಲು, ಹೆಜ್ಜೆಯೂರಿ ತುಳಿದ, ವಾಮನಮೂರ್ತಿ ಬಲಿಯನ್ನು ರಸಾತಳಕ್ಕೆ ತಳ್ಳಿದನು. ಬಲಿಚಕ್ರವರ್ತಿ ಆತ್ಮ **ನಿವೇದನ** ಭಕ್ತಿಯನ್ನು ಆಚರಿಸಿ ಭಗವಂತನ ಕೃಪೆಗೆ ಪಾತ್ರನಾದನು. ಶಿವ.

**ನೆಲಸಿ ಕಪಿಲಾ ತೀರದಲಿ ತೊಳತೊಳಗುವಾ । ಶ್ರೀ ಪುರದೆ**
**ಭಕ್ತಾವಳಿಯಭೀಷ್ಟವನೆಲ್ಲ । ನೆನೆದಾಕ್ಷಣದೆ ಕೈಗೊಳಿಸಿ**
**ಕಳೆದು ಭಜಿಪರ । ದುಷ್ಕೃತಂಗಳನಿಳೆಯ ಕೈಗಾಯ್ವೊಡೆಯ ।**
**ಪೊರೆನೀ ನೊಲಿದು ಗಿರಿಕೋದಂಡ ಧೃತಶಶಿ ಖಂಡ ನಂಜುಂಡಾ॥**

**ಶ್ರೀ ಮಹಾಬಲ ಶೈಲವಾಸಿನಿ ಸೋಮಧರ । ಶುದ್ಧಾಂತ ಭಾಮಿ**
**ನಿ ಕಾಮ ಸಂಜೀವಿನಿ।ಮೃಡಾಣಿ ಗಣೇಶ ಗುಹ ಜನನೀ, ವಾಮ**
**ದೇವ । ವಿಲಾಸಿನೀ ಸುಪ್ರೇಮಪೂರಿತ ಹೃದ್ಭವಾನೀ ಸಾಮ**
**ಜೋತ್ತಮ ಗಾಮಿನೀ ಕೃಪೆದೋರಿ ಪಾಲಿಸು ನೀ ॥**

## ಅಂಗಸ್ಥಲ ೯ ಭಕ್ತಮಾರ್ಗಕ್ರಿಯ ಸ್ಥಲಂ

**ಸಿಂಹಾಸನೇ ಶುದ್ಧದೇಶೇ ಸುರಮ್ಯೇ । ರತ್ನ ಚಿತ್ರಿತೇ ।**
**ಶಿವಲಿಂಗಸ್ಯ ಪೂಜಾಯಾ । ಸಾ ಬಾಹ್ಯಾ ಭಕ್ತಿರುಚ್ಯತೆ ।**
**ಲಿಂಗೇ ಪ್ರಾಣಂ ಸಮಾದಾಯ ।ಪ್ರಾಣೇಲಿಂಗಂತು ಶಾಂಭವಂ।।**
**ಸ್ವಸ್ಥಂ ಮನಸ್ತಥಾ ಕೃತ್ವಾ ನ ಕಿಂಚಿಚ್ಚಿಂತಯೇದ್ಯದಿ॥**

(ಪರಿ. ೯ ಶ್ಲೋ. ೭ ೮.)

ಶಿವಾಗಮಗಳು ಚತುರ್ವೇದಗಳಷ್ಟೇ ಪವಿತ್ರವಾದವುಗಳಾದ್ದರಿಂದ ಅಪೌರುಷೇಯ ವಾಣಿಯೆಂದು ಸ್ತುತ್ಯವೆನಿಸಿವೆ ಪರಮ ಪುರುಷೋತ್ತಮನಾದ ಪರಶಿವನ ದಿವ್ಯವಾಣಿ, ನಿಜಕ್ಕೂ ಅಪೌರುಷೇಯವಿರುತ್ತದೆ. ಸ್ತ್ರೀಲಿಂಗ ಪುಲ್ಲಿಂಗ, ನಪುಂಸಕ ಲಿಂಗತ್ರಯಗಳಿಗೆ, ಅತೀತನಾದ್ದರಿಂದ ಭಗವಂತನನ್ನು ಪುರುಷೋತ್ತಮನೆಂದು ಸ್ತುತಿಸಿರುವುದು ನಿತ್ಯ ಸತ್ಯ ಸುಂದರವಿರುವುದು. ಈಶ್ವರನು ಸಹಜವಾಗಿಯೇ ಚೈತನ್ಯಮಯನೂ, ಪ್ರಜ್ಞಾನಾನಂದ ಸ್ವರೂಪನೂ ಆಗಿ, ಅಮೃತಮಯನೆನಿಸಿಹನು. ಶಿವನು ರೂಪಾತೀತ ನಾಮಾತೀತ, ನಾದಾತೀತ, ತ್ರಿಗುಣಾತೀತ, ಪರಂಶಿವಃ ಎಂಬಂತೆ, ಸರ್ವವ್ಯಾಪಿ, ಸರ್ವಶಕ್ತ ಸರ್ವಜ್ಞನಾದ್ದರಿಂದ, ಸಚ್ಚಿದಾನಂದ ನಿತ್ಯ ಪರಿಪೂರ್ಣಾಖಂಡಾ ದ್ವಿತೀಯನೆನಿಸಿ ವಿರಾಜಿಸುವ ಪರಮಾತ್ಮನ ಅಮೃತವಾಣಿಯನ್ನು ಅಪೌರುಷೇಯವೆಂದಿರುವುದು ಸ್ತುತ್ಯಾರ್ಹವಿರುತ್ತದೆ. ವೇದೋದಯ ಕಾಲಕ್ಕೆ ಪೂರ್ವ, ಶಿವಜ್ಞಾನ ತತ್ವಭಂಡಾರ; ಶಿವನ ಶ್ರೀಮುಖದಿಂದ, ಜಗಜ್ಜನನಿ ಶಾಂಭವೀ, ಶಿವೆಗೆ ಪರಮೇಶ್ವರನು ಆತ್ಮೀಯವಾಗಿ ಉಪದೇಶರೂಪದಲ್ಲಿ ಪುರುಷ ಪ್ರಯತ್ನವಿಲ್ಲದೆ, ದೇದೀಪ್ಯಮಾನವಾಗಿ ಬೋಧಿಸಿ ಆ ದಿವ್ಯ ಬೋಧನೆ ಹೊರಬಿದ್ದದ್ದರಿಂದ ಅಪೌರುಷೇಯ ವಾಣಿಯೆಂದೂ, ಅದುವೇ ಭುವನಾಂಡಕೋಟಿಗಳ ರಕ್ಷಿಸಿ ಪೋಷಿಸುವ ಆದಿಶಕ್ತಿ, ಭಕ್ತಿಮಾರ್ಗಕ್ರಿಯಾ ಶಕ್ತಿಯೆಂದೂ ಸಂಸ್ಮರಣೀಯ ಮತ್ತು ಸ್ತುತ್ಯವಿರುವುದು. ತದನಂತರದ ಕಾಲದಲ್ಲಿನ, ಅಂದರೆ ವೇದಪೂರ್ವ ಕಾಲದ ಮತ್ತೂ ವೇದಕಾಲದ ಋಷಿಮಹರ್ಷಿಗಳು, ಮೇಲುಕ್ತವಾದ ವಿಷಯವನ್ನು ತಮ್ಮ ಹೃದಯಾಂತರಾಳದ ಭಕ್ತ್ಯುದ್ರೇಕ ಭಾವಪೂರ್ಣವಾಗಿ, ಶಿವೋಕ್ತ ಆಗಮಾಮ್ನಾಯಾದಿಗಳನ್ನು ಅಪೌರುಷೇಯ ವಾಣಿಯೆಂದು ಮೊಕ್ಕೊರಳಿನಿಂದ ಸಂಕೀರ್ತಿಸಿ ಸಾರಿರುವುದು ಅರ್ಥಪೂರ್ಣವಿರುತ್ತೆ ಇಂತಪ್ಪ ಘನಸತ್ಯಾಂಶವನ್ನು ಮನಗಾಣದ ಅಲ್ಪ ಭಾಗ್ಯರಾದ ಕೆಲವು ಜನರು, ಪತಿತರು, ಮನಸ್ವಿಯಾಗಿ ಅಸಾಧು ನುಡಿಗಳನ್ನುದುರಿಸುತ್ತಾ, ವಿರೋಧಾಭಾಸವಾಗಿ ಟೀಕಿಸುವುದು ದುರದೃಷ್ಟಕರವೆನಿಸಿದೆ. ಜನತೆಯನ್ನು ತಮ್ಮ ಅಂಧಾಭಿಮಾನದಿಂದಾಗಿ ಕೆಸರಿಗೆ ಎಳೆಯಬಾರದು. ಶ್ರೀ ಜ|| ರೇಣುಕಾಚಾರ್ಯರು ಈ ಘಟ್ಟದ ಸನ್ನಿವೇಶಕ್ಕನುಗುಣವಾಗಿ, ಭಕ್ತಕೋಟಿಯನ್ನು ಎಚ್ಚರಿಸುತ್ತಾ **ದುರ್ಲಭಾ ಪಾಪಿನಾಂ ಲೋಕೇ|**

**ಸುಲಭಾ ಪುಣ್ಯಕರ್ಮಣಾಂ** || ಎಂದರುಹಿರುವರು.

ಚತುರ್ವೇದಗಳಿಂದ ಒಟ್ಟು ೧೮೦೮ ಉಪನಿಷತ್ತುಗಳಿರುವುದಾಗಿ, ವೇದಗಳನ್ನು ವಿಂಗಡಿಸಿದ ಮಹಾಚತುರ ಶ್ರೀವಿಷ್ಣು ದ್ವೈಪಾಯನ ಎಂಬ ಅಭಿಧಾನವುಳ್ಳ, ವೇದವ್ಯಾಸಾಚಾರ್ಯರು ನಿರ್ಣಯಿಸಿರುವರು. ಮುಂಬರುವ ಕಲಿಕಾಲದ ಪಂಡಿತರು ಇಷ್ಟನ್ನೂ ಅರ್ಥ ಮಾಡಿಕೊಳ್ಳಲಾರರೆಂಬುದನ್ನರಿತು, ಕರುಣೆಯಿಂದ ಈ ಉಪನಿಷದ್ ಸಂಖ್ಯೆಯನ್ನು ೧೦೮ ಕ್ಕೆ ಇಳಿಸಿ ಉಪಕರಿಸಿದರು. ಪುನಃ ದೀರ್ಘದರ್ಶಿಗಳಾದ ಹಾಗೂ **ನಮೋಽಸ್ತು ತೇ ವ್ಯಾಸ ವಿಶಾಲ ಬುದ್ಧೇ** || ಎಂದು ಸ್ತುತ್ಯರಾದ ಈ ಮಹಾಮುನಿ, ಪುನಃ ಇಂದಿನ ವಿದ್ವಜ್ಜನ ೧೦೮ ಉಪನಿಷತ್ತುಗಳನ್ನೋದಿ ಅರ್ಥ ಮಾಡಿಕೊಳ್ಳುವ ಚಿತ್ತಸ್ಥೈರ್ಯ ಮನೋವಿಕಾಸವಿಲ್ಲದವರೆಂದರಿತು, ಸಹೃದಯ ಭಾವದಿಂದ ಈ ಸಂಖ್ಯೆಯನ್ನು ಮತ್ತೆ ದಶೋಪ ನಿಷತ್ತುಗಳ ಮಟ್ಟಕ್ಕಿಳಿಸಿ, ಇವನ್ನು ಗುರುಮುಖದಿಂದ ಶ್ರವಣ ಮಾಡಿ, ಸಂಕೀರ್ತಿಸಿದರೆ, ಸರ್ವೋಪನಿಷತ್ತುಗಳನ್ನೋದಿದ ಫಲಪ್ರಾಪ್ತಿಯಾಗುತ್ತದೆಂದು ಘೋಷಿಸಿದರು. ಅಂದೋ ! ಇಂದಿನ ಜನ ಸಮುದಾಯ ಈ ಹತ್ತು ಉಪನಿಷದರ್ಥಗಳನ್ನು ಓದಿ, ಗುರುಮುಖದಿಂದ ಶ್ರವಣ ಮಾಡಿ ಕೃತಾರ್ಥರಾಗಲು ತವಕಪಡುತ್ತಿಲ್ಲ. ೧) ಈಶಾವಾಸ್ಯೋಪನಿಷತ್ತು, ೨) ಕೇನೋಪನಿಷತ್ತು, ೩) ಬೃಹದಾರಣ್ಯಕ, ೪) ಛಾಂದೋಗ್ಯ, ೫) ಕಠ, ೬) ಪ್ರಶ್ನೋತ್ತರ, ೭) ಮುಂಡಕ, ೮) ಮಾಂಡೂಕ್ಯ, ೯) ಐತರೇಯ ಮತ್ತು ೧೦) ತೈತ್ತಿರೀಯ ಎಂಬ ಹತ್ತು ಉಪನಿಷತ್ತುಗಳಿಗೆ ವ್ಯಾಸರು ವ್ಯಾಖ್ಯಾನ ರೂಪದಲ್ಲಿ ಸೂತ್ರಗಳನ್ನು ರಚಿಸಿ ಪರಮೋಪಕಾರ ಮಾಡಿದ್ದಾರೆ.

**ವ್ಯಾಸಸೂತ್ರಮಿದಂ ನೇತ್ರಂ । ವಿದುಷಾಂ ಬ್ರಹ್ಮದರ್ಶನೇ ||**

ಎಂದು, ಈ ಬಾದರಾಯಣ ಬ್ರಹ್ಮ ಸೂತ್ರಗಳು ಪಂಡಿತರಿಗೆ ಜ್ಞಾನ ನೇತ್ರಗಳನ್ನು ತೆರೆಸುವಂತಿವೆ. ಶ್ರೀ ವ್ಯಾಸರು ಕರುಣೆಯಿಂದ ಇಷ್ಟು ಉಪಕಾರ ಮಾಡಿದ್ದರೂ, ಬಹುಜನ ಅವರ ಕೃತಿಗಳನ್ನು ಆದರದಿಂದ ಓದಿ ಆತ್ಮಾರ್ಥವಾದ ಲಾಭವನ್ನು ಪಡೆದಿಲ್ಲ. ಲೌಕಿಕರ ಉದ್ಧಾರಾರ್ಥ ಸಹ, ಗಮನಿಸಿ ಹತ್ತು ಶಿವ ಪುರಾಣಗಳನ್ನೂ ೪ ವಿಷ್ಣುಪರವಾದ ಪುರಾಣಗಳನ್ನೂ ಎರಡು ಬ್ರಹ್ಮಪರವಾದ ಪುರಾಣ, ಒಂದು ಸೂರ್ಯ ಪುರಾಣ ಮತ್ತೊಂದು ಅಗ್ನಿಪುರಾಣ ಆಗಿ ೧೮ ಪುರಾಣ ಆಗಿ ೧೮ ಪುರಾಣಗಳನ್ನು ರಚಿಸಿರುವರು.

# ಅಂಗಸ್ಥಲ ೯. ಭಕ್ತಮಾರ್ಗ ಕ್ರಿಯಸ್ಥಲಂ

ಮಹಾವಿಷ್ಣುವಿನ ಅಪರಾವತಾರಿಗಳು ಶ್ರೀವ್ಯಾಸರು–

**ವ್ಯಾಸಾಯ ವಿಷ್ಣು ರೂಪಾಯ । ವ್ಯಾಸರೂಪಾಯ ವಿಷ್ಣವೇ॥**

ಎಂದಿದೆ ಸ್ತುತಿಪಾಠ. ವೇದೋಪನಿಷದ್ ತತ್ವಗಳು ಸಮಸ್ತರಿಗೂ ವೇದ್ಯವಾಗುವಂತೆ, ಕಥಾರೂಪದಲ್ಲಿ ಹದಿನೆಂಟು ಪುರಾಣಗಳನ್ನು ರಚಿಸಿ ಜನ ಸಮುದಾಯವನ್ನು ಆಸ್ತಿಕರನ್ನಾಗಿಸಿ, ಉಜ್ವಲ ಧರ್ಮಕ್ರಾಂತಿಯನ್ನೆಸಗಿರುತ್ತಾರೆ. ಶೈವ ಮತ್ತೂ ವೈಷ್ಣವ ಧರ್ಮೀಯರಲ್ಲಿ ಭಿನ್ನಭಾವಕ್ಕೆಡೆಯಿಲ್ಲದೆ, ಹತ್ತು ಶೈವ ಪುರಾಣಗಳನ್ನೂ, ನಾಲ್ಕು ವಿಷ್ಣು ಪುರಾಣಗಳನ್ನೂ ಹೀಗೆ ಭಾರತದ ಎಲ್ಲಾ ಮತೀಯರಿಗೂ ಅನ್ವಯಿಸುವ ವಿಶ್ವಧರ್ಮ ಪ್ರತಿಪಾದನಾಚಾರ್ಯರಾಗಿ ಪೂಜಿತರಾಗಿದ್ದಾರೆ. ಹತ್ತು ಶಿವಪುರಾಣಗಳಾವುವೆಂದರೆ—

೧) ಸ್ಕಂದಪುರಾಣ, ೨) ಶಿವಪುರಾಣ, ೩) ಲೈಂಗ ಪುರಾಣ ೪) ಕೂರ್ಮ, ೫) ವಾಮನ, ೬) ವರಾಹ, ಭವಿಷ್ಯತ್ ಪುರಾಣಗಳೂ, ೮) ಮತ್ಸ್ಯ, ೯) ಮಾರ್ಕಂಡೇಯ ಮತ್ತೂ ೧೦) ಬ್ರಹ್ಮಾಂಡ ಪುರಾಣ, ಇಂತು ಹತ್ತು ಶೈವಪರವಾದ ಪುರಾಣಗಳೂ, ನಂತರ ೧) ನಾರದೀಯ, ೨) ಭಾಗವತಪುರಾಣ ೩) ಗಾರುಡ ಮತ್ತೂ ೪) ವಿಷ್ಣುಪುರಾಣ ಇಂತು ನಾಲ್ಕನ್ನು ಶ್ರೀ ಮಹಾ ವಿಷ್ಣುಪರವಾಗಿಯೂ, ೧) ಬ್ರಹ್ಮ ಪುರಾಣ ಮತ್ತೂ ೨) ಪದ್ಮ ಪುರಾಣಗಳೆರಡನ್ನು ಬ್ರಹ್ಮನ ಪರವಾಗಿಯೂ, ಒಂದು ಸೂರ್ಯ ಪುರಾಣ ಮತ್ತೊಂದು ಅಗ್ನಿ ಪುರಾಣ, ಆಗಿ ಹದಿನೆಂಟು ಪುರಾಣಗಳಲ್ಲಿ ವೇದಾಗಮೋಕ್ತ ತತ್ವವನ್ನು ಕಥಾ ರೂಪದಲ್ಲಿ ರಚಿಸಿ, ಜನಕೋಟಿಯನ್ನು ಆಧ್ಯಾತ್ಮ ವಿಚಾರದತ್ತ ಆಕರ್ಷಿಸಿ ಸಮನ್ವಯ ವಿಶ್ವಧರ್ಮವನ್ನು ಅವಿರೋಧ ಭಾವದಿಂದ ಸಂವರ್ಧಿಸುವಂತೆ ಮಾಡಿ ಮಹೋಪಕಾರದಿಂದ ಪ್ರಾತಃಸ್ಮರಣೀಯರಾಗಿದ್ದಾರೆ. ಚಿರಂತಕಾಲ ಮಹಾಭಾರತ ಪ್ರೌಢ ಕಾವ್ಯವನ್ನೂ, ಸರ್ವೋಪನಿಷದ್‌ಗಳ ಸಾರವೆನಿಸಿದ ಶ್ರೀ ಮದ್ಭಗವದ್ಗೀತೆಯನ್ನೂ ಅಮೋಘವಾಗಿ ರಚಿಸಿ ಧರ್ಮೋದ್ಧಾರ ಕಾರ್ಯವನ್ನೆಸಗಿ ಆ ಚಂದ್ರಾರ್ಕಯಶಸ್ ಕಾಯದಿಂದ ಶ್ರೀ ವ್ಯಾಸಾಚಾರ್ಯರು ಧೃವ ತಾರೆಯಂತೆ ಅಮರರಾಗಿ ಪೂಜನೀಯರೆನಿಸಿರುವರು.

ಶ್ರೀ ವೇದವ್ಯಾಸರು ಶ್ರೀ ಜ॥ ಪಂಚಾಚಾರ್ಯರುಗಳಲ್ಲಿ ಒಬ್ಬರಾದ ಹಿಮವತ್ಕೇದಾರ ಪರಮ ವೈರಾಗ್ಯ ಸಿಂಹಾಸನಾಧೀಶ್ವರ, ಶಿವಲಿಂಗೋದ್ಭವ ಮಂಗಳ ಮೂರ್ತಿ ಶ್ರೀ ಜ॥ ಘಂಟಾಕರ್ಣ ಶಿವಾಚಾರ್ಯರ ಪ್ರಥಮ ಶಿಷ್ಯ ರೆಂಬುದು ಪ್ರಸಿದ್ಧವಿರುತ್ತೆ. ಪ್ರಾಯಶಃ ಇದರಿಂದಾಗಿ ವ್ಯಾಸರು ೧೦ ಶಿವ ಪುರಾಣಗಳನ್ನು ಬರೆಯಲುದ್ಯುಕ್ತರಾಗಿರ ಬೇಕು. ಅವರು ಶಿವ ಸರ್ವೋತ್ತ ಮತ್ವವನ್ನು ಎತ್ತಿ ಹಿಡಿದು **"ವಿಶ್ವಾಧಿಕಃ ಶಂಕರಂ"** ಎಂದು ಘೋಷಿಸಿರುವರು. ಇಷ್ಟಲಿಂಗಧಾರಿಗಳಾದ ಶ್ರೀ ವೇದವ್ಯಾಸರು, ತಮ್ಮ ಲಿಂಗವನ್ನು ಮಸ್ತಕದಲ್ಲಿ ಧರಿಸಿ ಪೂಜಿಸುತ್ತಲಿದ್ದರು. ವ್ಯಾಸ ಕಾಶಿಯಲ್ಲಿನ ಶ್ರೀ ವ್ಯಾಸೇಶ್ವರ ದೇವಾ ಲಯದ ಮಹಾದ್ವಾರದಲ್ಲಿ ಸ್ಥಾಪಿತವಾಗಿರುವ, ಮಹಾಚಾರ್ಯರ ವಿಗ್ರಹ ವನ್ನು ಇಂದಿಗೂ ಭಕ್ತರು **"ಶ್ರೀ ವ್ಯಾಸಜಿಕ ಗುರು"** ಶ್ರೀ ಘಂಟಾಕರ್ಣ ಶಿವಾಚಾರ್ಯರೆಂದು ಮೊದಲು ಶ್ರೀ ಗುರುಗಳಿಗೆ ಪೂಜಿಸಿ ವಂದಿಸಿ ನಂತರ ಶ್ರೀ ವ್ಯಾಸೇಶ್ವರ ಲಿಂಗಕ್ಕೆ ಪೂಜೆ ಸಲ್ಲಿಸುತ್ತಲಿದ್ದಾರೆ. ಶ್ರೀಮದಾಚಾರ್ಯ ಶ್ರೀ ಜ॥ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾ ರ್ಯರೂ, ಇನ್ನೂ ಅನೇಕ ಭಾಷ್ಯಕಾರರು, ಶ್ರೀ ವೇದವ್ಯಾಸಾಚಾರ್ಯರನ್ನು ತಮ್ಮ ಆದಿ ಶ್ರೀ ಗುರೋತ್ತಮರೆಂದು ಸ್ತುತಿಸಿ ಅವರಲ್ಲಿ ಶರಣಾಗತರಾಗಿರುವರು.

—ಅಸ್ತು

ಕಾಮಿಕಾದಿ ವಾತುಲ ಪರ್ಯಂತವಿರುವ ೨೮ ಶಿವಾಗಮಗಳು ವೇದ ಕಾಲಕ್ಕೂ ಪೂರ್ವದಲ್ಲಿ ಶಿವನು ತನ್ನ ಅರ್ಧಾಂಗಿ ಜಗನ್ಮಾತೆ ಶ್ರೀ ಗಿರಿಜೆಗೆ, ಆತ್ಮೀಯವಾಗಿ ಬೋಧಿಸಿದ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಾತ್ಮಕ ಶಿವಾದ್ವೈತ ವಿಶ್ವ ಧರ್ಮವನ್ನು ವಿಶ್ವಾಚಾರ್ಯರಾದ ಶ್ರೀ ಜ॥ ರೇಣುಕಾದಿ ಪಂಚಾಚಾರ್ಯರು ಯುಗಾಂತರಗಳಿಂದಲೂ ಶಿವೋಕ್ತಿಯಂತೆ ತ್ರಿಭುವನಂಗ ಳಲ್ಲೂ, ಉಪನಿಷತ್ತುಗಳಲ್ಲೂ ಶ್ರೀ ಜ॥ ಪಂಚಾಚಾರ್ಯರನ್ನು ಅಖಂಡವಾಗಿ ಸ್ತುತಿಸಿರುವ ಮಂತ್ರಭಾಗಗಳು ಅಲ್ಲಲ್ಲೇ ವಿಪುಲವಾಗಿರುವುದರಿಂದ, ಶ್ರೀಮದ್ರೇ ಣುಕಾದಿ ಪಂಚಾಚಾರ್ಯರು, ನಿಗಮಾಗಮಗಳ ಕಾಲಕ್ಕಿಂತಲೂ, ಪೂರ್ವಜ ರೆಂಬುದು ಭಾನುಕೋಟಿ ಪ್ರಕಾಶಮಾನವಾಗಿ ಜಗತ್ತಿಗೆ ತಿಳಿದ ವಿಷಯ.

ಶಿವೋಕ್ತ ೨೮ ಶಿವಾಗಮಗಳಾವುವೆಂದರೆ :—

**ಕಾಮಿಕಂ । ಯೋಗಜಂ ಚಿಂತ್ಯಂ । ಕಾರಣಂ । ತ್ವಜಿತಂ । ತಥಾ**

**ದೀಪ್ತಾಂ । ಸೂಕ್ಷ್ಮಂ । ಸಹಸ್ರಂಚ । ಹ್ಯಂಶುಮತ್ । ಸುಪ್ರಭೇದಕಂ। ವಿಜಯಂ ಚೈವ । ನಿಶ್ವಾಸಂ ಸ್ವಾಯಂಭುವ ಮಥಾನಲಂ | ವೀರಂಚ । ತೌರವಂ । ಚೈವ ಮುಕುಟಂ । ವಿಮಲಂ ತಥಾ । ಚಂದ್ರಜ್ಞಾನಂ ಚ ಬಿಂಬಂ। ಚ ಪ್ರೋದ್ಗೀತಂ। ಲಲಿತಂ ತಥಾ । ಸಿದ್ಧಂ। ಸಂತಾನಶರ್ವೋತ್ತಂ । ಪಾರಮೇಶ್ವರ ಮೇವಚ । ಕಿರಣಂ | ವಾತುಲಂ ತ್ವೇತಾ । ಅಷ್ಟಾವಿಂಶತಿ ಸಂಹಿತಾಃ । ಏಮನ್ಯಾಸಿ ತಂತ್ರಾಣಿ ಶಿವ ಪ್ರೋಕ್ತಾನ್ಯನೇ ತತಃ ॥** ಅಂದರೆ,

೧) ಕಾಮಿಕಾಗಮ, ೨) ಯೋಗಜ, ೩) ಚಿಂತ್ಯಾಗಮ, ೪) ಕಾರಣಾಗಮ, ೫) ಅಜಿತ, ೬) ದೀಪ್ತ್ಯ, ೭) ಸೂಕ್ಷ್ಮಾ, ೮) ಸಹಸ್ರ, ೯) ಅಂಶುಮಾನ್ ಆಗಮ, ೧೦) ಸುಪ್ರಭೇದ, ೧೧) ವಿಜಯ, ೧೨) ನಿಶ್ವಾಸ, ೧೩) ಸ್ವಾಯಂಭುವ, ೧೪) ಅನಲ, ೧೫) ವೀರಾಗಮ, ೧೬) ತರವ, ೧೭) ಮಕುಟಾಗಮ, ೧೮) ವಿಮಲ, ೧೯) ಚಂದ್ರಜ್ಞಾನ, ೨೦) ಬಿಂಬಾಗಮ, ೨೧) ಪ್ರೋದ್ಗೀತ, ೨೨) ಲಲಿತ, ೨೩) ಸಿದ್ಧಾಗಮ, ೨೪) ಸಂತಾನ, ೨೫) ಶರ್ವೋತ್ತರ, ೨೬) ಪಾರಮೇಶ್ವರ, ೨೭) ಕಿರಣ, ೨೮) ವಾತುಲಾಗಮ, ಇವೇ ೨೮ ಶಿವಾಗಮಗಳು ವೀರಶೈವ ಮತಧರ್ಮ ಮೂಲ ಸ್ಥಂಭಾಯಮಾನವಾದ ಈಶ್ವರೀಯ ಆಧಾರ ತಂತ್ರಗಳು.

**ಭೋ ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ । ರಕ್ಷಮಾಂ ಭವ ರೋಣಂ ॥**
**ಅಂಬಿಕಾಪತಯೇ, ಉಮಾಪತಯೇ । ಪಶುಪತಯೇ ನಮೋ ನಮಃ ॥**

## ಅಂಗಸ್ಥಲ ೯. ॥ಭಕ್ತಮಾರ್ಗಕ್ರಿಯಾ ಸ್ಥಲಂ॥
(ಉತ್ತರ ಭಾಗ)

**ಸಿಂಹಾಸನಂ ಶುದ್ಧದೇಶೇ । ಸುರಮ್ಯೇ ರತ್ನ ಚಿತ್ರಿತೇ ।**
**ಶಿವಲಿಂಗಸ್ಯ ಪೂಜಾಯಾ । ಸಾಬಾಹ್ಯಾ ಭಕ್ತಿ ರುಚ್ಯತೇ ॥**
**(ಸಿ. ಶಿ. ಪರಿ. ೯. ಶ್ಲೋ. ೭)**

ಶಿವಪೂಜಾ ಗೃಹ ಗೂಡಿಸಿ, ಸಾರಿಸಿ, ರಂಗವಲ್ಲಿಯಿಂದ ಅಲಂಕೃತವಾಗಿ ಶುಚಿಯಾಗಿರ ಬೇಕು. ಅಂತೆಯೇ ಸ್ನಾನಾದಿಗಳಿಂದ ಶುಚಿರ್ಭೂತನಾದ ಪೂಜಕನು ಪೂಜ್ಯ ಪರವಸ್ತುವನ್ನು ಭಕ್ತ್ಯಾ ಪೂಜಿಸಲು ನಿರ್ಮಲ ಚಿತ್ತದಿಂದ ಪೂಜಾಗೃಹದೊಳಗೆ ಶಿವ ಮಂತ್ರೋಚ್ಚಾರಣೆ ಪೂರ್ವಕ ಪ್ರವೇಶಿಸಬೇಕು. ಪೂಜ್ಯವಾದ ಶಿವ ಲಿಂಗವನ್ನು ಅಭಿಷೇಕಾ ನಂತರ ಉನ್ನತವಾದ ಶುದ್ಧಿಗೊಳಿಸಿದ, ಸಿಂಹಾಸನಂ ಅಂದರೆ ರಮ್ಯವಾಗಿ ಪೂಜೆಗೆಂದೇ ದಿವ್ಯಾಲಂಕೃತ ಗೊಳಿಸಿರುವ ಭವ್ಯವಾದ ಮಂಟಪದಲ್ಲಿ ಮೂರ್ತ ಗೊಳಿಸ ಬೇಕು. ವಿಭೂತಿ ಗಂಧಾಕ್ಷತೆಗಳನ್ನು ಧರಿಸಿ, ಬಿಲ್ವಾದಿ ವಿವಿಧ ಪುಷ್ಪಗಳಿಂದ ವಿಧಿವತ್ತಾಗಿ ಪೂಜಿಸಿ, ಧೂಪ ದೀಪ ಆರತಿಗಳನ್ನು ಬೆಳಗಿ, ಶಿವ ಮಂತ್ರ ಜಪವನ್ನುಚ್ಚರಿಸಬೇಕು. ನಂತರ ಫಲ ವೃಷ್ಟಾನ್ನಾದಿಗಳನ್ನು ನಿವೇದಿಸಿ, ಸ್ತುತಿಸಿ, ನಮಸ್ಕರಿಸಿ, ಸ್ವಲ್ಪ ಭಜನೆ, ಪಾರಾಯಣಾದಿಗಳನ್ನು ಮಾಡುವ ವಿಧಾನ **॥ಸಾಬಾಹ್ಯ ಭಕ್ತಿ ರುಚ್ಯತೇ॥** ಬಾಹ್ಯ ಭಕ್ತಿಯೆನ್ನಲಾಗಿದೆ. ಇಷ್ಟಲಿಂಗವನ್ನು ತನ್ನ ಕರಪೀಠವೆಂಬ ಸಿಂಹಾಸನದಲ್ಲಿರಿಸಿ ವಿಧಿವತ್ತಾಗಿ ಪೂಜಿಸುವ ವಿಧಾನವೂ ಬಾಹ್ಯ ಭಕ್ತಿಯೆನಿಸಿದೆ.

**ಲಿಂಗೇ ಪ್ರಾಣಂ ಸಮಾದಾಯ । ಪ್ರಾಣೇ ಲಿಂಗಂತು ಶಾಂಭವಂ ।**

**ಸ್ವಸ್ಥಂ ಮನಸ್ಥಥಾ ಕೃತ್ವಾ । ನ ಕಿಂಚಿಚ್ಚಿಂತಯೇದ್ಯದಿ ॥**

ಅಂತರಂಗದ ಭಕ್ತಿ ಪೂಜೆ ಬಾಹ್ಯ ಭಕ್ತಿ ಪೂಜೆಗಿಂತಲೂ ಸಹಸ್ರಾಂಶ ಮಿಗಿಲೆನಿಸಿದೆ. ಇಲ್ಲಿ ಇಷ್ಟಲಿಂಗದ ಚಿನ್ಮುದ್ರೆ ಪ್ರಾಣಲಿಂಗದಲ್ಲಿ ಸ್ಥಾಪಿತವಾಗಿ-ಗಿರುವ ಮಹದಂಶ, ಶುದ್ಧಾಂತರಂಗದಲ್ಲಿ ಪ್ರಥಿಫಲಿಸುತ್ತೆ. ಪ್ರಾಣಲಿಂಗವಾದರೋ "**ಅಥಏಿವ ಪ್ರಾಣಃ**" ಎಂಬ ಉಪನಿಷದುಕ್ತಿಯಂತೆ ಮಹಾ ಪ್ರಾಣವೇ ಸಚ್ಚಿದಾನಂದಮಯ ಪರವಸ್ತುವೆನಿಸಿ, ಹೊಂಬಣ್ಣದಿಂ ಥಳಥಳಿಸುವ ಹೃತ್ಕಮಲ ಸಿಂಹಾಸನದಲ್ಲಿ ರಾರಾಜಿಸುವ ಪರಂಜ್ಯೋತಿ ಪ್ರಾಣಲಿಂಗವೆನಿಸಿದೆ.

**ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣ ರೂಪಿಣಿ ॥**

**ಅಂದರೆ ಲಿಂಗಮೇವ ಶರಣಃ । ಶರಣ ಮೇವ ಲಿಂಗಃ ॥**

ಎಂಬಂತೆ ಸೇವಾಭಾವದಿಂದ, ಲಿಂಗದ ಪರಮ ಮಹಾಚೈತನ್ಯದಲ್ಲಿ ಅಂಗನ (ಜೀವಾತ್ಮನ) ಜೀವಕಳೆಯನ್ನು ಬಂಧುರವಾಗಿ ಸಂಗಿಸಿ, **॥ ಪ್ರಾಣೇ ಲಿಂಗಂ ತು ಶಾಂಭವಂ ॥** ತನ್ನ ಚೈತನ್ಯವೆನಿಸಿದ ಪ್ರಾಣವನ್ನು ಶುಭಕರವಾದ ಲಿಂಗದ

ಮಹಾ ಪ್ರಾಣದೊಂದಿಗೆ ಕೂಡಿಸಿ, ಲಿಂಗಾಂಗಗಳನ್ನು ಹೃನ್ಮಂದಿರದಲ್ಲಿ ತದೇಕ ಧ್ಯಾನಪರವಶನಾಗಿ, ಮಾನಸಿಕ ಪೂಜೆಯನ್ನು ತನ್ನಲ್ಲಿ ಅಳವಡಿಸಿ ಕೊಂಡು ರಂಜಿಸುವ ವಿಧಾನ,

**ಸಾ ಭ್ಯಂತರಾ ಭಕ್ತಿರಿತಿ । ಪ್ರೋಚ್ಯತೇ ಶಿವಯೋಗಿಭಿಃ ॥**

ಶಿವಶರಣರು ಮೆಚ್ಚುವಂಥಾ ಸುವ್ಯವಸ್ಥಿತವಾದ ಆಂತರಿಕ ಭಕ್ತಿಯೆನಿಸಿದೆ. ಇಂತಪ್ಪ ಉಭಯತರ ಭಕ್ತಿಯ ಜನ್ಮಸ್ಥಾನವಾವುದು ?

**ಪ್ರಸಾದಾ ದೇವ ಸಾ ಭಕ್ತಿಃ । ಪ್ರಸಾದೋ ಭಕ್ತಿಸಂಭವಃ ।**

**ಯಥೊ ವಾಂಕುರತೋ ಬೀಜಂ । ಬೀಜತೋ ವಾ ಯ ಥಾಂಕುರಃ ॥**

ಶಿವನ ಕೃಪಾಮಯ ದಿವ್ಯ ಪ್ರಸಾದ (ಅನುಗ್ರಹ) ದಿಂದ ಹೊರಹೊಮ್ಮಿದ ಚಿಚ್ಛೈತನ್ಯರಸ ಭಕ್ತಿಯೆನಿಸಿದೆ) ಭಕ್ತಿ ದೈವೀ ವಿದ್ಯುದ್ಛಕ್ತಿ. ಶಿವಾನುಗ್ರಹ ಪ್ರಸಾದ, ಮೊಡಲಿಲ್ಲದ ದಿವ್ಯಮೊಡಲಿನಿಂದ ಭಕ್ತಿ ಸ್ವಚ್ಛಂದವಾಗಿ ಅವಿರ್ಭವಿಸಿದೆ. ಬೀಜದಿಂದ ಮರ, ಮರದಿಂದ ಅನೇಕ ಬೀಜಗಳುಂಟಾಗುವಂತೆ ಶಿವಾನುಗ್ರಹ ದಿವ್ಯಶಕ್ತಿಯಿಂದ ಭಕ್ತಿಸಾಮ್ರಾಜ್ಯ, ಭಕ್ತಿಯಿಂದ ಶಿವನ ದೇದೀಪ್ಯಮಾನವಾದ ಪ್ರಸಾದ, ಹೀಗೆ ಭಕ್ತಿ, ಶಿವಪ್ರಸಾದ, ವಂದರಲ್ಲೊಂದು ಪೂರಕವಾಗಿವೆ, ಎಂದು ಶ್ರೀ ಮದಾಚಾರ್ಯ ಶ್ರೀ ರೇಣುಕರು ಅಪ್ಪಣೆ ಕೊಡಿಸಿರುವರು.

**ಭಕ್ತಿ ಶಿವಪ್ರಸಾದ ಜನನೀ ಭವನಂ । ಶಿವಪ್ರಸಾದವಾ ಭಕ್ತಿಗೆ**
**ಜನ್ಮ ಭೂಮಿ । ವಿಮಲಾಂಕುರ ಬೀಜದ ವೋಲ್ । ಪರಸ್ಪರಂ**
**ವ್ಯಕ್ತಮಿದಿಂತು । ನೋಳ್ಪೊಡದು ತಾನೆ ನಿರಂತರಮಪ್ಪ ।**
**ಮುಕ್ತಿಯಾ ಮುಕ್ತಿಯೋ ಶುದ್ಧ ನಿಷ್ಕಲ ನಿಜೈಕ್ಯ ಪದಂ**
**ಪರಮಂ ಶಿವಾಥವಾ ॥ ಶಿವಾನುಗ್ರಹ ಮತ್ತು ಇದರಿಂದುಂಟಾ**
**ದ ಭಕ್ತಿ ಈ ಉಭಯ ಸಂಪರ್ಕಗಳು ॥**

ಸಾಗರ ತರಂಗ ಭಂಗಿ ನ್ಯಾಯದಂತೆ ಅಂದರೆ ಸಮುದ್ರದಿಂದ ಅಲೆಗಳೋ ಅಲೆಗಳಿಂದ ಸಮುದ್ರವೋ ಎಂದೆನಿಸಿದೆ.

ಲಿಂಗಾಗಿ ಶಿವ ಭಕ್ತನು ಜೀವಿತ ಕಾಲದಲ್ಲಿ ಐದು ವಿಧದ ಶಿವಯಜ್ಞದಲ್ಲಿ ನಿರತನಾಗಿರ ಬೇಕು,

**ಪಂಚಧಾ ಕಥ್ಯತೇ ಸದ್ಭಿ । ಸ್ತದೇವ ಭಜನಂ ಪುನಃ | ತಪಃ**
**ಕರ್ಮ ಜಪೋ ಧ್ಯಾನಂ । ಜ್ಞಾನಂ ಚೇತ್ಯನು ಪೂರ್ವಕಂ ।**
**ಶಿವಾರ್ಥೇ ದೇಹ ಸಂಶೋಷಸ್ತಪಃ । ಕೃಚ್ಛ್ರಾದಿನೋಮತಂ ।**
**ಶಿವಾರ್ಚಾ ಕರ್ಮವಿಜ್ಞೇಯಂ । ಬಾಹ್ಯಂ ಯಾಗಾದಿ ನೋಚ್ಯ**
**ತೇ ॥ ಜಪಃ ಪಂಚಾಕ್ಷರಾಭ್ಯಾಸಃ । ಪ್ರಣವಾಭ್ಯಾಸ ಏವವಾ ।**
**ರುದ್ರಾಧ್ಯಾಯಾದಿಕಾಭ್ಯಾಸೋ । ನ ವೇದಾಧ್ಯಯನಾದಿಕಂ ॥**
**ಧ್ಯಾನಂ ಶಿವಸ್ಯ ರೂಪಾದಿ ಚಿಂತಾನಾತ್ಮಾದಿ ಚಿಂತನಂ ।**
**ಶಿವಾಗಮಾರ್ಥ ವಿಜ್ಞಾನಂ । ಜ್ಞಾನಂ ನಾನ್ಯಾರ್ಥ ವೇದನಂ ॥**
**ಇತಿ ಪಂಚಪ್ರಕಾರೋಯಂ ಶಿವಯಜ್ಞಃ ಪ್ರಕೀರ್ತಿತಃ ॥**
**ಶ್ರೀ ಮದ್ ಜಗದಾಚಾರ್ಯರು ॥**

ತಪಃ ಕರ್ಮ, ಜಪೋಧ್ಯಾನಾ ರಾಧನಂ, ಎಂಬೀ ಐದು ವಿಧದ ಶಿವ ಯಜ್ಞವನ್ನು ಭಕ್ತನು ನಿತ್ಯ ಶ್ರದ್ಧಾಭಕ್ತಿಯಿಂದ ಯಾವಜ್ಜೀವವೂ ಆತ್ಮೋದ್ಧಾರಾರ್ಥ ಆಚರಿಸುತ್ತಲಿರ ಬೇಕೆಂದು ಬೋಧಿಸಿರುವರು.

೧) ಶಿವನ ವಿಷಯದಲ್ಲಿ ಪರಮಾತ್ಮನ ಹೆಸರಿನಲ್ಲಿ ಶಿವಪ್ರೀತ್ಯರ್ಥ ಶ್ರಮಿಸಿ, ಶ್ರೀಗಂಧದ ಚೆಕ್ಕೆ ಶಿವಾರಾಧನೆಗೆ ಗಂಧವಿತ್ತು ತೇದು ತೇದು ತೇಯು ವಂತೆ, ಶರೀರ ಶೋಷಣ ತಪಸ್ಸೆನಿಸಿದೆ. ಕೃಚ್ಛ್ರಾಂದ್ರಾಯಣಾದಿ ಕಠಿನ ತರದ ದೇಹ ದಂಡಿಸುವಿಕೆ ತಪಸ್ಸಲ್ಲ.

೨) ತ್ರಿಕಾಲಂಗಳಲ್ಲಿ ವಿಧ್ಯುಕ್ತವಾಗಿ ಶಿವ ಪ್ರೀತ್ಯರ್ಥ ಮಾಡುವ ನಿತ್ಯ ನೈಮಿತ್ತಿಕ ಆಚರಣೆಗಳೇ ಕರ್ಮವೆನಿಸಿವೆ. ತದ್ವಿರುದ್ಧವಾದ ಅಶ್ವಮೇಧ ಯಾಗಾದಿ ಕಾಮ್ಯಕರ್ಮಗಳು ಹಾಗೂ ಕಷ್ಟಕರವಾದ ಜ್ಯೋತಿಸ್ಟೋಮಾದಿ ಬಾಹ್ಯಯಜ್ಞಗಳು ಕರ್ಮವಲ್ಲ.

೩) ಶಿವಪಂಚಾಕ್ಷರ ಮಂತ್ರಾಭ್ಯಾಸ, ಪ್ರಣವೋಪಾಸನೆ ಶ್ರೀ ರುದ್ರ ಪಠನೆಗಳು ಜಪವೆನಿಸಿ ಮೋಕ್ಷಪ್ರದವೆನಿಸಿವೆ. ಇವನ್ನು ಬಿಟ್ಟು ಕೇವಲ ಪಶು ಧರ್ಮ ಪ್ರತಿಪಾದಕವಾದ ವೇದಾಧ್ಯಯನ ಜಪವೆನಿಸುವುದಿಲ್ಲ.

೪) ಸಚ್ಚಿದಾನಂದ ನಿತ್ಯ ಪರಿಪೂರ್ಣಾಖಂಡಾ ದ್ವಿತೀಯ ಪರವಸ್ತು ವನ್ನು ಪರಂಜ್ಯೋತಿ ರೂಪದಲ್ಲಿ ಹೃನ್ಮಂದಿರದಲ್ಲಿ ಅಂತರ್ಮುಖಿಯಾಗಿ,

**ಧ್ಯಾನಾವಸ್ಥಿತ ತದ್ಗತೇನ ಮನಸಾ । ಪಶ್ಯಂತಿ ಯಂ ಯೋಗಿನಃ ||**

ಎಂಬಂತೆ, ಸ್ವಸ್ವರೂಪಧ್ಯಾನಾನು ಸಂಧಾನವೇ ನಿಜ ಧ್ಯಾನವೆನಿಸಿದೆ ಶರೀರೇಂದ್ರಿ ಯಾದಿಗಳ ಉಪಾದಿಗಳಿಂದ ಬಂಧಿತನಾದ ಆತ್ಮಧ್ಯಾನ ಧ್ಯಾನವಲ್ಲ.

೫) ಶಿವಾಗಮಗಳ ಉತ್ತರಭಾಗದಲ್ಲಿ ಪ್ರೋಕ್ತವಾದ, ಘನ ಶಿವಾಗ ಮಾರ್ಥ ತತ್ವಜ್ಞಾನವೇ ಶ್ರೇಷ್ಠಜ್ಞಾನ, ಸಾಂಖ್ಯಾದಿ ಶಾಸ್ತ್ರ ಪ್ರೋಕ್ತಜ್ಞಾನ ನಿಜ ಜ್ಞಾನವಲ್ಲೆಂದು ರೇಣುಕರು ಬೋಧಿಸಿರುವರು. ಅಸ್ತು.

## ಅಂಗ ಸ್ಥಲ ೯. || ಭಕ್ತಮಾರ್ಗ ಕ್ರಿಯಾ ಸ್ಥಲಂ ||

(ಉತ್ತರ ಭಾಗ)

**ಲಿಂಗಾರ್ಚನ ರತಾಯಾಶ್ಚ । ಋತೌ । ನಾರ್ಯಾನ ಸೂತಕಂ।**
**ತಥಾ ಪ್ರಸೂತಿ ಕಾಯಾಶ್ಚ । ಸೂತಕಂ ನೈವ ವಿದ್ಯತೇ ||**
**ನ ತಸ್ಯ ಸೂತಕಂ ಕಿಂಚಿತ್ । ಪ್ರಾಣ ಲಿಂಗಾಂಗ ಸಂಗಿನಃ ।**
**ಜನನೋತ್ಥಂ । ಮೃತೋತ್ಥಂ । ಚ, ವಿದ್ಯತೇ ಪರಮಾರ್ಥತಃ ||**
**ಗೃಹೇ ಯಸ್ಮಿನ್ ಪ್ರಸೂತಾಸ್ತ್ರೀ । ಸೂತಕಂ ನಾತ್ರ ವಿದ್ಯತೇ ।**
**ಶಿವ ಪಾದಾಂಬು ಸಂ ಸ್ಪರ್ಶಾತ್ । ಸರ್ವ ಪಾಪಂ ಪ್ರಣಶ್ಯತಿ ||**

(ಸಿ. ಶಿ. ಪರಿ. ೯. ಶ್ಲೋ ೪೩, ೪೪, ೪೫)

ವೀರಶೈವ ಸ್ತ್ರೀಯರಲ್ಲಿ ಬಹುಜನ ಲಿಂಗವನ್ನು ಶರೀರದ ಮೇಲೆ ಧರಿಸಿರು ವುದರಿಂದ ಪಂಚಸೂತಕಗಳಿಲ್ಲವೆಂಬ ತಪ್ಪು ತಿಳುವಳಿಕೆಯಿಂದ ತಮ್ಮ ಧರ್ಮಕ್ಕೆ ಅಪಚಾರವೆಸಗುತ್ತಾ, ಅನಾರೋಗ್ಯಕ್ಕೆ ಎಡೆಮಾಡಿ ಕೊಡುವುದರೊಂದಿಗೆ

ಪಾಪಕ್ಕೆ ಗುರಿಯಾಗುತ್ತಲಿದ್ದಾರೆ. ಲಿಂಗಾಂಗಿ ಧರ್ಮದ ಸ್ತ್ರೀಯರು ಈ ವಿಷಯದಲ್ಲಿ ಗುರುಗಳಿಂದ ಕೇಳಿ ತಿಳಿದು ಕೊಳ್ಳುವ ಮನೋಭಾವ ಸಹ ಇಲ್ಲದವರಾಗಿದ್ದಾರೆ. ಇದು ಸರಿಯೆ, ಶೋಚನೀಯವಿರುತ್ತೆ. ವೇದಾಗಮಗಳೂ ಶ್ರೀ ಜ|| ಪಂಚಾಚಾರ್ಯರೂ ಈ ಬಗೆಗೆ ಸಾಕಷ್ಟು ವಿವರವಾಗಿ ಬೋಧಿಸಿದ್ದರೂ, ಜನರ ಮೂಢ ನಂಬಿಕೆ ಪ್ರತಿಬಂಧಕವಾಗಿದೆ. ಶ್ರೀ ಜ|| ರೇಣುಕರು,

**ನ ತಸ್ಯ ಸೂತಕಂ ಕಿಂಚಿತ್ । ಪ್ರಾಣ ಲಿಂಗಾಂಗಿ ಸಂಗಿನಃ ॥**

ಅಂದರೆ, ಯಾರು ಶಿವಧ್ಯಾನ, ಶಿವಯೋಗ, ಶಿವವ್ರತ, ಶಿವಪೂಜಾ, ಶಿವಜ್ಞಾನಾದಿ, ದಿವ್ಯ ವ್ರತಧಾರಿಗಳಾಗಿ, ಲಿಂಗದ ಮಹಾ ಚೇತನದ ಕಾಂತಿಯಲ್ಲಿ ತನ್ನ ಜೀವಕಳೆಯನ್ನು ಭಕ್ತಿಯೋಗದಿಂದ ಮಂದು ಗೂಡಿಸಿ, ಗುರುಧ್ಯಾನ ಪರಾಯಣರಾಗಿರುವರೋ ಅಂಥವರಿಗೆ ವೀರಶೈವ ಧರ್ಮದಲ್ಲಿ ಪಂಚಸೂತಕಗಳಿರುವುದಿಲ್ಲ ಎಂದಿರುವರು. ಇದರಂತೆ ಸ್ತ್ರೀಯರು ರಜಸ್ವಲಾದಿ ಋತುಕಾಲಗಳಲ್ಲಿ ತಮ್ಮ ಇಷ್ಟ ಲಿಂಗಾರಾಧನೆಗೆ ಭಂಗವಿಲ್ಲದಂತೆ ಬಹಿಷ್ಟೆಯರಾದ ೪ ದಿನ ಬೆಳಿಗ್ಗೆ–ಸಂಜೆಗಳಲ್ಲಿ ಸ್ನಾನ ಮಾಡಿ, ತಕ್ಷಣ ಶಿವಪೂಜೆಯನ್ನು ಅವಶ್ಯ ಮಾಡಬೇಕು. ಲಿಂಗಪಾದೋದಕವನ್ನೆ ಸೇವಿಸಿ ಪಾವನರಾಗ ಬೇಕು. ಈ ಸತ್ಕ್ರಿಯೆಗೆ, ಸ್ವಧರ್ಮಾಚರಣೆಗೆ ಪಂಚಸೂತಕಗಳ ದೋಷವಿಲ್ಲ. ಎಂದೂ ಶಿವಾಗಮಗಳೂ ಶ್ರೀ ಜ|| ಪಂಚಾಚಾರ್ಯರು ಸಹ ಸ್ಪಷ್ಟಪಡಿಸಿರುವರು. ಆದರೆ ಸ್ತ್ರೀ ದೇಹ ಧರ್ಮ, ಶಿವಲಿಂಗದ ಪೂಜಾ ಧರ್ಮಕ್ಕೆ ಭಿನ್ನವಿರುತ್ತೆ. ಬಹಿಷ್ಟೆಯಾದ ನಾಲ್ಕು ದಿನ ದೇಹದ ಮೈಲಿಗೆ ಅನಿವಾರ್ಯವಿರುತ್ತೆ. ಇದರಿಂದಾಗಿ ಆ ನಾಲ್ಕೂ ದಿನಗಳೂ ಪೂಜಾಗೃಹ ಅಡಿಗೆ ಮನೆಯೊಳಗೆ ಪ್ರವೇಶಿಸ ಬಾರದು. ಪಾಕಎಸಗ ಬಾರದು, ಊಟಕ್ಕೆ ಬಡಿಸ ಬಾರದು, ಒಂದು ಕಡೆ ಕೂತು ಅಲ್ಲೇ ಶಿವಪೂಜೆ, ಊಟ, ಮತ್ತು ಚಾಪೆ ಅಥವಾ ಜಮಖಾನದ ಮೇಲೆ, ಏಕಾಂಗಿಯಾಗಿ ಮಲಗ ಬೇಕು. ಇದು ಆಕೆಯ ಆರೋಗ್ಯ ದೃಷ್ಟಿಯಿಂದ ಮತ್ತು ಮನೆಯವರ ಸರ್ವರ ಆರೋಗ್ಯ ದೃಷ್ಟಿಯಿಂದ ಇದು ಅತ್ಯಾವಶ್ಯಕವಿರುತ್ತೆ. ಲಿಂಗ ಅಂಗಗಳ ಅವಿನಾಭಾವ ಸಂಬಂಧವಾದ ಅನುಭವೈಕ್ಯಜ್ಞಾನೋದಯ ಸ್ತ್ರೀಯರಿಗೆ ಆಗಿ ಲಿಂಗ ಶರೀರ, ಲಿಂಗ ಪ್ರಾಣಿಗಳಾಗುವವರವಿಗೂ ದೇಹದ ಮೈಲಿಗೆ ಸೂತಕ ಇದ್ದೇ ಇರುತ್ತೆ. ಇಲ್ಲವೆಂದು ಹೇಳುವುದು ಮಹಾ ಪಾಪವಿರುತ್ತೆ. ಋತು ಕಾಲದಲ್ಲಿ ಸತಿಪತಿಗಳು ಒಂದು ಹಾಸಿಗೆಯ ಮೇಲೆ ಮಲಗಿದರೆ ಭೀಕರ

ವಾದ ಅನಾರೋಗ್ಯಕ್ಕೆ ಎಡೆ ಮಾಡಿ ಕೊಟ್ಟಂತಾಗುತ್ತೆ. ಎಚ್ಚರವಿರಲಿ. ಅನ್ಯ ಜಾತಿ ಮಹಿಳಾ ವರ್ಗ ಪ್ರತಿ ತಿಂಗಳೂ ಬಹಿಷ್ಟೆಯರಾದಾಗ ೪ ದಿನ ಕಟ್ಟು ನಿಟ್ಟಾಗಿ ನಿಷಿದ್ಧ ವ್ರತವನ್ನು ನೆರವೇರಿಸತ್ತಲಿರುವಾಗ, ಅದೇ ಸ್ತ್ರೀ ಜನಾಂಗಕ್ಕೆ ಸೇರಿದ ಲಿಂಗಾಂಗಿ ನಾರಿಯರ ದೇಹವು ತದ್ವತ್ ಮೋಕ್ಷಕ್ಕೆ ಗುರಿಯಾಗುವುದು ಸರಿಯಷ್ಟ. ಶಿವಪೂಜಾ ವ್ರತಕ್ಕೆ ಭಂಗ ಬರಬಾರದೆಂದೂ ಮತ್ತು ದೇಹ ಧರ್ಮ ಕ್ಕಿಂತಲೂ ಶಿವಲಿಂಗ ಪೂಜಾ ಧರ್ಮ ಕೋಟಿ ಪಾಲು ಪಾವನವು ಪಾವನವಾ ದ್ದರಿಂದ, ನಿಕೃಷ್ಟವಾದ ದೇಹ ಧರ್ಮದ ಸೂತಕಾದಿಗಳು ಶಿವಪೂಜೆಗೆ ದೂರ ವಿರುವುವು ಇದು ಸತ್ಯ,

ಅಕರ ಸ್ಪರ್ಶ ಯೋಗ್ಯಾಪಿ। ಯಥಾಜಿಹ್ವಾ ಮಾಹೇಶ್ವರೀ
ಮಂತ್ರೋಚ್ಛಾರಣ ಮಾತ್ರಸ್ಯ ಪೂತಾಭವತಿ ಭೂತಲೇ ॥

ಶಿವಪೂಜಾ ವೇಳೆಯಲ್ಲಿ ನಾಲಗೆಯನ್ನು ಕೈಯಿಂದ ಮುಟ್ಟಲು ಅಯೋ ಗ್ಯವಾಗಿದ್ದರೂ, ಶಿವ ಮಂತ್ರೋಚ್ಚಾರಣೆಗೆ ಪವಿತ್ರವಿರುವುದು. ನಾಲಗೆ ಯಿಂದ ಮಂತ್ರಗಳನ್ನು ಪಠಿಸುವುದರಿಂದ ಮಂತ್ರ ಎಂಜಲಾಗುವುದಿಲ್ಲ. ಮಂತ್ರ ಪರಿಶುದ್ಧವೇ ಇರುವುದು. ಆದರೆ ಬೆರಳು, ನಾಲಗೆಯನ್ನು ಸ್ಪರ್ಶಿಸ ಬಾರದು. ಇದು ಹೇಗೋ ಹಾಗೆ,

ತಥಾ ಸೂತಕಿನಃ ಶೈವಾಃ । ಪೂಜಾ ಮಾತ್ರಸು ನಿರ್ಮಲಾಃ ।
ನಾನ್ಯ ಸ್ಪರ್ಶಾನುಕೂಲಾಃ ಸ್ಯುರಿತಿ । ವೇದಾನು ಶಾಸನಂ ॥

(ಇತಿ ಸಿದ್ಧಾಂತಾಗಮ) ಎಣ್ಣೆ, ಬೆಣ್ಣೆ, ತುಪ್ಪಗಳನ್ನು ಮುಟ್ಟಿದರೆ ಬೆರಳುಗಳು ಜಿಡ್ಡಾಗುವುವು. ಅವುಗಳನ್ನು ನಾಲಗೆ ಮೇಲಿಟ್ಟರೆ ಕರಗಿದರೂ ನಾಲಗೆ ಜಿಡ್ಡಾಗುವುದಿಲ್ಲ. ಇದರಂತೆ ರಜಸ್ವಲ, ಋತು ಕಾಲಗಳಲ್ಲಿ ಸ್ವಧರ್ಮಾಚರಣೆ ಲಿಂಗಪೂಜೆ, ಮಂತ್ರ, ಜಪ ಇತ್ಯಾದಿಗಳನ್ನು ಆಚರಿಸಿದರೂ ಸಹ ಪೂಜೆಗೆ ಸೂತಕ ಅಂಟುವುದಿಲ್ಲ. ಶ್ರೀ ಗುರು ಹಸ್ತದಿಂದ ಯಾವ ಸ್ತ್ರೀ ದೀಕ್ಷಾತ್ರಯ ವನ್ನು ಹೊಂದಿ ಲಿಂಗತ್ರಯಂಗಳನ್ನು ದೇಹತ್ರಯಂಗಳಲ್ಲಿ ಪೂಜಿಸಿ ಲಿಂಗ ದೇಹ ಲಿಂಗ ಮನವುಳ್ಳವಳಾಗಿ ಸರ್ವಾಂಗ ಲಿಂಗಿಯಾಗಿ ಲಿಂಗ ಬೋಗೋಪ ಭೋಗಿಯಾಗಿರ್ಪಳೋ, ಆ ಮಹಾತಾಯಿಗೆ ಸರ್ವಥಾ ಪಂಚಸೂತಕಗಳಿಲ್ಲ ಈ ದೈವೀ ಸ್ಥಿತಿಯನ್ನು ಯಾವ ಮಹಿಳೆ ಅಂತರಂಗದಲ್ಲಿ ಅನುಭವಕ್ಕೆ ತಂದು

ಕೊಂಡಿಲ್ಲವೋ ಅಕೆಗೆ ಸಾಮಾನ್ಯ ಲಿಂಗಾಂಗಿಯಾಗಿದ್ದರೂ, ದೇಹ ಧರ್ಮದ ಪಂಚ ಸೂತಕಗಳು ಇದ್ದೇ ಇರುವುವು. ಈ ಕಾರಣಗಳಿಂದ ವೀರಶೈವ ಮಹಿಳೆಯರು ತಕ್ಷಣ ತಮ್ಮ ಈ ತಪ್ಪುಗಳನ್ನು ತಾವೇ ಮನಗಂಡು ಬಹಿಷ್ಟೆ, ರಜಸ್ವಲೆ ಇತ್ಯಾದಿ ಪಂಚ ಸೂತಕಗಳ ಕಾಲದಲ್ಲಿ ೪ ದಿನ ಏಕಾಂಗಿ ವ್ರತವನ್ನು ಕೈಕೊಂಡು ದ್ವಿಸಂಧ್ಯಾಕಾಲಗಳಲ್ಲಿ ಸ್ವಧರ್ಮದ ಲಿಂಗಾರ್ಚನೆಯನ್ನು ಮಡಿಯುಟ್ಟು ಕ್ಷಣಕಾಲ ಮಾಡಿ, ಸರ್ವ ಕರ್ಮಗಳಿಂದ ದೂರವಿದ್ದು, ಸ್ವಧರ್ಮ, ಸ್ತ್ರೀ ಧರ್ಮಗಳಲ್ಲಿ ನಿಷ್ಠರಾಗಿ ಕುಟುಂಬದ, ಸಮಾಜದ ಹಾಗೂ ಜನತೆಯ ಅಭ್ಯುದಯಂಗಳಿಗೆ ಮಾರ್ಗದರ್ಶನ ನೀಡುವಂಥವರಾಗಿ ಶ್ರೇಯಸ್ಸನ್ನು ಹಾರೈಸ ಬೇಕಾಗಿ ಸವಿನಯ ಕೋರಿಕೆ.

**ಕಲ್ಯಾಣಾಂಚಿತ ರೂಪೆ ಮಾತೇ। ಭವಧೀಯಾಂಘ್ರಿದ್ವಯಾ**
**ಬ್ಜಂಗಳಂ। ಎಲ್ಲಾ ಕಾಲದೊಳುಂ ಮದೀಯ ಮನದೊಳ್।**
**ಸಂತೋಷದಿಂದರ್ಚಿಪೆಂ। ಸಲ್ಲಾಲಿತ್ಯ ಕಟಾಕ್ಷದಿಂ ಪೊರೆಯೌ।**
**ಸದ್ವಾಕ್ಯ ಸಂಪತ್ತಿಯಿಂ। ಪುಲ್ಲಾಬ್ಜಾಕ್ಷಿ ಸರಸ್ವತೀ ಭಗವತೀ।**
**ಪೂರ್ಣೆಂದು ಬಿಂಬಾನನೇ ॥**

**ಅಯಿಗಿರಿ ನಂದಿನಿ ನಂದಿತಮೋದಿನಿ। ಸ್ಕಂದ ವಿನೋದಿನಿ**
**ನಂದಿನುತೇ ಗಿರಿವರ ವಿಂಧ್ಯ ಶಿರೋಧಿನಿವಾಸಿನಿ। ಶಂಭು**
**ವಿಲಾಸಿನಿ ವಿಶ್ವನುತೇ ॥ ಭಗವತಿ ಹೇ ಶಿತಿಕಂಠ ಕುಟುಂಬಿನಿ।**
**ಭಕ್ತಜನಾವಳಿ ಕಲ್ಪಲತೇ। ಜಯ ಜಯ ಹೇ ಮಹಿಷಾಸುರ**
**ಮರ್ಧಿನಿ। ರಮ್ಯಕಪರ್ದಿನಿ ಶೈಲ ಸುತೇ ॥**

## ಅಂಗಸ್ಥಲ ೯. ॥ ಭಕ್ತಮಾರ್ಗ ಕ್ರಿಯಾ ಸ್ಥಲಂ ॥

**ನ ತಸ್ಯ ಸೂತಕಂ ಕಿಂಚಿತ್। ಪ್ರಾಣಲಿಂಗಾಂಗಿ ಸಂಗಿನಃ ॥**

ಪ್ರಾಣವೆಂಬುದು ದೇಹಧಾರಣೆಗೆ ಕಾರಣವಾದ ಉಸಿರು. ಈ ಉಸಿರಿಗೆ ಉಸಿರಾಗಿರುವ ಮಹಾಉಸಿರು, ಮಹಾ ಪ್ರಾಣವೆನಿಸಿದೆ. ಇದುವೇ ಶಿವಚೈತನ್ಯವೆನಿಸಿದೆ. ಉಪನಿಷದಾದಿಗಳಲ್ಲಿ **"ಚೈತನ್ಯಂ ಬ್ರಹ್ಮ"** ಎಂದು ಸ್ತುತಿಸಲಾಗಿದೆ

ಇಂತಪ್ಪ ಚೈತನ್ಯವನ್ನು ಚಿತ್ ಚೈತನ್ಯವೆಂಬರು. ಶೃತಿ ಇದನ್ನೇ **"ಅಥ ಏವ ಪ್ರಾಣಃ"** ಎಂದು ಘೋಷಿಸುತ್ತಲಿದೆ. ವೀರಶೈವ ಸಿದ್ಧಾಂತದಲ್ಲಿ ಇದನ್ನು ಪ್ರಾಣಲಿಂಗವೆಂದು ನಿರ್ಣಯಿಸಲಾಗಿದೆ.

**ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣ ರೂಪಿಣಿ ॥**

ಇಂತಪ್ಪ ಪ್ರಾಣ ಲಿಂಗಾರಾಧನೆಗೆ, ಇಷ್ಟಲಿಂಗ ಪೂಜೆಗೆ ಯಾವ ಸೂತಕವೂ ಇಲ್ಲ. ಶಿವನಿಗೆ, ಶಿವಾರ್ಚನೆಗೆ, ಇಷ್ಟಲಿಂಗ ಪೂಜೆಗೆ ಮಾತ್ರ ಸೂತಕವಿಲ್ಲ ದೋಷವಿಲ್ಲ. **"ಲಿಂಗ ಸಂಗಿಗೆ ಅಂಗ ಸಂಗವಿಲ್ಲ"** ಬಾಹ್ಯಾಭ್ಯಂತರಗಳಲ್ಲೂ ಪರಮ ಪರತರ ಲಿಂಗದ ಸಂಪರ್ಕ, ಅರಿವು, ಅನುಭವ, ಸತತ ಅನುಸಂಧಾನ ಮಾಡುವವರು ಸದಾ ಶುಚಿರ್ಭೂತರು. **"ಲಿಂಗಧಾರಿ ಸದಾ ಶುಚಿಃ"** ಬೌದ್ಧಿಕ ಹಾಗೂ ಮಾನಸಿಕವಾಗಿ ಲಿಂಗಾಂಗಿ ಇಷ್ಟಲಿಂಗ ಪೂಜಾ ಪ್ರಭಾವದಿಂದ ಶುಚಿರ್ಭೂತನಿರುವನು. ಭೌತಿಕ ಧರ್ಮ ಬೇರೆ ಆಧ್ಯಾತ್ಮಿಕ ಧರ್ಮ ಬೇರೆ.

ಲಿಂಗಾಂಗಿ ಸ್ತ್ರೀ ರಜಸ್ವಲೆ ಅಥವಾ ಬಹಿಷ್ಠೆಯಾದರೆ, ನಾಲ್ಕೈದು ದಿನಗಳು ಆಕೆ ದೈಹಿಕವಾಗಿ ಅಸ್ಪೃಶ್ಯರಿರುವಳು. ಹೀಗಿದ್ದರೂ ಆಧ್ಯಾತ್ಮಿಕವಾಗಿ ಆಕೆಯು ಇಷ್ಟಲಿಂಗಾರಾಧನೆ ನಿರಂತರ ಅವ್ಯಾಹತವಾಗಿ ನೆರವೇರ ಬೇಕಾಗಿರುವುದರಿಂದ, ಸ್ತ್ರೀ ಈ ನಿರ್ಬಂಧದ ಕಾಲದಲ್ಲಿ ದ್ವಿಸಂಧ್ಯಾ ಕಾಲಗಳಲ್ಲಿ ಸ್ನಾನಮಾಡಿ ಮಡಿಯುಟ್ಟು, ತಕ್ಷಣ ಇಷ್ಟ ಲಿಂಗಪೂಜೆಯನ್ನು ಪ್ರತ್ಯೇಕ ಸ್ಥಳದಲ್ಲಿ ಕುಳಿತು ಸಂಕ್ಷಿಪ್ತವಾಗಿ ನೆರವೇರಿಸ ಬೇಕು. ಶಿವಪೂಜೆಯಿಂದ ಸಕಲ ಅನಿಷ್ಠಗಳೂ ದೋಷಗಳೂ ಪರಿಹಾರವಾಗುವುದರಿಂದ, ಲಿಂಗ ಪೂಜೆಗೆ ಮಾತ್ರ ಯಾವ ದೋಷ ಕಿಂಚಿತ್ತೂ ಇರುವುದಿಲ್ಲ.

**ಇಷ್ಟಲಿಂಗ ಮಿದಂ ಸಾಕ್ಷಾತ್ | ಅನಿಷ್ಠ ಪರಿಹಾರಕಂ ॥**

ಆದರೆ ದೈಹಿಕ ಧರ್ಮ, ವರ್ತನೆ, ಚರ್ಯೆಗಳೇ ಬೇರೆ. ಬಹಿಷ್ಠೆಯಾದ ನಾಲ್ಕೈದು ದಿವಸಗಳು ದೈಹಿಕವಾಗಿ ಆಶುದ್ಧಳಿರುವಳು. ಈ ಕಾಲದಲ್ಲಿ ಆಕೆ ಪಂದೆಡೆ ಪ್ರತ್ಯೇಕವಾಗಿಯೇ ಇರಬೇಕು. ಯಾವ ಪಾಕಾದಿಗಳನ್ನೂ ಮಾಡ ಬಾರದು, ಯಾರಿಗೂ ಬಡಿಸ ಬಾರದು. ಒಂದು ಚಾಪೆ ಅಥವಾ ಗೋಣಿ ಚೀಲ ಹಾಸಿ ದೂರ ಏಕಾಂಗಿಯಾಗಿ ಮಲಗಬೇಕು. ಅಡಿಗೆ ಮನೆ ದೇವರ ಪೂಜಾಗೃಹ

ದೊಳಗೆ ಪ್ರವೇಶಿಸ ಬಾರದು, ಇತರರನ್ನು ಮುಟ್ಟಲೂ ಬಾರದು. ಈಕೆಯ ಸ್ಪರ್ಷದೋಷ ಅನಾರೋಗ್ಯಕ್ಕೆ ಕಾರಣ. ಒಂದೇ ಹಾಸಿಗೆಯಲ್ಲಿ ಆಗ ಮಲಗಿದರೆ ಆಪತ್ತು ವಿಪತ್ತುಗಳಿಗೆ ಎಡೆಮಾಡಿ ಕೊಟ್ಟಂತಾಗುವುದು. ದೇಹ ಆತ್ಮವಲ್ಲ ವಷ್ಟೆ. ಆತ್ಮ ಪರಮಾತ್ಮ ಧರ್ಮ. ಅನಾತ್ಮಕ್ಕೆ ಸರ್ವದಾ ಅನ್ವಯಿಸುವುದಿಲ್ಲ. ಆದ್ದರಿಂದ ಋತುಕಾಲಗಳಲ್ಲಿ ಸ್ತ್ರೀದೂರವಿರ ಬೇಕು. ಶಿವಪೂಜೆಗೆ ಮಾತ್ರ ದೋಷವಿಲ್ಲದ್ದರಿಂದ, ಪ್ರತ್ಯೇಕವಿದ್ದು ಮಡಿಕಾಲದಲ್ಲಿ ತಕ್ಷಣ ಲಿಂಗ ಪೂಜೆ ಯನ್ನು ಲಘುವಾಗಿ ಪೂರೈಸಿ ಕೊಳ್ಳ ಬೇಕು. ತಡವಾದರೆ ದೇಹ ಅಶುಚಿಯಾ ಗುತ್ತೆ. ಊಟದ ತಟ್ಟೆ ಲೋಟ ಪ್ರತ್ಯೇಕವಿರ ಬೇಕು. ಇದು ಶಿವನ ಶಾಸನ ಲಘುವಾಗಿ ಭಾವಿಸಬಾರದು. ಈ ಕಾಲದಲ್ಲಿ ಕೂಡಿ ವ್ಯವಹರಿಸಿದರೆ, ರೋಗಾದಿ ಗಳಿಗೆ ಮನೋವ್ಯಾಕುಲಾದಿಗಳಿಗೆ ಎಡೆ ಮಾಡಿ ಕೊಟ್ಟಂತಾಗಿ ಶಿವನ ಆಜ್ಞೆ ಯನ್ನು ಮೀರಿದಂತಾಗುವುದು.

**ಅಕರ ಸ್ಪರ್ಶ ಯೋಗ್ಯಾಪಿ | ಯಥಾ ಜಿಹ್ವಾ ಮಹೇಶ್ವರಿ |**
**ಮಂತ್ರೋಚ್ಚಾರಣ ಮಾತ್ರಸ್ಯ | ಪೂತಾ ಭವತಿ ಮಹೀತಿಲೇ ||**
**ತಥಾ ಸೂತಕಿನಃ ಶೈವಾಃ | ಪೂಜಾಮಾತ್ರ ಸುನಿರ್ಮಲಾಃ |**
**ಸ್ಯೂರಿತಿ ವೇಧಾನು ಶಾಸನಂ ||**

ಏನೆಂದರೆ, ಶಿವಪೂಜಾ ವೇಳೆ ನಾಲಗೆಯನ್ನು ಮುಟ್ಟಿದರೆ ಎಂಜಲಾ ಯಿತು ಪುನಃಸ್ನಾನದಿಂದ ಶುಚಿರ್ಭೂತನಾಗ ಬೇಕು. ಇದು ಆಚಾರದ ವಿಧಿ ಮೀರಲಾಗದು.

ಆದರೆ ಪೂಜಾ ವೇಳೆಯಲ್ಲಿ ಅದೇ ನಾಲಗೆಯಿಂದ ವೇದ ಮಂತ್ರಗಳನ್ನು ಉಚ್ಚರಿಸಿದಾಗ ಮಂತ್ರ ಎಂಜಲಾಗುವುದಿಲ್ಲ. ಇರದಂತೆ ಸ್ತ್ರೀ ಬಹಿಷ್ಠೆ ಅಥವಾ ರಜಸ್ವಲೆಯಾದಾಗ ತನ್ನ ನಿತ್ಯ ಕರ್ಮವಾದ ಇಷ್ಟಲಿಂಗ ಪೂಜೆಗೆ ಮಾತ್ರ ಅರ್ಹಳಿರುವಳು. ಶಿವಪೂಜೆಗೆ ಯಾವ ಸೂತಕವೂ ದೋಷವೂ ಇಲ್ಲ. ಇತರ ದೈಹಿಕ ವ್ಯವಹಾರಗಳಿಂದ ದೂರವಿರಬೇಕೆಂದು ಶ್ರೀ ರೇಣುಕರ ಆದೇಶವಿರುತ್ತೆ. ಶ್ರೀ ಮಹಾಗುರುವಿನಾಜ್ಞೆ ಶಿವನ ಆಜ್ಞೆ ಯಾರೂ ಮೀರ ಬಾರದು. ಈ ಕಾರ ಣಗಳಿಂದ ಸಮಸ್ತ ಲಿಂಗಾಂಗಿ ವೀರಶೈವರು ಇದನ್ನು ಸರಿಯಾಗಿ ಅರ್ಥ ಮಾಡಿ ಕೊಂಡು ಆಚರಿಸಿದರೆ, ಆಯುರಾರೋಗ್ಯಾದಿ ಸಕಲ ಸಂಪತ್ತುಗಳ ನಿರಂತರ ಅಭ್ಯುದಯಂಗಳ ಮನಗಾಣ ಬಹುದು. ಸುಖಂ ಶಾಂತಂ ಶಿವಂ ಶಾಂತಂ.

ಬ್ರಹ್ಮಚರ್ಯಾದಿ ಚತುರಾಶ್ರಮಗಳಲ್ಲಿ ಗೃಹಸ್ಥಾಶ್ರಮ ಅತ್ಯಂತ ಪಾವನವೂ ಫಲ ಪ್ರದವೂ ಹೌದು. ಸತಿಪತಿಗಳೊಂದಾಗಿ ಎಸಗುವ, ಯಜ್ಞದಾನ ತಪಸ್ಸು ಪೂಜಾದಿಗಳ ಫಲ ಬಹು ಶ್ರೇಯಸ್ಕರವಿರುತ್ತೆ. ಆ ಸದನ ಆನಂದ ಮಯವಾಗಿರುತ್ತೆ.

**ಸಾನಂದಂ ಸದನಂ । ಸುತಾಶ್ಚ ಸುಧೀಯಃ । ಕಾಂತಾ ನ ದುರ್ಭಾಷಿಣೀಂ । ಸನ್ಮಿತ್ರಂ ಸಧನಂ । ಸ್ವಯೋ ಶಿತಿರತಿಶ್ಚಾಜ್ಞಾಪರಃ ಸೇವಕಾಃ। ಅಥಿತ್ಯಂ ಶಿವಪೂಜನಂ ಪ್ರತಿ ದಿನಂ ಇಷ್ಟಾನ್ನ। ಪಾನಂ ಗೃಹೇ । ಸಾಧೋಸ್ಸಂಘ ಮುಪಾಸತೇ ಹಿ ಸತತಂ । ಧನ್ಯೋ ಗೃಹಸ್ಥ್ಯಾಶ್ರಮಃ ।**

ಸದ್ಗೃಹಸ್ಥನು ಇತ್ತ ಬ್ರಹ್ಮಚಾರಿಗಳನ್ನೂ ಅತ್ತ ಸನ್ಯಾಸಿ ಸಾಧು ಸಂಘರನ್ನೂ ಯಥಾಶಕ್ತಿ ಆದರಿಸಿ ಉಪಚರಿಸುವನು. ಅನ್ನಪಾನಾದಿಗಳಿಂದ ಅಥಿತಿ ಸತ್ಕಾರ ಮಾಡಿ ಪುಣ್ಯಾರ್ಜನಾದಿಗಳಿಗೆ ಗೃಹಸ್ಥ್ಯಾಶ್ರಮ ಪ್ರಮುಖ ವೆನಿಸಿರುವುದು.

**ನಾನ್ನ ತೋಯ ಸಮಂ ದಾನಂ । ನ ಚಾಹಿಂ ಸಾ ಪರಂ ತಪಃ॥**
**ತಸ್ಮಾನ್ಮಾಹೇಶ್ವರೋ ನಿತ್ಯ ಮನ್ನ ತೋಯಪ್ರದೋ ಭವೇತ್॥**

(ಅ. ೯ ಶ್ಲೋ. ೪೮)

ಅಂದರೆ, ಅನ್ನದಾನಕ್ಕೆ ಸಮಾನವಾದ ಮತ್ತೊಂದು ದಾನವಿಲ್ಲ. ನೀರು ದಾನಕ್ಕೆ ಸರಿ ಸಮಾನ ಬೇರೆ ದಾನವಿಲ್ಲ. ಅಹಿಂಸೆಗೆ ಮಿಗುಲಾದ ತಪವಿಲ್ಲ. **"ಅಹಿಂಸಾ ಪರಮೋಧರ್ಮ"** ಎಂದಿವೆ ವೇದ. ವಿಶ್ವಧರ್ಮದ ದಶಮುಖಗಳಲ್ಲಿ ಪ್ರಪ್ರಥಮ ಮುಖ ಅಹಿಂಸೆ ಎನಿಸಿದೆ. ನಂತರ ಸತ್ಯ, ಬ್ರಹ್ಮಚರ್ಯ ಎಂಬುವುಗಳು ಶೋಭಿತವಾಗಿವೆ. **"ಪರೋಪಕಾರಾರ್ಥ ಮಿದಂ ಶರೀರಂ"** ಎಂಬಂತೆ, ಧಾರ್ಮಿಕ ವ್ಯಾಪ್ತಿಗೆ ಒಳಪಟ್ಟ ರೀತಿಯಲ್ಲಿ, ಯಥಾ ಶಕ್ತಿ ಪ್ರತಿಯೊಬ್ಬೊಬ್ಬರೂ ದಿನವಹಿ ಯತ್ಕಿಂಚಿತ್ತಾದರೂ, ಹಸಿದ ಪ್ರಾಣಿಗೆ ಅನ್ನವನ್ನೂ ಬಾಯಾರಿಕೆಗೆ ನೀರನ್ನಾದರೂ ಕೊಟ್ಟು ಈಶ್ವರ ಸೇವೆಯನ್ನು ಆದರದಿಂದ

ಮಾಡಿ ಅವರನ್ನು ತೃಪ್ತಿಪಡಿಸಿ ತಾವೂ "ತೃಪ್ತೋಭವ" ಸಂತೃಪ್ತರಾಗ ಬೇಕು. ಯಾಕೆಂದರೆ,

**॥ ನಹಿ ನಹಿ ದಾನಂ । ಅನ್ನ ದಾನ ಸಮಾನಂ ॥ ಕೈಲಾಸಾಚಲ ಕಂದರಾಲಯಕರೀ । ಗೌರೀ ಶಿವಾಶಂಕರೀ । ಕೌಮಾರೀ ನಿಗಮಾರ್ಥ ಗೋಚರಕರೀ । ಓಂಕಾರ ಬೀಜಾಕ್ಷರೀ ॥ ಮೋಕ್ಷದ್ವಾರ ಕವಾಟ ಪಾಟನ ಕರೀ । ಕಾಶೀಪುರಾಧೀಶ್ವರೀ । ಭಿಕ್ಷಾಂ ದೇಹಿ ಕೃಪಾವಲಂಬನ ಕರೀ । ಮಾತಾನ್ನ ಪೂರ್ಣೇಶ್ವರೀ ॥ ಅನ್ನಂ ಬ್ರಹ್ಮೇತಿ ವ್ಯಜಾನಾತ್ ॥**

ಎಂದಿದೆ ವೇದ. ಆದ್ದರಿಂದ ಅನ್ನ ನೀರುಗಳ ದಾಸೋಹ, ಹಸಿದು ಬಂದ ವರಿಗೆ ನಾಸ್ತಿಯೆಂಬದೆ ನೀಡುವುದು ಪ್ರಥಮ ಧರ್ಮವಿರುತ್ತೆ.

**ಶಿವಯೋಗಿನಿ ಯದ್ದತ್ತಂ । ತದಕ್ಷಯ ಫಲಂ ಭವೇತ್ ॥**
**ಶಿವಯೋಗಿ ಭಿಕ್ಷಮಾತ್ರೇಣ । ಕೋಟಿ ಲಿಂಗಾರ್ಚನ ಫಲಂ ಭವೇತ್ ॥**

**ಪೌಂಡರೀ ಕೇ ರಜಃ ಸ್ತ್ರೀಣಾಂ । ಸ್ವಾಗ್ನಿ ಹೋತ್ರೇಯಥಾ ತಥಾ ॥**

ಅಂದರೆ ಬ್ರಾಹ್ಮಣರಲ್ಲಿ ಪೌಂಡರೀಕಾದಿ ಸುದೀರ್ಘ ಕಾಲದ ಯಜ್ಞ ಯಾಗಾದಿಗಳಲ್ಲೂ ಜ್ಯೋತಿಷ್ಟೋಮಾದಿ ಹೋತ್ರ ಕರ್ಮಗಳ ಅನುಷ್ಠಾನ ಕಾಲಗಳಲ್ಲೂ ಪತ್ನಿ ಸಮೇತ, ಸತಿಪತಿಗಳೊಂದಾಗಿ ಆಚರಿಸುವಾಗ, ಬ್ರಾಹ್ಮಣ ಸ್ತ್ರೀರಜಸ್ವಲೆಯಾದರೆ, ತಕ್ಷಣ ಋತು ಸ್ನಾನ ಮಾಡಿ ಮಡಿಯುಟ್ಟು, ಶಿವಧ್ಯಾನ ಮಾಡುತ್ತಾ, ಯಜ್ಞಕಾರ್ಯಕ್ಕೆ ಭಂಗವುಂಟಾಗದಂತೆ ಆ ವ್ರತವನ್ನು ಅವರು ನೆರವೇರಿಸುವಂತೆ, ಭಗವದ್ಭಕ್ತಿಗೆ ಪೂಜಾದಿಗಳಿಗೆ ಮಾತ್ರ ಯಾವ ಸೂತಕವೂ ಇಲ್ಲದಿರುವುದರಿಂದ, ಆ ವ್ರತವನ್ನು ಬಿಡದೇಆಚರಿಸುತ್ತಾರೆ. ಅದರಂತೆ ಲಿಂಗಾಂಗಿ ಸ್ತ್ರೀ ಋತುಕಾಲದಲ್ಲೂ ತನ್ನ ಲಿಂಗಪೂಜೆಯನ್ನು ಬಿಡದೆ ಮಾಡಬೇಕು. ಪರಂತು ಆ ಕಾಲದಲ್ಲಿ ಪಾಕಾದಿಗಳನ್ನು ಮಾಡಲೂ, ಬಡಿಸಲೂ ಅನರ್ಹಳಿರು ವಳು. ಬಳಸದಿರದ್ವೈತವನು ಬಾಹ್ಯದಲಿ, ಎಂಬ ಶ್ರೀ ನಿಜಗುಣ ಶಿವಯೋಗಿಗಳ ಅಮೃತವಾಣಿ ಸ್ಮರಣೀಯ.

ಯಂ ವೀರಶೈವ ನಿಕರೋ ಗುರು ಮಿತ್ಯವೈತಿ । ಯಂ ಲಿಂಗ ರೂಪ ಮಿತಿ ವೇದ ವಿದೋ ವದಂತಿ । ಯಂ ಜಂಗಮಾರ್ಯ ಮಿತಿ ಶಾಸ್ತ್ರ ಗಿರೋ ಗಿರಂತಿ । ತಂ ದಾರುಕೇಶ್ವರ ಗುರುಂ ಶರಣಂ ಪ್ರಪದ್ಯೇ ॥

ಸುದಕ್ಷ ದಕ್ಷ ಶಿಕ್ಷಕಂ ಸಮಸ್ತ ಲೋಕ ರಕ್ಷಕಂ ।
ಗಿರೀಂದ್ರ ಮೇರು ಕಾರ್ಮುಖಂ ಕರೀಂದ್ರ ಚರ್ಮ ವರ್ಮಕಂ ।
ಪುರಾಂತಕಂ ಸ್ಮರಾಂತಕಂ ಭವಾಂತಕಂ । ಸವಾಂತಕಂ ಗಜಾಂಧ
ಕಾಂತ ಕಾಂತಕಂ । ಭಜೇಜಲಂಧರಾಂತಕಂ ॥

## ಅಂಗಸ್ಥಲ ೧೦. ॥ ಉಭಯ ಸ್ಥಲಂ ॥

ಏವ ಮಾಚಾರ ಸಂಯುಕ್ತೋ । ವೀರಶೈವೋ ಮಹಾವ್ರತೀ ।
ಪೂಜಯೇತ್ಪರಯಾ ಭಕ್ತ್ಯಾ । ಗುರುಂಲಿಂಗಂ ಚ ಸಂತತಂ ॥

ಗುರೋರಭ್ಯರ್ಚನೇ ನಾಪಿ । ಸಾಕ್ಷಾದಭ್ಯರ್ಚಿತಃ । ಶಿವಃ ॥
ನಾಸ್ತಿ ಭೇದಸ್ತಯೋಃ ಕಶ್ಚಿದೇಕತ್ವಾತ್ತತ್ವ ರೂಪಃ ॥

ಯಥಾ ದೇವೇ ಜಗನ್ನಾಥೇ । ಸರ್ವಾನುಗ್ರಹ ಕಾರಕೇ ।
ತಥಾ ಗುರುವರೇ ಕುರ್ಯಾದುಪಚಾರಾನ್ ದಿನೇ ದಿನೇ ॥

ಸಂಧ್ಯಾಕಾಲಗಳಲ್ಲಿ ವೀರಶೈವ ವ್ರತಧಾರಿ ಇಷ್ಟಲಿಂಗ ಪೂಜೆ ಶ್ರೀ ಗುರುಪಾದ ಪೂಜಾರಾಧನೆಗಳನ್ನು ಭಕ್ತಿಭಾವದಿಂದ ಅನವರತ ಮಾಡುತ್ತಿರ ಬೇಕು. ಗುರು ಸ್ಥಲ, ಲಿಂಗಸ್ಥಲವೆಂಬ ಉಭಯ ಸ್ಥಲಗಳು ನಿತ್ಯಾರಾಧನೆಯಿಂದ, ಮಾನವನ ಉದ್ಧಾರಕ್ಕೆ, ಉನ್ನತಿಗೆ ಉಪಾಸನೆಗೆ ಹಾಗೂ ಉತ್ತರೋತ್ತರ ಶ್ರೀ ಉಮಾ ಮಹೇಶ್ವರರ ದಿವ್ಯ ಕೃಪಾನುಗ್ರಹಕ್ಕೆ ಪಾತ್ರನನ್ನಾಗಿ ಮಾಡುವವು. ಈ ಉಭಯ ಸ್ಥಲಗಳು ರಾಜ ವಿದ್ಯಾ ರಾಜ ಗುಹ್ಯ ವೆನಿಸಿವೆ.

**ಶ್ರೀ ಮದ್ಭಗವದ್ಗೀತೆಯಲ್ಲಿ, ಲೋಕೇಸ್ಮಿನ್ ದ್ವಿವಿಧಾನಿಷ್ಠಾ | ಪುರಾಪ್ರೋಕ್ತಾಮಯಾನಘ | ಜ್ಞಾನ ಯೋಗೇನ ಸಾಂಖ್ಯಾನಾಂ | ಕರ್ಮ ಯೋಗೇನ ಯೋಗಿನಾಂ || ನ ಕರ್ಮಣಾಮನಾರಂಭಾ | ನೈಷ್ಕರ್ಮ್ಯಂ | ಪುರುಷೋಶ್ನು ತೇ ||**
**ನ ಚ ಸನ್ಯಸನಾದೇವಾ ಸಿದ್ಧಿಂ ಸಮಧಿಗಚ್ಛತಿ ||**

ಹೇ ಅರ್ಜುನ ! ಮಾನವ ಕರ್ತವ್ಯ ಶೀಲನಾಗಿ ಅಭ್ಯುದಯಮತ್ತ ಸಾಗಬೇಕಾದರೆ ಶ್ರೇಷ್ಠವಾದ ಎರಡು ಮಾರ್ಗಗಳಿವೆ. ಸಾಂಖ್ಯ ಸಿದ್ಧಾಂತದ ಜ್ಞಾನ ಮಾರ್ಗ ಮತ್ತು ಯೋಗಿಗಳ ನಿಷ್ಕಾಮ ಕರ್ಮ ಯೋಗ. ಈ ಉಭಯ ಸ್ಥಲಗಳು ವೈಭವ ಪೂರ್ಣ ಕರ್ತವ್ಯ ನಿರ್ವಹಣೆಗೆ ಹಾಗೂ ಆತ್ಮ ಸಾಕ್ಷಾತ್ಕಾರಕ್ಕೆ ಪ್ರಮುಖ ಮಾರ್ಗಗಳೆನಿಸಿವೆ. ಈ ತತ್ವವನ್ನು ನಾನು ಆದಿಯಲ್ಲಿ,

**ಇಮಂ ವಿವಸ್ವತೇಯೋಗಂ ಪ್ರೋಕ್ತವಾನಹ ಮವ್ಯಯಂ |**
**ವಿವಸ್ವಾನ್ ಮನವೇ ಪ್ರಾಹ | ಮನು ರಿಕ್ಷ್ವಾಕವೇ ಬ್ರವೀತ್ ||**
(ಗೀ. ಅ. ೪. ಶ್ಲೋ ೧)

ಮೊದಲು ಈ ತತ್ವವನ್ನು ಸೂರ್ಯನಿಗೂ, ಆದಿತ್ಯನು ತನ್ನ ಮಗ ವೈವಸ್ವತಮನುವಿಗೂ, ಈತ ತನ್ನ ಮಗ ಇಕ್ಷ್ವಾಕುವಿಗೂ ಕ್ರಮವರಿತು ಬೋಧಿಸಿರುವರು ಎಂಬುದಾಗಿ ಶ್ರೀ ಕೃಷ್ಣ ಅರ್ಜುನನಿಗೆ ವಿವರಿಸಿರುವನು. ಈ ಸಂಪ್ರದಾಯವನ್ನನುಸರಿಸಿ ಅರ್ಜುನ, ಈ ಉಭಯ ಮಾರ್ಗಗಳನ್ನು ನಿನಗೆ ಬೋಧಿಸಿರುತ್ತೇನೆಂದನು. ಇದರಂತೆ ಶ್ರೀ ಜ|| ರೇಣುಕಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ ಶಿವನು ಶ್ರೀ ಗಿರಿಜೆಗೆ ಹೃದಯಂಗಮವಾಗಿ ಬೋಧಿಸಿದ ಶಿವಾಗಮೋಕ್ತ ಶಿವಾದ್ವೈತ ಸಿದ್ಧಾಂತದ ಸುಧಾರಸವನ್ನು ಅಗಸ್ತ್ಯಮುನಿ ಪುಂಗವನಿಗೆ, ಸದ್ರೂಪವೇ ಶ್ರೀ ಗುರು ಚಿದ್ರೂಪವೇ ಲಿಂಗ, ಇವು ಉಭಯಸ್ಥಲಗಳೆನಿಸಿವೆ ಎಂದರುಹಿದರು. ಇವು ಪರಶಿವನ ಅವಿನಾಭಾವ ಸಂಬಂಧದಿಂದ ಅದ್ವಿತೀಯ್ಯವೆನಿಸಿವೆ. ಇದರಿಂದಾಗಿ ಗುರುಪೂಜೆಯೇ ಹರಪೂಜೆಯೆಂದರಿಯ ಬೇಕು. ಮಹಾದೇವನೇ ಶ್ರೀ ಗುರುದೇವ, ಗುರುದೇವನೇ ಮಹಾದೇವನಿರುವನು.

**ಯಥಾ ದೇವೇ ಜಗನ್ನಾಥೇ ಸರ್ವಾನು ಗ್ರಹಕಾರಕೇ**

**ತಥಾ ಗುರುವರೇ ಕುರ್ಯಾದು ಪಚಾರಾತ್ ದಿನೇ ದಿನೇ ॥**

ಶಿವನನ್ನು ಅನನ್ಯ ಭಕ್ತಿಭಾವದಿಂದ ಪೂಜಿಸುವಂತೆ ಗುರುವನ್ನೂ ಭಕ್ತಿಯಿಂದ ಪೂಜಿಸ ಬೇಕು.

**ಯಸ್ಯ ದೇವೇ ಪರಾಭಕ್ತಿಯ ಥರ್ಾ ದೇವೇ ತಥಾ ಗುರೌ ॥**

ಎಂದಿದೆ ಶಿವಾಗಮ. "**ಗುರು ಸಾಕ್ಷಾತ್ಪರ ಬ್ರಹ್ಮ**" ಎಂದಿದೆ ವೇದ ಶ್ರೀ ಗುರು ಲಿಂಗಗಳೆಂಬ ಉಭಯ ಸ್ಥಲಗಳ ರಹಸ್ಯಾರ್ಥವನ್ನು ಗಿರಿಜೆಗೆ ಬೋಧಿಸುತ್ತಾ,

**ಪ್ರಥಮಂ ತು ಗುರೋಃಪೂಜಾ । ತಥೈವ ಮಮಾರ್ಚನಂ ॥**

ಶ್ರೀ ಗುರುವಿನ ಪಾದ ಪೂಜೆ ಮೊದಲು ಮಾಡಿ ತದನಂತರ ನನ್ನ ಪೂಜೆ ಮಾಡಬೇಕೆಂದು ಶಿವನು ಸ್ಪಷ್ಟ ಪಡಿಸಿರುವನು.

**ಗುರು ಪೂಜೈವ ಪೂಜಸ್ಯ । ಶಿವಸ್ಯ ಪರಮಾತ್ಮನಃ ॥**

ಶಿವನೇ ಗುರುವಾದ್ದರಿಂದ, ಶ್ರೀ ಗುರುವಿನ ವಿನಃ ಹರನಿಲ್ಲವೆಂದರಿತು ಶ್ರೀ ಗುರು ಪೂಜೆಗೆ ಸರ್ವಲೋಕಂಗಳಲ್ಲೂ ಅಗ್ರ ಪೂಜೆಯೆಂದು ಪ್ರಾಧಾನ್ಯವಾಗಿದೆ.

**ಗುರವೇ ಸರ್ವಲೋಕಾನಾಂ । ಭಿಷಜೆ ಭವ ರೋಗಿಣಾಂ ॥**

ಎಂದಿದೆ ಶೃತಿ.

**ಅಪ್ರತ್ಯಕ್ಷೋ ಮಹಾದೇವಃ । ಸರ್ವೇಷಾಂ ಸ್ವಾತ್ಮಮಾಯಯಾ । ಪ್ರತ್ಯಕ್ಷಂ ಗುರು ರೂಪೇಣಂ । ವರ್ತತೇ ಭಕ್ತಿ ಸಿದ್ದಯೇ ॥**

ಅಪ್ರತ್ಯಕ್ಷನಾದ ಶಿವನು ಭಕ್ತೋದ್ಧಾರಾರ್ಥ ಶ್ರೀ ಗುರು ರೂಪದಲ್ಲಿ ಪ್ರತ್ಯಕ್ಷನಾಗುವನು. ಇದರಿಂದಾಗಿ "**ಶ್ರೀ ಗುರು ಪಾದ ದ್ವಯಮೇ ದೈವಂ**" ಎಂದರಿಯ ಬೇಕು.

**ಗುರುಭಕ್ತಿರ್ವಿಹೀನಸ್ಯ । ಶಿವಭಕ್ತಿರ್ನಜಾಯತೇ ॥**

ಎಂದಿದೆ ಶಿವಾಗಮ. ಈ ರಹಸ್ಯವನ್ನರಿತ ಗುರುಭಕ್ತ ಶಿಖಾಮಣಿ ಭಕ್ತಿ ಭಂಡಾರಿ ಬಸವಣ್ಣ,

ಶಿವ ಪಥವ ನರಿಯಲು । ಗುರು ಪಥವೇ ಮೊದಲು ॥

ಎಂದು ಜಗತ್ತಿಗೆ ಸತ್ಯವನ್ನೇ ಸಾರಿದ್ದಾರೆ.

ಕಲ್ಯಾಣಂ ಕುರುತಾದನಂತ ಫಲದ । ಶ್ರೀದಕ್ಷಿಣಾಸ್ಯೋ
ಗುರುಃ । ವೇದಾಂತ ಪ್ರತಿಪಾದಿತಸ್ವ ಮಹಿಮಾ | ಸೋಮಾ
ರ್ಧ ಚೂಡಾಮಣಿಃ ॥

ಯತ್ಪಾದಾಬ್ಜ ವಿಲೋಕನಾನ್ಮುನಿ ಗಣಾ । ಹ್ಯಜ್ಞಾನ ಹೀನಾಃ ।
ಪುನರ್ವಿಜ್ಞಾನಂ ಪ್ರತಿ ಪದ್ಯ ನಿರ್ಮಮ ತರಾ ಸ್ವಾನಂದ ಮಾ
ಪೇದಿ ರೇ ॥

ಗುರುಚರಣಂ ಭವಹರಣಂ । ಸದ್ಗುರು ಚರಣಂ ಭವ ಹರಣಂ ।
ಶಂಭೋ ! ಸದ್ಗುರು ಚರಣಂ ಭವ ಹರಣಂ ॥

ಶರಣ ಜನರಾಭರಣಂ ಗುರು ಚರಣಂ ॥

ಗುರುಸ್ಥಲ ಲಿಂಗಸ್ಥಲಗಳೆಂಬ ಉಭಯ ಸ್ಥಲಗಳು ಮಾನವನನ್ನು ಮಹಾ ದೇವನನ್ನಾಗಿಸಿ ಬಹು ಎತ್ತರಕ್ಕೆ ಕೊಂಡೊಯ್ಯುವುವು.

## ಅಂಗಸ್ಥಲ ೧೧ ॥ತ್ರಿವಿಧ ಸಂಪತ್ತಿಸ್ಥಲಂ

ಯಥಾ ಗುರೌ ಯಥಾ ಲಿಂಗೇ । ಭಕ್ತಿಮಾನ್ ಪರಿವರ್ತತೇ |
ಜಂಗಮೇಚ ತಥಾ ನಿತ್ಯಂ | ಭಕ್ತಿಂ ಕುರ್ಯಾ ದ್ವಿಚಕ್ಷಣಃ ॥

ಏಕ ಏವ ಶಿವಃ ಸಾಕ್ಷಾತ್ ಸರ್ವಾನು ಗ್ರಹ ಕಾರಕಃ । ಗುರು
ಜಂಗಮ ಲಿಂಗಾತ್ಮಾ । ವರ್ತತೇ ಭಕ್ತಿ ಮುಕ್ತಿದಃ ॥

ಸದಾಕಾಲಂ ವಸತ್ಯೇವ । ಚರಲಿಂಗೇ ಮಹೇಶ್ವರಃ ।
ಶಿವಯೋಗಿನಿ ಯದ್ದತ್ತಂ । ತದಕ್ಷಯ ಫಲಂ ಭವೇತ್ ॥

**ತಸ್ಮಾತ್ಸರ್ವ ಪ್ರಯತ್ನೇನ । ತಸ್ಮೈ ದೇಯಂ ಮಹಾತ್ಮನೇ ।**

**ಯತ್ಫಲಂ ಲಭ್ಯತೇ ಜಂತುಃ ಪೂಜಯಾ ಶಿವಯೋಗಿನಃ ॥**

(ಶ್ಲೋ. ೫೮, ೫೯, ೬೨, ೬೩.)

ಕರುಣಾಭರಣನಾದ ಪರಶಿವನು ಜಗದೋದ್ಧಾರಾರ್ಥ ಶ್ರೀ ಗುರು ಲಿಂಗ ಜಂಗಮ ರೂಪದಲ್ಲಿ ಭುವಿಯಲ್ಲಿ ಅವತರಿಸುವರೆಂದರಿತು, ಅವಧಾನ ಭಕ್ತಿಯಿಂದ ತ್ರಿಕರಣ ಪೂರ್ವಕ ಅರ್ಚಿಸಿ ಆರಾಧಿಸಿದರೆ ಅದುವೇ ತ್ರಿವಿಧ ಸಂಪತ್ತೆನಿಸುವುದು. ವ್ಯವಹಾರಿಕದಲ್ಲಿ ತನು ಮನ ಧನಂಗಳು ತ್ರಿವಿಧ ಸಂಪತ್ತೆನಿಸಿವೆ. ತನುವನ್ನು ಶ್ರೀ ಗುರುವಿಗೂ ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಈಶ್ವರಾರ್ಪಿತ ಮನೋಭಾವದಿಂದ ಅರ್ಪಿಸುವುದು ಅತ್ಯಂತ ಪ್ರಮುಖ ಸೇವೆಯೆನಿಸಿದೆ. ಒಬ್ಬನೇ ಆದ ಶಿವನು ಲೋಕಾನುಗ್ರಹಾರ್ಥ ಗುರುಲಿಂಗ ಜಂಗಮ ರೂಪದಲ್ಲಿ ಆವಿರ್ಭವಿಸುವನು. ಲಿಂಗ, ಜಡ ಅಜಡವೆಂತಲೂ, ಚರ ಅಚರವೆಂತಲೂ ಎರಡು ಪ್ರಕಾರವಾಗಿ ಶೋಭಿಸುತ್ತಲಿದೆ. ಅಜಡ ಅಥವಾ ಚರಲಿಂಗ ಜಂಗಮ ರೂಪವೆನಿಸಿದೆ. ಗುರು ಜಂಗಮ ತತ್ವ ಅಭಿನ್ನವಾದುದು ಹಾಗೂ ಪರಮೋತ್ಕೃಷ್ಟವೆನಿಸಿದೆ. ದೇವಾಲಯಗಳಲ್ಲಿ ಸ್ಥಾಪಿಸಿರುವ ಲಿಂಗ ಜಡ ಅಥವಾ ಅಚರಲಿಂಗವೆನಿಸಿದೆ. ಜಡ ಲಿಂಗಾರಾಧನೆಗಿಂತ ಅಜಡ ಲಿಂಗಾರಾಧನೆ ಫಲಪ್ರದವೆನಿಸಿದೆ. ಇದರಿಂದಾಗಿ ಶ್ರೀ ರೇಣುಕ ಗುರುವರ್ಯರು,

**ಶಿವಯೋಗಿನಿ ಯದ್ದತ್ತಂ । ತದಕ್ಷಯ ಫಲಂ ಭವೇತ್॥**

ಎಂದು ಪ್ರಶಂಸಿಸಿರುವರು. ಇದು ಗಮನಾರ್ಹವಿರುತ್ತೆ.

**ಶಿವಯೋಗಿ ಭಿಕ್ಷಮಾತ್ರೇಣ । ಕೋಟಿ ಲಿಂಗಾರ್ಚನ ಫಲಂ ಭವೇತ್ ॥** ಎಂದಿದೆ ಶಿವಾಗಮ.

## ಅಂಗ ಸ್ಥಲ ೧೨ ಚತುರ್ವಿಧ ಸಾರಾಯ ಅಥವಾ ಸ್ವೀಕಾರ ಸ್ಥಲಂ

**ಸರ್ವಮಂಗಲ ಮಾಂಗಲ್ಯಂ । ಸರ್ವ ಪಾವನ ಪಾವನಂ ।**

**ಸರ್ವ ಸಿದ್ಧಿಕರಂ ಪುಂಸಾಂ । ಶಂಭೋಃ ಪಾದಾಂಬು ಧಾರಣಂ॥**

**ಶಿರಸಾದ್ಧಾರಯೇ ದ್ಯಸ್ತು । ಪತ್ರಂ ಪುಷ್ಪಂ ಶಿವಾರ್ಪಿತಂ ।**
**ಪ್ರತಿಕ್ಷಣಂ ಭವೇತ್ತಸ್ಯ । ಪೌಂಡರೀಕ ಕ್ರಿಯಾಫಲಂ ॥**
**ಶಿವಲಿಂಗ ಪ್ರಸಾದಸ್ಯ । ಸ್ವೀಕಾರಾದ್ಯತ್ಫಲಂ ಭವೇತ್ ।**
**ತಥಾ ಪ್ರಸಾದ ಸ್ವೀಕಾರಾದ್ಗುರು । ಜಂಗಮ ಯೋರಪಿ ॥**
(ಶ್ಲೋ. ೬೮, ೬೯, ೭೭).

**ಅಖಿಲ ಮಂಗಳಗಳಿಗೆ, ಮಂಗಳಂ ಮಂಗಳಾನಾಂ ।** ಎಂಬಂತೆ,

ಜಗನ್ ಮಂಗಳಾತ್ಮಕನಾದ ಪರಶಿವನು,

**ಚಿಂತಾಮಣಿಃ ಪ್ರಪನ್ನಾನಾಂ । ಶ್ರೀ ಕಂಠಃ ಪರಮೇಶ್ವರಃ ॥**

ಎಂದು ಸ್ತುತ್ಯನಿರುವನು. ಶರಣಾಗತ ರಕ್ಷಕನಾದ ಶ್ರೀ ನೀಲಕಂಠನ ಪಾದೋದಕ ಪ್ರಸಾದಗಳನ್ನು ಅನನ್ಯ ಭಕ್ತಿಭಾವದಿಂದ ಶಿರದಲ್ಲಿ ಧರಿಸಿ, ಸೇವಿಸಿ ಸ್ವೀಕರಿಸಿ ಪುಳುಕಾಂಕಿತನಾಗಿ, ಆನಂದ ಭಾಷ್ಪಗಳನ್ನು ಸುರಿಸಿದಾಗ ಬಹು ಜನ್ಮಕೃತ ಘೋರಪಾತಕ ರಾಶಿಗಳು ಸಂಪೂರ್ಣವಾಗಿ ನಶಿಸುವುವು. ಭಕ್ತನ ವೊಂದೊಂದು ಆನಂದಭಾಷ್ಪಾಂಜಲಿಯ ಹನಿಯಲ್ಲಿ ಶ್ರೀಕೈಲಾಸ, ಶ್ರೀವೈಕುಂಠ ಬ್ರಹ್ಮಲೋಕಂಗಳ ಪ್ರತಿಬಿಂಬ ಪ್ರತಿಫಲಿಸುತ್ತಲಿವೆಯೋ ಎಂಬಂತೆ ಭಾಸವಾಗುವುದು. ಒಂದು ಹನಿ ಶ್ರೀ ಗುರು ಪಾದೋದಕ ಶಿರದ ಮೇಲೆ ಸಂಪ್ರೋಕ್ಷಿಸಿದರೆ ಪವಿತ್ರಾತ್ಮರಾಗುವೆವು. ಗುರುಲಿಂಗ ಜಂಗಮರ ಪಾದೋದಕ ಪ್ರಸಾದ ಸೇವನೆಯಿಂದ, ಧೀರ್ಘಾಯುರಾರೋಗ್ಯಾದಿ ಸಕಲ ಸಂಪದಭ್ಯುದಯಾದಿಗಳು ವೃದ್ಧಿಸಿ ಸಂವರ್ಧಿಸುವುವು. ಶ್ರೀ ಕಾಶಿ ವಿಶ್ವನಾಥನನ್ನು ಬಳಸಿ ಪ್ರವಹಿಸುವ ಗಂಗಾತೀರ್ಥದ ಹನಿಗಿಂತಲೂ ಅತ್ಯಧಿಕವೆನಿಸಿದ ಶ್ರೀ ಗುರು ಪಾದೋದಕವನ್ನು ಭಕ್ತ್ಯಾ ಸ್ವೀಕರಿಸಿ, ಶಿರದಲ್ಲಿ ಧರಿಸಿದರೆ ನೂರು ಅಶ್ವಮೇದಯಾಗವನ್ನು ವಿಧಿವತ್ತಾಗಿ ಆಚರಿಸಿದಾಗ ಉಂಟಾಗುವ ಫಲ ಪ್ರಾಪ್ತಿಯಾಗುವುದು.

**ಗುರು ಪಾದೋದಕಂ ಗಂಗಾ । ನಾತ್ರ ಕಾರ್ಯಂ ವಿಚಾರಣಾ ॥**

ಎಂಬುದಾಗಿ ವೀರಾಗಮ ಉಗ್ಗಡಿಸಿದೆ.

**ಅವಿದ್ಯಾ ಮೂಲನಾಶಾಯ । ಜನ್ಮ ಕರ್ಮ ನಿವೃತ್ತಯೇ ।**
**ಜ್ಞಾನ ವೈರಾಗ್ಯ ಸಿದ್ಧ್ಯರ್ಥಂ । ಶ್ರೀ ಗುರು ಪಾದೋದಕಂ ಪಿಬ ॥**

(ಶ್ರೀ ಸಿದ್ಧಾಂತ ಶೇಖರ) ಶ್ರೀ ಗುರು ಪಾದೋದಕದ ಮಹಿಮೆ ಅದೆಷ್ಟು ವರ್ಣಿಸಿದರು ಕಡಿಮೆಯೇ.

**ಶೋಷಣಂ ಪಾಪ ಪಂಕಸ್ಯ । ದೀಪನಂ ಜ್ಞಾನ ತೇಜಸಾ ।**
**ಶ್ರೀ ಗುರು ಪಾದೋಕಂ ಚಿತ್ರಂ । ಸಂಸಾರ ಧೃಮನಾಶನಂ ॥**

(ಶಿವ ರಹಸ್ಯ) ಇದರಿಂದಾಗಿ ಮಹೋನ್ನತವಾದ ಗುರುಪಾದೋದಕ ಪೌಂಡರೀಕ ಯಜ್ಞದ ಫಲಕ್ಕಿಂತಲೂ ನೂರ್ಮಡಿ ವೃದ್ಧಿಸುತ್ತಾ ಕ್ಷಣ ಕ್ಷಣಕ್ಕೂ ಸಂವರ್ಧಿಸುವುದೆಂದು ಶಿವಾಗಮೋಕ್ತಿ ಇರುತ್ತೆ. ಗುರು ಪ್ರಸಾದವಾದರೋ,

**ಪ್ರಸಾದಾ ದೇವ ಸಾ ಭಕ್ತಿಃ ॥ ಪ್ರಸಾದೋ ಭಕ್ತಿ ಸಂಭವಃ ॥**
**ಪ್ರಸಾದ ಪೂರ್ವಿಕಾ ಏಷಂ । ಭಕ್ತಿ ರ್ಮುಕ್ತಿ ರ್ವಿದಾಯಿನೀ ॥**
**ಪ್ರಸಾದೋಽಪಿ ಮಹೇಶಸ್ಯ । ದುರ್ಲಭಃ ಪರಿಕೀರ್ತ್ಯತೇ ॥**
**ಘೋರ ಸಂಸಾರ ಸಂತಾಪ । ನಿವೃತ್ತಯೋ ರ್ನ ಜಾಯತೇ ॥**

ಶಿವ ಪ್ರಸಾದ ಸ್ವೀಕಾರದಿಂದ ಮನೋ ನೈರ್ಮಲ್ಯ, ಶಾಂತಿ ತೃಪ್ತಿಗಳು ಏರ್ಪಡುವುವು. ಸ್ಥಿರಬದ್ಧಿ ಸ್ಪಟಿಕದಂತೆ ಪ್ರಜ್ವಲಿಸುವುದು. ಶ್ರೀ ಗುರು ಪ್ರಸಾದವೇ ಶಿವಪ್ರಸಾದ, **"ಶಿವ ಪ್ರಸಾದವೇ ಗುರು ಪ್ರಸಾದ"** ವೆಂದರಿಯಬೇಕು. ಹರ ಗುರು ಪ್ರಸಾದ ಸುಖದಾಯಕ. ಶ್ರೀ ಗುರು ಪಾದ ತೀರ್ಥ ಚಿದ್ಬಿಂದು, ಚಿತ್ಕಳೆ. ಇವುಗಳ ನಿತ್ಯ ಸೇವನೆಯಿಂದ ಭಕ್ತ ಕ್ರಮೇಣ ಶರಣ ಸ್ಥಲವನ್ನೇರುವನು. ಗುರುಲಿಂಗ ಜಂಗಮ ಪ್ರಸಾದಗಳು ಚತುರ್ವಿಧ ಸಾರಾಯವೆನಿಸಿವೆ. ಅಂಗತ್ರಯಂಗಳನ್ನು ಲಿಂಗತ್ರಯಂಗಳಿಗೆ ಅರ್ಪಿಸಿ ಗುರು ಪ್ರಸಾದವ ಸ್ವೀಕರಿಸುವುದು ಚತುರ್ವಿಧ ಸಾರಾಯವೆನಿಸಿವೆ. ತನುವಿನಲ್ಲಿ ಗುರು ಭಕ್ತಿ, ಮನದಲ್ಲಿ ಲಿಂಗ ಭಕ್ತಿ, ಅರಿವಿನಲ್ಲಿ ಜಂಗಮ ಭಕ್ತಿ, ಪ್ರಾಣದಲ್ಲಿ ಪ್ರಸಾದ ಭಕ್ತಿ ಇವು ನಾಲ್ಕು ಚತುರ್ವಿಧ ಸಾರಾಯವೆನಿಸಿವೆ. ಆದ್ದರಿಂದ,

**ಭುಂಜೀದ ರುದ್ರಭುಕ್ತಾನ್ನಂ । ರುದ್ರ ಪೀತಂ ಜಲಂ ಪಿಬೇತ್ ॥**
ಎಂದೂ **ರುದ್ರಘ್ರಾಂತಂ ಸದಾ ಜಿಘ್ರೇತ್ ॥**

**ರುದ್ರೇಣಾತ್ತಮ ಶ್ನಂತಿ । ರುದ್ರೇಣ ಪೀತಂ ಪಿಬಂತಿ ।**
**ರುದ್ರೇಣಾಘ್ರಾತಂ ಜಿಘ್ರಂತಿ ॥**

ಈ ರೀತಿ ಜಾಬಾಲ ಶೃತಿಯಲ್ಲಿ ಉಕ್ತವಾಗಿದೆ, ಅಂದರೆ ಗಂಧ ರಸಗಳೆ ರಡು ಪ್ರಸಾದವಾಗಿ ಬಂದರೆ ಘ್ರಾಣಜಿಹ್ವೆಗಳು ಶುದ್ಧಿ ಸಿದ್ಧಿಗಳನ್ನು ಪಡೆಯು ತ್ತವೆ. ಶಿವ ಪ್ರಸಾದಕ್ಕಿಂತ ಗುರು ಜಂಗಮರ ಪ್ರಸಾದ ನೂರ್ಮಡಿ ಅಧಿಕವೆನಿ ಸಿದೆ. ಅದ್ದರಿಂದ ಲಿಂಗಾಂಗಿಗಳು ನಿತ್ಯ ಅವಧಾನ ಭಕ್ತಿಯಿಂದ ಗುರು ಲಿಂಗ ಜಂಗಮರ ಪಾದೋದಕ ಪ್ರಸಾದಗಳನ್ನು ಜನ್ಮ ಸಾರ್ಥಕತೆಗೋಸ್ಕರ ಸೇವಿಸು ತ್ತಿರುವುದು ಚತುರ್ವಿಧ ಸಾರಾಯವೆನಿಸಿದೆ.

ರತ್ನೈಃ ಕಲ್ಪಿತ ಮಾಸನಂ ಹಿಮಜಲೈಃ | ಸ್ನಾನಂ ಚ ದಿವ್ಯಾಂ
ಬರಂ । ನಾನಾ ರತ್ನ ವಿಭೂಷಿತಂ ಮೃಗ ಮದಾ ।
ಮೋದಾಂಕಿತಂ ಚಂದನಂ । ಜಾತೀ ಚಂಪಕ ಬಿಲ್ವಪತ್ರ ರಚಿತಂ।
ಪುಷ್ಪಂ ಚ ಧೂಪಂತಥಾ । ದೀಪಂ ದೇವ ದಯಾನಿಧೇ ಪಶು
ಪತೇ | ಹೃತ್ಕಲ್ಪಿತಂ ಗುಹ್ಯ ತಾಂ ॥

ಅಯಿ ನಿಜಹುಂ ಕೃತಿ ಮಾತ್ರ ನಿರಾಕೃತ । ಧೂಮ್ರ ವಿಲೋ
ಚನ ಧೂಲಿಕೃತೇ । ಸಮರ ವಿಶೋಷಿತ ಶೋಣಿತ ಬೀಜ ॥
ಸಮುದ್ಭವ ಶೋಣಿತ ಬೀಜಲತೇ ॥
ಮದಯುತ ಶುಂಭ ನಿಶುಂಭ ಮಹಾ ಹವ । ತರ್ಪಿತ ಭೂತ
ಪಿಶಾಚ ತತೇ । ಜಯ ಜಯ ಹೇ ಮಹಿಷಾಸುರ ಮರ್ಧಿನಿ
ರಮ್ಯ ಕಪರ್ದಿನಿ ಶೈಲಸುತೇ ॥

## ಅಂಗಸ್ಥಲ ೧೩. ॥ ಸೋಪಾಧಿ ದಾನ ಸ್ಥಲಂ ॥

ಶಿವಲಿಂಗೇ ಶಿವಾಚಾರ್ಯೇ । ಶಿವಯೋಗಿನಿ ಭಕ್ತಿ ಮಾನ್ ।
ದಾನಂ ಕುರ್ಯಾ ದ್ಯಥಾ ಶಕ್ತಿ ತತ್ಪ್ರಸಾದಯುತಃ ಸದಾ ॥
ದಾನಂ ತು ತ್ರಿವಿಧಂ ಪ್ರೋಕ್ತಂ । ಸೋಪಾಧಿ ನಿರುಪಾಧಿಕಂ ।
ಸಹಜಂ ಚೇತಿ ತಂತ್ರೇಷು । ಸರ್ವತಂತ್ರ ವಿಶಾರದೈಃ ॥

**ಫಲಾಭಿ ಸಂಧಿ ಸಂಯುಕ್ತಂ । ದಾನಂ ಯದ್ವಿಹಿತಂ ಭವೇತ್॥**

**ತತ್ಸೋ ಪಾಧಿಕಮಾಖ್ಯಾತಂ । ಮುಮುಕ್ಷುಭಿರನಾಧೃತಂ ॥**

(ಸಿ. ಶಿ. ಪರಿ. ೯. ಶ್ಲೋ ೭೯–೮೧)

ಶಿವಾಗಮೋಕ್ತ ಸಿದ್ಧಾಂತದಂತೆ ಮಾನವನು ಧನ್ಯನಾಗಲು ತ್ಯಾಗ ಮನೋಭಾವವುಳ್ಳವನಾಗ ಬೇಕು. ಯಾಕೆಂದರೆ **"ತ್ಯಾಗೇ ನೈಕೇ ಅಮೃತತ್ವ ಮಾನಶುಃ"** ಎಂದಿದೆ ವೇದ. ತ್ಯಾಗ ಮನೋಭಾವ ಅಮೃತತ್ವಕ್ಕೆ ನೆಲವೀಡೆನಿಸಿದೆ. ಮನುಷ್ಯನು ದೈವಶಕ್ತಿ ಸಂಪನ್ನನಾಗಿ ದಾನ ಧರ್ಮ ಪರೋಪಕಾರ ಸಹಿಷ್ಣುತಾ ಭಾವದಿಂದ ಕೂಡಿರಬೇಕು. ಸಾತ್ವಿಕ ಮನೋಭಾವವನ್ನು ನಮ್ಮಲ್ಲಿ ವೃದ್ಧಿ ಗೊಳಿಸಬೇಕು. ಇದು ಅವಶ್ಯಕವಿರುತ್ತೆ. ನಾವು ಹೊತ್ತಿರುವ ಸ್ಥೂಲ ದೇಹ ತ್ಯಾಗಾಂಗವೆನಿಸಿದೆ. ಅಂದ ಬಳಿಕ ತ್ಯಾಗ ಮನೋಭಾವ ನಮ್ಮಲ್ಲಿ ರಕ್ತಗತವಾಗಿರ ಬೇಕು. ಇದ್ದರೆ, ಆಗ ಭೂತದಯಾ ಪಶ್ಚಾತ್ತಾಪಾದಿಗಳು ಸಹಜವಾಗಿಯೇ ಮೈದೋರವುವು. **"ಸತ್ಪಾತ್ರಕಂ ದಾನಮಂ"** ಎಂದಿದೆ ನೀತಿಶಾಸ್ತ್ರ.

**ಎಲ್ಲಿ ಸುಶೀಲಂ ಸದ್ಗುಣಮೆಲ್ಲಿ । ದಯಾ ಧರ್ಮಮೆಸೆವಾ ।**

**ಸತ್ಯಂ ನೆಲೆಗೊಂಡಲ್ಲಿ । ಆಯುಂ ಸಿರಿಯುಂ ಸಲ್ಲೀಲೆಯೋಳ್**

**ಇರ್ಪವಲ್ತೆ । ಚೂಡಾರತ್ನಾ ॥**

ಎಂಬಂತೆ ಮಾನವ ದಯಾ ಸತ್ಯ ಧರ್ಮ ಸುಶೀಲ ನೀತಿ ಗುಣಗಳಿಂದ ಕೂಡಿ ನಿಸ್ಪೃಹ ಭಾವದಿಂದ ಕ್ರಿಯಾವಂತನಾಗಿರ ಬೇಕು. ಯಾರಿಗೆ ದಾನ ಮಾಡ ಬೇಕು. ದಾನ ಸ್ವೀಕಾರಕ್ಕೆ ಸತ್ಪಾತ್ರ ಯಾರು ? **"ಶಿವ ಲಿಂಗೇ ಶಿವಾಚಾರ್ಯೇ ಶಿವಯೋಗಿ ಭಕ್ತಿಮಾರ್ಗ"** ಎಂದು ಹೆಸರಿಸಿದ್ದಾರೆ ಶ್ರೀ ರೇಣುಕರು. ಯಾಕೆಂದರೆ,

**ಶಿವಯೋಗಿನಿ ಯದ್ದತ್ತಂ । ತದಕ್ಷಯ ಫಲಂ ಭವೇತ್ ॥**

**ಕೊಟ್ಟಿದ್ದು ತನ್ನದು ಬಚ್ಚಿಟ್ಟಿದ್ದು ಪರರದು । ಕೊಟ್ಟಿದ್ದು**

**ಕೆಟ್ಟಿತೆನ ಬೇಡ। ಅದು ಕಟ್ಟಿಹುದು ಬುತ್ತಿ ಮುಂದೆ ಸರ್ವಜ್ಞ ॥**

ಸತ್ಪಾತ್ರಕ್ಕೆ ಮಾತ್ರ ಉದಾರ ಭಾವದಿಂದ ದಾನ ಮಾಡುತ್ತಲೇ ಇರಬೇಕು ಲೋಭಿಯಾಗಿರ ಬಾರದು. ಯಾಕೆಂದರೆ,

**ಆದಾನ ದೋಷೇಣ । ಭವೇದ್ದರಿದ್ರಂ । ದರಿದ್ರದೋಷೇಣ**
**ಕರೋತಿ ಪಾಪಂ । ಪಾಪಾದವಶ್ಯಂ ನರಕಂ ಪ್ರಯಾತಿ ।**
**ಪುನರ್‌ದರಿದ್ರೀ ಪುನರೇವ ಪಾಪಿ ॥**

ಇದರಿಂದಾಗಿ ಮನುಷ್ಯನು ಜೀವಿತ ಕಾಲದಲ್ಲಿ ಯಥಾಶಕ್ತಿ ಸತ್ಪಾತ್ರಕ್ಕೆ ಉದಾರ ಭಾವದಿಂದ ದಾನ ಮಾಡುತ್ತಲಿರ ಬೇಕು. ಪರೋಪಕಾರವೆಂಬ ಗುಣ ಇವನ ರಕ್ತಗತವಾಗಿರ ಬೇಕು. ಆಗಲೇ ಇವನು ಮನುಷ್ಯನೆನಿಸುವನು.

**ಪುಟ್ಟಿದರೇಂ ಪರೋಪ ಕೃತಿಗೆಯ್ಯದೆ ಸತ್ತವರ್ ॥**
**ಪುಟ್ಟವೇ ಸಾಯ ಯವೇ ಜಗದೊಳತ್ತಿಯ ಪಣ್ಣೊಳ್ ।**
**ಎನಿತ್ತೋ ಜಂತುಗಳ್ ॥**

ಅತ್ತಿ ಹಣ್ಣು ಚೆನ್ನಾಗಿದೆಯೆಂದು ಮುರಿದಾಗ, ಅದರೊಳಗೆ ಮಿಲಿಮಿಲಿ ಒದ್ದಾಡುವ ಕ್ರಿಮಿಗಳನ್ನು ಕಂಡೊಡನೆ ತಿನ್ನದೆ ಬಿಸುಡುವನು. ಅದರಂತಾಗ ಬಾರದು. ಧರ್ಮವನ್ನು ಗೂಢವಾಗಿ ಮಾಡುತ್ತಿರಬೇಕು. ಬಲಗೈಯಿಂದ ಮಾಡಿದ ಧರ್ಮ ಎಡಗೈ ಅರಿಯದಂತಿರಬೇಕು. **"ಕರವೊಸಗುಂ ದಾನದೆ"** ದಾನಕರಕ್ಕೆ ಭೂಷಣ.

ನಾವು ಮಾಡುವ ದಾನ ಧರ್ಮಗಳನ್ನು ಪ್ರತಿಫಲಕೋರಿ ಮಾಡುವವನ್ನು ಸೋಪಾಧಿಕ ದಾನವೆನ್ನಲಾಗಿದೆ ತ್ರಿವಿಧವಾದ ದಾನಗಳಲ್ಲಿ ಸೋಪಾಧಿಕ ದಾನ ಅಷ್ಟು ಪ್ರಶಸ್ತವಲ್ಲ. ಪ್ರತಿಫಲ ಕೋರಿ ಮಾಡುವ ದಾನ ನಮ್ಮನ್ನು ಬಂಧಿಸುತ್ತದೆ. ಕಡಕೊಟ್ಟು ಕೊಂಬ ವ್ಯವಹಾರವಾಗುತ್ತೆ. ಫಲಾಕಾಂಕ್ಷೆ ಉಪಾದಿಯಿಂದೊಡಗಿಡಿದೆ. ಇಷ್ಟಾರ್ಥ ನೆರವೇರದಿದ್ದರೆ ದುಃಖಿಯಾಗುತ್ತಾನೆ ಶ್ರೀಕೃಷ್ಣ ಗೀತೆಯಲ್ಲಿ,

**ಚತುರ್ವಿಧಾ ಭಜಂತೇಮಾಂ । ಜನಾಃ ಸುಕೃತಿನೋಽರ್ಜುನ ।**
**ಆರ್ಥೋ ಜಿಜ್ಞಾಸು, ರರ್ಥಾರ್ಥೀ ಜ್ಞಾನೀಚ ಭರತರ್ಷಭ ॥**

(ಗೀ. ಅ. ೭. ಶ್ಲೋ. ೧೬)

ಜಗತ್ತಿನಲ್ಲಿ ನಾಲ್ಕು ವಿಧದ ಭಕ್ತರುಂಟು, ದುಃಖಿ, ಜಿಜ್ಞಾಸು, ಧನಾಭಿಲಾಷೆಯುಳ್ಳವನು ಮತ್ತೂ ಜ್ಞಾನಿ ಎಂದಿರುವರು. ಸೋಪಾಧಿಕದಾನ "ಅರ್ಥಾರ್ಥೀ" ಅಂದರೆ, ದೇವರೇ ನಿನಗೊಂದು ಗುಡಿಕಟ್ಟಿಸಿ ವರ್ಷಂಪ್ರತಿ. ನಿನ್ನ ಉತ್ಸವವನ್ನು ವೈಭವದಿಂದ ನೆರವೇರಿಸುವನೆಂದು ಧನಾಭಿಲಾಷೆಯಿಂದ ಪ್ರಾರ್ಥಿಸುವ ವಿಧಾನ ಸೋಪಾಧಿಕ ದಾನವೆನಿಸಿದೆ. ಗುರು ಲಿಂಗ ಜಂಗಮರಿಂದ ಪಾದೋದಕ ಪ್ರಸಾದಗಳನ್ನು ಆಶೀರ್ವಾದಗಳೊಂದಿಗೆ ಪಡೆದ ಬಳಿಕ ಅವರಿಗೆ ಭಕ್ತಿ ಕಾಣಿಕೆ ಕೊಡುವುದು ಸೋಪಾಧಿಕ ದಾನವೆನಿಸಿದೆ.

## ಅಂಗಸ್ಥಲ ೧೮. ॥ನಿರುಪಾಧಿ ದಾನ ಸ್ಥಲಂ॥

**ಫಲಾಭಿಸಂಧಿನಿರ್ಮುಕ್ತ । ಮೀಶ್ವರಾರ್ಪಿತ ಕಾಂಕ್ಷಿತಂ ।**

**ನಿರುಪಾಧಿಕ ಮಾಖ್ಯಾತಂ । ದಾನಂ ದಾನವಿಶಾರದೈಃ ॥**

ಧರ್ಮಪರಾಯಣರೂ, ಉದಾರ ದಾನಶೀಲರೂ, ಬಲ್ಲವರೂ ಹೇಳುವುದೇನೆಂದರೆ–

**"ಫಲಾಭಿಸಂಧಿ ಸಂಯುಕ್ತಂ ದಾನಂ । ಯದ್ವಿಹಿತಂ ಭವೇತ್।**

**ತತ್ಸೋಪಾಧಿಕಮಾಖ್ಯಾತಂ ॥**

ವ್ಯಾವಹಾರಿಕವಾಗಿ ಫಲಾಶೆಯಿಂದ ಮಾಡುವ ದಾನ ಸೋಪಾಧಿಕವೆನಿಸಿದೆ ಆಸೆಆಕಾಂಕ್ಷೆಗಳಿಂದ ಫಲವನ್ನುದ್ದೇಶಿಸಿ ಮಾಡುವ, ದಾನಧರ್ಮಗಳು ನಮ್ಮನ್ನು ಬಂಧನಕ್ಕೊಳಗಾಗಿಸುವುವು. ಇವು ಸುಖದಂತೆ ತೋರಿ ದುಃಖ ರೂಪದಲ್ಲಿ ತೇಲಿಸುವುವು. ಇಂತಪ್ಪ ದಾನ ಸೋಪಾಧಿಕ ದಾನವೆನಿಸಿದೆ ಇದು ಅಲ್ಪ ಫಲದಾಯಕವಾದದ್ದು.

**ಮುಮುಕ್ಷು ಭಿರನಾದೃತಂ ॥**

ಈ ರೂಪದ ದಾನ ಮೋಕ್ಷಪ್ರದವಲ್ಲವಾದ್ದರಿಂದ, ಮೋಕ್ಷಾಪೇಕ್ಷಿಗಳಾದ ಮುಮುಕ್ಷುಗಳಾದ ಋಷಿ ಮಹರ್ಷಿಗಳು ಸೋಪಾಧಿಕ ದಾನವನ್ನೊಪ್ಪರು.

**ದೂರೇಣಹ್ಯವರಂ ಕರ್ಮ । ಬುದ್ಧಿಯೋಗಾದ್ಧನಂಜಯ ।**

**ಬುದ್ಧೌ ಶರಣಮನ್ವಿಚ್ಛ । ಕೃಪಣಾಃ ಫಲಹೇತವಃ ॥**

(ಗೀ. ಅ. ೨ ಶ್ಲೋ. ೪೯)

ಅರ್ಜುನಾ ಫಲಾಪೇಕ್ಷೆಯಿಂದ ದಾನ ಧರ್ಮಗಳನ್ನು ಮಾಡುವವರು, ಕೃಪಣರೆಂದರು ಹಿರುವನು. ಇವರಂತಲ್ಲದೆ,

**ಫಲಾಭಿಸಂಧಿನಿರ್ಮುಕ್ತಃ । ಮಿಹೇಶ್ವರಾರ್ಪಿತಕಾಂಕ್ಷಿತಂ ॥**

ಯಾವ ಪ್ರತಿಫಲಾಪೇಕ್ಷೆಯಿಲ್ಲದೆ, ಏನನ್ನು ಬಯಸದೆ, ದಾನ ಧರ್ಮಗಳನ್ನು ಶಿವ ಪ್ರೀತ್ಯರ್ಥ ಕರ್ತವ್ಯ ದೃಷ್ಟಿಯಿಂದ ಮಾಡುವುದು ನಿರುಪಾಧಿಕ ದಾನವೆನಿಸಿದೆ. ಇದು ಜೀವಾತ್ಮನನ್ನು ಬಂಧಿಸದೆ ಅಜ್ಞಾನ ಹೃದಯ ಗ್ರಂಥಿಗಳನ್ನು ಸಡಿಲಗೊಳಿಸಿ ಮನಸ್ಸನ್ನು ನಿರ್ಮಲಗೊಳಿಸಿ, ಸಾಕಷ್ಟು ಶಾಂತಿ ನೆಮ್ಮದಿಯಿಂದ ಸ್ಥಿರಗೊಳಿಸುವುದು. ನಿರುಪಾಧಿಕ ದಾನವಾಗಿ ನಿಷ್ಕಾಮ ಕರ್ಮಯೋಗವೆನಿಸಿದೆ. ಅಂತಃಕರಣ ಪರಿಶುದ್ಧಿಗೆ ಇದು ನಾಂದಿಯೆನಿಸಿದೆ.

**ಯಜ್ಞದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ । ಪಾವನಾನಿ ಮನೀಷಿಣಾಂ ॥**
**ಏತಾನ್ಯಪಿ ತು ಕರ್ಮಾಣಿ । ಸಂಘಂತ್ಯಕ್ತ್ವಾ ಫಲಾನಿಚ ॥**
**ಕರ್ತವ್ಯಾ ನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ॥**

ಅಂದರೆ, ನಿತ್ಯ ಶಿವಪೂಜೆ, ಜಪ, ಧ್ಯಾನ, ದಾನ, ತಪ ಮುಂತಾದ ಶುಭ ಕಾರ್ಯಗಳನ್ನು ಬಿಡದೆ ಭಕ್ತ್ಯಾ ಆಚರಿಸ ಬೇಕು. ಇದು ಮಾನವನ ಮುಖ್ಯ ಕರ್ತವ್ಯವಿರುತ್ತೆ, ಸದ್ಗತಿಗೆ ದಾರಿಯೆನಿಸಿದೆ. ಮಮಕಾರ ಬಿಟ್ಟು ಕರ್ತೃತ್ವವನ್ನು ತ್ಯಜಿಸಿ ನಿಷ್ಕಾಮ ಯೋಗದಿಂದ ದಾನಾದಿಗಳನ್ನು ಅವಶ್ಯ ಮಾಡುತ್ತಿರಬೇಕು. ಶ್ರೀ ಜ|| ರೇಣುಕರು ಇದನ್ನೇ,

**ಪಂಚಧಾಕಥ್ಯತೇ ಸದ್ಭಿಸ್ತದೇವ ಭಜನಂ ಪುನಃ | ತಪಃ ಕರ್ಮ**
**ಜಪೋ ಧ್ಯಾನಂ । ಜ್ಞಾನಂ ಚೇತ್ಯನು ಪೂರ್ವಕಂ ॥**

ಅಂದರೆ ಫಲಾಭಿಲಾಷೆಯನ್ನು ತೊರೆದು ದಾನಧರ್ಮಗಳನ್ನು ತನ್ನ ಆತ್ಮೋನ್ನತಿಗಾಗಿ ಯಾವಜ್ಜೀವವೂ ಯಥಾಶಕ್ತಿ ಶಿವಾರ್ಪಿತ ಭಾವದಿಂದ ಆಚರಿಸುತ್ತಲಿರ ಬೇಕೆಂದು ಶ್ರೀ ಜ|| ರೇಣುಕಾಚಾರ್ಯರು ಮಾನವ ಕುಲಕ್ಕೆ ಕರುಣಾ ಭಾವದಿಂದ ಬೋಧಿಸಿರುವ ಈ ಸದ್ಬೋಧೆ ಕ್ರಮೇಣ ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಗೆ ಹೇತುವೆನಿಸಿದೆ.

## ಅಂಗಸ್ಥಲ ೧೫. ॥ಸಹಜ ದಾನ ಸ್ಥಲಂ॥

ಆದಾತೃದಾತೃದೇಯಾನಾಂ। ಶಿವಭಾವಂ ವಿಚಿಂತ್ಯ ಹಿ।
ಆತ್ಮನೋ ಕರ್ತೃ ಭಾವಂ ಚ। ಯದ್ದತ್ತಂ ಸಹಜಂ ತು ತತ್
ಸಹಜಂ ದಾನ ಮುತ್ಕೃಷ್ಟಂ। ಸರ್ವ ದಾನೋತ್ತಮೋತ್ತಮಂ।
ಶಿವಜ್ಞಾನ ಪ್ರದಂ ಪುಂಸಾಂ ಜನ್ಮ ರೋಗ ನಿವರ್ತಕಂ॥

ಶಿವಾಯ ಶಿವಭಕ್ತಾಯ ದೀಯತೇ ಯದಿ ಕಿಂಚನ ಭಕ್ತ್ಯಾ
ತದಪಿ ವಿಖ್ಯಾತಂ। ಸಹಜಂ ದಾನಮುತ್ತಮಂ॥
ಶಿವಯೋಗಿನಿ ಸಂತೃಪ್ತೇ। ತೃಪ್ತೋ ಭವತಿ ಶಂಕರಃ।
ತತ್ತೃಪ್ತ್ಯಾ ತನ್ಮಯಂ ವಿಶ್ವಂ। ತೃಪ್ತಿಮೇತಿ ಚರಾ ಚರಂ॥
(ಶ್ಲೋ. ೮೩, ೮೪, ೮೫, ೯೧)

ಮಾಡುವವನು, ನೀಡುವವನು, ಕೊಡುವವನು ನಾನಲ್ಲವೆಂದು ಶಿವ ಚಿಂತನೆಯೊಂದಿಗೆ ಮಾಡುವ ದಾನ ಸಹಜ ದಾನವೆನಿಸಿದೆ.

ಪತ್ರಂ ಪುಷ್ಪಂ ಫಲಂ ತೋಯಂ॥

ಇವುಗಳನ್ನು ಭಕ್ತ್ಯಾ ಅರ್ಪಿಸಿದರೂ ಸಹಜ ದಾನವೆನಿಸುತ್ತೆ. ಶಿವಯೋಗಿಗಳಿಗೆ ಸತ್ಕಾರ ಪೂಜಾದಿಗಳೊಂದಿಗೆ–ಹಸಿದು ಬಂದವರಿಗೆ ಸದ್ಭಾವದಿಂದ ಅನ್ನಧಾನ ಮಾಡಿ ಸಂತೋಷ ಗೊಳಿಸುವುದು ಸಹಜ ದಾನವೆನಿಸಿದೆ. ಭಕ್ತನು ಮಾಡಿದ ಅನ್ನದಾನಾದಿ ಕೈಂಕರ್ಯದಿಂದ ಶಿವಯೋಗಿ ತೃಪ್ತನಾದರೆ, ಶಿವನು ತೃಪ್ತನಾಗುತ್ತಾನೆ. ಇದರಿಂದ ಸತ್ಫಲ ಸದ್ಗತಿಗಳುಂಟಾಗುವುವು. ಸಹಜ ದಾನದ ಮಹತ್ವ ವರ್ಣನಾತೀತವಿರುತ್ತೆ. ಗಿಡ ಬಳ್ಳಿ ವೃಕ್ಷಗಳು ಮಾನವರಿಗೆ ಕಾಲ ಕಾಲಕ್ಕೆ ಹೂ, ಕಾಯಿ, ಹಣ್ಣು, ನೆರಳು, ತಂಗಾಳಿಗಳನ್ನು ಕೊಟ್ಟು ಪರೋಪಕಾರ ಮಾಡಿದರೂ, ವೃಕ್ಷಗಳು ಯಾವ ಪ್ರತಿಫಲವನ್ನೂ ಬಯಸುವುದಿಲ್ಲ. ಇದರಂತೆ; ಕಾವೇರಿ, ತುಂಗ ಭದ್ರಾ, ಗಂಗಾ, ಯಮುನಾದಿ ಜೀವಂತ ನದಿಗಳು ಸದಾ ಸರ್ವ ಕಾಲಂಗಳಲ್ಲೂ ಜನ, ಜಾನುವಾರ ಹಾಗೂ ವ್ಯವಸಾಯಾದಿ ಕೃಷಿಗಳಿಗೆ ನಿರಂತರ ಸಮೃದ್ಧಿಯಿಂದ ನೀರನ್ನು ಒದಗಿಸುತ್ತಾ

ಅನಂತ ಮುಖವಾಗಿ ಉಪಕಾರ ಮಾಡಿದರೂ, ಅವು ನಮ್ಮಿಂದ ಯಾವ ಪ್ರತಿಫಲವನ್ನೂ ಕೋರುವುದಿಲ್ಲ.

**ಮುಗಿಲ್ಗೆ ನವಾಂಬು ಭಾರದೆ ಜೋಲ್ಗುಂ ॥**

ಮುಗಿಲು ನೀರುಂಡ ಕಪ್ಪು ಮೋಡಗಳಿಂದ ಬಾಗಿ ನಮಗಾಗಿ ಕಾಲ ಕಾಲಕ್ಕೆ ಯಥೇಷ್ಟವಾಗಿ ಮಳೆ ಸುರಿಸಿ ಜಗತ್ತನ್ನು ತಣಿಸಿ ಜನಕೋಟಿಯನ್ನು ಉದ್ಧರಿಸಿದರೂ ಯಾವ ಪ್ರತಿಫಲವನ್ನು ಕೋರುವುದಿಲ್ಲ ಇವು ಸಹಜ ದಾನಕ್ಕೇ ಒಳ್ಳೇ ಉದಾಹರಣೆಗಳಾಗಿವೆ.

**ತರುಗಳ್ ಬಾಗುಗು ಮುರು ಭರಫಲದಿಂದ। ಮುಗಿಲ್**

**ನವಾಂಬು ಭಾದೆರಜೋಲ್ಗುಂ ॥**

**ಸಿರಿಯೋಳ್ ನಯಯುತರಾರ್ಯ್ಯರ್ । ಪರಿಕಿ ಪಡೆ ಪರೋ**

**ಪಕಾರಿಗಳ್ಗಿದು ಸಹಜಂ ॥**

ಇದುವೇ ನಿಜವಾದ ಸಹಜ ದಾನವೆನಿಸಿದೆ.

**॥ ಪರಹಿತವಂ ತಾನೆ ಮಾಳ್ಪರುತ್ತಮ ಪುರುಷರ್ ॥**

ಭಕ್ತ ಸ್ಥಲದಲ್ಲಿ ೧೫ ಉಪ ಸ್ಥಲಗಳ ಯತ್ಕಿಂಚಿತ್ ಸಾಗರದಲ್ಲಿ ಒಂದು ಹನಿಯಷ್ಟು ಸಾಂರಾಶ ಶ್ರೀ ಜ॥ ರೇಣುಕರ ಅನುಗ್ರಹದಿಂದ ವಿವರಿಸಿರಲಾಗಿದೆ.

**ಅಮ್ಮಾ ! ಅಯಿ ಜಗದಂಬ ಕದಂಬ ವನಪ್ರಿಯ । ವಾಸ**

**ನಿವಾಸಿನಿ ಬೋಧರತೇ । ಶಿಖರಿ ಶಿರೋಮಣಿ ತುಂಗ ಹಿಮಾ**

**ಲಯ । ಸೌಧನಿಜಾಲಯ ಮಧ್ಯಗತೇ । ಮಧು ಮಧುತೀ**

**ಮಧುಕೈಟಭ ಗರ್ಜನ । ಜಾತ ಭಯಾನ್ವಿತ ವಿಷ್ಣುನುತೇ ।**

**ಜಯ ಜಯ ಹೇ ಮಹಿಷಾಸುರಮರ್ದಿನೀ । ರಮ್ಯಕಪರ್ದಿನಿ**

**ಶೈಲಸುತೇ ॥**

**ನಮಸ್ತೇ ದೇವ ದೇವೇಶ ನಮಸ್ತೇ ಭಕ್ತವತ್ಸಲ ॥**

**ನಮಸ್ತೇ ಕರುಣಾಸಿಂಧೋ ಪರಮೇಶಾಯ ತೇ ನಮಃ ॥**

**ವೇದಾಂತೋ ನಿಲಯಾಯತೇ । ಸುವಿನಯೋ ಯಸ್ಯ ಸ್ವಭಾ**

ವಾಯತೇ ॥ ತಸ್ಮಿನ್ಮೇ ಹೃದಯಂ ಸುಖೇನ ರಮತಾಂ ।
ಸಾಂಬೇ ಪರಬ್ರಹ್ಮಣಿ ॥ ಸ್ವತಂತ್ರ ಶಕ್ತಿ ಮಾನ್ ದೇವಾ ।
ತ್ವಮೇವ ಪುರುಷೋತ್ತಮ । ತ್ವಚಾಧೀನ ಮಿದಂ ವಿಶ್ವಂ ।
ವಿಶ್ವನಾಥಾಯತೇ ನಮಃ ॥
ಕಾಶಿ ವಿಶ್ವನಾಥ ಗಂಗಾ | ಸೇತು ರಾಮನಾಥ ಲಿಂಗ ॥ ಕಾಶಿ ॥

## ಪರಿ ೧೦. ॥ ಮಾಹೇಶ್ವರ ಸ್ಥಲಂ ॥

ಕೇವಲಂ ಸಹಜೇ ದಾನೇ ನಿಷ್ಣಾತಃ ಶಿವ ತತ್ಪರಃ ।
ಬ್ರಹ್ಮಾದಿ ಸ್ಥಾನ ವಿಮುಖೋ। ಭಕ್ತೋ ಮಾಹೇಶ್ವರಃ ಸ್ಮೃತಃ॥
ಭಕ್ತೇರ್ಯದಾ ಸಮುತ್ಕರ್ಷೋ। ಭವೇದ್ವೈರಾಗ್ಯ ಗೌರವಾತ್।
ತದಾ ಮಾಹೇಶ್ವರಃ ಪ್ರೋಕ್ತೋ | ಭಕ್ತಃ ಸ್ಥಿರವಿವೇಕವಾನ್ ॥
(ಶ್ಲೋ. ೨, ೩)

ಶ್ರೇಷ್ಠತರ ಸಹಜ ದಾನದಲ್ಲಿ ನಿಷ್ಣಾತನೂ, ಸತತ ಶಿವಾರಾಧಕ ಚಿತ್ತ ವೃತ್ತಿಯುಳ್ಳವನೂ, ಬ್ರಹ್ಮೇಂದ್ರಾದಿ ಪದವಿಗಳಲ್ಲಿ ಉಪೇಕ್ಷಾಭಾವಾನ್ವಿತನೂ, ಶಿವಸರ್ವೋತ್ತಮತ್ವದಲ್ಲಿ ನಿಷ್ಠೆಯುಳ್ಳವನು ; ನೈಷ್ಟಿಕ ಬ್ರಹ್ಮಚರ್ಯ ವ್ರತ ಪರಿಪಾಲನೆಯಲ್ಲಿ ಭೀಷ್ಮಾಚಾರಿಯಂತ ದೃಢ ಸಂಕಲ್ಪವುಳ್ಳ ಮಹಾನುಭಾವ ಮಹೇಶ್ವರನೆನಿಸುವನು. ಪರಮ ವೈರಾಗ್ಯಾದಿ ಗುಣವಿಶಿಷ್ಟನಾಗಿ ನಿತ್ಯಾ ನಿತ್ಯ ವಸ್ತು ವಿವೇಕಸ್ತನೂ ಶಮಾದಿ ಸಾಧನ ಚತುಷ್ಟಯ ಸಂಪನ್ನ ಮಾಹೇಶ್ವರನೆನಿಸುವನು. ಭಕ್ತಸ್ಥಲದ ಅಖಿಲ ಉಪಸ್ಥಲಗಳ ಸಾರ ಸರ್ವಸ್ವವನ್ನೂ ಶಿವ ಯೋಗದಲ್ಲಿ ಮನಗಂಡ ಸದ್ಭಕ್ತನೇ ಕ್ರಮೇಣ ಶ್ರೀ ಗುರುಕಟಾಕ್ಷದಿಂದ ಮಾಹೇಶ್ವರನ ಸ್ಥಾನವನ್ನಲಂಕರಿಸುವನು. ಶಿವನಲ್ಲಿಟ್ಟ ಅವ್ಯಭಿಚಾರಿಣಿ ಭಕ್ತಿ ವಿಶೇಷದಿಂದ ಸದಾ ವಿಜೃಂಭಿತನಾದ ಪುಣ್ಯ ಪುರುಷನು ಮಾಹೇಶ್ವರನೆನಿಸುವನು. ತ್ಯಾಗಾಂಗದ ಎರಡು ಕವಲುಗಳಾದ ಭಕ್ತ ಮಾಹೇಶ್ವರರು ಪೃಥ್ವ್ಯಾಂಗ ಜಲಾಂಗಗಳ ಪ್ರಾಧಾನ್ಯಗಳಿಂದ ಪ್ರಭಾವಾನ್ವಿತ ಮಾಹೇಶ್ವರ ಶುದ್ಧನಾಗಿಹನು.

## ೧. ||ಲಿಂಗ ಸ್ಥಲ||

ಯೋಗಾಂಗಂ ಪ್ರಥಮಂ ಪ್ರೋಕ್ತಂ । ಭೋಗಾಂಗಂ ಚ ದ್ವಿತೀಯಕಂ । ತ್ಯಾಗಾಂಗಂ ಚ ತೃತೀಯಂ। ಸ್ಯಾದಿತ್ಯೇವಂ ತ್ರಿವಿಧಂ ಸ್ಮೃತಂ ॥
ಯೋಗಾಂಗ ವೈಕ್ಯಂ ಶರಣಂ ಸ್ಥಲಮಿತ್ಯು ಭವೇತ್ ಭಯಂ ॥
ಪ್ರಾಣಲಿಂಗಿ ಪ್ರಸಾದೀತಿ ದ್ವಯಂ । ಬೋಗಾಂಗಮಿಷ್ಯತೇ ॥
ಮಾಹೇಶ್ವರ ಸ್ಥಲಂ ಭಕ್ತ ಸ್ಥಲ ಮಿತ್ಯುಭಯಂ ಸ್ಥಲಂ ।
ತ್ಯಾಗಾಂಗಂ ಭವತೀ ತ್ಯೇವಂ । ಪ್ರೋಚ್ಯತೇ ತತ್ವದರ್ಶಿಭಿಃ ॥

ಭಕ್ತನು—ಸದಾಚಾರಶ್ಶಿವೇ ಭಕ್ತಿರ್ಲಿಂಗೇ ಜಂಗಮ ಲಾಂಛನೇ। ಏಕಧೀರಣೇ ಭಕ್ತಿ ಭಕ್ತಸ್ಥಲ ಮನುತ್ತಮಂ ॥ ಪರಸ್ತ್ರಿಯಂ ಪರಾರ್ಥಕ । ವರ್ಜಯನ್ ಭಾವ ಶುದ್ಧಿಮಾನ್ । ಲಿಂಗನಿಷ್ಠಾನಿಯುಕ್ತಾತ್ಮಾ । ಮಹೇಶ್ವರ ಮಹಾಸ್ಥಲಂ ॥

(ಶ್ರೀ ಸ್ವಪ್ರಭಾನಂದ ಶಿವಾಚಾರ್ಯ.)

ಸದಾಚಾರಶ್ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ ।
ಲಾಂಛನೇ ಶರಣೇ ಭಕ್ತಿರ್ಭಕ್ತ ಸ್ಥಲ ಮನುತ್ತಮಂ ॥
ಪರಸ್ತ್ರಿಯಂ ಪರಾರ್ಥಂ ಚ ವರ್ಜಯನ್ ಭಾವಶುದ್ಧಿಮಾನ್।
ಲಿಂಗನಿಷ್ಠಾನಿಯುಕ್ತಾತ್ಮಾ । ಮಹೇಶ್ವರ ಮಹಾ ಸ್ಥಲಂ ॥

ಪೃಥ್ವ್ಯಾಂಗ ಭಕ್ತನು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ವಿಷಯಾದಿಗಳಿಂದ ಬಂಧಿತನಾಗಿದ್ದಾನೆ. ಜಲಾಂಗ ಮಾಹೇಶ್ವರನು ಶಬ್ದ, ಸ್ಪರ್ಶ, ರೂಪ. ರಸಗಳೆಂಬ ನಾಲ್ಕು ವಿಷಯಾದಿಗಳಿಂದ ಅವೃತನಾಗಿದ್ದಾನೆ. ಪಾರ್ಥಿವಾಂಗ ಭಕ್ತನು ಅವ್ಯಭಿಚಾರಿಣಿ ಪರಾಭಕ್ತಿಯ ನಿಕಟ ಅವಲಂಭನೆಯಿಂದಾಗಿ ಜಲಾಂಗದಲ್ಲಿ ಶುದ್ಧನಾಗಿ ತಾನೇ ಮಾಹೇಶ್ವರನೆನಿಸಿ ಕೊಳ್ಳುವನು.

ಭಕ್ತೋ ಮಾಹೇಶ್ವರಃ ಸ್ಮೃತಃ ॥

ಎಂದು ಶ್ರೀ ರೇಣುಕಾಚಾರ್ಯರು ಅಪ್ಪಣೆ ಕೊಡಿಸಿರುವರು. ಶುದ್ಧನಾದ ಮಾಹೇಶ್ವರನ ಶರೀರ ತೇಜಸ್ವಿಯಾಗಿರ್ಪುದು. ದೈವೀಯೋಗ ಸಂಪದ್ಭರಿತನಾಗಿ ರಾರಾಜಿಸುವನು. ಬುದ್ಧಿ ಯೋಗಕ್ಕೆ ಶರಣಾಗತನಾಗಿ ಗುರುಲಿಂಗದ ಪ್ರಭಾವಕ್ಕೊಳಗಾಗಿರ್ಪನು. ವಿಚಾರ ಪರ ಮಾಹೇಶ್ವರ ಪಂಚಜ್ಞಾನೇಂದ್ರಿಯಗಳನ್ನು

ವಶವರ್ತಿಯಾಗಿಸಿ ಕೊಂಡು ಸಾಧಕನಾಗಿರ್ಪನು. ಜನನ ಮರಣ ಹಸಿವು ಬಾಯಾರಿಕೆ, ಶೋಕ ಮೋಹಗಳೆಂಬ, ದೇಹ ಪ್ರಾಣ ಮನೋ ಧರ್ಮಗಳನ್ನು ಜಯಿಸಿ, ಷಡೂರ್ಮಿಗಳ ಬಾಧೆಗೆ ಸಿಲುಕದೆ ಸಂಯಮಿ ಎನಿಸಿಹನು ಮಾಹೇಶ್ವರನು. ತ್ಯಾಗಾಂಗದ ಮೇಲಿನ ಆಧಿಕ್ಯದಿಂದಾಗಿ ಚಿತ್ತ ಬುದ್ಧಿಗಳ ಮೇಲೆ ಸ್ವಯಂ ಪ್ರಭುತ್ವದಿಂದಾಗಿ ಮಾಹೇಶ್ವರ ತತ್ವಜ್ಞಾನಿ ಯೆನಿಸಿರುವನು.

ಮಾಹೇಶ್ವರನು ಅನಂತ ಕಲ್ಯಾಣ ಗುಣಸಂಪನ್ನನು, ಹೆಣ್ಣು, ಮಣ್ಣು ಮತ್ತು ಹೊನ್ನುಗಳನ್ನು ತನ್ನತ್ತ ಆಕರ್ಷಿಸದೆ ಅವುಗಳನ್ನು ಕಾಷ್ಠಲೋಷ್ಟಗಳಂತೆ ತಿರಸ್ಕರಿಸುವಾತನೇ ನಿಜಕ್ಕೂ ಮಾಹೇಶ್ವರನೆನಿಸುವನು. ಈತ ಪರ್ರ್ನಾರಿ ಸಹೋದರನು.

**ಮಾತೃವತ್ಪರದಾರಾಂಶ್ಚ । ಪರದ್ರವ್ಯಾಣಿ ಲೋಷ್ಟವತ್ ॥**

ಎಂಬ ಬಲಿತ ಭಾವವುಳ್ಳಾತ ಮಾಹೇಶ್ವರ. ವೈರಾಗ್ಯವಂತ. ಅಷ್ಟೇ ಅಲ್ಲ

**ಶಿವಾರ್ಥ ಕಾರ್ಯ ಸಂಪನ್ನಃ । ನಿತ್ಯ ಶಿವಾಗಮ ಪರಾಯಣಃ ಮಹೇಶ್ವರಃ ॥**

ಎಂದು ಜಗದಾಚಾರ್ಯ ಶ್ರೀ ರೇಣುಕ ಪರಂಜ್ಯೋತಿ ಅರುಹಿರುವರು.

**ಶಿವಾತ್ಸಮುತ್ಪನ್ನಂ । ಶಿವ ಏವ ಚರಾ ಚರಂ ॥**

ಶಿವನಿಚ್ಛೆಯಂತೆ ಏರ್ಪಟ್ಟ ಸ್ಥಾವರ ಜಂಗಮಾತ್ಮಕ ಜಗತ್ತು ಶಿವ ಸ್ವರೂಪವುಳ್ಳದ್ದು.

**ಸರ್ವಂ ಖಲ್ವಿದಂ ಬ್ರಹ್ಮ ॥ ಈಶಾವಾಸ್ಯಮಿದಂ ಸರ್ವಂ ॥**

**ವಾಸು ದೇವ ಮಿದಂ ಸರ್ವಂ । ಪುರುಷ ಏ ವೇದಗ್ಂ ಸರ್ವಂ॥**

**ಪಾದೋಸ್ಯ ವಿಶ್ವಭೂತಾನಿ । ತ್ರಿಪಾದ ಸ್ಯಾಮೃತಂ ದಿವಿ ॥**

ಎಂಬ ಶೃತಿ ಘೋಷಗಳಂತೆ ಮಾಹೇಶ್ವರನು, ಜಗತ್ಸತ್ಯ, ಜೀವ ಸತ್ಯ, ಬ್ರಹ್ಮ ಸತ್ಯವೆಂಬ ದೃಢಬಾವವುಳ್ಳವನು ಮಾಹೇಶ್ವರನು. ಮತ್ತು,

**॥ ಯದ್ಯದೇತ ಕರ್ಮಚಿತೋ ಲೋಕಃ ಕ್ಷೀಯತೇ ।**

**ಏವಮೇವಾಮುತ್ರ ಪುಣ್ಯ ಚಿತೋ ಲೋಕಃ ಕ್ಷೀಯತೇ ॥**

ಇಹಪರ ಲೋಕಗಳೆಲ್ಲಾ ನಶ್ವರವಾದುದರಿಂದ ಹರಿಬ್ರಹ್ಮೇಂದ್ರಾದಿ ಲೋಕಗಳನ್ನು ಬಯಸನು ಮಾಹೇಶ್ವರನು. ಇವುಗಳನ್ನೆಲ್ಲಾ ತೃಣದಂತೆ ದೂರೀಕರಿಸಿ,

**॥ ಅಹಂ ಮಾಹೇಶ್ವರ ಪ್ರಾಣೋ । ಮಮ ಪ್ರಾಣೋ ಮಹೇಶ್ವರಃ ॥**

ಎಂಬ ವಿಶ್ವಾಸವುಳ್ಳಾತ, ವೀರ ಮಾಹೇಶ್ವರ.

**ಮಹಾನ್ ಈಶ್ವರೋ ಯಸ್ಯ ಸಃ ॥**

ಮಾಹೇಶ್ವರನ ನಿರಂತರ, ಪರಮ ಆರಾಧ್ಯ ದೇವತಾ ಸಾರ್ವಭೌಮ ಜಗನ್ನಿಯಾಮಕನಾದ ಮಹೇಶ್ವರನು. (ಪರಶಿವ ಬ್ರಹ್ಮನು). ಮಾಹೇಶ್ವರನಿಗೆ ತನ್ನ ಬಾಹ್ಯಾಭ್ಯಂತರ, ತನುಕರಣಂಗಳ ಮೇಲೆ ಪ್ರಭುತ್ವವಿರ ಬೇಕು. ಅಂಗಾಂಗ ಸರ್ವಾವಯವಗಳನ್ನು ತನ್ನಧೀನದಲ್ಲಿರಿಸಿಕೊಂಡಾತನೇ ವೀರ ಮಹೇಶ್ವರನು ಇಂತಪ್ಪ ಸಾಧನೆ ಸಿದ್ಧಿಗಳಲ್ಲಿ ನೈಪುಣ್ಯ ಹೊಂದಿರುವಾತ ಕ್ರಮೇಣ ಗಣೇಶನೆನಿಸುವನು. ಗಣೇಶ, ಮಹೇಶ ಮತ್ತು ಮಾಹೇಶ್ವರರುಗಳಲ್ಲಿ ಭೇದ ವಿರುವುದಿಲ್ಲ. ಇದರಿಂದಾಗಿ, ಸ್ಥಿತಪ್ರಜ್ಞನೇ ಮಾಹೇಶ್ವರನೆಂದರಿಯ ಬೇಕು. ಗೀತೆಯಲ್ಲಿ ಸ್ಥಿತ ಪ್ರಜ್ಞನ ಬಗೆಗೆ ವಿಚಾರ ಪ್ರಕಾಶಿತವಾಗಿದೆ. ಅರ್ಜುನನು ಶ್ರೀ ಕೃಷ್ಣ ಪರಮಾತ್ಮನನ್ನು ಕುರಿತು : ಕೃಷ್ಣಾ—

**ಸ್ಥಿತಪ್ರಜ್ಞಸ್ಯ ಕಾ ಭಾಷಾ ? ಸಮಾಧಿಸ್ಥಸ್ಯ ಕೇಶವ ಸ್ಥಿತಧೀಃ**

**ಕಿಂ ಪ್ರಭಾಷೇತ ? ಕಿಮಾಸೀತ ? ವ್ರಜೇತ ಕಿಂ ? ॥**

ಅಂದರೆ, ಕೇಶವ ! ಅಹಂ ಬ್ರಹ್ಮಾಸ್ಮಿಯೆಂದು ಸದಾ ಆತ್ಮ ಚಿಂತನೆಯಲ್ಲಿ ನಿಷ್ಠೆಯುಳ್ಳ ಆ ವ್ರತಧಾರಿ ಪುರುಷ, ಏನನ್ನು ಕುರಿತು ಮಾತನಾಡುತ್ತಿರುತ್ತಾನೆ ಕಿಮಾಸೀತ್—ಯಾವ ರೀತಿ ಆತ ಸಹಜವಾಗಿ ಆಸನಾ ರೂಢನಾಗಿರ್ಪನು ; ಕಿಂವ್ರಜೇತ್—ಹೇಗೆ ವರ್ತಿಸುತ್ತಾನೆ. ಕೊನೆಯಲ್ಲಿ ಏನನ್ನ ಹೊಂದುತ್ತಾನೆ ಎಂದು ಪ್ರಶ್ನಿಸಿದನು. ಶಿವಯೋಗ ಸಮಾಧಿಯಲ್ಲಿರುವ ಪುರುಷನು ಯಾವ ಲಕ್ಷಣಗಳುಳ್ಳವನಾಗಿ, ಇತರರೊಂದಿಗೆ ಸಹಜವಾಗಿ ವರ್ತಿಸುತ್ತಾನೆ.

ಷನನ್ನು ಸಂಭಾಷಿಸುತ್ತಲಿರುತ್ತಾನೆ. ಶಿವಯೋಗದಲ್ಲಿ ಮುಳುಗಿದ ಯತಿ ಬಹಿರ್ಮುಖಿಯಾದ ನಂತರ ಈ ಪುರುಷ, ಸ್ತುತಿ ನಿಂದಾದಿಗಳನ್ನು ಎದುರಿಸು ವಾಗ್ಗ ಯಾವ ರೀತಿಯ ಭಾವದಿಂದ ಉತ್ತರಿಸುವನು ಯೆಂದು ಶ್ರೀ ಕೃಷ್ಣನಲ್ಲಿ ವಿಜ್ಞಾಪಿಸಿ ಕೊಂಡನು. ಆಗ ಶ್ರೀ ಸ್ವಾಮಿ-

**ಪ್ರಜಹಾತಿ ಯದಾ ಕಾಮಾನ್ । ಸರ್ವಾನ್ ಪಾರ್ಥ ಮನೋ ಗತಾನ್ । ಆತ್ಮನ್ಯೇವಾ ವಾತ್ಮನಾ ತುಷ್ಟಃ । ಸ್ಥಿತ ಪ್ರಜ್ಞಸ್ತ ದೋ ಚ್ಯತೇ ॥ ದುಃಖೇಷ್ವನು ದ್ವಿಗ್ನ ಮನಾಃ। ಸ್ಯುಖೇಷು ವಿಗತಸ್ಪೃಹಃ।**
**ವೀತರಾಗ ಭಯ ಕ್ರೋಧಃ । ಸ್ಥಿತಧೀರ್ಮುನಿರುಚ್ಯತೇ ॥**
**ಯಸ್ಸರ್ವತ್ರಾನಭಿಸ್ನೇಹ । ಸ್ತತ್ತತ್ಪ್ರಾಪ್ಯ ಶುಭಾ ಶುಭಂ ।**
**ನಾಭಿನಂದತಿ ನದ್ವೇಷ್ಟಿ । ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

(ಗಿ. ಅ. ೨ ಶ್ಲೋ ೫೫-೫೭)

ಓ ಪಾರ್ಥ ! ಯಾರು ಸದಾ ತನಗನ್ಯವಲ್ಲದ ಆತ್ಮ ಸ್ವರೂಪದಲ್ಲೇ ತನಗೆ ತಾನೇ ಪ್ರೈಮರೆತು ಆನಂದಿಸುತ್ತಲಿರುತ್ತಾನೋ ಮನಸ್ಸನ್ನು ಯಾವುದು ದುರಾಚಾರ ದುರ್ಮಾರ್ಗಕೆ ಎಳೆಯುವುದೋ ಅಂತಪ್ಪ ವಿಷಯಾದಿಗಳಿಂದ ದೂರವಾಗಿರ್ಪನು. ಮನೋ ಚಂಚಲವಿಲ್ಲದ ಸಾಧಕ ನಿಶ್ಚಲ ಭಾವವುಳ್ಳಾತ ಸ್ಥಿತಪ್ರಜ್ಞನಿರುವನು.

**॥ ಆತ್ಮನ್ಯೇವಾತ್ಮನಾ ತುಷ್ಟಃ । ಸ್ಥಿತ ಪ್ರಜ್ಞಸ್ತದೋಚ್ಯತೇ ॥**

ಅಂದರೆ-ತನ್ನ ಸ್ವಾತ್ಮಧ್ಯಾನಾನು ಸಂಧಾನದಲ್ಲಿ ಮುಳುಗಿ ಅನವರತ ಸ್ವಸ್ವರೂಪಾನು ಸಂಧಾನದಿಂದ ವಿಜೃಂಭಿತನಾಗಿ ಮತ್ತಲ್ಲೇ ಇದ್ದು ಸ್ವತಃ ದೇದೀಪ್ಯವಾಗಿ ರಂಜಿಸುವ ಮಹಾನುಭಾವನನ್ನು ಸಮಾಧಿಯೋಗಾರೂಢನಿರು ವನೆಂದು ಸ್ತುತಿಸಲಾಗಿದೆ. ಸಮಾಧಿ ಸ್ಥಿತಿಯೆಂದರೇನು ?

**ಧ್ಯಾನಾವಸ್ಥಿತ ತದ್ಗತೇನ ಮನಸಾ। ಪಶ್ಯಂತಿ ಯಂ ಯೋಗಿನಃ ॥**

ನಿಶ್ಚಿಂತೆಯಿಂದ ಈಶ್ವರಾರ್ಪಣ ಮನೋಭಾವದೊಂದಿಗೆ, ತದೇಕ ಧ್ಯಾನ ಭಕ್ತಿಪರವಶನಾಗಿ ಸಚ್ಚಿದಾನಂದ ದಿವ್ಯ ಸ್ವರೂಪ ಚಿಂತನೆಯಲ್ಲಿ ನಿಷ್ಠಾವಂತ ನಾಗಿ, ಒಳ ಹೊರಗೂ, ಎಲ್ಲೆಲ್ಲೂ ತಾನೇ ತಾನಾದ ನಿತ್ಯಾನಂದಾದ್ವಿತೀಯ

ಸ್ವಯಂಜ್ಯೋತಿಯಲ್ಲಿ ವಿಲೀನವಾದ ಭಾವೈಕ್ಯ ಸ್ಥಿತಿ ಸಮಾಧಿಯೆನಿಸಿದೆ. ಮಾಹೇಶ್ವರನು ಇಂತಪ್ಪ ಮಹೋನ್ನತ ಸ್ಥಿತಿಗೇರಲು ಪ್ರಥಮತಃ ಸ್ಥಿತಪ್ರಜ್ಞ ನಾಗಿರ ಬೇಕು. ಕಷ್ಟಕಾಲದಲ್ಲಿ ದುಃಖಿಸದೆ ಸುಖದಲ್ಲಿ ಉಬ್ಬದೆ, ಅಪಯಶಸ್ಸು ಮತ್ತು ಯಶಸ್ಸುಗಳಿಗೆ ಕಂದದೆ ಕುಂದದೆ ಸಮತ್ವಭಾವದಿಂದ ಹಾಗೂ ಎಲ್ಲಾ ಸಂದರ್ಭಗಳಲ್ಲೂ ಧೃತಿಗೆಡದೆ ಧೈರ್ಯವ ಬಿಡದೆ, ಅಂಜದೆ ಅಳುಕದೆ ಸದಾ ಮಂದಸ್ಮಿತವಾದ ಮುಖ ಪದ್ಮಶೀಲನು ಮಾಹೇಶ್ವರನು.

ಶ್ರೀಕಂಠ ಭಕ್ತ ಭಯಸೂದನ ಶೂಲಪಾಣೇ ।
ಗೌರೀ ವಿಲಾಸ ಶಿವ ಶಂಕರ ಚಂದ್ರಮೌಳೇ ।
ಭೂತೇಶ ಕೇಶಿದಹನೇಶ ದಯಾಂಬು ರಾಶೇ ।
ದೇವೇಶ ಭೋ ! ಗರಪುರೇಶ ನಮೋ ನಮಸ್ತೇ ॥

ಶಿವಾಧಿಪಂ ವೃಷಾಧಿಪಂ, ಗಣಾಧಿಪಂ, ಗುಣಾಧಿಪಂ ।
ಧರಾಧಿಪಂ ಚರಾಧಿಪಂ, ನರಾಧಿಪಂ ಸುರಾಧಿಪಂ ।
ಭಗಾಧಿಪಂ ಬುಧಾದಿಪಂ, ಸುಧಾಧಿಪಂ, ಶುಭಾಧಿಪಂ ।
ಜಯಾಧಿಪಂ, ಲಯಾಧಿಪಂ, ಭಜಾಮಿ ಚಿತ್ಸುಖಾಧಿಪಂ ॥

(ಮಾಹೇಶ್ವರ ಸ್ಥಲ) ಅಂಗಸ್ಥಲ ೧೬.

॥ ಮಾಹೇಶ್ವರ ಪ್ರಶಂಸಾಸ್ಥಲಂ ॥ ಪರಿ ೧೦.

ವಿಶ್ವಸ್ಮಾದಧಿಕೋ ರುದ್ರೋ । ವಿಶ್ವಾನುಗ್ರಹಕಾರಕಃ ।
ಇತಿಯಸ್ಯಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಃ ಸ್ಮೃತಃ ॥
ಬ್ರಹ್ಮಾದ್ಯೈರ್ಮಲಿನ ಪ್ರಾಯೈ । ನಿರ್ಮಲೇ ಪರಮೇಶ್ವರೇ ।
ಸಾಮ್ಯೋಕ್ತಿಂ ಯೋ ನ ಸಹತೇ । ಸ ವೈ ಮಾಹೇಶ್ವರಾಭಿದಃ॥
ಈಶ್ವರಃ ಸರ್ವ ಭೂತಾನಾಂ । ಬ್ರಹ್ಮಾದೀನಾಂ ಮಹಾನಿತಿ ।
ಬುದ್ಧಿಯೋಗಾತ್ತ ದಾಸಕ್ತೋ । ಭಕ್ತೋ ಮಾಹೇಶ್ವರಃ
ಸ್ಮೃತಃ ॥ (ಶ್ಲೋ ೪, ೯, ೧೦)

ಜಗಜ್ಜನನಿ ಶ್ರೀ ಗಿರಿಜೆಗೆ ಪರಮೇಶ್ವರನು, ಭಕ್ತ ಮಾಹೇಶ್ವರರ ನಿಲುವನ್ನು ವಿವರಿಸುತ್ತಾ ದೇವಿ ! ಮಾಹೇಶ್ವರನ ಸ್ಥಾನ ಬಹು ಉನ್ನತವಾದುದು. ಶಿವನ ಪ್ರಶಂಸೆಗೆ ಅರ್ಹನಾದ ಮಾಹೇಶ್ವರ ಸತತ ಬಾಹ್ಯಾಭ್ಯಂತರಗಳಲ್ಲೂ ತನ್ನಿಷ್ಟಲಿಂಗ ಪೂಜಾಸಕ್ತನಾಗಿ ಶಿವನನ್ನು ಸ್ತೋತ್ರಗಳ ಮೂಲಕ ಮನೋಹರವಾಗಿ ಸ್ತುತಿಸುತ್ತಿರ್ಪನು.

**ಪೂಜಾಕೋಟಿ ಸಮಂ ಸ್ತೋತ್ರಂ । ಸ್ತೋತ್ರಕೋಟಿ ಸಮೋ ಜಪಃ । ಜಪಕೋಟಿ ಸಮಂ ಧ್ಯಾನಂ । ಧ್ಯಾನಕೋಟಿ ಸಮೋ ಲಯಃ ॥**

ಇಂತಪ್ಪ ಮಹಾ ವ್ರತ ಶೀಲನು ಮಾಹೇಶ್ವರನು. ಮಾಹೇಶ್ವರ ಸ್ಥಲದಲ್ಲಿ ಒಂಭತ್ತು ಉಪಸ್ಥಲಗಳಿವೆ. ಮೊದಲನೆಯದು ಮಾಹೇಶ್ವರ ಪ್ರಶಂಸಾ ಸ್ಥಲ. ಲಕ್ಷ ಜನರ ಗುಂಪಿನಲ್ಲಿ ಒಬ್ಬ ಭಕ್ತ ಸಿಗುವನು. ಇದರಂತೆ ಹತ್ತು ಲಕ್ಷ ಜನರಲ್ಲಿ ಒಬ್ಬ ಮಾಹೇಶ್ವರನು ಸಿಗುತ್ತಾನೆ. ಶಿವನಲ್ಲಿ ಅವ್ಯಭಿಚಾರಿಣಿ ನಿಷ್ಠಾ ಭಕ್ತಿ ಅವಧಾನ ಭಕ್ತಿಯುಳ್ಳ ಶರಣ ಮಾಹೇಶ್ವರನೆನಿಸಿರುವನು. ಈತನು ಸ್ಥಿರ ಬುದ್ಧಿಯುಳ್ಳವನು.

**ವಿಶ್ವಾಧಿಕೋ ರುದ್ರೋ ಮಹರ್ಷಿಃ । ನ ದ್ವಿತೀಯಾಯತಸ್ಥೇ ॥**

ಶ್ರೀ ರುದ್ರನಿಗಿಂತ ಅಧಿಕರಿಲ್ಲ.

**ಬ್ರಹ್ಮ, ವಿಷ್ಣು, ರುದ್ರೇಂದ್ರಾಸ್ತೇ । ಸಂ ಪ್ರಸೂಯಂತೇ ॥**

ಎಂಬ ಶೃತಿವಾಣಿಯಂತೆ, ವಿಷ್ಣು ಬ್ರಹ್ಮಾದಿಗಳು, ಜನನ, ಮರಣ ಮತ್ತೂ ಆಣವಾದಿ ಮಲತ್ರಯಗಳಿಗೆ ಒಳ ಪಟ್ಟಿರುವರು.

ವಿಷ್ಣು ಕ್ಷತ್ರಿಯ, ಬ್ರಹ್ಮ ವೈಶ್ಯರಿರುವರು, ಶಿವನು ಬ್ರಾಹ್ಮಣೋತ್ತಮನೆಂದು ವೇದಗಳು ಸ್ಪಷ್ಟ ಪಡಿಸಿವೆ.

**ಈಶಾನಃ ಸರ್ವವಿದ್ಯಾನಾಂ । ಈಶ್ವರಃ ಸರ್ವ ಭೂತಾನಾಂ । ಬ್ರಹ್ಮಾಧಿಪತಿ । ಬ್ರಹ್ಮಣೋಧಿಪತಿ । ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ ॥**

ಸಮಸ್ತ ದೇವ ದಾನವ ಮಾನವಾದಿಗಳಿಗೆಲ್ಲಾ ಶಿವನು ಸರ್ವೋತ್ತಮ

ದೇವತಾ ಸಾರ್ವಭೌಮನೆನಿಸಿ ಸ್ತುತ್ಯನಿರುವನು. ಎಂಬ ಅಂಶವನ್ನರಿತ ಮಾಹೇಶ್ವರನು ಮಹಾ ದೇವನಲ್ಲಿ ಅನನ್ಯ ಭಾವೇನ ಶರಣಾಗತನಾಗಿರುವನು. ಮಾಹೇಶ್ವರನು ತನ್ನ ಪಂಚಪ್ರಾಣಗಳನ್ನು ಶಿವಾರ್ಪಿತಗೊಳಿಸಿ ಪಂಚಜ್ಞಾನೇಂದ್ರಿಯಗಳನ್ನು, ಇವುಗಳಿಗೆ ಒಡೆಯನಾದ ಮನಸ್ಸನ್ನು ಸಮ್ಯಗ್ ಭಾವೇನ ನಿಗ್ರಹಿಸಿ, ಸ್ಥಿತ ಪ್ರಜ್ಞನಾಗಿ ಸ್ಥೈರ್ಯದಿಂದಿರ ಬೇಕು. ಶಿವನಲ್ಲಿ ಪತಿವ್ರತೆಯಂತೆ ಏಕನಿಷ್ಠೆಯುಳ್ಳವನಾಗಿರಬೇಕು. ಹೀಗಿರುವುದರಿಂದ ಕ್ರಮೇಣ ಪೂರ್ಣ ಪ್ರಜ್ಞಾವಂತನಾಗುವನು.

**ತಸ್ಮಿನ್ ವಿಜ್ಞಾತೇ । ಸರ್ವಂ ವಿಜ್ಞಾತಂ ಭವತಿ ॥**

ಮಾಹೇಶ್ವರನು ಬುದ್ಧಿಯೋಗಕ್ಕೆ ಶರಣಾಗತನಾಗಿರುವನು. ಬ್ರಹ್ಮಜ್ಞಾನ ಲಿಂಗಾಂಗ ಸಾಮರಸ್ಯ ಜ್ಞಾನಾನು ಭವದಲ್ಲಿ ಬುದ್ಧಿ ಪೂರ್ವಕ ತಲ್ಲೀನನಾಗಿರ ಬೇಕು. ಹೀಗಿರುವುದರಿಂದ ಕ್ರಿಯಾಜ್ಞಾನ, ರಾಜಯೋಗ ಶಿವಯೋಗಾದಿಗಳಲ್ಲಿ ಧೀರೋದ್ಧಾರ ಭಾವದಿಂದ ಯಶಸ್ವಿಯಾಗಿ ತನ್ನ ವ್ರತವನ್ನು ಅವ್ಯಾಹತವಾಗಿ ಮುಂದುವರಿಸಲು ಶಕ್ತನಾಗುವನು. ಪರಶಿವ ಬ್ರಹ್ಮದಲ್ಲಿನ, ನಿಷ್ಠಾವಿದ್ಯೆ ಬುದ್ಧಿಯೋಗವೆನಿಸಿದೆ. ಲಕ್ಷಕ್ಕೆ ಒಬ್ಬ ಭಕ್ತ, ಹತ್ತು ಲಕ್ಷಕ್ಕೊಬ್ಬ ಮಾಹೇಶ್ವರ ಸಿಗುವುದು ಕಷ್ಟವಿರುತ್ತೆ. ಯಾಕೆಂದರೆ ಈ ಎರಡು ಸ್ಥಾನಗಳು ಪರಾಭಕ್ತಿಯು ಮತ್ತು ಸೂಕ್ಷ್ಮವಾದ ವೈರಾಗ್ಯ ಹಾಗೂ ವಿರಕ್ತಿ ಅಂತರ್ಬಾಹ್ಯೇಂದ್ರಿಯುಗಳಿಂದ ನಿಸ್ಪೃಹ ಭಾವದಿಂದಲೂ ಆಚರಣೆಯಲ್ಲಿ ಶಿವನು ನಲಿಯುವಂತೆ ತಾನೂ ನಿಜಕ್ಕೂ ಶುದ್ಧ ಸ್ಫಟಿಕ ಸಂಕಾಶನಾಗಿರಬೇಕು. ಕನಕ ಕಾಮಿನಿ ಕಾಂಚನಗಳ ನಿತ್ಯ ಸಂಪರ್ಕ ಹಾಗೂ ಅವುಗಳ ಮೇಲೆ, ಯತ್ಕಿಂಚಿತ್ತೂ ತನ್ನ ಅಧಿಖ್ಯವನ್ನು ಹಿಡಿತವನ್ನೂ ಮನಸಾಕ್ಷಿಯಾಗಿ ಇಟ್ಟುಕೊಂಡಿರಬಾರದು. ಕಾವಿಧಾರಿಗಳೂ ಸಹ ಗೃಹಸ್ಥರಂತೆ, ಧನ ಕನಕ ವಸ್ತು ವಾಹನಾದಿಗಳಲ್ಲಿ ಆಸಕ್ತಿಯಿಂದ ನಿತ್ಯ ವ್ಯವಹರಿಸುತ್ತ ಶ್ರೀಮಂತಿಕೆಯ ಗದ್ದುಗೆಯ ಮೇಲೆ ಕುಳಿತು ಬಿಗಿ ಮುಷ್ಟಿಯಿಂದ ವ್ಯವಹರಿಸಲು ಆರೂಢರಾದರೆ, ರಾಗಾದಿ ಪಾಶಬದ್ಧರಾಗಿ ಮಾನಸಿಕ ಬಂಧನಕ್ಕೊಳಗಾಗುವರು. ಈ ಘನ ಅಂಶವನ್ನು ಶ್ರೀ ಜ॥ ರೇಣುಕಾಚಾರ್ಯರು ಪರಿಣಾಮಕಾರಿಯಾಗುವಂತೆ ಪ್ರತಿಪಾದಿಸುತ್ತಾ, ಹೇ ಪರಮ ವೈರಾಗ್ಯ ಮೂರ್ತಿಯಾದ ಅಗಸ್ತ್ಯ ಸ್ವಲ್ಪ ಕೇಳು,

**ತಮೋ ಮೂಲಾಹಿ ಸಂಜಾತ । ರಾಗದ್ವೇಷಾದಿ ಪಾದಪಾಃ ।**
**ಶಿವಜ್ಞಾನ ಕುಠಾರೇಣ । ಛಿದ್ಯಂ ತೇ ಹಿ ನಿರಂತರಂ ॥**

(ಸಿ. ಶಿ. ಅ. ೧೩. ಶ್ಲೋ ೨೦)

ಇದೇ ವಿಷಯದಲ್ಲಿ ಶ್ರೀ ಕೃಷ್ಣಪರಮಾತ್ಮನು,

**ನಾಂ ತೋ ನಚಾದಿರ್ನಚ ಸಂಪ್ರತಿಷ್ಠಾ । ಅಶ್ವತ್ಥ ಮೇನಂ**
**ಸುವಿರೂಢ ಮೂಲಂ ॥ ಅಸಂಘ ಶಸ್ತ್ರೇಣ ದೃಢೇನ ಛಿತ್ವಾ ॥**

(ಗೀ. ಅ. ೧೫. ಶ್ಲೋ. ೩)

ಅಂದರೆ ತ್ರಿಗುಣ ಮಯ ಪ್ರಕೃತಿ ಸಂಬಂಧವುಳ್ಳ ಕನಕ, ಕಾಂಚನಗಳ ವ್ಯವಹಾರದಲ್ಲಿ ತಲ್ಲೀನನಾದ, ಯತಿಯಾಗಲಿ, ವಿರಕ್ತನಾಗಲಿ, ಸ್ವಾಮಿಯಾಗಲಿ, ಕಾಂಚನಾದಿಗಳನ್ನು ತನ್ನ ತನುಮನಗಳಿಂದ ಆದರಪೂರ್ವಕ ಸ್ಪರ್ಶಿಸಿದ್ದೇ ಆದರೆ ಮಾಹೇಶ್ವರ ಹಾಗೂ ವೀರಮಾಹೇಶ್ವರ ಧರ್ಮಕ್ಕೆ ಭಂಗವನ್ನುಂಟುಮಾಡಿದಂತಾಗುತ್ತೆ. ನಾನು ನನ್ನದು ಎಂಬ ಕರ್ತೃತ್ವ ಭೋಕ್ತೃತ್ವಗಳಿಂದ ಬಂಧಿತನಾಗುವನು. ಜಡ ಭರತನೆಂಬ ಮಹಾಯೋಗಿ ಸರ್ವವನ್ನು ಜಯಿಸಿದ ಋಷಿ, ತನ್ನ ಅವಸಾನ ಕಾಲದಲ್ಲಿ ತಾನು ಬಹು ಪ್ರೀತಿಯಿಂದ ಸಾಕುತ್ತಿದ್ದ ಕೋಮಲವಾದ ಜಿಂಕೆ ಮರಿಯನ್ನು ಸ್ಮರಿಸುತ್ತಾ ಅಸುನೀಗಿದ ಕಾರಣ, ಆ ಮಹರ್ಷಿ ಜಿಂಕೆ ಜನ್ಮವನ್ನು ಪಡೆದರೆಂದು ಜ್ಞಾನವಾಸಿಷ್ಟ ಮಹಾ ವೇದಾಂತ ಗ್ರಂಥದಲ್ಲಿ ಉಲ್ಲೇಖಿತವಾಗಿದೆ. ಅಂದ ಬಳಿಕ ಕಾವಿಧಾರಿ ವಿರಕ್ತರೂ, ಯತಿಗಳೂ ಶಿವಯೋಗಿಗಳು, ವೈರಾಗ್ಯ ವ್ರತಿಗಳೂ ಎಳ್ಳಿನ ಮೊನೆಯಷ್ಟು ಕನಕ, ಕಾಂಚನಗಳ ಬಗೆಗೆ ಆಸಕ್ತಿ, ಆಧಿಪತ್ಯ ಕನಸ್ಸಿನಲ್ಲೂ ಅಂಟಿರ ಬಾರದು.

ಶ್ರೀಮಂತಿಕೆಯ ಹಾಗೂ ಸ್ಥಾನ ಬಲದ ಪ್ರಭುತ್ವದಿಂದಾಗಿ ಸಾಸಿವೆಯಷ್ಟು ಅಭಿಮಾನ, ಅಭಿನಿವೇಶ ಅವರ ಅಂತರಂಗದಲ್ಲಿ ಮನೆಮಾಡಿಕೊಂಡಿದ್ದರೆ, ಆ ಯತಿ ತಿಲಕ ಸಹ ಜಡಭರತ ಮಹರ್ಷಿಗಳಿಗೆ ಬಂದೊದಗಿದ ಪ್ರಾಕೃತ ದುಸ್ಥಿತಿ ಯಂಥಾ ಸ್ವಾಮಿಗೂ ಬಿಟ್ಟದ್ದಲ್ಲ. ಕನಕ ಕಾಮಿನಿ ಕಾಂಚನಗಳ ಮಧ್ಯೇ ನಿರಂತರ ವ್ಯವಹರಿಸುವ ಪುರುಷರು ಯತಿಗಳೂ ಸ್ವಾಮಿಗಳೂ, ಮಣ್ಣು ಮಸಿಯಾಗುವರು. ಸರ್ವಜ್ಞನ ನುಡಿಯಿದು.

ಆದ್ದರಿಂದ, ॥ನಿಸ್ತ್ರೈಗುಣ್ಯೋಭವಾರ್ಜುನ॥ ತ್ರಿಗುಣಗಳಿಂದ ಅತೀತನಾಗು ಎಂಬ ಗೀತೋಕ್ತಿಯನ್ನು ತಮ್ಮ ನಿತ್ಯಾಚರಣೆಯಲ್ಲಿ ಕಟ್ಟು ನಿಟ್ಟಾಗಿ

ತಂದು ಮುಕ್ತ ಸ್ಥಿತಿಯಿಂದಿರ ಬೇಕು. ಈ ಕಾರಣದಿಂದ ಮಾಹೇಶ್ವರ, ವೀರ ಮಾಹೇಶ್ವರರನ್ನುದ್ದೇಶಿಸಿ, ಶ್ರೀ ರೇಣುಕಾಚಾರ್ಯರು ತಮೋಗುಣ ಜನ್ಯವಾದ ರಾಗದ್ವೇಶಾದಿಗಳೂ, ಆಸೆ, ಆಸಕ್ತಿ, ಅಹಂ ಕರ್ತೃತ್ವಾದಿಗಳು ಯತಿಪುಂಗವ ರನ್ನೂ, ಸಹ ನಿರ್ದಾಕ್ಷಣ್ಯವಾಗಿ ದುರ್ಗತಿಗೆ ಈಡುಮಾಡುವುವೆಂದರಿತು, ಮಹಾಚಾರ್ಯರು ಕರುಣೆಯಿಂದ ಇಂತಪ್ಪ ಪ್ರಾಕೃತ ಮೋಹ ಜಾಲವನ್ನು,

**ಶಿವಜ್ಞಾನ ಕುಠಾರೇಣ । ಛಿದ್ಯಂತೇಹಿ ನಿರಂತರಂ ॥**

ಜೀವಿಸಿ ಕೊಂಡಿರುವವರೆವಿಗೂ–ಶಿವಜ್ಞಾನ, ಶಿವವ್ರತ, ಶಿವಪೂಜೆ, ಜಪ ಶಿವಧ್ಯಾಸ ರೂಪ ಹರಿತ ಖಡ್ಗದಿಂದ ಕತ್ತರಿಸಿ, ಛಿಂದಿ ಬಿಂದಿ, ಚೂರ್ಣ ಪ್ರಚೂ ರ್ಣಗೊಳಿಸಿ ಸಾಗರದಲ್ಲೆಸೆದು, ವೀರಮಾಹೇಶ್ವರ, ಮಾಹೇಶ್ವರರು ಮಹಾವ್ರತ ವನ್ನು ಆಗಮೋಕ್ತ ವೀರಶಿವಾಚಾರ ವಿಧಿಗನುಸಾರ ಆಚರಿಸಿ, ಆಚಾರಲಿಂಗ, ಗುರು ಲಿಂಗಗಳ ಭಕ್ತಿ ಕೈಂಕರ್ಯಗಳನ್ನು ನಿಯಮಿತ ವಿಧಿಗನುಸಾರ ಅವಧಾನ ಭಕ್ತಿಯಿಂದ ಆಚರಿಸಿ ಮುಕ್ತರಾಗಿರೆಂದು ಆಚಾರ್ಯರೇಣುಕರು ಸರ್ವರನ್ನೂ ಎಚ್ಚ ರಿಸಿರುವರು, ಶ್ರೀ ಕೃಷ್ಣನು ಇದೇ ಅಂಶವನ್ನು ಪ್ರತಿಪಾದಿಸುತ್ತಾ, ಅರ್ಜುನ, ನಿಕೃಷ್ಟ ಪ್ರಕೃತಿ ಜನ್ಯ ರಾಗಾದಿ ಮೋಹಗಳು, ಪರ್ಣ ಶಾಲೆಗಳಲ್ಲಿ ದರ್ಭಾಸ ನಾಸೀನರಾಗಿ, ಕಂದ ಮೂಲಾದಿಗಳನ್ನು ಹಸಿವು ನಿವಾರಣೆ, ದೇಹಧಾರಣೆಗಾಗಿ ಕಿಂಚಿತ್ ಭಕ್ಷಿಸುತ್ತಾ ಒಮ್ಮೊಮ್ಮೆ ನಿರಾಹಾರಿಗಳಾದ ಸನ್ಯಾಸಿಗಳೂ, ಮಠಾ ಧಿಪತಿಗಳೂ, ಋಷಿ, ಮಹರ್ಷಿಗಳೂ ಸಹ ಕನಕ, ಕಾಮಿನಿ ಕಾಂಚನಗಳ ನಿಕಟ ಸಂಸರ್ಗಗಳಿಂದ ಪತಿತರಾಗಿರುವ ಕಾರಣ, ತ್ರಿಗುಣ ಜನ್ಯವಾದ, ಕರ್ತೃತ್ವ ಭೋಕ್ತೃತ್ವ ಅಹಂಭಾವ, ರಾಗಾದಿ ಬೇರುಗಳು ಅಂತಃಕರಣದಲ್ಲಿ ಬಹುಕಾಲ ದಿಂದಿದ್ದು ಆಳವಾಗಿ ಬೇರು ಬಿಟ್ಟಿರುವುದರಿಂದ, ಈ ಪ್ರಾಕೃತ ಬೇರುಗಳನ್ನು,

**"ಅಸಂಘ ಶಸ್ತ್ರೇಣ ದೃಢೇನ ಛಿತ್ವಾ"**—ಅಂದರೆ, ಕನಕ, ಕಾಂಚನಾ ದಿಗಳನ್ನು ಮಾಹೇಶ್ವರ, ವೀರಮಾಹೇಶ್ವರರು, ಯತಿಗಳೂ, ಸನ್ಯಾಸಿಗಳೂ, ಮಾನಸಿಕವಾಗಿಯೂ, ದೈಹಿಕವಾಗಿಯೂ, ಭಾವೇನ ಸಹ, ಕನಸ್ಸಿನಲ್ಲೂ ನೆನೆಯ ಬಾರದು ಮಾನಸಿಕವಾಗಿ ಚಿಂತೆಗೊಳಗಾಗ ಬಾರದು, ಹಸ್ತದಿಂದಲೂ ಸಹ ಮುಟ್ಟ ಬಾರದು ಯಾಕೆಂದರೆ ವಿರಕ್ತರಿಗೆ ಮಾಹೇಶ್ವರರಿಗೆ ಸನ್ಯಾಸಿಗಳಿ ಗೆಲ್ಲಾ ಈ ಮೂರು ಪದಾರ್ಥಗಳು ಅಸ್ಪೃಶ್ಯವೆನಿಸಿ ಅವರ ಮೋಕ್ಷಮಾರ್ಗಕ್ಕೆ ವ್ರತಕ್ಕೆ, ಆಚಾರಕ್ಕೆ ಮಾರಕವೆನಿಸಿರುವುವು. ಆದ್ದರಿಂದ ಇಂತಪ್ಪ ನಿಕೃಷ್ಟ

ವಸ್ತುಗಳ ಸಂಘದಿಂದ ಯತಿಗಳು ಮಾನಸಿಕವಾಗಿ ಅತಿ ದೂರವಿರ ಬೇಕೆಂಬುದೇ ಶ್ರೀಕೃಷ್ಣನ ಬೋಧಾಮೃತದ ಸಾರ. ಕರ್ಣೇಂದ್ರಿಯಗಳ ಮುಂಖಾಂತರ ಇವು ಹಲವು ಬಗೆಯಾಗಿ ಮನದೆದುರು ಬಂದು ನಿಂತು ಕಾಡುತ್ತವೆ. ವಿಚಕ್ಷಣಸಂಪನ್ನನಾದ ಮಾಹೇಶ್ವರನು ಅವುಗಳನ್ನು ತನ್ನ ಶಿವಯೋಗ ಶಕ್ತಿಯಿಂದ ಮೆಟ್ಟಿನಿಂತು ಜಿತೇಂದ್ರಿಯನಾಗಿರ ಬೇಕು. ಮಾಹೇಶ್ವರನ ಪ್ರಪ್ರಥಮ ಧರ್ಮ ವೇಇದು. ಈತ ಸಮದರ್ಶಿ, ಸಂಯಮಿ ಸಹನ ಶೀಲನು, ರಾಗದೂರನು, ಉದಾರಿ, ದಯಾಮಯನು. ಒಟ್ಟಿನಲ್ಲಿ ಮಾಹೇಶ್ವರನು ಸರ್ವಭೂತಹಿತಕರನು. ಶ್ರೀ ಬಸವಣ್ಣನವರು ಸಹ ಮಹಾ ವಿರಕ್ತನಾದ ಮಾಹೇಶ್ವರನು ಹಾಗೂ ವೀರಮಾಹೇಶ್ವರನು, ಪರಮ ವಿರಕ್ತರೂ ಸಹ—

**ಹೊನ್ನಿನೊಳಗೊಂದೊರೆಯ । ಸೀರೆಯೊಳಗೊಂದೆಳೆಯ ।**

**ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ । ನಿಮ್ಮಾಣೆ ನಿಮ್ಮ**

**ಪುರಾತರಾಣೆ ॥**

ಎಂದು ಘೋಷಿಸಿರುವುದು, ಪ್ರಾಕೃತ ಗುಣಂಗಳಿಗೆ ಅಂಟಿಕೊಂಡಿರುವ ಯತಿವರ್ಯರಿಗೆ ಮತ್ತೂ ಎಲ್ಲಾ ಭಕ್ತ ಮಹಾಶಯರಿಗೆ ಹೆಣ್ಣು, ಮಣ್ಣು, ಹೊನ್ನನ್ನು ಬಯಸಿ ಶೇಖರಿಸುವ ಮನೋಭಾವವನ್ನು ಕಟುವಾಗಿ ಖಂಡಿಸಿದ್ದಾರೆ. ಸಂಸ್ಮರಣೀಯ ಪರಮ ವಿರಕ್ತ ಮುನಿಶ್ರೇಷ್ಠನೆಂದರೆ ನನಗೆ ತಿಳಿದ ಹಾಗೆ. ಶುಕ ಬ್ರಹ್ಮ (ಶ್ರೀ ಶುಕಾಚಾರ್ಯರು) ಜನಕ ಮಹಾರಾಜನು ಕಠಿನ ಪರೀಕ್ಷೆಗಳಿಗೆ ಶುಕಾಚಾರ್ಯರನ್ನು ಒಳಪಡಿಸಿದರೂ ಶುಕ ಬ್ರಹ್ಮ ಅಂಜದೆ ಅಳುಕದೆ, ಕಂಪನಗೊಳ್ಳದೆ ಎಲ್ಲಾ ಪರೀಕ್ಷೆಗಳಲ್ಲೂ ಸಂತೃಪ್ತಿಯಾಗಿ ನೆಡೆದುಕೊಂಡರು ಜನಕ ಮಹಾ ರಾಜನು ಅತ್ಯಾಶ್ಚರ್ಯದಿಂದ ಶುಕಾಚಾರ್ಯರನ್ನು ಗೌರವ ಆದರಗಳಿಂದ ಸ್ವಾಗತಿಸಿ ಸನ್ಮಾನಿಸಿದನು. ಇನ್ನೊಬ್ಬ ಮಹಾನೀಯರೆಂದರೆ, ಶ್ರೀ ಸದಾ ಶಿವ ಬ್ರಹ್ಮೇಂದ್ರರು ಇವರು ತಮಿಳು ನಾಡಿನ ಪ್ರತಿಷ್ಠಿತರಾದ ಮಹಾ ಅವಧೂತ ಪುರುಷರು.

**ಸರ್ವಂ ಶಿವ ಮಯಂ ಜಗತ್ । ರೇ ರೇ ಸರ್ವಂ ಬ್ರಹ್ಮ**

**ಮಯಂ ಜಗತ್ ॥**

ಎಂಬ ಘನ ನಿರ್ಧಾರ ಇವರದು.

ಶಿವ ಏವ ಜಗತ್ಸರ್ವಂ ಶಿವಾದನ್ಯನ್ನ ವಿದ್ಯತೇ ॥'

ಎಂಬ ಎಕೈಕ ನಿರ್ಧಾರ ಇವರದು. ದೇಹಾಭಿಮಾನ, ದೇಶಾಭಿಮಾನ, ಭಾಷಾಭಿಮಾನಗಳನ್ನು ಸಂಪೂರ್ಣ ತ್ಯಜಿಸಿ, ಕೇವಲ ಕೌಪೀನಧಾರಿಗಳಾಗಿದ್ದ ಯತಿರಾಟ್ ಶ್ರೀ ಸದಾಶಿವ ಬ್ರಹ್ಮೇಂದ್ರರು. ಇವರ ಜೀವಂತ ಮಹಾ ಸಮಾಧಿ ತಮಿಳುನಾಡಿನ ತಿರುಚಿರಾಪಳ್ಳಿ ಜಿಲ್ಲ, ಕರೂರ್ ಪಟ್ಟಣಕ್ಕೆ ಹತ್ತು ಮೈಲಿ ದೂರದ ಪ್ರದೇಶದಲ್ಲಿ ಇಂದಿಗೂ ಪ್ರಕಾಶಿತವಾಗಿದೆ. ಶ್ರೀ ಶುಕಾಚಾರ್ಯರು ಮತ್ತೂ ಶ್ರೀ ಸದಾಶಿವ ಬ್ರಹ್ಮೇಂದ್ರ ಪರಿವ್ರಾಜಕಾಚಾರ್ಯರು ಮಹಾ ವಿರಕ್ತ ಹಾಗೂ ವೀರಮಾಹೇಶ್ವರರೆಂದು ಧಾರಾಳವಾಗಿ ಹೇಳ ಬಹುದು. ಯಾಕೆಂದರೆ, ಕನಕ, ಕಾಮಿನಿ ಕಾಂಚನಾದಿಗಳು ಇವರ ಬಳಿ ಸುಳಿದಾಡಲು ಹೆದರುತ್ತಿದ್ದವು ಈ ಉದ್ದಾಮ ಆತ್ಮವೇತ್ತ ಮಾಹೇಶ್ವರರ ಪರಿಶುದ್ಧಾಂತಃಕರಣದಲ್ಲಿ, ಶಿವ ಭಾವ, ಪರಶಿವಭಾವ ಬಲಿತು ತದಾಕಾರದಲ್ಲಿ ಸ್ಥಿರಗೊಂಡು ತತ್ಫಲವಾಗಿ,

ಶಿವ ಏಕೋ ಧ್ಯೇಯಃ ಶಿವಂಕರಃ । ಸರ್ವಮನ್ಯತ್ಪರಿತ್ಯಜ್ಯ ॥

ಎಂಬ ಸಂಕಲ್ಪ ಈ ವಿರಕ್ತ ಮಹಾಪುರುಷರದು.

ಭೋ ಕಲ್ಯಾಣ ಮಹಾ ಭಾಗ । ಶಿವಜ್ಞಾನ ಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ । ರಕ್ಷಮಾಂಭವ ರೋಗಿಣಂ ॥
ಬ್ರಹ್ಮಾದಿ ದೇವತಾ ಜಾಲಂ ।ಮೋಹಿತಂ ಮಾಯಯಾ ಸದಾ ।
ಅಶಕ್ತಂ ಮುಕ್ತಿದಾನೇ ತು । ಕ್ಷಯಾತಿಶಯ ಸಂಯುತಂ ॥
ಶಿವಸ್ತುತಿ ರಸಾಸ್ವಾದ । ಮೋದಮಾನ ಮನಾಃ ಶುಚಿಃ ॥
ಶಿವೋತ್ಕರ್ಷ ಪ್ರಮಾಣಾನಾಂ । ಸಂಪಾದ ನ ಸಮುದ್ಯತಃ ॥
(ಶ್ಲೋ. ೧೧, ೧೬)

## ಅಂಗಸ್ಥಲ ೧೬. ॥ ಮಾಹೇಶ್ವರ ಪ್ರಶಂಸಾ ಸ್ಥಲ ॥

(ಪರಿ ೧೦)

ಶ್ರೀ ವಿಷ್ಣು ಬ್ರಹ್ಮಾದಿಗಳು ಯೋಗ ಮಾಯಾಜಾಲಕ್ಕೊಳ ಪಟ್ಟು ಜನನ ಮರಣ ಶೃಂಖಲೆಗಳಿಂದ ಅಡಿಗಡಿಗೆ ಬಾಧಿತರಾಗುತ್ತಲಿರುವರು. ಶ್ರೀ ಮಹಾ ವಿಷ್ಣುವಿನ ದಶಾವತಾರಗಳೇ ನಿದರ್ಶನವಿರುವುವು. ಬ್ರಹ್ಮ ದೇವೇಂದ್ರಾ

ದಿಗಳು ಇದಕ್ಕೆ ಹೊರತಲ್ಲ. ಆದ ಕಾರಣ ಇವರು ಸಾಯುಜ್ಯ ಮೋಕ್ಷ ಪ್ರದಾತರಲ್ಲ.

**ಸರ್ವಧರ್ಮಾನ್ಪರಿತ್ಯಜ್ಯ | ಮಾಮೇಕಂ ಶರಣಂ ವ್ರಜ |**

**ಅಹಂ ತ್ವಾ ಸರ್ವ ಪಾಪೇ ಭ್ಯೋ | ಮೋಕ್ಷ ಯಿಷ್ಯಾಮಿ ಮಾ**

**ಶುಚಃ ||**

(ಗೀ. ಅ. ೧೮ ಶ್ಲೋ ೬೬)

ಅರ್ಜುನಾ ! ನನ್ನನ್ನೇ ಶರಣು ಹೊಕ್ಕು ನಂಬಿದರೆ ನಿನ್ನನ್ನು ಸರ್ವ ಪಾಪಗಳಿಂದ ಮುಕ್ತಗೊಳಿಸಿ, ಮೋಕ್ಷನೀಯುವೆನೆಂದು ಆಶ್ವಾಸನೆ ನೀಡಿರುವನು ವೈಷ್ಣವ ಸಿದ್ಧಾಂತದ ಮೋಕ್ಷ ಸ್ಥಿತಿ ಬೇರೆ ವಿಧವಾದುದು. ಇಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯವೆಂಬ ಮೂರು ತೆರನಾದ ಮೋಕ್ಷಾನಂದ ಇರುತ್ತೆ. ಸಾಯುಜ್ಯ ಮೋಕ್ಷ ಇಲ್ಲಿ ಅಂಗೀಕಾರವಿಲ್ಲ. "ಮೋಕ್ಷ ಯಿಷ್ಯಾಮಿ" ಎಂಬ ಬಗೆಗೆ ಮೇಲುಕ್ತವಾದ ತ್ರಿವಿಧ ಸ್ಥಾನಗಳೆನಿಸಿವೆ. ಇಲ್ಲಿ ಜೀವರುಗಳು ತಮ್ಮ ವ್ಯಕ್ತಿತ್ವವನ್ನುಳಿಸಿ ಕೊಂಡು, ಶ್ರೀಮನ್ನಾರಾಯಣನ ಸನ್ನಿಧಿಯ ಆನಂದವೇ ಇಲ್ಲಿ ನಿರತಿಶಯ ಸುಖ ಅಥವಾ ಮೋಕ್ಷವೆನಿಸಿದೆ. ವೀರಶೈವದ. ಶಿವಾದ್ವೈತ ಸಿದ್ಧಾಂತದಲ್ಲೂ ಹಾಗೂ ಅದ್ವೈತ ಸಿದ್ಧಾಂತದಲ್ಲೂ ಸಾಯುಜ್ಯ ಮೋಕ್ಷವೇ ಅಂಗೀಕೃತವಿರುವುದು. ನೀರಲ್ಲಿ ನೀರು, ಹಾಲಿನಲ್ಲಿ ಹಾಲು, ಜ್ಯೋತಿಯಲ್ಲಿ ಜ್ಯೋತಿ ಸಮರಸದಿಂದ ವಿಲೀನವಾಗುವಂತೆ ಮುಕ್ತಜೀವಾತ್ಮನು (ಅಂಗನು) ಪರಶಿವ ಬ್ರಹ್ಮದಲ್ಲಿ ಮಹಾ ಗುರು ಕೃಪೆಯಿಂದ ವಿಲೀನನಾಗುವನು. ಈ ಪರಮ ಸ್ಥಿತಿಯನ್ನು,

**ನ ಚ ಪುನರಾವರ್ತತೇ | ನ ಚ ಪುನರಾವರ್ತತೇ ||**

ಎಂದು ಶೃತಿ ಉದ್ಘೋಶಿಸುತ್ತಲಿದೆ. ಅಂದರೆ ಸಾಯುಜ್ಯ ಮೋಕ್ಷದ ನಂತರ ಪುನರಾವರ್ತಿ ಅಲ್ಲಿಂದ ಜೀವಾತ್ಮರು ಹಿಂದಿರುಗರು. ವೈಷ್ಣವ ಹಾಗೂ ತಮಿಳು ನಾಡಿನ ಶೈವ ಸಿದ್ಧಾಂತಗಳಂತೆ ವಿಲೀನ ಪೊಪ್ಪರು. ಶ್ರೀ ಸೂರ್ಯ ನಾರಾಯಣನ ಅಖಂಡ ದೇದೀಪ್ಯಮಾದ ಪ್ರಕಾಶದಲ್ಲೂ ಸಹ ನ ಭೋ ಮಂಡಲ ದಲ್ಲಿ ಲಕ್ಷಾಂತರ ನಕ್ಷತ್ರಗಳು ತಮ್ಮ ವ್ಯಕ್ತಿತ್ವಗಳನ್ನು ಉಳಿಸಿ ಕೊಂಡೇ, ಸೂರ್ಯನ ಮಹಾ ತೇಜಸ್ಸಿನಲ್ಲಿ ಬೆಳಗುತ್ತಿರುತ್ತವೆಯಷ್ಟೇ ವಿನಃ ಸೂರ್ಯನ

ಬಿಂಬದಲ್ಲಿ ಅಂತರ್ಗತವಾಗುವುದಿಲ್ಲ ಈ ರಹಸ್ಯವನ್ನರಿತ ಮಾಹೇಶ್ವರ ವೀರ ಮಾಹೇಶ್ವರರು, ವಿಷ್ಣು ಬ್ರಹ್ಮಾದಿಗಳಿಗೆ ಒಡೆಯ ಪರಶಿವನಲ್ಲಿ ದೃಢ ಭಕ್ತಿಯಿಂದ ಆತ್ಮಾರ್ಪಣಗೈದಿರ್ಪರು ಶ್ರೀಮನ್ನಾರಾಯಣನು ಒಮ್ಮೆ ಶ್ರೀ ವೈಕುಂಠದಲ್ಲಿ ಶ್ರೀ ಮಹಾಲಕ್ಷ್ಮಿಯ ಪ್ರಶ್ನೆಗೆ ಉತ್ತರಿಸುತ್ತಾ ದೇವೀ !

ವೇದಕರ್ತಾ ಚ ಬ್ರಹ್ಮ । ಅಹ ಮೇವ ಜಗತ್ಕರ್ತ ಮಮ

ಕರ್ತಾ ಮಹೇಶ್ವರಃ ॥

ಎಂದು ಸ್ಪಷ್ಟ ಪಡಿಸಿರುವನು.

ಇಡಬೇಕೀಶ್ವರನಲ್ಲಿ । ಭಕ್ತಿ ರಸಮಂ ॥

ಎಂಬುದು ಮಾಹೇಶ್ವರನ, ಏಕೈಕ ಧ್ಯೇಯ, ಬುದ್ಧಿ ಯೋಗ ನಿಷ್ಠಾಗರಿಷ್ಟ ಮಾಹೇಶ್ವರನು, ವಿಷಯಾದಿಗಳಿಂದ ಕೂಡಿದ ಇಂದ್ರಿಯಗಳ ಚಾಂಚಲ್ಯಕ್ಕೊಳಗಾಗದೆ, ಚಿತ್ತಸ್ಥೈರ್ಯದಿಂದಿರ ಬೇಕು. ಚಿತ್ತ ಭ್ರಮೆ ವಿನಾಶಕ್ಕೆ ಕಾರಣ

ಆತ್ಮಾನಂ ರಥಿನಂ ವಿದ್ಧಿ । ಶರೀರಂ ರಥಮೇವತು ।

ಬುದ್ಧಿಂತು ಸಾರಥಿಂ ವಿದ್ಧಿ । ಮನಃ ಪ್ರಗ್ರಹ ಮೇವಚ ॥

ಇಂದ್ರಿಯಾಣಿ ಹಯಾನಾಹು । ರ್ವಿಷಯಾಂ ಸ್ತೇಷು ಗೋಚ

ರ್ರಾ । ಆತ್ಮೇಂದ್ರಿಯ ಮನೋ ಯುಕ್ತಂ । ಭೋಕ್ತ್ಯೇತ್ಯಾ

ಹು ರ್ಮನೀಷಣಃ ॥

(ಕಠೋಪನಿಷತ್)

ಅಂದರೆ, ಶರೀರವೊಂದು ಅಪೂರ್ವ ರಥ ಜೀವಾತ್ಮನು ರಥಿಕನಾಗಿ ಕುಳಿತಿರುವನು. ಪಂಚ ಜ್ಞಾನೇಂದ್ರಿಯಗಳೇ ಕುದುರೆಗಳು ಇವು ಹೊರಮುಖದಲ್ಲಿನ ಶಬ್ಧ, ಸ್ಪರ್ಶ, ರೂಪ, ರಸ, ಗಂಧಗಳೆಂಬ ರಾಜ ಬೀದಿಗಳಲ್ಲಿ ರಥದೊಂದಿಗೆ ಓಡುತ್ತಿರುವವು ಇವುಗಳ ಓಟವನ್ನು ಮನಸ್ಸೆಂಬ ಬಲವಾದ ಕಡಿವಾಣಗಳಿಂದ ಬುದ್ಧಿಯೆಂಬ ಸಾರಥಿ ಬಿಗಿ ಹಿಡಿಪ್ಪು, ಈ ಕುದುರೆಗಳ ಮುನ್ನೋಟವನ್ನು ವಶಪಡಿಸಿ ಕೊಂಡು ಬುದ್ಧಿ ಮನೋಯುಕ್ತವಾದ ಲಿಂಗಾಂಗ ಸಾಮರಸ್ಯ ರೂಪ ಪರಮ ಪದವನ್ನು ಅಂದರೆ ಸಾಯುಜ್ಯ ಮೋಕ್ಷಾನಂದವನ್ನು ಹೊಂದುವುದು.

ವೀರಮಾಹೇಶ್ವರರ ಮುಖ್ಯ ಧ್ಯೇಯವೆನಿಸಿದೆ. ಪಂಚೇಂದ್ರಿಯಗಳೆಂಬ ಕುದುರೆಗಳನ್ನು ಹಿಡಿದು ಅವುಗಳ ಮುನ್ನೋಟವನ್ನು ಹಿಂದಿರುಗಿಸುವಂತೆ ಚಿತ್ತ ವೃತ್ತಿಗಳನ್ನು ಹಿಡಿದು ನಿಲ್ಲಿಸಲು ಸಾಧ್ಯವಿಲ್ಲ. ಚಿತ್ತವೃತ್ತಿಗಳು ಅಹೋರಾತ್ರಿ ಅವ್ಯಾಹತವಾಗಿ ಸಮುದ್ರದ ಅಲೆಗಳಂತೆ ಕೋಟಿ ಕೋಟಿ ವೃತ್ತಿಗಳು ಬಿಡುವಿಲ್ಲದೆ ಮನಸೆಂಬ ದಡವನ್ನು ಅತಿ ಭೀಷಣವಾಗಿ ಬಡಿಯುತ್ತಿರುವುದರಿಂದ ಅವುಗಳನ್ನು ನಿರೋಧಿಸಲು ಸಾಧ್ಯವಿಲ್ಲ. ಶ್ರೀ ಪತಂಜಲಿ ಮಹರ್ಷಿಗಳು "ಚಿತ್ತವೃತ್ತಿ ನಿರೋಧಃ ಯೋಗಃ" ಎಂದು ತಮ್ಮ ಯೋಗ ಸೂತ್ರದಲ್ಲಿ ರಚಿಸಿರುವುದು ಆಶ್ಚರ್ಯವಿರುತ್ತೆ ? ಯಾಕೆಂದರೆ ಚಿತ್ತವೃತ್ತಿಗಳನ್ನು ಎಷ್ಟೆಂದು ನಿಲ್ಲಿಸುವುದು. ಎಷ್ಟು ಕಾಲದವರವಿಗೆಂದು ನಿರೋಧಿಸಲು ಸಾಧ್ಯ. ಅಷ್ಟಾಂಗ ಯೋಗ ವಿಶಾರದರಾದ ಶ್ರೀ ಪತಂಜಲಿ ಮಹರ್ಷಿಗಳು ನಂತರ ಊಹಿಸಿ ಮೇಲುಕ್ತ ಸೂತ್ರಕ್ಕೆ ತಿದ್ದು ಪಡಿತಂದು "ಸ್ತ್ರೀ ವಿಷಯುಕ ಚಿತ್ತ ವೃತ್ತಿ ನಿರೋಧಃ ಯೋಗಃ" ಎಂಬ ಸಮಾಧಾನ ಹೊಂದಿರುವರು. ಇದು ಸಹ ಸಮರ್ಪಕವೆನಿಸಿಲ್ಲ. ದೇಹವಿರುವವರೆವಿಗೂ ಸ್ತ್ರೀ ವಿಷಯ ಚಿತ್ತವೃತ್ತಿಗಳು ಅಂಗದಲ್ಲಿ ಸಂಸ್ಕಾರ ರೂಪದಿಂದ, ರಕ್ತಗತ ಅಸ್ತಿಗತವಾಗಿರುವುದರಿಂದ ಪದೆ ಪದೆ ಹಾಲುಕ್ಕುವಂತೆ ಕಾಮಾದಿಗಳು ಉಕ್ಕೇರುತ್ತಿರುವುವು. ಇವನ್ನು ಪೂರ್ಣ ನಿರೋಧಿಸಲು ಯಾರಿಂದಲೂ ಸಾಧ್ಯವಿಲ್ಲ.

**ನ ಜಾತು ಕಾಮಃ ಕಾಮಾನಾ । ಮುಪಭೋಗೇನ ಶಾಮ್ಯಾತಿ।**

**ಹವಿಷಾ ಕೃಷ್ಣವರ್ತ್ಮೇವ । ಭೂಯ ಏವಾಭಿವರ್ಧತೇ ॥**

ಅಂದರೆ ಕಾಮವನ್ನು ನೂರು ವರ್ಷ ಕಾಲ ಅನುಭವಿಸಿ, ಅದರ ಸೊಕ್ಕನ್ನು ಅಡಗಿಸಿ ನಾಶ ಗೊಳಿಸುವೆನೆಂದು ಶಪಥ ಮಾಡುವ ಧೀರರು, ಅನಂಗ ಮನ್ಮಥನಿಗೆ ಮುಗ್ಧ ಭಾವದಿಂದ ಶರಣಾಗತರಾಗಿ ತಲೆ ಭಾಗಿಸಿರುವರು. ಕಾಮನು ಪ್ರತಿಷ್ಠಿತರ ಹಿಡಿತಕ್ಕೆ ಸಿಕ್ಕದೆ ಕುಪಿತನಾಗಿ ಅಂಥವರ ಮೇಲೆ ತನ್ನ ಪ್ರತಾಪವನ್ನು ದಶಾಂಷವಾಗಿ ಅವರ ತ್ಯಾಗಾಂಗವನ್ನು ಛಿದ್ರಗೊಳಿಸುವನು. ದೇವ, ದಾನವ ಮಾನವರೆಲ್ಲಾ ಅನಂಗನ ಜಯಿಸಲಾಗದೆ ಶರಣಾಗಿರುವರು.

ಇತ್ಯಾದಿ ಕಾರಣಗಳಿಂದ ಪತಂಜಲಿ ಋಷಿಗಳ,

**ಸ್ತ್ರೀ ವಿಷಯುಕ ಚಿತ್ತವೃತ್ತಿ । ನಿರೋಧಃ ॥**

ಎಂಬ ತಿದ್ದುಪಡಿ ನಿರರ್ಥಕವೆನಿಸಿದೆ ವಿಷಯ ಇಷ್ಟೊಂದು ಕಠಿನವಿರಲು, ಮಾಹೇಶ್ವರನು ಅನಂಗ ಮನ್ಮಥನನ್ನು ನಿರ್ನಾಮ ಗೊಳಿಸುವುದು ತಾನೆ ಹೇಗೆ? ವೇದವ್ಯಾಸ, ವಸಿಷ್ಠ, ಅಗಸ್ತ್ಯ, ಗೌತಮ, ಅತ್ರಿ, ಜಾಬಾಲಿ, ಜಮದಗ್ನಿ, ವಿಶ್ವಾಮಿತ್ರಾದಿ ಮಹರ್ಷಿಗಳು, ಮದ್ಮಥ ವಿಜಯ ದುರ್ಭರವೆಂದು ಅರಿತು ಕೌಟುಂಬಿಕ ಜೀವನವನ್ನು ಆಳವಡಿಸಿ ಕೊಂಡು ತಪಸ್ವಿಗಳಾಗಿದ್ದರು. ಇವ ರಂತಲ್ಲದೆ ಶ್ರೀ ದೂರ್ವಾಸ ಮುನಿ, ಕಣ್ವ ಋಷಿ, ಭೀಷ್ಮಾಚಾರ್ಯ, ಶ್ರೀ ಶುಕಾಚಾರ್ಯ, ಶ್ರೀ ವೀರಾಂಜನೇಯ, ಶ್ರೀ ಸದಾ ಶಿವ ಬ್ರಹ್ಮೇಂದ್ರ ಅವ ಭೂತರಂಥಾ ಅಸ್ಖಲಿತ ಬ್ರಹ್ಮಚಾರಿ ತಪೋನಿಷ್ಠಾಗರಿಷ್ಟರೂ ಮದನ ವ್ಯಾಮೋಹವನ್ನು ಮರ್ಧನ ಮಾಡಿದ್ದರು ಲೌಕಿಕಾಸಕ್ತಿಗಳಿಗೆ ವಶವರ್ತಿಯಾ ದವರು ಕಾಮನನ್ನು ತುಳಿದು ಹಾಕುವೆನೆಂಪರೆ—

**ಹವಿಷಾ ಕೃಷ್ಣವರ್ತ್ಮೇವ । ಭೂಯ ಏವಾಭಿ ವರ್ಧತೇ ॥**

ಉರಿಯುವ ಯಜ್ಞ ಕುಂಡದಲ್ಲಿ ನೂರಾರು ತುಪ್ಪದ ಕೊಡಗಳನ್ನು ಸುರಿದು ಆ ತುಪ್ಪದಿಂದ ಉರಿಯನ್ನು ಆರಿಸಲು ಯತ್ನಿಸುವ, ಭಗ್ನಮನೋ ರಥ ಪ್ರಯತ್ನದಂತಾಗುತ್ತೆ. ತುಪ್ಪವನ್ನು ಮೇಲಿಂದ ಮೇಲೆ ಸುರಿದಂತೆ ಉರಿಯ ಕರಾಳ ನಾಲಗೆಗಳು, ಸಹಸ್ರ ಕರಾಳಾಕೃತಿಯಿಂದ ದಶದಿಕ್ಕುಗಳಲ್ಲೂ ಹರಡಿ ವಿಘಾತವುಂಟು ಮಾಡುವಂತೆ, ಕಾಮಾಗ್ನಿ ಜ್ವಾಲೆ ಮನುಷ್ಯನನ್ನು ವಿಕೃತಿಗೊಳಿಸಿ, ಆವನ ದೇಹ ಶಕ್ತಿಯನ್ನು ಹೀರಿ ಮೃತಪ್ರಾಯನನ್ನಾಗಿಸಿ ಬಿಡುವುದು. ಇಂತಪ್ಪ ಸನ್ನಿವೇಷಗಳ ಮಧ್ಯೇ, ಮಾಹೇಶ್ವರ, ವೀರಮಾಹೇ ಶ್ವರರೂ, ವಿರಕ್ತರೂ, ಸನ್ಯಾಸಿಗಳೂ ಅಂತರೇಂದ್ರಿಯಗಳ ನಿಗ್ರಹದಿಂದ ಕಾಮ ವೃತ್ತಿಗಳನ್ನು ನಿಶ್ಶೇಷವಾಗಿ ನಿರೋಧಿಸುವ ಕಾರ್ಯ ದುಸ್ಥರವೆನಿಸಿದೆ. ಇಂತಪ್ಪ ಸಂದಿಗ್ಧ ಸ್ಥಿತಿಯನ್ನು ಯಶಸ್ವಿಯಾಗಿ ಕಾರ್ಯಗತ ಗೊಳಿಸಲು, ಪೂರ್ಣ ಪ್ರಜ್ಞರಾದ ಶ್ರೀನಂದಿಕೇಶ್ವರ ಶಿವಾಚಾರ್ಯರು ಸಮುದ್ರದ ಅಸಂಖ್ಯಾತವಾದ ತರಂಗಗಳು ನಿರಂತರ ಮೇಲೆ ಹಾರಿ, ನೆಗೆದು, ಧಿಮ್ಮಿ ಉಕ್ಕೇರುತ್ತಿರುವಂತೆ, ಅಂತರಂಗದ ಚಿತ್ತವೃತ್ತಿಗಳು ಸಹಜವಾಗಿ ಆನಂತಾನಂತ ರೀತಿಯಲ್ಲಿ ಉದ್ಭವಿಸಿ ಭೀಕರ. ಕಲುಷಿತ ವಾತಾವರಣ ಉಂಟು ಮಾಡುತ್ತಲೇ ಇರುವಂತೆ ಮುಂದು ವರಿಯುತ್ತಿರುವುವು. ಈ ವೃತ್ತಿಗಳನ್ನು ತಡೆಯುವುದು ಹೇಗೆ ?

**ಸಾಮುದ್ರೋಹಿ ತರಂಗಃ । ಕ್ವಚನ ತಾರಂಗೋ ನ ಸಮುದ್ರಃ॥**

ಸಮುದ್ರದಿಂದ ಅಲೆಗಳೇ ಹೊರತು ಅಲೆಗಳಿಂದ ಸಮುದ್ರವಲ್ಲ. ಸಂಕಲ್ಪ ವಿಕಲ್ಪಭಾವದಿಂದ ಚಿತ್ತವೃತ್ತಿಗಳ ಸಮ್ಮೇಳನ ಭಾವವನ್ನು ಶಿವ ಭಾವವನ್ನಾಗಿ ಸಿದ್ಧಲ್ಲಿ ಎಲ್ಲ ಇಂದ್ರಿಯಗಳೂ, ಚಿತ್ತವೃತ್ತಿಗಳು ವಿಕೃತಿ ಗೊಳ್ಳದೆ ಶಿವಂಕರವಾಗುವುವು. ಅಖಿಲ ಪ್ರಾಕೃತಿಕ ವಿಷಯಗಳು ಅನಾದಿ ಕಾಲದಿಂದ ನರನನ್ನು ಬೆನ್ನು ಹತ್ತಿರುವ ಚಿತ್ತವೃತ್ತಿಗಳನ್ನು ಶಿವಚಿಂತನೆಯೊಂದಿಗೆ ಶಿವಾಕಾರವಾಗಿ ಶಿವಂಕರವಾಗಿ, ಶಿವಾಭಿನ್ನವಾಗಿ, ರೂಪಿಸುವುದು ಉತ್ತಮ.

**ಶಿವಾರ್ಥಕಾರ್ಯ ಸಂಪನ್ನಃ । ಶಿವಾಗಮ ಪರಾಯಣಃ ।**

**ಶಿವಸ್ತುತಿ ರಸಾಸ್ವಾದ । ನೋದ ಮಾನ ಮನಾಃ ಶುಚಿಃ ॥**

**ಶಿವೋತ್ಕರ್ಷ ಪ್ರಮಾಣಾನಾಂ । ಸಂಪಾದ ನ ಸಮುದ್ಯತಃ ॥**

ಎಂಬಂತೆ ಸಮಸ್ತ ಚಿತ್ತವೃತ್ತಿಗಳನ್ನು ನಿರೋಧಿಸುವುದಕ್ಕೆ ಬದಲಾಗಿ ಶಿವ ವ್ರತ, ಶಿವಚಿಂತನೆ, ಶಿವಪೂಜೆ, ಶಿವಮಂತ್ರಜಪ, ಶಿವ ಸ್ತೋತ್ರ. ಶಿವ ಜ್ಞಾನ, ಶಿವಧ್ಯಾನಿದಿ ಯಜ್ಞದಲ್ಲಿ ಸಮಸ್ತ ಚಿತ್ತವೃತ್ತಿಗಳು ಪೂರ್ಣ ತೋಯ್ದು, ಪರಿಪಾಕ ಗೊಂಡು, ಶಿವಾಭಿದಾನದಿಂದ ಪರಿವರ್ತನೆಗೊಂಡು,

**ಯದ್ಯತ್ಕರ್ಮ ಕರೋಮಿ । ತತ್ತದ ಖಿಲಂ । ಶಂಭೋ ತವಾರಾಧನಂ ॥**

ಎಂಬಂತಾದರೆ, ಮಾಹೇಶ್ವರ ವೀರಮಾಹೇಶ್ವರರು ಅವರ ಪರಮ ಪವಿತ್ರವಾದ ಪಥದಿಂದ ಮೇಲೇರಲು ಅವಕಾಶವಾಗುವುದೆಂದು ಶ್ರೀ ನಂದಿಕೇಶ್ವರ ಶಿವಾಚಾರ್ಯರು ತಮ್ಮ ಸ್ವಾನುಭೂತಿಯಲ್ಲಿ ಕಂಡನುಭವಿಸಿ ಜಗತ್ತಿಗೆ ಕರುಣೆಯಿಂದ ತಮ್ಮ ಸದಭಿಪ್ರಾಯವನ್ನು ಪ್ರಕಾಶಗೊಳಿಸಿ ಮಹೋಪಕಾರವನ್ನು ಮಾಡಿರುತ್ತಾರೆ. ಪಂತಜಲಿ ಸೂತ್ರ ಇಲ್ಲಿ ನಿಲ್ಲುವುದಿಲ್ಲ.

ಇಂತಪ್ಪ ಮಹೋನ್ನತವಾದ ವ್ರತ ಸಿದ್ಧಿಸ ಬೇಕಾದರೆ,

**ಪರಸ್ತ್ರಿಯಂ ಪರಾರ್ಥಂ ಚ । ವರ್ಜಯೇನ್ । ಭಾವ ಶುದ್ಧಿಮಾನ್ । ಲಿಂಗ ನಿಷ್ಠಾನಿಯುಕ್ತಾತ್ಮಾ । ಮಾಹೇಶ್ವರ ಮಹಾಸ್ಥಲಂ ॥** ಮತ್ತೂ, **ಪರಸ್ತ್ರೀ ಸಂಘ ನಿರ್ಮುಕ್ತಃ । ಪರದ್ರವ್ಯ ಪರಾಙ್ಮುಖಃ ॥**

ಪರಸ್ತ್ರೀಯರನ್ನು ಕಾಮಾರ್ಥ ನೋಡುವ ಕಣ್ಣುಗಳು ಹುಣ್ಣಿನಂತೆ ಹೀನವಾದವುಗಳು. ರಣ ಹದ್ದಿನ ಕಣ್ಣು ಮಾಂಸಪತ್ರ ಆಕರ್ಷಿತವಾಗಿರುವಂತೆ ಹೀನ ವೃಷ್ಟಿ ಪಾಪ ಭೂಯಿಷ್ಟವಾದುದು. ಪರಾರ್ಥಂಚ, ಪರರ ಧನವನ್ನು ಸೆಳೆಯುವ ಭಾವ ಅತಿಹೀನವಾದುದು. ಇದರಿಂದ ಮಾಹೇಶ್ವರನು ಪರಸ್ತ್ರೀ ಸಂಘವನ್ನು ದೈಹಿಕವಾಗಿಯೂ ಮಾನಸಿಕವಾಗಿಯೂ ಭಾವೇನ ಸಹಸಂಪೂರ್ಣ ತೊರೆದಿರ ಬೇಕು. ಹಾವು ತನ್ನ ಮೈ ಮೇಲಿನ ಪೊರೆಯನ್ನು ತೊರೆಯು ವಂತೆ ಮಾಹೇಶ್ವರನು ತನು ಮನಗಳಿಂದಲೂ ಅಂತರಾತ್ಮ ಸಾಕ್ಷಿಯಾಗಿ ಪರಸ್ತ್ರೀ ಸಂಘವನ್ನು ನಿಶ್ಶೇಷವಾಗಿ ತ್ಯಜಿಸಿ ತೊರೆದಿರ ಬೇಕು. ಇದರಂತೆ ಪರದ್ರವ್ಯ ಮತ್ತೂ ಕಪ್ಪು ಹಣವನ್ನು ಕೈ ಮನಸ್ಸುಗಳಿಂದಲೂ ಕಿಂಚಿತ್ತೂ ಮುಟ್ಟ ಬಾರದು. ಮಾಹೇಶ್ವರ ಧರ್ಮ ಕರ ಕಠಿಣವಿರುತ್ತೆ.

**ಮಾತೃವತ್ಪರ ದಾರಾಂಶ್ಚ । ಪರದ್ರವ್ಯಾಣಿ ಲೋಷ್ಟವತ್ ॥**

ಅನ್ಯ ಸ್ತ್ರೀಯರನ್ನು ತಾಯಿಯಂತೆಯೂ, ಅನ್ಯರ ಹಣವನ್ನು ಕಲ್ಲಿಗೆ ಸಮಾನ ಭಾವಿಸಿ ಆಶಿಸ ಬಾರದು. ಇದು ವೇದದಲ್ಲಿ ವಿಧಿತವಾದ ವಿಧಿ. ಮಾಹೇಶ್ವರ, ವೀರಮಾಹೇಶ್ವರರು ಈಶೋಪನಿಷದ್ವಾಣಿಯನ್ನು ತ್ರಿಕರಣ ಪೂರ್ವಕ ಆಚರಿಸಿ ಪಂಚ ಮಹಾಚಾರ್ಯರ ದಿವ್ಯ ಕೃಪೆಗೆ ಪಾತ್ರರಾಗಬೇಕು.

**॥ಈಶಾವಾಸ್ಯ ಮಿದಂ ಸರ್ವಂ॥** ಎಂಬ ಅರಿವು ಅನುಭವಗಳುಂಟಾ ಗಲು, ಸ್ವಯಮೇ ವಿರಕ್ತಿ ಭಾವ ಉಂಟಾಗ ಬೇಕು.

**ತೇನ ತ್ಯಕ್ತೇನ । ಬುಂಜೀ ಥಾಃ । ಮಾ ಗೃಧಃ । ಕಸ್ಯಸ್ವಿದ್ಧನಂ ॥**

ಆಸೆ ಪಡಬಾರದು ಆಸೆ ಜೀವನದ ಪ್ರಗತಿಯನ್ನು ರಸಾತಳಕ್ಕೆ ತುಳಿದು ಇವನನ್ನು ಹಾಳು ಮಾಡುವುದು. ಆಶಿಸದೆ ಈಶನಿತ್ತಷ್ಟು ಉಂಡು ತೃಪ್ತನಾಗು ಎಂದು ಬೋಧಿತವಾಗಿದೆ. ಶ್ರೀ ರಾಮಕೃಷ್ಣ ಪರಮಹಂಸರು ಕನಕ, ಕಾಮಿನಿ ಕಾಂಚನಾದಿಗಳಲ್ಲಿ ಮೋಹವನ್ನು ಸಂಪೂರ್ಣವಾಗಿ ತ್ಯಜಿಸಿದ್ದರು. ಕನಕ, ಕಾಂಚನ ಮಣ್ಣಿನಂಟೆಯಂತೆ ಭಾವಿಸಿದ್ದರು. ಒಂದು ಕೈಯಲ್ಲಿ ಬಂಗಾರ ವನ್ನೂ ಮತ್ತೊಂದರಲ್ಲಿ ಮಣ್ಣನ್ನು ಹಿಡಿದು ಏಕ ಭಾವದಿಂದ "ರಘು ವೀರಾ!" ಎಂದು ನದಿಯಲ್ಲಿ ಎಸೆಯುತ್ತಿದ್ದರು. ತಮ್ಮ ಧರ್ಮಪತ್ನಿ ಶ್ರೀ ಶಾರದಾಮಣಿ ದೇವಿಯನ್ನು, ಪ್ರಸ್ತವಾದ ಮೊದಲನೆ ರಾತ್ರಿ ಆಕೆಯನ್ನು ಶ್ರೀ ದೇವಿ ಪೀಠದ

ಮೇಲೆ ಕುಳ್ಳಿರಿಸಿ, ವಿಧಿವತ್ತಾಗಿ ಪೂಜಿಸಿ ನೈವೇದ್ಯಾದಿಗಳನ್ನರ್ಪಿಸಿ, ಸ್ತುತಿಸಿ, ನಮಃಸ್ಕರಿಸಿ ಪ್ರಾರ್ಥಃಕಾಲದವರೆವಿಗೆ ಧ್ಯಾನಾರೂಢರಾಗಿದ್ದರು. ಇವರು ಯಾಜ್ಜೀವವೂ ಈ ಆಚರಣೆಯನ್ನು ಬಿಡದೆ ಭಕ್ತಿಯಿಂದ ನಿರಾಸೆಯಿಂದ ಮುಂದುವರಿಸಿದರು. ಶ್ರೀರಮಣ ಮಹರ್ಷಿಗಳೂ ಸಹ ಕಾಮಿನಿ ಕನಕ ಕಾಂಚನಾದಿಗಳನ್ನು ಮಾನಸಿಕವಾಗಿಯೂ ಸಹ ಸ್ಮರಿಸಲಿಲ್ಲ ಸ್ಪರ್ಶಿಸಲಿಲ್ಲ. ಎಡೆಯೂರ ತೋಂಟದ ಶ್ರೀ ಸಿದ್ಧಲಿಂಗೇಶ್ವರ ಯತಿ ತಿಲಕರೂ ಸಹ ಹೊನ್ನು, ಹೆಣ್ಣು, ಮಣ್ಣುಗಳನ್ನು ಸಮತಾಭಾವದಲ್ಲಿ ಕಂಡ ವೀರಮಾಹೇಶ್ವರರಿವರು. ಭಗವತ್ಪಾದ ಶ್ರೀ ಜ|| ರೇಣುಕಾಚಾರ್ಯರ ಶ್ರೀಪಾದದಲ್ಲಿ ಇವರಿಗೆ ಆಜನ್ಮಸಿದ್ಧವಾಗಿ ಆತ್ಮೀಯ ಭಕ್ತಿಭಾವವಿತ್ತು. ಈ ಮೂರು ಅವತಾರ ಪುರುಷರು ನೈಷ್ಟಿಕ ಬ್ರಹ್ಮಚಾರಿಗಳು, ವೀರಮಾಹೇಶ್ವರರಿವರು ಇದು ಸತ್ಯವಿರುತ್ತೆ.

ಮಹೇಶನು, ಮಹೇಶ್ವರಿಗೆ, ಮಾಹೇಶ್ವರ ಪ್ರಶಂಸಾ ಸ್ಥಲದ ಮಹತ್ವವನ್ನು ಮನದುಂಬಿ ವಿವರಿಸಿ ಪ್ರಶಂಸಿಸಿರುವನು ಅಸ್ತು.

**ಓಂ ನಮಃ ಶಿವಾಯೇತಿ ಶಿವಂ ಪ್ರಪದ್ಯೇ । ಶಿವಃ ಪ್ರಸಾದೇತಿ ಶಿವಂ ಪ್ರಪದ್ಯೇ । ಶಿವಾತ್ಪರಂ ನೇತಿ ಶಿವಂ ಪ್ರಪದ್ಯೇ । ಶಿವೋಹಮಸ್ಮೀತಿ ಶಿವಂ ಪ್ರದದ್ಯೇ ॥**

**ದೇವ ದೇವ ಮಹಾದೇವ ಜಗತ್ಪ್ರಥಮ ಕಾರಣ । ನಮಸ್ತೇ ಸಚ್ಚಿದಾನಂದ ಸ್ವೇಚ್ಛಾ ವಿಗ್ರಹ ರಾಜಿತ । ಭವಶರ್ವ ಮಹೇಶಾನ । ಸರ್ವ ಕಾರಣ ಕಾರಣ ॥ ಓಂ ನಮೋ ಭಗವತೇ ಸದಾಶಿವಾಯ ಸಕಲ ತತ್ವಾತ್ಮ ಕಾಯ।ಸರ್ವಮಂತ್ರ ಸ್ವರೂಪಾಯ। ಬ್ರಹ್ಮ ರುದ್ರಾವತಾರಿಣೇ ।ನೀಲಕಂಠಾಯ ಪಾರ್ವತೀ ಮನೋಹರ ಪ್ರಿಯಾಯ। ಸೋಮ ಸೂರ್ಯಾಗ್ನಿ ಲೋಚನಾಯ । ಭಸ್ಮೋದ್ಧೂಲಿತ ವಿಗ್ರಹಾಯ । ಗಂಗಾಧರಾಯ ಪ್ರಣವ ಸ್ವರೂಪಾಯ । ಹರಃ ಓಂ ! ಮರಣ ಭಯಾತ್ ಸಂಜೀವಯ**

ಸಂಜೀವಯ । ಶಿವ ಕವಚೇನ ಮಾಮಾಚ್ಛಾದಯಾಚ್ಛಾದಯ॥ ಮೃತ್ಯುಂಜಯ ತ್ರ್ಯಂಬಕ । ಸದಾಶಿವ ನಮಸ್ತೇ ನಮಸ್ತೇ । ಓಂ ಧರ್ಮೋ ರುದ್ರೋ ಜಗದ್ವಿಷ್ಣುಃ । ಸರ್ವ ಜ್ಞಾನಂ ಪಿತಾಮಹಃ ॥ ಶ್ರೀ ರುದ್ರ ರುದ್ರ ರುದ್ರೇತಿ । ಯಸ್ತಂ ಭೂಯಾದ್ವಿಚಕ್ಷಣಃ । ಓಂ ಬ್ರಾಹ್ಮಣೋ ಭಗರ್ವಾ ರುದ್ರಃ । ಸರ್ವೇಶಾಂ ಉತ್ತಮೋತ್ತಮಂ ॥ ವಿಶ್ವಸ್ಮಾದಧಿಕೋ ರುದ್ರೋ । ವಿಶ್ವಾನುಗ್ರಹಕಾರಕಃ ॥ ಇತಿ ಯಸ್ಯ ಸ್ಥಿರಾಬುದ್ಧಿಃ । ಸವೈ ಮಾಹೇಶ್ವರಃ ಸ್ಮೃತಃ ॥

## ಅಂಗ ಸ್ಥಲ ೧೭. ॥ಲಿಂಗನಿಷ್ಠಾ ಸ್ಥಲಂ॥

ಲಿಂಗಪೂಜಾಮಕೃತ್ವಾ ತು ಮಾನವಾ । ಯೇ ನ ಭುಂಜತೇ । ತೇಷಾಂ ಮಹಾತ್ಮಾನಾಂ ಹಸ್ತೇ ಮೋಕ್ಷ ಲಕ್ಷ್ಮೀ ರುಪಸ್ಥಿತಾ ॥ ಕಿಮನ್ಯೈ ರ್ಧರ್ಮಕಲಿಲೈಃ । ಕೀಕಸಾರ್ಥ ಪ್ರದಾಯಿಭಿಃ । ಸಾಕ್ಷಾನ್ಮೋಕ್ಷ ಪ್ರದಃ ಶಂಭೋ । ರ್ಧರ್ಮೋ ಲಿಂಗಾರ್ಚನಾತ್ಮಕಃ ॥ ಚಿನ್ಮಯೇ ಶಾಂಕರೇ ಲಿಂಗೇ । ಸ್ಥಿರಂ ಯೇಷಾಂ ಮನಃ ಸದಾ । ವಿಮುಕ್ತೇ ತರ ಸರ್ವಾರ್ಥಂ । ತೇ ಶಿವಾ ನಾತ್ರ ಸಂಶಯಃ ॥ ಲಿಂಗೇ ಯಸ್ಯ ಮನೋ ಲೀನಂ। ಲಿಂಗಸ್ತುತಿ ಪರಾ ಚ ವಾಕ್ । ಲಿಂಗಾರ್ಚನ ಪರೌ ಹಸ್ತೌ ಸ ರುದ್ರೋ ನಾತ್ರ ಸಂಶಯಃ ॥ ಲಿಂಗನಿಷ್ಠಸ್ಯ ಕಿಂ ತಸ್ಯ । ಕರ್ಮಣಾ। ಸ್ವರ್ಗ ಹೇತುನಾ ನಿತ್ಯಾನಂದ ಶಿವಪ್ರಾಪ್ತಿ । ರ್ಯಸ್ಯಶಾಸ್ತ್ರೇಷು ನಿಶ್ಚಿತಾ ॥ ಲಿಂಗನಿಷ್ಠಾ ಪರಂ ಶಾಂತಂ । ಭೂತಿ ರುದ್ರಾಕ್ಷ ಸಂಯುತಂ । ಪ್ರಶಂಸಂತಿ ಸದಾಕಾಲಂ । ಬ್ರಹ್ಮಾದ್ಯಾ ದೇವತಾ ಮುದಾ ॥

(ಸಿ. ಶಿ. ಶ್ಲೋ ೨೩, ೨೪, ೨೬-೨೯)

ಶಿವಲಿಂಗ ಇಷ್ಟಲಿಂಗಂಗಳಲ್ಲಿ ಅನವರತ ನಿಷ್ಠೆಯಿಂದ ಪೂಜಿಸಿ, ಆರಾಧಿಸಿ ಆರೋಗಣ ಮಾಡದೆ ಜಲಪಾನ ಊಟ ಮಾಡುವುದಿಲ್ಲವೆಂಬ ಪ್ರತಿಜ್ಞಾ ಪುರುಷರು ಮಹಾತ್ಮರಿರುವರು. ಮಡಿಯಿಂದ ಭಕ್ತಿ ಪೂರ್ವಕ ಮಾಡಿದ ಶುಚಿರ್ಭೂತವಾದ ಬಿಸಿ ಭಕ್ಷ್ಯ ಭೋಜ್ಯಾದಿಗಳೆನ್ನು ಶಿವನಿಗೆ ಶ್ರೀ ಗುರುವಿಗೆ ಪ್ರಥಮತಃ ಭಕ್ತ್ಯಾ ಅರ್ಪಿಸಿ ನಿವೇದಿಸಿದ ಬಳಿಕ ಅದು ಶಿವನ ಪ್ರಸಾದವೆನಿಸು ವುದು. ನಿತ್ಯವೂ ಪ್ರಸಾದ ಸ್ವೀಕಾರದಿಂದ ಶಿವಭಾವ, ಶಿವಚಿಂತನೆ ಶಿವವ್ರತ ಗಳನ್ನಾಚರಿಸ ಬೇಕೆಂಬ ಇಚ್ಛೆ ತಾನಾಗಿ ಅಂತಃಕರಣದಲ್ಲಿ ಉದ್ಭವಿಸುವುವು. ತ್ಯಾಗಾಂಗದಲ್ಲಿ ಪರಿಶೋಭಿಸುವ ತನ್ನ ಅಂತರಂಗದ ಚಿಚ್ಚೈತನ್ಯದ ಪ್ರತೀಕ ಇಷ್ಟಲಿಂಗವೆಂದು, ಶ್ರೀಗುರೂಕ್ತಿಯಂತೆ ಅರಿತು ನಿಷ್ಠೆಯಿಂದ ನಿತ್ಯ ದ್ವಿಸಂಧ್ಯಾ ಕಾಲಗಳಲ್ಲಿ ಭಕ್ತ್ಯಾ ಪೂಜಿಸುವುದು ಮಾನವನ ಆದ್ಯ ಧರ್ಮವೆನಿಸಿದೆ. ವಿಧಿ ವತ್ತಾಗಿ ಭಯ ಭಕ್ತಿಯಿಂದ ನಿತ್ಯ ಆರಾಧಿಸುವುದರಲ್ಲಿ ಶಿವ ಭಕ್ತಿ, ಶಿವ ಪೂಜೆ, ಶಿವ ವ್ರತ, ಶಿವ ಮಂತ್ರ ಜಪ, ಶಿವಜ್ಞಾನ, ಶಿವಧ್ಯಾನಾದಿಗಳು ಗರ್ಭಿತವಾಗಿ ರುವುದರಿಂದ ಈ ಮಹಾ ಯಜ್ಞ ಶಿವ ಯೋಗವೆನಿಸಿದೆ. ಇಂತಪ್ಪ ಶಿವಪೂಜಾ ಸಾಧಕನ ಹಸ್ತದಲ್ಲಿ ಅಖಂಡ ಶಿವ ಸಂಪತ್ತು ಹಾಗೂ ಶ್ರೀ ಮೋಕ್ಷ ಲಕ್ಷ್ಮೀ ಪ್ರಸನ್ನ ಭಾವದಿಂದ ನಲಿಯುತ್ತಿರ್ಪಳೆಂದು ಶ್ರೀ ಜ|| ಗುರು ರೇಣುಕರು ಅಪ್ಪಣೆ ಕೊಡಿಸಿರುವರು.

**|| ಧರ್ಮೋ ಲಿಂಗಾರ್ಚನಾತ್ಮಕಂ ||**

ಇಷ್ಟಲಿಂಗದಲ್ಲಿ ಪ್ರಾಣಲಿಂಗದ ಚಿನ್ಮುದ್ರೆ, ಭಾವಲಿಂಗದಲ್ಲಿ ಪ್ರಾಣಲಿಂಗದ ಚಿನ್ಮುದ್ರೆ ಪಶ್ಚಿಮ ಶಿಖಾಚಕ್ರದಲ್ಲಿ, ಇಷ್ಟಲಿಂಗ, ಆಚಾರಲಿಂಗ, ಗುರುಲಿಂಗ ಹಾಗೂ ಪ್ರಾಣಲಿಂಗ, ಶಿವಲಿಂಗ, ಜಂಗಮ ಲಿಂಗ, ಮತ್ತು ಭಾವಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂಬ ನವಲಿಂಗಂಗಳೊಡನೆ, ಸಹಸ್ರಾರ ಚಕ್ರದ ಚಿಲ್ಲಿಂಗ, ಶಿಖಾಚಕ್ರದ ನಿರಂಜನ ಲಿಂಗಗಳ ಘನ ತೇಜಸ್ಸು ಪಶ್ಚಿಮ ಶಿಖಾ ಚಕ್ರದ ಪರಶಿವ ಬ್ರಹ್ಮದ ಅಖಂಡಾ ದ್ವಿತೀಯ ಮಹಾ ತೇಜಸ್ಸಿನಲ್ಲಿ ಸಾಗರ ತರಂಗ ಭಂಗಿ ನ್ಯಾಯದಂತೆ ದ್ವಾದಶ ಲಿಂಗಗಳ ಚಿಜ್ಯೋತಿಯನ್ನು ಅಂತರ್ಮು ಖಿಯಾದ ವೀರ ಮಾಹೇಶ್ವರನು

**| ಧ್ಯಾನಾವಸ್ಥಿತ ತದ್ಗತೇವ ಮನಸಾ | ಪಶ್ಯಂತಿ ಯಂ ಯೋಗಿನಃ ||**

ಎಂಬಂತೆ, ಶಿವಯೋಗಿ ಶಿವಾದ್ವೈತ ಸ್ಥಿತಿಯಲ್ಲಿರುವಾಗ, ತನಗನ್ಯವಾದ

ಭೌತಿಕ ಮೊಡ್ಡೋಲಗದ ಹಿರೇತನವನ್ನು ನೆತ್ತಿಯಲ್ಲಿ ಹೊತ್ತು ಅಹಂ ಕರ್ತೃತ್ವ ದಿಂದ ಬೀರುವ, ಬೀಗಿ ಮೋಲೈಸಿರುವ, ವ್ಯಕ್ತಿಗಳನ್ನೂ ಮಾಹೇಶ್ವರರೆಂದು ವಿರಕ್ತರೆಂದೂ ಹೊಗಳುವುದರಲ್ಲಿ ಅರ್ಥವಿದೆಯಾ ?

ಮಾಹೇಶ್ವರನೂ, ಕೂಡಲ ಶ್ರೀ ಸಂಗಮೇಶ್ವರ ಶಿವಾಚಾರ್ಯರ ಕರ ಕಂಜಾತ, ಶ್ರೀ ಬಸವಣ್ಣ ಶಿವ ಲಾಂಛನಕ್ಕೆ ನಮೋ ಯೆಂಬೆ, ಶಿವಲಾಂಛನಕ್ಕೆ ತಕ್ಕ ಆಚಾರವಿಲ್ಲದೊಡೆ, ಕೂಡಲ ಸಂಗಮ ದೇವಾ ! ನೀನರಿಯುವಂತೆ ಛೀ ಯೆಂಬೆ ಎಂದಿದ್ದಾರೆ. ಕಾವಿಧಾರಿ ಸನ್ಯಾಸಿ, ಸಾಧು ಸ್ವಾಮಿ, ವಿರಕ್ತ, ವೈರಾಗ್ಯ ವ್ರತಧಾರಿಗಳೂ, ನಿವೃತ್ತಿಯೋಗಿಗಳು, ತಮ್ಮ ವ್ರತಾಚಾರಣೆಗಳಿಗ ನುಸಾರ ತ್ರಿಕರಣ ಪೂರ್ವಕ ಅಂತರಾತ್ಮನಿಗೆ ಅಂಜಿ ಶಿವಲಾಂಛನಕ್ಕೆ ತಕ್ಕಂತೆ ನಡೆದು ಕೊಳ್ಳ ಬೇಕು ರಾಗ ದೂರರೂ ಉದಾರಿಗಳೂ, ಸಕಲ ಜೀವಾವಳಿಗೆ ಅನವರತ ಲೇಸನೆ ಬಯಸುತ್ತಾ, ತಾವು ಕಾಮಕ್ರೋಧ ಮದಮತ್ಸರ, ಡಾಂಭಿ ಕವೃತ್ತಿ, ಕರ್ತೃತ್ವ ಭೋಕ್ತೃತ್ವಾದಿ, ಅರಿಷಡ್ವರ್ಗಾದಿಗಳಿಂದ ದೂರವಿರ ಬೇಕು. ಇವು ಮಾಹೇಶ್ವರನ ಲಿಂಗ ನಿಷ್ಠೆಗೆ ಸಹಕಾರವೀಯುವುವು. ಇದಕ್ಕೆ ವಿರುದ್ಧವಾಗಿ ಮಮಕಾರ ದಂಬದರ್ಪ ಅಧಿಕಾರಾ ರೂಢರಾಗಿ ಸಂಪತ್ತಿನ ಸುಪ್ಪ ತ್ತಿಗೆ ಮೇಲೆ ಕುಳಿತು, ಪ್ರವೃತ್ತಿ ಮಾರ್ಗಾನುವರ್ತಿಗಳಾಗಿ ಆಡಂಬರ ಲೌಕಿಕ ರಂತೆ ಆಡಂಬರದ ಕಾರ್ಯ ಕಲಾಪಗಳಲ್ಲಿ ಬಹುವಾಗಿ ರಕ್ತಿಯಿಂದ ಹಗಲಿರುಳು ಶ್ರಮಿಸುವುದರಲ್ಲೇ ತೀವ್ರಾಸಕ್ತಿ ವಹಿಸಿದರೆ ಇಂಥ ಕಾವಿಧಾರಿ ಯತಿಗಳು ಬಹು ಶೀಘ್ರದಲ್ಲಿ ತಮ್ಮ ಪ್ರತಿಷ್ಠಿತ ಸ್ವಧರ್ಮದಿಂದ ಪತಿತರಾಗಿ ಅವನತಿಯನ್ನು ಹೊಂದಿ ಕರ್ಮಪಾಶಕ್ಕೆ ಬದ್ಧರಾಗ ಬೇಕಾಗುತ್ತೆ ಯಾಕೆಂದರೆ, ಅಂಗ ಸಂಗಿ ಯಾದವಂಗೆ ಲಿಂಗ ಸಂಗವಿಲ್ಲ. ಇಂತಾದರೆ ಇವರು ಮಾಹೇಶ್ವರ ತತ್ವಕ್ಕೆ ಬಹುದೂರ ಕರ್ತೃತ್ವ ಭೋಕ್ತೃತ್ವಾದಿ ಕಾಮಸಂಕಲ್ಪಗಳು, ಕನಕ, ಕಾಮಿನಿ ಕಾಂಚನಗಳ ಸಂಘ ಸಂಪರ್ಕಗಳು ಕಾವಿಧಾರಿಗಳನ್ನು ಬಹು ಶೀಘ್ರದಲ್ಲಿ ಸಂಸಾರಿಗಳಂತೆ ತೊಡಕಿಗೆ ಸಿಗಿಸಿ ಬಂಧನಕ್ಕೀಡು ಮಾಡುವುವು. ಇಂದ್ರಿ ಯಗಳಿಗೆ ವಿಷಯಾದಿಗಳ ಮೇಲೆ ಹಿಡಿತ ಬಲಿಷ್ಟವಾದುದು. ಕನಕ, ಕಾಂಚ ನಾದಿಗಳು ವಿರಕ್ತ, ವೈರಾಗ್ಯ ವ್ರತಿಗಳನ್ನು ಚಲಿಸುವಂತೆ ಮಾಡುವುವು. ಒಮ್ಮೆ ಮೋಸ ಹೋದಲ್ಲಿ ಸರ್ವ ನಾಶವಾಗುತ್ತೆ.

ಹೆಣ್ಣಿದ್ದ ಮನೆಗೆ ಆಗಾಗ ನಡೆಮಾಡಿದ ಸನ್ಯಾಸಿ ! ಮಣ್ಣು

ಮುಸಿಯೂದ ಸರ್ವಜ್ಞ ॥

ಹೆಣ್ಣು, ಮಣ್ಣು, ಹೊನ್ನು ಇವುಗಳ ಮೇಲಿನ ದೃಷ್ಟಿ, ಮೋಹ, ಸಾಮೀಪ್ಯಾದಿಗಳು, ಯೋಗಿಯ ಮನಸ್ಸನ್ನೂ ಸಹ ತಲ್ಲಣ ಗೊಳಿಸುವುವು. ಇದರಿಂದಾಗಿ ಶ್ರೀ ಪತಂಜಲಿ ಮಹರ್ಷಿಗಳು ಕೊನೆಯದಾಗಿ,

ಸ್ತ್ರಿ ವಿಷಯುಕ ಚಿತ್ತವೃತ್ತಿಃ ನಿರೋಧಃ ಯೋಗಃ ॥

ಎಂದು ತಿದ್ದುಪಡಿ ಮಾಡ ಬೇಕಾಗಿ ಬಂತು, ಮಾಹೇಶ್ವರರನ್ನು ಎಚ್ಚರಿಸುತ್ತಾ ಶ್ರೀ ಮದಾಚಾರ್ಯ ರೇಣುಕರು,

ತಮೋ ಮೂಲಾಹಿ ಸಂಜಾತ| ರಾಗದ್ವೇಶಾದಿ ಪಾದಪಾಹ ।
ಶಿವಜ್ಞಾನ ಕುಠಾರೇಣ । ಛಿದ್ಯಂತೇಹಿ ನಿರಂತರಂ ॥

ಎಂದು ಎಚ್ಚರಿಸಿದ್ದಾರೆ, ತದನಂತರ ಕಾಲದ ಶ್ರೀ ಕೃಷ್ಣ,

ನ ರೂಪ ಮಸ್ಯೇಹ । ತತೋಪಲಭ್ಯತೇ । ನಾಂ ತೋ ನಚಾದಿ
ರ್ನಸಂ ಪ್ರತಿಷ್ಠಾ । ಅಶ್ವತ್ಥಮೇನಂ ಸವಿರೂಢ ಮೂಲಂ ।
ಅಸಂಘ ಶಸ್ತ್ರೇಣ ದೃಢೇನ ಛಿತ್ವಾ ॥

ಅಂದರೆ ಕಾಮಿನಿ ಕಾಂಚನ ಕನಕಗಳನ್ನು ಮನಸ್ಸಿನಲ್ಲಿ ಅಡಿಗಡಿಗೆ ಚಿಂತಿಸ ಬಾರದು ಇವುಗಳ ಸಂಘದಿಂದ ದೂರವಿರ ಬೇಕೆಂದನು, ಗೀತಾಚಾರ್ಯ ಬಸವಣ್ಣ ತನು ಮನ, ಧನಗಳನ್ನು ಗುರುಲಿಂಗ ಜಂಗಮರಿಗರ್ಪಿಸಿ ಸಂಗ ರಹಿತ ನಾಗಿಪರ್ಾತನೇ ಮಾಹೇಶ್ವರನೆಂದರು, ದೈನಂದಿನದ ನಡತೆಯಲ್ಲಿ ಇವುಗಳನ್ನು ಆಚರಿಸಿ ಮಾಹೇಶ್ವರನಾಗ ಬೇಕು. ಇದಕ್ಕೆ ಮೂಲ,

ಲಿಂಗನಿಷ್ಠಾ ಪರಂ ಶಾಂತಂ । ಭೂತಿ ರುದ್ರಾಕ್ಷ ಸಂಯುತಂ ।
ಪ್ರಶಂಸಂತಿ ಸದಾ ಕಾಲಂ । ಬ್ರಹ್ಮಾದ್ಯಾ । ದೇವತಾ ಮುದಾ ॥
ಲಿಂಗನಿಷ್ಠಸ್ಯ ಕಿಂ ತಸ್ಯ । ಕರ್ಮಣಾ ಸ್ವರ್ಗಹೇತು ನಾ |
ನಿತ್ಯಾನಂದ ಶಿವಪ್ರಾಪ್ತಿರ್ಯಸ್ಯ ಶಾಸ್ತ್ರೇಷು ನಿಶ್ಚಿತಾ ॥

(ಸಿ.ಶಿ.ಅ. ೧೦. ಶ್ಲೋ. ೭೯, ೨೮)

ಈ ವಿಧಿಗನುಸಾರ ಇರುವಾತ ಮಾಹೇಶ್ವರ ಲಿಂಗನಿಷ್ಠಾಪರ ವೀರ ಮಾಹೇಶ್ವರರೆನಿಸಿಹರು. ಲಿಂಗವೆಂದರೇನು ? ರೂಪಾತೀತ ನಾಮಾತೀತ ನಾದ ಅರಿವು ಚೈತನ್ಯ ಆನಂದ ಮಯನೂ, ನಾದ ಬಿಂದು ಕಲಾತೀತನೂ, ವೇದಮಂತ್ರ ಸ್ವರೂಪಿಯೂ ಆದ ಸಚ್ಚಿದಾನಂದ ನಿತ್ಯ ನಿರ್ಮಲ ಪರಿಪೂರ್ಣ ಅಂಖಡಾ ದ್ವಿತೀಯನೆನಿಸಿದ, "ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂದು ಶೃತಿವಾಣಿ ನಮಗೆ ಅರುಹಿರುವಳು.

**ಚೈತನ್ಯಂ ಬ್ರಹ್ಮ । ರಸೋ ವೈಬ್ರಹ್ಮ । ಪ್ರಜ್ಞಾನಂ ಬ್ರಹ್ಮ ।**
**ಸರ್ವಂ ಖಲ್ವಿದಂ ಬ್ರಹ್ಮ ॥ ಅನ್ನಂ ಬ್ರಹ್ಮೇತಿ ವಿಜಾನಾತ್ ।**
**ಆನಂದಂ ಬ್ರಹ್ಮೇತಿ ವಿಜಾನಾತ್ ॥ ಆಯಮಾತ್ಮ ಬ್ರಹ್ಮ ॥**
**ಅಹಂ ಬ್ರಹ್ಮಾಸ್ಮಿ ॥ ಬ್ರಹ್ಮವಿದ್ಯಾಂ ಸರ್ವವಿದ್ಯಾ ಪ್ರತಿಷ್ಠಿತಂ ॥**

ಲಿಂಗವೆಂದರೆ, "**ಲಿಂಗ ಮೇವ, ಪರಂ ಜ್ಯೋತೀ ರ್ಭವತಿ ಬ್ರಹ್ಮ ಕೇವಲಂ**" ಅಂದರೆ ಅದುವೇ ಪರಶಿವ ಬ್ರಹ್ಮ

**ಬ್ರಹ್ಮ ಶಿವಂ ಪರಮಂ ಬ್ರಹ್ಮ । ಪ್ರಾಪ್ನೋತೀತಿ ಸ್ವಭಾವತಃ ॥**
**ಲಿಂಗಂತು ಶಿವಯೋರ್ದೇಹಃ ॥ ಲಿಂಗಂ ಚಿದಾತ್ಮಕಂ ಬ್ರಹ್ಮ ।**
**ತಚ್ಛಕ್ತಿಃ ಪ್ರಾಣ ರೂಪಿಣಿ ॥**

ಸಚ್ಚಿದಾನಂದ ನಿತ್ಯ ಪರಿಪೂರ್ಣ ಪರಾತ್ಪರ ಚಿಜ್ಯೋತಿ ಲಿಂಗವೆನಿಸಿದೆ. ಈ ಲಿಂಗದಲ್ಲಿ ಅರಿವು ಆನಂದ ಸ್ಫುರಣಮಯ ವಿಮರ್ಶಾ ಶಕ್ತ್ಯಾತ್ಮಕ ಚಿಚ್ಛಕ್ತಿ ಪರಶಿವ ಬ್ರಹ್ಮನ ಮಹಾ ಪ್ರಾಣವೆನಿಸಿದೆ. ಇಂತಪ್ಪ ಅನಾದಿ ಅವಿನಾಭಾವ ಸಂಬಂಧದ ಪರಂಜ್ಯೋತಿ ಪರಶಿವನು ಪರಬ್ರಹ್ಮನೆನಿಸಿಹನು. ಋಗ್ವೇದ ಪರಶಿವ ಲಿಂಗವನ್ನು ಸ್ತುತಿಸುತ್ತಾ,

**ಪವಿತ್ರಂ ತೇ ವಿತತಂ । ಬ್ರಹ್ಮಣ ಸ್ಪತೇ । ಪ್ರಭುಗಾತ್ರಾಣಿ ॥**

ಭೋ ! ಪವಿತ್ರವಾದ ಲಿಂಗ ರೂಪಿ ಪರಶಿವ ಬ್ರಹ್ಮವೇ, ನಮೋ ನಮಃ ಎಂದು ಸ್ತುತಿಸಿದೆ. ಲಿಂಗಪುರಾಣದಲ್ಲಿ ಶ್ರೀ ವೇದವ್ಯಾಸಾಚಾರ್ಯರು,

**ಬ್ರಹ್ಮೇತಿಲಿಂಗ ಮಾಖ್ಯಾತಂ । ಬ್ರಹ್ಮಣಃ ಪತಿರೀಶ್ವರಃ ॥**

ಎಂದು ಸ್ಪಷ್ಟ ಪಡಿಸಿರುತ್ತಾರೆ. ಲಿಂಗವೆಂದರೆ ಶಿವಶಕ್ತಿ ಸಂಪುಟದಿಂದ

ಸ್ವಯಮೇ ಅರಿವು ಪ್ರಕಾಶಮಯವಾಗಿ ರಂಜಿಸುವ ಪರಶಿವ ಬ್ರಹ್ಮ. ಎಷ್ಟು ವಿವರಿಸಿದರೂ ಚತುರ್ವೇದಗಳಿಗೂ, ವಿಷ್ಣು ಚತುರ್ಮುಖ ಬ್ರಹ್ಮನಿಗೂ ಪೂರ್ಣ ಅರ್ಥವಾಗದ ಮಹಾ ತತ್ವವನ್ನು ಉಲ್ಲೇಖಿಸುವುದು ತಾನೆ ಹೇಗೆ ? ಕೇನೋಪ ನಿಷತ್ತಿನಲ್ಲಿ ಬ್ರಹ್ಮವೆಂದರೇನು ಯಾವುದು ಬ್ರಹ್ಮ ? ಎಂಬ ಬಗೆಗೆ ಸಮರ್ಪಕ ವಾದ ವ್ಯಾಖ್ಯಾನವಿದೆ. ಅಕ್ಕರೆಯಿಂದ ನೋಡೋಣ.

೧. ಶ್ರೋತ್ರಸ್ಯ ಶ್ರೋತ್ರಂ | ಮನಸೋ ಮನೋಯದ್ । ವಾಚೋಹ ವಾಚಂ । ಸ ಊ ಪ್ರಾಣಸ್ಯ ಪ್ರಾಣಃ । ಚಕ್ಷು ಷಾ ಚಕ್ಷು । ರತಿ ಮುಂಚ್ಯ । ಧೀರಾಃ ಪ್ರೇತ್ಯಸ್ಮಾಲೋಕಾದ ಮೃತಾ ಭವಂತಿ ॥

೨. ಯದ್ ವಾಚಾನ ಭ್ಯುದಿತಂ । ಏನ ವಾಗಭ್ಯುದ್ಯತೇ । ತದೇವ ಬ್ರಹ್ಮ ತ್ವಂ ವಿದ್ಧಿ | ನೇದಂ ಯದಿದ ಮುಪಾಸತೇ ॥

೩. ಯನ್ ಮನಸಾ ನ ಮನನ ಮನುತೇ| ಏನಾಹುರ್ ಮನೋ ಮತಂ । ತದೇವ ಬ್ರಹ್ಮ ತ್ವಂ ವಿದ್ಧಿ । ನೇದಂ ಯದಿದ ಮು ಪಾಸತೇ ॥

೪. ಯಚ್ಚಕ್ಷುಷಾ ನ ಪಶ್ಯತಿ । ಏನಚಕ್ಷೂಂಷಿ ಪಶ್ಯತಿ । ತದೇವ ಬ್ರಹ್ಮತ್ವಂ ವಿದ್ಧಿ । ನೇದಂ ಯದಿದ ಮುಪಾಸತೇ ॥

೫. ಯಚ್ಛ್ರೋತ್ರೇಣನ ಶ್ರುಣೋತಿ | ಏನ ಶ್ರೋತ್ರಮಿದಂ ಶ್ರುತಂ । ತದೇವ ಬ್ರಹ್ಮ ತ್ವಂ ವಿದ್ಧಿ । ನೇದಂ ಯದಿದ ಮುಪಾಸತೇ ।

೬. ಯತ್ ಪ್ರಾಣೇನ ನ ಪ್ರಾಣಿತಿ । ಏನ ಪ್ರಾಣಃ ಪ್ರಣೀಯತೇ । ತದೇವ ಬ್ರಹ್ಮ ತ್ವಂ ವಿದ್ಧಿ। ನೇದಂ ಯದಿದ ಮುಪಾ ಸತೇ ॥

ಅಂದರೆ ಪರಶಿವಬ್ರಹ್ಮವು ಘೃತ ಕಾಠಿಣ್ಯ ನ್ಯಾಯಾನುಸಾರದಂತೆ

**ಆದು ಬೊಮ್ಮಂ । ತಿಳಿಗಟ್ಟಿ ಕೊಂಡ ನೈಯ್ಯೋಲ್ |**
**ಶಕ್ತಿ ಸೌಂದರ್ಯ ಸಂಪರ್ಕದಿಂ ರಂಜಿಸಿರೆ ॥**

ಎಂಬ ಶಿವಾಗಮಗಳ ಉಕ್ತಿಯಂತೆ, ಪರಶಿವಬ್ರಹ್ಮವು (ಚಿದ್ಘನ ಲಿಂಗವು), ತಿಳಿ ತುಪ್ಪದಂತೆ ನಿರಾಕಾರ ನಿರವಯುವವೆನಿಸಿದೆ ಪಿಂಡಾಂಡಾದ್ಯಂತ ಪಾದರಸದಂತೆ ವ್ಯಾಪಕವಾಗಿ ಚಲಿಸುತ್ತಲಿರುತ್ತೆ

೧) ಜಡ ಮನಸ್ಸು, ಯಾವ ಚೈತನ್ಯಮಯದ ಪ್ರಭಾವದಿಂದ ಚಲಿಸ ಲಾರಂಭಿಸುತ್ತೆ. ಪ್ರಾಣ ಯಾವುದರ ಆಕರ್ಷಣೆಯಿಂದ ಸಂಚರಿಸುತ್ತೆ ; ನಾಲಗೆಯಲ್ಲಿ ವಾಕ್ಚರಿ ಪ್ರವಾಹಿಸಲು ಉದ್ದೀಪನ ಗೊಳಿಸುದ ಶಕ್ತಿಯಾವದು. ಯಾವುದರ ಸಾನ್ನಿಧ್ಯ ವಿಶೇಷದಿಂದ ಕಿವಿ ಕಣ್ಣುಗಳು ಜಾಗೃತ ಗೊಳ್ಳುವನೆಂಬ ಪ್ರಶ್ನೆಗಳಿಗೆ ಕೇನೋಪ ನಿಷತ್ತು ಸುಂದರವಾಗಿ ಉತ್ತರಿಸುತ್ತಾ, ಯಾವುದು ವಚನ ಸಾಹಿತ್ಯಕ್ಕೆ ವಾಕ್ ಮಾಧುರ್ಯಕ್ಕೆ ನಿಲುಕದೋ, ಮತ್ತ್ಯಾವುದರ ಪ್ರೇರಕ ಶಕ್ತಿಯಿಂದ ಲಿಂಗರೂಪಿ ಬ್ರಹ್ಮವನ್ನು ವಾಕ್ ಅರ್ಥೈಸುವುದೋ ಅದೇ ಪರಶಿವ ಬ್ರಹ್ಮನೆಂದರಿತು ಉಪಾಸಿಸು.

೨) ಮನಸ್ಸಿಗೆ ಯಾವುದು ಎಟುಕದೋ ಹೀಗಿದ್ದರೂ, ಯಾವುದು ಮನಸ್ಸಿನ ಮನಸ್ಸಿನ ಮೂಲಕ ವೇದ್ಯವಾಗುವುದೋ ಆ ಪರತತ್ವವೇ ಬ್ರಹ್ಮ ವೆಂದರು. **ಕೇನೇಷಿತಂ ಪತತಿ । ಪ್ರೇಷಿತಂ ಮನಃ ॥**

೩) ಸ್ಥೂಲನೇತ್ರಗಳಿಗೆ ಯಾವುದು ಅದೃಷ್ಯವೋ ಮತ್ತ್ಯಾವುದರ ವಿದ್ಯುದ್ ಶಕ್ತಿಯಿಂದ ಕಣ್ಣುಗಳು ನೋಟವನ್ನು ಕಾಣುತ್ತಿವೆಯೋ ಅದೇ ಬ್ರಹ್ಮವೆಂದರಿ. **ಕೇನ ಚಕ್ಷುಃ ಶ್ರೋತ್ರಂ | ಕ ಉ ದೇವೋ ಯುನಕ್ತಿಃ ॥**

೪) ಯಾವುದನ್ನು ಕಿವಿಗಳು ಕೇಳಲಾರವೋ ಅಂತಹ ಶ್ರವಣೇಂದ್ರಿ ಯಗಳಿಗೆ ವೇದ್ಯವಾಗಿಸುವ ಪರಮನಾದವೇ ಬ್ರಹ್ಮವೆಂದರಿ ಮತ್ತೂ.

**ಕೇನೇಷಿ ತಾಂ ।ವಾ ಚ ಮಿ ಮಾಂ । ವದಂತಿ ॥**

ಬಾಯಿಮಾತು ಯಾರ ಪ್ರೇರಣೆಯಿಂದ ಅರ್ಥ ಗರ್ಭಿತವಹುದೋ ;

೫) ಉಸಿರಾಟದಿಂದ ಯಾವುದು ಉಸಿರೆಂದು ಗೋಚರಿಸದಿರಲು, ಯಾವ ಉಸಿರಿಗೆ ಉಸಿರಾದ ಮಹಾ ಪ್ರಾಣದಿಂದ ಉಸಿರಾಡುತ್ತಿದೆಯೋ ಅದೇ ಪರಶಿವ ಬ್ರಹ್ಮವೆಂದರಿ ಎಂದು ತಿಳಿಸುತ್ತಾ,

**ಕೇನ ಪ್ರಾಣಃ ಪ್ರಥಮಃ । ಪ್ರೈತಿಯುಕ್ತಃ ॥**

ಶಿವಲಿಂಗ ತತ್ವ ಸರ್ವಾಂಗಗಳಲ್ಲಿ "ರಸೋ ವೈ ಬ್ರಹ್ಮ" ಯೆಂಬಂತೆ ವಿರಾಜಿತವಾಗಿದೆ

**ಲಿಂಗಂ ಚಿದಾತ್ಮಕಂ ಬ್ರಹ್ಮ । ತಚ್ಛಕ್ತಿಃ ಪ್ರಾಣ ರೂಪಿಣಿ ॥**

ಎಂಬ ಶಿವಾಗಮೋಕ್ತಿಯನ್ನು ಮನಗಂಡು ಪ್ರಾಣ ಭೂತಿಯಲ್ಲಿ ಸ್ಥಿರವಾಗಿ ಅನುಸಂಧಾನ ಮಾಡುವ ಮಹಾತ್ಮನೇ ಮಾಹೇಶ್ವರ ಲಿಂಗ ನಿಷ್ಠಾಘಂತ ಸ್ಥಲದವನೆಂದು ಸ್ತುತ್ಯನಿರುವನು. ಅಸ್ತು.

**ಭೋ ಕಲ್ಯಾಣ ಮಹಾಭಾಗ । ಶಿವಜ್ಞಾನ ಮಹೋದಧೇ ।**

**ಆಚಾರ್ಯವರ್ಯ ಸಂಪ್ರಾಪ್ತಂ। ರಕ್ಷಮಾಂ ಭವ ರೋಗಿಣಂ॥**

**ಲಿಂಗೈಕ ನಿಷ್ಠಹೃದಯಃ ಸದಾ ಮಾಹೇಶ್ವರೋ ಜನಃ ।**

**ಪೂರ್ವಾಶ್ರಯಗತಾನ್ ಧರ್ಮಾಂ ಸ್ತ್ಯಜೇತ್ ಸ್ವಾಚಾರ ರೋಧಕಾನ್ ॥ ಶಿವಸಂಸ್ಕಾರ ಯೋಗೇನ ವಿಶುದ್ಧಾನಾಂ ಮಹಾತ್ಮನಾಂ ।**

**ಕಿಂ ಪೂರ್ವ ಕಾಲಿಕೈ । ರ್ಧರ್ಮೈಃ ಪ್ರಾಕೃತಾನಾಂ । ಹಿ ತೇ ಮತಾಃ ॥ ಶಿವೋಕ್ತ ಧರ್ಮನಿಷ್ಠಾತು ಶಿವಾಶ್ರಮ ನಿಷೇವಿಣಾಂ ಶಿವಸಂಸ್ಕಾರ ಹೀನಾನಾಂ । ಧರ್ಮಃ ಪೈತಾ ಮಹಃ ಸ್ಮೃತಃ ॥**

(ಶ್ಲೋ ೩೦, ೩೨, ೩೭)

## ಅಂಗ ಸ್ಥಲ ೧೮ ॥ ಪೂರ್ವಾಶ್ರಯ ನಿರಸನ ಸ್ಥಲಂ ॥

(ಪರಿ ೧೦)

ಜೀವಿತದಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತೂ ಸನ್ಯಾಸಾಶ್ರಮಗಳೆಂದು ನಾಲ್ಕು ಸ್ಥಿತಿಗಳುಂಟು, ಜೀವಿತದ ಕೊನೆಯ ಹಂತದಲ್ಲಿ ಪೂರ್ವಾಶ್ರಮಗಳ ಸಂಬಂಧವನ್ನು ಪೂರ್ಣ ವಿಸರ್ಜಿಸಿ, ಶಿವಾರ್ಪಿತ ಯೋಗದಲ್ಲಿ ರಂಜಿತನಾಗಿರ್ಪ ಪರಮ ಸ್ಥಿತಿಯಲ್ಲಿ, ಮನೋ ಬುದ್ಧಿವಾಕ್ಕಾಯಗಳ ಪೂರ್ವಾನುಭವಗಳನ್ನು ಸನ್ಯಾಸಿ, ವಿರಕ್ತರು ಹಾಗೂ ಕಾವಿಧಾರಿಗಳೂ ಕಿಂಚಿತ್ತೂ ಹಿಂದೆ ಗತಿಸಿ ಹೋದ ಕ್ಷಣಿಕ ವಿಷಯಗಳನ್ನು ಕನಸ್ಸಿನಲ್ಲೂ ಸ್ಮರಿಸದ ಪುಣ್ಯ ಪುರುಷ ಮಾಹೇಶ್ವರನೆನಿಸಿಹನು. ಈತನು ಸದಾ ಸರ್ವಕಾಲಗಳಲ್ಲೂ ತನ್ನ ಪವಿತ್ರವಾದ ಹೃತ್ಕಮಲದಲ್ಲಿ ಜ್ಯೋತಿರ್ಮಯ ಇಷ್ಟಲಿಂಗಾರ್ಚನೆ, ಸ್ಮರಣೆ,

ಚಿಂತನೆ, ಶಿವಲಿಂಗ ತತ್ವಾನುಸಂಧಾನದಲ್ಲಿ ತ್ರಿಕರಣ ಪೂರ್ವಕ ಮಗ್ನನಾಗಿರುವ ಕಾರಣ, ಶ್ರೀ ಗುರು ಕೃಪೆಯಿಂದ ತ್ರಿಕರಣಗಳಿಂದ ತ್ರಿಕಾಲಂಗಳಲ್ಲಿ ಸಗುವ ಎಲ್ಲಾ ಕಾರ್ಯಗಳನ್ನೂ ಶಿವಾರ್ಪಿತ ಭಾವದಿಂದ ಅರ್ಪಿಸುವ ಧರ್ಮನಿಷ್ಠಾವಂತ ಮಾಹೇಶ್ವರ. ಕಾಲ ಸಾಗಿದಂತೆ ದೇಹ ಧರ್ಮ ಪರಿವರ್ತನೆಯಾಗುತ್ತೆ. ಆತ್ಮ ಸದಾ ಕಾಲದಲ್ಲೂ ಏಕಪ್ರಕಾರವಾಗಿರುತ್ತಾನೆ. ಗೀತೆಯಲ್ಲಿ,

**ದೇಹಿನೋಽಸ್ಮಿನ್ । ಯಥಾ ದೇಹೇ । ಕೌಮಾರಂ ಯವ್ವನಂ**

**ಜರಾ । ತಥಾ ದೇಹಾಂತರ ಪ್ರಾಪ್ತಿ । ರ್ಧೀರಸ್ತತ್ರನ ಮುಹ್ಯತಿ ॥**

(ಅ ೩ ಶ್ಲೋ ೧೩)

ಅಸ್ತಿ, ಭಾತಿ, ವರ್ಧತೇ, ಆಪಕ್ಷೀಯತೇ, ನಶ್ಯತಿ, ವಿನಶ್ಯತಿ ಎಂಬ ಲಕ್ಷಣಗಳಿಂದ ಕೂಡಿದ ದೇಹ, ಶೈಷವ, ಬಾಲ್ಯ, ಯವ್ವನ, ವಾರ್ಧಿಕ್ಯಾ ವಿನಶ್ಯತಿ ಲಕ್ಷಣಗಳನ್ನು ಒಂದೊಂದಾಗಿ ಅನುಭವಿಸಿ, ಆ ಆ ಸ್ಥಿತಿಗಳ ಅನುಭವ ಜೀವಾತ್ಮನ ಅಂತರಂಗದಲ್ಲಿ ಉದ್ಭೋಧವಾಗುತ್ತಲಿರುತ್ತೆ. ಇದು ಲೌಕಿಕ ಜೀವನದ ಸಾರ ಸರ್ವಸ್ವ. ಶುದ್ಧಾಂತಃಕರಣಗಳ ಪ್ರಭಾವದಿಂದ ಭಕ್ತಸ್ಥಿತಿಯನ್ನು ಆಧ್ಯಾತ್ಮಿಕವಾಗಿ ದಾಟಿ, ಮಾಹೇಶ್ವರನ ಪವಿತ್ರ ಸ್ಥಾನವನ್ನು ಊರ್ಧ್ವಗಾಮಿಯಾಗಿ, ಷಟ್ಸ್ಥಲ ಚೌಕಟ್ಟಿನಲ್ಲಿ ವಿಹರಿಸುತ್ತಾ, ಶ್ರೀ ಗುರುವಿನ ದೃಷ್ಟಿಪಾತ ವಿಶೇಷದಿಂದ ॥ **ಲಿಂಗೈಕ ನಿಷ್ಠ ಹೃದಯಃ** ॥ ತನ್ನ ಹೃನ್ಮಂದಿರದಲ್ಲಿ ಪರಂಜ್ಯೋತಿ ಸ್ವರೂಪವೆನಿಸಿದ ಸ್ವಸ್ವರೂಪದಲ್ಲಿ ಸದಾ, ಭಕ್ತ್ಯಾ ವಿರಮಿಸುವ ಮಾಹೇಶ್ವರನು ಬಲವತ್ತರವಾದ ಕರ್ಮ ಪಾಶಕ್ಕೊಳಗಾಗಿ. ಪೂರ್ವಾಶ್ರಯದ ಸಂಕೇತವೆನಿಸಿದ ಧನ, ಕನಕ, ವಸ್ತು, ವಾಹನ, ಗೃಹಾರಾಮಾದಿ ಮಡದಿ ಮಕ್ಕಳ ಹಾಗೂ ತಾಯಿ ತಂದೆಗಳೆಂಬ ಕಪ್ಪು ಪಾಶಕ್ಕೆ ಯತ್ಕಿಂಚಿತ್ ಪೂರ್ವವಾಸನಾ ಬಲದಿಂದ ಮನಸೋತು, ಸಾಸಿವೆಯಷ್ಟು ಆಸಕ್ತಿ ತೋರಿಸಿದರೆ ಅಥವಾ ಮನದಲ್ಲಿ ಒಂದು ಹನಿಯಷ್ಟು ಕಾಣಿಸಿಕೊಂಡರೆ, ಪೂರ್ವಾಶ್ರಮ ದೋಷವೆಂಬ ಕಿಲ್ಬಿಷ ಮಾಹೇಶ್ವರನನ್ನು ಪತಿತನನ್ನಾಗಿಸಿ ಬಿಡುವುದು ಸತ್ಯವಿರುತ್ತೆ. ಅರ್ಜುನನಂಥಾ ಪರಂತಪನು, ಇಂದ್ರಿಯಂಗಳ ನಿಗ್ರಹ ವಿಷಯದಲ್ಲಿ,

**ಚಂಚಲಂ ಹಿ ಮನಃ ಕೃಷ್ಣ । ಪ್ರಮಾಥಿ ಬಲವ ದೃಢಂ ।**

**ತಸ್ಯಾಹಂ ನಿಗ್ರಹಂ ಮನ್ಯೇ। ವಾಯೋರಿವ ಸುದುಷ್ಕರಂ॥**

(ಗೀ ಅ. ೬ ಶ್ಲೋ ೩೪)

ನೀರಿನಂತೆ ಮನಸ್ಸು ಚಂಚಲವಿರುತ್ತೆ ಸ್ಪಂಧಿಸುವ ಗಾಳಿಯನ್ನಾದರೂ ತಡೆಯಬಹುದು. ಆದರೆ ಕೃಷ್ಣಾ ! ಮನಸ್ಸನ್ನು ಹಿಡಿದು ನಿಲ್ಲಿಸಲು ಸಾಧ್ಯ ವಿಲ್ಲೆಂದರು ಹಿರುವನು. ಮಹಾ ಭಾರತದಲ್ಲೂ ಇದೇ ವಿಷಯವನ್ನು ವಿವರಿಸುತ್ತಾ,

**ಬಲವಾನಿಂದ್ರಿಯ ಗ್ರಾಮೋ। ವಿದ್ವಾಂಸಮಪಿ ಅಕರ್ಷತಿ॥**

ಇಂದ್ರಿಯಗಳನ್ನು ಆಕರ್ಷಿಸಿ ಆಶ್ರಯಿಸಿರುವ ವಾಸನಾಮಯ ವಿಷಯಾದಿಗಳು ಅತಿ ಬಲವತ್ತರವಾಗಿ, ಕರಡಿ ಮುಷ್ಠಿ ಹಿಡಿತದಿಂದ ತಪ್ಪಿಸಿಕೊಂಡು ಬರಲು ಪಂಡಿತರಿಂದಲೂ, ಋಷಿ ಮಹರ್ಷಿಗಳಿಂದಲೂ ದುಸ್ಸಾಧ್ಯವಿರುತ್ತೆ. ಗೆಡ್ಡೆಗೆಣಸುಗಳನ್ನೂ ಹಣ್ಣುಕಾಯಿಗಳನ್ನೂ ತಿಂದು ಪರ್ಣಶಾಲೆಗಳಲ್ಲಿ ಏಕಾಂತವಾಗಿ ತಪಸ್ಸು ಮಾಡುವ ಶ್ರೀ ವಿಶ್ವಾಮಿತ್ರ, ಶ್ರೀ ವಿಭಂಡಕ, ಶ್ರೀ ಋಷ್ಯಶೃಂಗಾದಿ ಮಹರ್ಷಿಗಳೂ ಸಹ ಇಂದ್ರಿಯಂಗಳ ಚಪಲಕ್ಕೊಳಗಾಗಿ ತಲ್ಲಣಿಸಿರುತ್ತಾರೆ ಎಂದು ಕಂಡು ಬಂದಿದೆ ಇತ್ಯಾದಿ ಕಾರಣಗಳಿಂದ, ಮಾಯಾ ಕೋಲಾಹಲರಾದ ಶಿವಲಿಂಗೋದ್ಭವ ಮಂಗಳಮೂರ್ತಿ ಶ್ರೀ ಆದಿ ಜ॥ ರೇಣುಕಾಚಾರ್ಯರು ಅಪ್ಪಣೆ ಕೊಡಿಸುತ್ತಾ,

**ತಮೋ ಮೂಲಾ ಹಿ ಸಂಜಾತ। ರಾಗದ್ವೇಶಾದಿ ಪಾದ ಪಾಃ॥**

ರಾಗದ್ವೇಶಾದಿ ಕಾಮ ಕ್ರೋಧಾದಿಗಳು, ತಮಸ್ಸು ರಜೋಗುಣಗಳಿಂದ ಆವಿರ್ಭವಿಸಿ, ಪಂಚಜ್ಞಾನೇಂದ್ರಿಯಗಳ ಮೇಲೆ ಬಲವತ್ತರವಾಗಿ ತಮ್ಮ ಪ್ರತಾಪವನ್ನು ಬೀರುವುವು. ಈ ಗುಣಗಳು ಬಹುವಾಗಿ ಆಕರ್ಷಿಸುವಾಗ ಯತಿಯೂ ಸಹ ಜಾರದೆ, ಪೂರ್ವಾಶ್ರಯ ನಿರಶನ ವ್ರತವನ್ನು ಭೀಷ್ಮ ಪ್ರತಿಜ್ಞೆಯಂತೆ ಅಂಜದೆ ಅಳುಕದೆ ಧೀರೋದ್ಧಾರ ಭಾವದಿಂದ ಮುಂದುವರಿಸ ಬೇಕು.

ತ್ಯಾಗಾಂಗದ ಎರಡು ಕವಲುಗಳು ಪೃಥ್ವಿಯಾಂಗ ಜಲಾಂಗಗಳು ನೆಲಜಲಗಳು ಹಾಸು ಹೊಕ್ಕಾಗಿವೆ. ಪೃಥ್ವಿತತ್ವ ನಕಾರ ಭೀಜಾಕ್ಷರ ಪೃಥ್ವಿಲಿಂಗದ ಆಧಾರದ ಮೇಲೆ ನಿಂತಿದೆ. ಜಲತತ್ವವು ಮಕಾರ ಬೀಜಾಕ್ಷರ ಅಪ್ಲಿಂಗದ ಆಧಾರದ ಮೇಲೆ ಸ್ಥಾಪಿತವಾಗಿದೆ. ಲಿಂಗಾಧಾರದ ಮೇಲೆ ನೆಲಜಲ

ಗಳು ವರ್ಧಿಸುತ್ತಲಿವೆ. ಭಕ್ತ ಮಾಹೇಶ್ವರರ ಆಶ್ರಯ ಸ್ಥಾನಗಳು ಲಿಂಗತತ್ವವನ್ನೇ ಹೊಂದಿರುವವು ಆದ್ದರಿಂದ ಇಷ್ಟಲಿಂಗಾರಾಧನೆ ಇವರೀರ್ವರಿಗೂ ಅತ್ಯವಶ್ಯಕವಿರುತ್ತೆ. ಪೃಥ್ವಿಯಾಂಗ, ಗಂಧಗ್ರಹಣದಿಂದಾಗಿ ಆಚಾರ ಲಿಂಗವನ್ನೂ ಜಲಾಂಗ ರಸ ಗ್ರಹಣದಿಂದಾಗಿ ಆಚಾರ ಲಿಂಗವನ್ನೂ ಜಲಾಂಗ ರಸ ಗ್ರಹಣ ಯುಕ್ತವಾದ ಗುರು ಲಿಂಗವನ್ನೂ ಅಪ್ಪೈಸಿ ಆಶ್ರಯಿಸಿರುವುವು. ಇಷ್ಟಲಿಂಗದ ಎರಡು ಕವಲುಗಳು ಆಚಾರಲಿಂಗ ಮತ್ತೂ ಗುರು ಲಿಂಗಗಳಾಗಿವೆ. ಇದರಂತೆ ಭಕ್ತಮಾಹೇಶ್ವರರು ತ್ಯಾಗಾಂಗದ ಎರಡು ವಿಭೇದವೆನಿಸಿವೆ. ಅಂಗನು ಭಕ್ತನಾಗಿ ಮಾಹೇಶ್ವರ ಸ್ಥಲವನ್ನು ಆಶ್ರಯಿಸಿದ ನಂತರ, ಪೂರ್ವಾಶ್ರಯ ನಿರಸನ ಅತ್ಯಗತ್ಯವಿರುತ್ತೆ. ಜಲಾಂಗ ಸ್ಥಾನವೇರಿದ ಮಾಹೇಶ್ವರನ ತನು ಮತ್ತೂ ತನುಕರಣಂಗಳು ಗುರುಲಿಂಗದ ಪ್ರಭಾವದಿಂದಾಗಿ ಶಿವಕರಣಂಗಳಾಗಿ ರೂಪಗೊಳ್ಳುವುವು. ಇಂತು ಲಿಂಗಸಂಗಿಯಾದ ಮಾಹೇಶ್ವರನು ಅಂಗ ಸಂಗವೆಂಬ ಪೂರ್ವಾಶ್ರಯ ವಾಸನೆಯನ್ನು ಛಲದಿಂದ ತುಂಡರಿಸಿ ಸಂಪರ್ಕವಿಲ್ಲದಂತೆ ಖಡಾಖಡಿಯಾಗಿ ವಿಸರ್ಜಿಸಿರ ಬೇಕು. ಪರುಷವ ಮುಟ್ಟಿ ಅದರ ಸಂಪರ್ಕದಿಂದ ಕಬ್ಬಿಣ ಬಂಗಾರವಾದ ನಂತರ ಕಬ್ಬಿಣಕ್ಕೆ ಪೂರ್ವಾಶ್ರಯ ಸಂಬಂಧವೆಲ್ಲಿಯದು ಸ್ವಾತಿ ಮಳೆ ಹನಿ ಮುತ್ತಾದ ಬಳಿಕ ಅದು ನೀರುಪ್ಪದೆ. ಕಟ್ಟಿಗೆ ಉರಿಯುತ್ತ ಉರಿಯುತ್ತ ಕೆಂಡಾಕಾರವಾದ ಮೇಲೆ ಅದಕ್ಕೆ ಪೂರ್ವಾಶ್ರಯದ ಸೋಂಕೆಲ್ಲಿಯದು. ಮನೆಯ ಹೆಣ್ಣು ಮಗಳು ಪ್ರೌಢ ವಯಸ್ಕಳಾದ ಮೇಲೆ ವಿವಾಹಿತಳಾಗಿ ಗಂಡನ ಮನೆಗೆ ಹೋಗಿ ಅಲ್ಲಿ ಒಡತಿಯಾದ ಮೇಲೆ ತವರು ಮನೆಯ ಪೂರ್ವಾಶ್ರಯ ನಿರಸನ ತಾನಾಗಿಯೇ ಮನದಲ್ಲಿ ದೃಢಿಕರಿಸುವುದು. ಇವು ಲೋಕ ವ್ಯವಹಾರದಲ್ಲಿ ನಾವು ಕಂಡ ಸತ್ಯಾಂಶಗಳು. ಷಟ್ಸ್ಥಲ ಸಿದ್ಧಾಂತದಲ್ಲಿ,

**ವರ್ಣಾಶ್ರಮಾದಿ ಧರ್ಮಾಣಾಂ । ವ್ಯವಸ್ಥಾಹಿ ದ್ವಿದಾಮತಾ ।**
**ಏಕಾ ಶಿವೇ ನ ನಿರ್ಧಿಷ್ಟಾ । ಬ್ರಹ್ಮಣಾಕಥಿಥಾ ಪರಾ ॥ ಶಿವೋಕ್ತ**
**ಧರ್ಮ ನಿಷ್ಠಾತು । ಶಿವಾಶ್ರಮ ಷೇವಿಣಾಂ । ಶಿವಸಂಸ್ಕಾರ ಹೀ**
**ನಾನಾಂ | ಧರ್ಮಃ ಪೈತಾಮಹಃ ಸ್ಮೃತಃ ॥**

ವರ್ಣಾಶ್ರಮಗಳು ಎರಡು ವಿಧ ಶಿವನಿಂದ ನಿರ್ಧಿಷ್ಠವಾದುದು. ಮತ್ತೊಂದು ಚತುರ್ಮುಖ ಬ್ರಹ್ಮನ ಸೃಷ್ಟಿಗದೀನವಾದುದು. ಶ್ರೀ ಜ॥ ರೇಣುಕರು ದ್ವಿವಿಧ

ಸೃಷ್ಟಿ ಕ್ರಮವನ್ನು ವಿವರಿಸುತ್ತಾ, ಹೇ ಅಗಸ್ತ್ಯ ಮುನೇ ! ಶಿವೋಕ್ತ ವರ್ಣಾಶ್ರಮ ಧರ್ಮಗಳು ಜನ್ಮತಃ ರಕ್ತಗತವಾಗಿ ಬಂದವುಗಳಲ್ಲ. ಶ್ರೀ ಗುರು ಹಸ್ತದಿಂದ ಶ್ರೀ ವಿಭೂತಿ ರುದ್ರಾಕ್ಷಿ ಲಿಂಗ ಶಿವ ಪಂಚಾಕ್ಷರೀ ಮಂತ್ರೋಪದೇಶದಿಂದ ಸುಸಂಸ್ಕೃತರಾದ ಪರಮ ವೀರಶೈವರಲ್ಲಿ ಜಗದಾದಿಯಿಂದಲೂ ವರ್ಣಭೇದವಿಲ್ಲ. ಕಟ್ಟಿಗೆ ಸುಟ್ಟು ಕೆಂಡಾಕಾರವಾಗಿ ಪ್ರಜ್ವಲಿಸುವ ಸ್ಥಿತಿಯಲ್ಲಿ ಕಟ್ಟಿಗೆಯಲ್ಲಿದೆ. ಇದು ಯಾವ ಜಾತಿಯ ಮರದ ಕಟ್ಟಿಗೆಯೆಂದು ಊಹಿಸಲು ಅವಕಾಶವಿಲ್ಲವಷ್ಟೆ. ಪಿತಾಮಹನೆನಿಸಿದ ಬ್ರಹ್ಮ ನಿರ್ಮಿತ ಚತುರ್ವರ್ಣಾಶ್ರಮಗಳು, ಕುಲ ಕರ್ಮಗಳಿಂದ ನಿರ್ದಿಷ್ಟವೆನಿಸಿವೆ. ಈ ಎರಡನೆ ವರ್ಗದ ಮಾನವ ಸೃಷ್ಟಿಯನ್ನು ಶ್ರೀ ಕೃಷ್ಣನು ವಿವರಿಸುತ್ತಾ ಅರ್ಜುನಾ !

**ಚಾತುರ್ವರ್ಣ್ಯಂ ಮಯಾ ಸೃಷ್ಟಂ । ಗುಣ ಕರ್ಮ ವಿಭಾಗಶಃ**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯ । ಕರ್ತಾರಮವ್ಯಯಂ ॥**

(ಗೀ ಅ ೪ ಶ್ಲೋ ೧೩).

ಜೀವಾತ್ಮರುಗಳ ಪೂರ್ವ ಸಂಸ್ಕಾರಗಳನ್ನನುಸರಿಸಿ ಅವರವರು ಎಸಗುವ ವೃತ್ತಿ ಗುಣಚರ್ಯೆಗಳಿಗನುಸಾರ ವರ್ಣಗಳನ್ನು ನಿಗದಿ ಮಾಡಲಾಗಿದೆ. ಇದು ಜನ್ಮತಃ ಬಂದ ಜಾತಿ, ಉಚ್ಚ ನೀಚವರ್ಣಗಳಲ್ಲ ಎಂದು ವಿವರಿಸಿದ್ದಾನೆ. ಈ ಬಗೆಗೆ ಭಗವತ್ ಪ್ರೋಕ್ತ ಆಶ್ವಾಸನೆ ಅಂಗೀಕೃತವಿರುವುದು. ವೈಯ್ಯಕ್ತಿಕವಾಗಿ ಮಾನವ ಬಾಹ್ಯಾಭ್ಯಂತರಗಳಲ್ಲೂ ಶುದ್ಧನಾಗಿರ ಬೇಕು ಶುದ್ಧಾಚಾರ, ಶುದ್ಧ ಆಹಾರ ಪಾನೀಯ ಅಹಿಂಸಾ ವ್ರತಧಾರಿಯಾಗಿ ಸತ್ಸಂಘ ಸದ್ವಿಚಾರ, ಸದಾವೃತ್ತಿ ಸದ್ಭಕ್ತ ಇತ್ಯಾದಿಗಳಿಂದ ಸನ್ಮಾನಿತನಾಗಿ, ಸತ್ಯಶೀಲನಾಗಿ ವಿನಯಾದಿ ಸದ್ಗುಣ ವಿಶಿಷ್ಟನಾಗಿರ ಬೇಕು. ಇವು ಮಾನವೀಯತೆಗಳೆನಿಸಿವೆ. ಇಂತಪ್ಪ ಕಲ್ಯಾಣ ಗುಣವಿಶಿಷ್ಟನಾಗಿರದಿದ್ದರೆ ಅವನೊಬ್ಬ ಆಸುರನೆಂದು ದೂರೀಕರಿಸಲಾಗುವುದು.

**ಅದ್ವೇಷ್ಟಾ ಸರ್ವ ಭೂತಾನಾಂ । ಮೈತ್ರಃ ಕರುಣ ಏವಚ ।**
**ನಿರ್ಮಮೋ ನಿರಹಂಕಾರಃ । ಸಮದುಃಖ ಸುಖ ಕ್ಷಮೀ ॥**

(ಗೀ ಅ. ೧೨ ಶ್ಲೋ ೧೩).

ಪೂರ್ಣ ಪರಶಿವ ಬ್ರಹ್ಮ ಸ್ವರೂಪಿಗಳಾದ ಭಗವತ್ಪಾದ ಶ್ರೀ ರೇಣುಕಾ,

ಚಾರ್ಯರು ಜನ್ಮತಃ ಚತುರ್ವರ್ಣಾ ಶ್ರಮಗಳಿಲ್ಲವೆಂದು ಸಾರಿ, ಷಟ್ಸ್ಥಲ ಸಿದ್ಧಾಂತದಲ್ಲಿ,

**ಶಿವಸಂಸ್ಕಾರ ಯುಕ್ತೇಷು ।ಜಾತಿಭೇದೋ ನ ವಿದ್ಯ ತೇ ಕಾಷ್ಟೇಷು ವಹ್ನಿದಗ್ಧೇಷು । ಯಥಾ ರೂಪಂ ನ ವಿದ್ಯತೇ | ತಸ್ಮಾತ್ಸರ್ವ ಪ್ರಯತ್ನೇ ನ । ಶಿವಸಂಸ್ಕಾರ ಸಂಯುತಃ ॥ ಜಾತಿ ಭೇದಂ ನ ಕುರ್ವೀತ ಶಿವಭಕ್ತೇ ಕದಾಚನ ॥**

ವಿವಿಧ ಜಾತಿ ಭೇದದ, ಮಾವು, ಹುಣಿಸೆ, ಬೇವು, ಹಲಸ, ಸರ್ಜೆ, ದಿಂಡಿಗ ಇತ್ಯಾದಿ ವೃಕ್ಷಗಳ ರೆಂಬೆ ಕೊಂಬೆ ಬುಡಗಳನ್ನು ಕತ್ತರಿಸಿ, ಸುಟ್ಟು ಕೆಂಡ ಮಾಡಿದಾಗ ಇವುಗಳಿಗೆ ಪೂರ್ವಾಶ್ರಯ ಸ್ಥಾನ ಹೇಗೆ ಇರಲಿಕ್ಕಿಲ್ಲವೋ ಇದರಂತೆ ಶ್ರೀ ಗುರುವಿನಿಂದ ದೀಕ್ಷಾತ್ರಯವನ್ನು ನಿಷ್ಠೆಯಿಂದ ಪಡೆದು ಪುನರ್ಜಾತನಾದ ಮೇಲೆ ಪೂರ್ವಾಶ್ರಯ ನಿರಸನದಿಂದ ತಾನು ಶಿವವ್ರತಿಯಾಗಿ ಇಷ್ಟಲಿಂಗದೊಳಿಟ್ಟ ನಿಷ್ಟೆ ವಜ್ರಪ್ರಾಯವಾಗಿರ ಬೇಕು. ಇದು ಮಾಹೇಶ್ವರನ ಧರ್ಮ.

**ಲಿಂಗದೊಳಿಟ್ಟ ದೃಷ್ಟಿ । ನಿಜದೃಷ್ಟಿಯೊಳಿರ್ದಮನಂ ।**
**ಮನಸ್ಸಿನೋಳ್ ಪಿಂಗದೆನಿಂದ ಭಾವ । ಮದರೋಳ್ ನೆಲೆ**
**ಗೊಂಡ ಶಿವಾತ್ಮ ಲಿಂಗವಾ । ಲಿಂಗದೊಳಿರ್ದು ನಿತ್ಯ ಸುಖಿ**
**ಯಾಗಿ, ವಿರಾಜಿಸುವಂಗೆ । ಬಾಹ್ಯ ಕರ್ಮಂಗಳವೇತಕ**
**ಯ್ಯಾ । ಪರಮ ಪ್ರಭುವೇ । ಮಹದೈಪುರೀಶ್ವರಾ ॥**

ಮಾಹೇಶ್ವರ, ವೀರ ಮಾಹೇಶ್ವರರಿಗೆ ಅಂಗವೆಂಬ ಪೂರ್ವಾಶ್ರಮ ಕಳೆದ ಬಳಿಕ, ಅಂಗವೆಲ್ಲಾ ಲಿಂಗವಾಯಿತು. ಜಲಾಂಗಧಾರಿ ಮಾಹೇಶ್ವರನು ತನ್ನ ಪೂರ್ವಾಶ್ರಯದ ತನು–ಮನ–ಭಾವಂಗಳ ನೀಗಿ ಜ್ಯೋತಿರ್ಮಯ ಲಿಂಗವಾಗಿ ರುತ್ತಾನೆ. ಲಿಂಗಪ್ರಸಾದಿಯಾಗಿರುತ್ತಾನೆಂದು ಶ್ರೀಮದಾಚಾರ್ಯ ರೇಣುಕರು ಅಪ್ಪಣೆ ಕೊಡಿಸಿರುವರು. ಅಸ್ತು.

**ಮಾಡುವುದು ಶಿವ ಪೂಜೆಯುನು । ಸೆಲೆ ಪಾಡುವುದು ಶಿವ**
**ನಾಮವನು । ಕೊಂಡಾಡುವುದು ಶಿವ ತತ್ವವಿದರಲಿ । ನೀಡು**

ವುದು ಶಿವಯೋಗಿಗಳ್ಗಿದೇ ಧರ್ಮ ತಾನೆಂದಂ ॥
ಉತ್ತಮಾಂಗದೆ ಲಿಂಗವನು ತಳೆಯುತ್ತೆ । ಮಂತ್ರ ಪವಿತ್ರ ಭಸ್ಮವ ಮೆತ್ತಿಮಯ್ಯೊಳ್ । ವಿಮಲ ಪಂಚಾಕ್ಷರಿಯ ಜಪಿಸುತಲಿ। ಮತ್ತೆ ಮೆರೆವ ಶಿವಾಗಮೋಪ ನಿಷತ್ತುಗಳ ಪುರುಳರಿಂದು । ಭಕ್ತಿಯು । ಭಿತ್ತರಿಪುದೆಲೇ ಧರ್ಮಕರ್ಮವು | ಮರ್ಮವಿದೆಯೆಂದಂ ॥

ಗಣಾಧಿನಾಥ ಸನ್ನುತಂ । ಸುರಾಧಿನಾಥ ಸನ್ನತಂ । ಸುರಾಸುರಾಧಿ ಸಂಸ್ತುತಂ । ಚರಾಚರಾಧಿ ಸಂಸ್ಥಿತಂ ॥ ಧರಾಧರೇಂದ್ರ ನಂದಿತಂ ॥ ಯಮೀಂದ್ರ ವೃಂದವಂದಿತಂ । ರಮಾರಮೇಂದ್ರ ಪೂಜಿತಂ । ಭಜಾಮಿ ಭಸ್ಮ ರಾಜಿತಂ ॥

ಲಿಂಗಸ್ಥಲ ೧೯. ॥ ಸರ್ವಾದ್ವೈತ ನಿರಸನ ಸ್ಥಲಂ ॥

ಪೂಜ್ಯ ಪೂಜಕಯೋರ್ಲಿಂಗ । ಜೀವಯೋರ್ಭೇದವರ್ಜನೇ |
ಪೂಜಾಕರ್ಮಾದ್ಯ ಸಂಪತ್ತೇ ರ್ಲಿಂಗ ನಿಷ್ಠಾ ವಿರೋಧತಃ ॥
ಪತಿಃ ಸಾಕ್ಷಾನ್ಮಹಾದೇವಃ| ಪಶುರೇಷ ತದಾಶ್ರಯಃ ।
ಅನಯೋಃ ಸ್ವಾಮಿ ಭೃತ್ಯತ್ವ ಮಭೇದೇ ಕಥ ಮಿಷ್ಯತೇ ॥
ಭೇದಸ್ಯ ಕರ್ಮಹೇತು ತ್ವಾದ್ವ್ಯವಹಾರಃ | ಪ್ರವರ್ತತೇ ॥
ಲಿಂಗಪೂಜಾದಿ ಕರ್ಮಸ್ಥೋ । ನಚಾದ್ವೈತಂ। ಸಮಾಚರೇತ್॥
ಜಾದಿ ವ್ಯವಹಾರಃ । ಪೂಸ್ಯಾದ್ಭೇದಾಶ್ರಯತಾಯಾ ಸದಾ ।
ಲಿಂಗಪೂಜಾ ಪರಸ್ತಸ್ಮಾನ್ನಾದ್ವೈತೇ । ನಿರತೋ ಭವೇತ್ ॥

(ಶ್ಲೋ ೩೭, ೪೦, ೪೨, ೪೩)

ಧರ್ಮ ಕ್ಷೇತ್ರವೆನಿಸಿದ ಭಾರತ ಪುಣ್ಯ ಭೂಮಿಯಲ್ಲಿ ನಿಗಮಾಗಮಗಳಲ್ಲಿ ಸ್ತುತ್ಯವಾದಂತೆ ದ್ವೈತ, ವಿಶಿಷ್ಟಾದ್ವೈತ, ಅದ್ವೈತ, ಶೈವ ಮತ್ತೂ ವೀರ

ಶೈವವೆಂಬ ಮತ ಧರ್ಮಗಳು ಪ್ರೋಕ್ತವಾಗಿವೆ. ಇವು ವೇದವಿಹಿತವಾದ ಕ್ರಿಯಾ ಚಾರ ಭಕ್ತಿಜ್ಞಾನ ವೈರಾಗ್ಯ ತ್ಯಾಗಶೀಲ ನೀತಿಗಳ ನೆಲಗಟ್ಟಿನ ಮೇಲೆ ಅನಾದಿ ಕಾಲದಿಂದ, ಸುಂದರವಾಗಿ ಸುಭದ್ರವಾಗಿ ಬಂಧುರವಾಗಿ ಸ್ಥಾಪಿತವಾಗಿ ಪರಮ ವೈದಿಕ ಸನಾತನ ಧರ್ಮವನ್ನೊಳಗೊಂಡ ಮತಗಳೆನಿಸಿವೆ. ಹೀಗಿದ್ದರೂ ಒಂದು ಹಸ್ತದ ಅಯಿದು ಬೆರಳುಗಳಲ್ಲಿನ ಸಜಾತೀಯ ಭೇದವಿದ್ದು ಉದ್ದ ಗಾತ್ರಗಳಲ್ಲಿ ಭಿನ್ನವಿರುವಂತೆ, ವೇದಾಗಮ ಪ್ರೋಕ್ತವಾದ ಮಂತ್ರ ಭಾಗಗಳು, ಮರದ ಬೇರು ಬುಡ ಒಂದೆ ಆಗಿದ್ದರೂ ಇದರ ರೆಂಬೆ ಕೊಂಬೆಗಳು ಬೇರೆ ಬೇರೆ ದಿಕ್ಕು ಗಳಲ್ಲಿ ಹಬ್ಬಿ ಹರಡಿರುವಂತೆ, ದ್ವೈತಾದಿ ಮೇಲುಕ್ತವಾದ ಮತಸಿದ್ಧಾಂತಗಳಿ ಗೆಲ್ಲಾ ವೇದಾಗಮೋಕ್ತ ಉಕ್ತಿಗಳೇ ಆಧಾರ ಸ್ಥಂಭಗಳೆನಿಸಿವೆ. ಇದರಿಂದಾಗಿ ಅಧಿಕಾರಿ ಭೇಧಕ್ಕನುಗುಣವಾಗಿ, ಸಚ್ಚಿದಾನಂದ ನಿತ್ಯ ಪರಿಪೂರ್ಣಾ ದ್ವಿತಿಯಾ ಖಂಡ, ಪರಶಿವ ಬ್ರಹ್ಮ ತತ್ವನಿರ್ಣಯ ಅಂತರಂಗದಲ್ಲಿ "ಸ್ವಾನು ಭೂತ್ಯೇಕ ಮಾನಾಯ" ಸ್ವಾನುಭೂತಿಯಲ್ಲಿ ಆಳವಡಿಸಿ ಕೊಳ್ಳುವ ವಿಧಿವಿಧಾನಗಳು ವಿಭಿನ್ನಗಳಾಗಿ ಕಂಡರೂ "ಏಕತ್ವ ಮನುಪಶ್ಯತಃ" ವಂದರಲ್ಲೊಂದು ಹಾಸು ಹೊಕ್ಕಾಗಿ ನೆಲೆ ಗೊಂಡಿರುವುವು. ಪರಮ ವೀರಶೈವ ಸಿದ್ಧಾಂತ ಜಗದಾದಿ ಯಿಂದ ಪ್ರಜ್ವಲಿಸುವ ಶಿವೋಕ್ತ ವಿಶ್ವಧರ್ಮ. ಸ್ವಯಂ, ಸರ್ವಧರ್ಮ ಸಮ ನ್ವಯ ಹಾಗೂ ಸರ್ವಧರ್ಮ ಸಹಿಷ್ಣುತಾ ಭಾವದಿಂದ ಗರ್ಭಿತವಾದ ಶಿವಾದ್ವೈತ ವಿದು." ಕೃತ ತ್ರೇತಾದಿಯುಗಂಗಳ ಪ್ರತಿ ಪರ್ವ ಕಾಲಂಗಳಲ್ಲೂ, ಶಿವನಾಣತಿ ಯಂತೆ ಸದಾಶಿವನ ಸದ್ಯೋಜಾತಾದಿ ಮುಖಗಳಿಂದ ಚಿತ್ಕಳಾರೂಪವಾಗಿ ಶ್ರೀ ಮತ್ಕೈಲಾಸದಲ್ಲೂ ಹಾಗೂ ಭುವಿಯಲ್ಲಿ ಶಿವನ ಪಂಚ ಮುಖಗಳನ್ನು ಪ್ರತಿ ನಿಧಿಸುವ ಪಂಚಜ್ಯೋತಿರ್ಲಿಂಗಂಗಳ ಗರ್ಭದಿಂದ, ಅದೇ ಪರಶಿವನ ಚಿತ್ಕಳಾ ರೂಪದಲ್ಲಿ ಅಪ್ರತ್ಯಕ್ಷ್ಯ ಭಾವದಿಂ ಆವಿರ್ಭವಿಸಿ, ತಕ್ಷಣವೇ ಸರ್ವತಂತ್ರ ಸ್ವತಂತ್ರ ವಾದ ಸ್ವಶಕ್ತಿಯಿಂದ ಆ ದಿವ್ಯಕಾಂತಿ ಪ್ರದೀಪ್ತಿಯಿಂದ ಬೆಳಗಿ, ಅಂತಪ್ಪ ಸ್ವಯಂ ಜ್ಯೋತಿ ಸಹಜವಾಗಿ ಅಖಂಡಾತಿಶಯದ ಅರಿವುಮಯ ಶ್ರೀ ಜ|| ಪಂಚಾಚಾರ್ಯರ ಚಿಪ್ಘನ ರೂಪದಲ್ಲಿ ಅರ್ಥಾತ್ ಮಂತ್ರಮಯ ಪರಂಜ್ಯೋತಿ ಯಾಗಿ ತ್ರಿಲೋಕಂಗಳಲ್ಲೂ ದೇವ, ದಾನವ, ಮಾನವಾದಿಗಳಿಗೆ ಸತತ ಶ್ರೀ ಜಗದ್ಗುರು ಸಾರ್ವಭೌಮರೆಂದು ಸ್ತುತ್ಯರೆನಿಸಿ ಪ್ರಸಿದ್ಧರಿರುವರು. ಈ ಮಹದಂಶ ವನ್ನು ಭಗವಂತನು ಜಗಜ್ಜನನಿ ಶ್ರೀ ಗಿರಿಜೆಗೆ ಅರುಹುತ್ತಾ ದೇವೀ ! ಮೇಲು

ಕ್ತವಾದ ಕಾರಣಗಳಿಂದ,

ತಸ್ಮಾತ್ತಸ್ಮಾಚ್ಚ ಗಿರಿಜೇ । ಪಂಚಾನನ ಸಮುದ್ಭವಾಃ ।
ಮದಾದಿ ಸರ್ವಲೋಕಾನಾಂ । ಜಗದ್ಗುರು ವರೋತ್ತಮಾಃ ॥
(ಸುಪ್ರಭೇದಾಗಮ)

ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಶ್ರೀಮತ್ ಕೈಲಾಸವೇ ಮೊದಲು ಮಾಡಿ ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆಲ್ಲಾ ಜಗದ್ಗುರು ಸಾರ್ವಭೌಮರೆಂದು ಶಿವನೇ ಜಗವರಿಯುವಂತೆ ಘೋಷಿಸಿರುವಾಗ, ಶ್ರೀ ಜ॥ ಪಂಚಾಚಾರ್ಯರು, ನಮ್ಮಂತೆಯೇ ಅವರು ಮತ್ತೂ ನಾವು ಅವರಿಗೆ ಸರಿ ಸಮಾನ ಜಗದ್ಗುರುಗಳೆಂದು ಸಾರುತ್ತಿರುವ ಇಂದಿನ ಪರಮ ಪೂಜ್ಯ ಜಗದ್ಗುರುಗಳು, ಶ್ರೀಭ್ರಮರಾಂಬಾ ಸಮೇತನಾದ ಶ್ರೀಶೈಲ ಪರ್ವತಲಿಂಗ ಶ್ರೀ ಮಲ್ಲಿಕಾರ್ಜುನನ ದಿವ್ಯ ಸನ್ನಿಧಿಯಲ್ಲಿ ದೀಪಾರಾಧನೆಯೊಂದಿಗೆ ಶ್ರೀ ಮಲ್ಲಿಕಾರ್ಜುನ ಜ್ಯೋತಿರ್ಲಿಂಗದ ದಿವ್ಯ ಸನ್ನಿಧಿಯಲ್ಲಿ **ದಿವ್ಯ ಜ್ಯೋತಿಯ ಸ್ಪರ್ಶಿಸಿ, ತಾವೂ ಸಹ ಅವರಂತೆಯೇ ಅಖಿಲಾಂಡ ಕೋಟ ಬ್ರಹ್ಮಾಂಡಗಳಿಗೆಲ್ಲಾ ಜ॥ ಸಾರ್ವಭೌಮರೆಂದು ಆತ್ಮಸಾಕ್ಷಿಯಾಗಿ ಘೋಷಿಸುವರಾ ?**

**ಯೆಂದು ನಾನು ಆ ಪೂಜ್ಯಪಾದರುಗಳ ಅಡಿದಾವರೆಗಳಲ್ಲಿ ಭಕ್ತಿ ಪೂರ್ವಕ ನಮಸ್ಕರಿಸಿ ಭಿನ್ನೈಸಿ ಕೊಳ್ಳುತ್ತೇನೆ ದೇವಾ! ಇದರಿಂದಾಗಿ ಸಮಾಜದಲ್ಲಿ ಶಾಂತಿ ನೆಲಸಲೆಂದು ಬದ್ಧಾಂಜಲಿ ಪುಟದಿಂದ ಪ್ರಾರ್ಥಿಸುತ್ತೇನೆ. ಶಿವಂ ಶಾಂತಂ**

ಆದಿಗಾದಿಯಾದ ಶಿವಾದ್ವೈತ ಸಿದ್ಧಾಂತ ಆರಂಭದಲ್ಲೇ ಲಿಂಗಪೂಜಾನುಸಂಧಾನವನ್ನು ಪೂಜ್ಯ ಪೂಜಕ ಭಾವದೊಂದಿಗೆ ಆರಾಧನೆಯನ್ನು ಮಾಡಬೇಕೆಂದು ಕಟ್ಟಳೆಯಿಟ್ಟದೆ. ಶಿವ ಜೀವರಲ್ಲಿ ಮೊದಲು ಭಗವಂತ ಭಕ್ತ, ಉಪಾಸ್ಯ ಉಪಾಸಕ, ಭಾವ ಬೇಕೇ ಬೇಕು. ಇದು ದ್ವೈತ ಭಾವದಿಂದ ಕೂಡಿದೆ. ಇಲ್ಲವಾದರೆ ಲಿಂಗಾಂಗ ಭಾವ ಇರಲು ಸಾಧ್ಯವಾಗುವುದಿಲ್ಲ. ಶಿವಲಿಂಗಾರಾಧನ ನಿಷ್ಠೆಗೆ, ಆದಿಯಲ್ಲೇ ಶ್ರೀ ಜ॥ಶಂಕರಾಚಾರ್ಯರು ಬೋಧಿಸಿರುವಂತೆ, "ಆತ್ಮಾತ್ವಂ ಗಿರಿಜಾಮತಿಃ"ಯೆಂಬ, ಅವರ ಭಾವವನ್ನು ಅಖಂಡಾಕಾರವಾಗಿ ನಮ್ಮ ಸುತ್ತಲೂ ಹಮ್ಮಿ ಅದ್ವಿತೀಯ ಭಾವವನ್ನು ಸಮಷ್ಟಿರೂಪದಲ್ಲಿ ಹೊರ ಹೊಮ್ಮಿಕೊಂಡು ಆತ್ಮಾರಾದರೆ, ಪೂಜ್ಯ ಪೂಜಕಭಾವ, ಸ್ವಾಮಿ ಭೃತ್ಯ ಸಂಬಂಧ ಅಳವಡುವುದಿಲ್ಲ.

ಆದ್ದರಿಂದಲೇ ಜಗತ್ ಸೃಷ್ಟಿ ಕಾಲದಿಂದಲೂ ಶ್ರೀ ಜ|| ರೇಣುಕಾದಿ ಪಂಚಾಚಾರ್ಯರು ಶೃತ್ಯಾಗಮಗಳನ್ನು ಆಧರಿಸಿ, ಚತುರ್ವೇದಗಳ ಪೂರ್ವಭಾಗಗಳಲ್ಲಿ ಅಲ್ಲಲ್ಲಿ ಏಕದೇಶವಾಗಿ ಪ್ರತಿಪಾದಿಸಿರುವ ದ್ವೈತಪರ ಮಂತ್ರಗಳನ್ನೂ, ವಿಶಿಷ್ಟಾದ್ವೈತಪರ ಮಂತ್ರಾರ್ಥಗಳನ್ನು ಸಮೀಚೀನವಾಗಿ ಪರಿಷ್ಕರಿಸಿ ವಿಶಿಷ್ಟ ಮಂತ್ರಾರ್ಥಗಳನ್ನು ಸಮೀಚೀನವಾಗಿ ಪರಿಷ್ಕರಿಸಿ ವಿಶಿಷ್ಟ ಮಂತ್ರಾರ್ಥಗಳನ್ನು ಅಭಿನ್ನವಾಗಿ ಅಂದರೆ ಸಾಗರ ತರಂಗ ಭಂಗಿ ನ್ಯಾಯದಂತೆ ವೀಕ್ಷಿಸಿ ಸಾಯುಜ್ಯ ಮೋಕ್ಷ ಪರಂಧಾಮವನ್ನು ಅಂತರಂಗದಲ್ಲಿ ಸಾಕ್ಷಾತ್ಕರಿಸಿ ಕೊಳ್ಳಲು ಹೇತುವಾಗಿವೆಯೆಂದು ಬೋಧಿಸಿರುವರು. ಬಾಳೆ ಮರದ ಪಟ್ಟೆಗಳು ಒಂದರೊಂದಿಗೆ ಮತ್ತೊಂದು ಎಣೆಯಲ್ ಪಟ್ಟವುಗಳಾಗಿ ತಪ್ರಸದಿಂದ ಮಧುರಿವಾದ ಬಾಳೆ ಹಣ್ಣನ್ನು ಪಡೆಯುವಂತೆ ಶೃತಿ ಪ್ರೋಕ್ತ ದ್ವೈತಾದ್ವೈತ, ವಿಶಿಷ್ಟಾದ್ವೈತ, ಶೈವ ಸಿದ್ಧಾಂತಗಳ ಸಾರಾಮೃತವನ್ನು ಶ್ರೀ ಜ|| ಪಂಚಾಚಾರ್ಯರು ದ್ವಾಪರ ಯುಗಾರಂಭದಲ್ಲೇಸಮನ್ವಯಗೊಳಿಸಿ ಶ್ರೀಅಗಸ್ತ್ಯಾದಿಮಹರ್ಷಿಗಳಿಗೆ ಬೋಧಿಸಿ ತದನುಸಾರ ಪ್ರಸ್ಥಾನತ್ರಯಗಳಿಗೆ ಸರ್ವಧರ್ಮ ಸಹಿಷ್ಣುತಾಭಾವದಿಂದ ದಿವ್ಯ ಭಾಷ್ಯಾದಿಗಳನ್ನು ಅಂದೇ ರಚಿಸಿ ಅಖಂಡವಾಗಿ ಬೋಧಿಸಿಸುವರು ಇದು ಜಗತ್ ಪ್ರಸಿದ್ಧವಾದ ವಿಷಯ. ಘನ ಪಂಡಿತ ಮಂಡಲಿಗೆ ವೇದ್ಯವಿರುತ್ತೆ.

ಕಲಿಯುಗದ ಇತ್ತೀಚಿನ ಶ್ರೀಮಧ್ವಾಚಾರ್ಯರ ದ್ವೈತ ಸಿದ್ಧಾಂತ, ಶ್ರೀ ರಾಮಾನುಜರ ವಿಶಿಷ್ಟಾದ್ವೈತ, ಶ್ರೀ ಶಂಕರಾಚಾರ್ಯರ ಅದ್ವೈತ ಸಿದ್ಧಾಂತಗಳು ಭಿನ್ನಭಿನ್ನವಾಗಿರಲು ಕಾರಣವೇನೆಂದರೆ, ಶ್ರೀಮದಾಚಾರ್ಯರು ಮೇಲುಕ್ತವಾದ ಶೃತಿಗಳಲ್ಲಿ ತಮ್ಮ ಸಿದ್ಧಾಂತಗಳಿಗನುಗುಣವಾದ ವ್ಯಾಖ್ಯಾನಗಳನ್ನೂ ಭಾಷ್ಯಾದಿಗಳನ್ನೂ ರಚಿಸಿ ತಮ್ಮ ಶಿಷ್ಯವೃಂದಗಳಿಗೆ ಬೋಧಿಸುತ್ತಾ, ಏಕ ಪಕ್ಷೀಯವಾಗಿ ಸಾರಿರುತ್ತಾರೆ. ಆದರೆ ವೀರಶೈವ ಸಿದ್ಧಾಂತೆ ಶ್ರೀ ತ್ರಿಮತಾಚಾರ್ಯರ ಸಿದ್ಧಾಂತಗಳನ್ನು ತಳ್ಳದೆ. ಪೂರಕವಾಗಿ ಸಮನ್ವಯ ಗೋಳಿಸಿರುವರು. ಪೂಜ್ಯ ಪೂಜಕ ಭಾವ ದ್ವೈತದಲ್ಲಿ ಪ್ರಾರಂಭಿಸಿ, ಶಿವಾದ್ವೈತದಲ್ಲಿವಿಲೀನ ಗೊಳ್ಳುವುದು. ಆರಂಭದಲ್ಲೇ ಈಶಾವಾಸ್ಯ ಮಿದಂ ಸರ್ವಂ। ಸರ್ವಂ ಖಲ್ವಿದಂ ಬ್ರಹ್ಮ॥

ವಾಸುದೇವಃ ಸರ್ವಮಿತಿ, ಶಿವಮಯಂ ಜಗತ್ ॥

ಎಂಬ ವೇದೋಕ್ತ ಶಿರೋಮಂತ್ರಗಳು, ಶಿವ ಸಾಕ್ಷಾತ್ಕಾರ ಪಡೆದ ಐಕ್ಯಾಂಗನಿಗೆ

ಅನ್ವಯಿಸುವ ಶ್ರೇಷ್ಠ ಧರ್ಮ. ಇದು ತ್ಯಾಗಾಂಗ ಜಲಾಂಗ ಭೂತ ಭಕ್ತ ಮಾಹೇಶ್ವರರಿಗೆ ಸರ್ವಥಾ ಅನ್ವಯಿಸುವುದಿಲ್ಲ. ಇಲ್ಲಿ ಲಿಂಗಾಂಗಗಳಿಗೆ ತಾತ್ಕಾಲಿಕವಾಗಿ ಕ್ವಚಿತ್ ಭೇದವಿರಬೇಕು. ಆಗ ಮಾತ್ರ ಪೂಜೆಗೆ ಇಂಬು. ಶ್ರೀ ಮಧ್ವಾಚಾರ್ಯರಂತೆ ನಿರಂತರ ಭೇದವಲ್ಲ. ಶಿವನು ಪ್ರೇರ್ಯನಾಗಿಹನು. ಕೇನೋಪನಿಷತ್ತಿನ ಪ್ರಥಮಾಧ್ಯಾಯದ ಪ್ರಥಮ ಶ್ಲೋಕದಲ್ಲಿ,

ಕೇನೇಷಿತಂ ಪತತಿ ಪ್ರೇಕ್ಷಿತಂ ಮನಃ । ಕೇನಪ್ರಾಣಃ ಪ್ರಥಮಃ
ಪ್ರೈತಿಯುಕ್ತಃ । ಕೇನೇಷಿತಾಂ ವಾಚಮಿಮಾಂವದಂತಿ ।
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥

ಪಂಚಜ್ಞಾನೇಂದ್ರಿಯಗಳಾದ ಮನಸ್ಸು, ಪ್ರಾಣ, ವಾಕ್, ಕಣ್ಣು ಕಿವಿಗಳು ಯಾರ ಪ್ರೇರಕ ಶಕ್ತಿಯಿಂದ ಪ್ರವರ್ತಿಸುತ್ತಲಿವೆಯೋ, ಆ ಅಖಂಡಾದ್ವಿತೀಯ ಪರವಸ್ತು

ಪ್ರೇರಕಂ ಶಂಕರಂ ಬುಧ್ವಾ । ಪ್ರೇರ್ಯಮಾತ್ಮಾನ ಮೇವಚ ॥

ಶ್ರೀ ರೇಣುಕಾಚಾರ್ಯರು ಮನನೀಯವಾಗಿ ಶ್ರೀ ಅಗಸ್ತ್ಯರನ್ನು ವ್ಯಾಜವಾಗಿ ಮುಂದಿಟ್ಟುಕೊಂಡು ತ್ರಿಭುವನಂಗಳಲ್ಲಿನ ಸಮಸ್ತ ದೇವ, ದಾನವ, ಮಾನವರಿಗೆ ತ್ರಿಮತಾಚಾರ್ಯರು ಭುವಿಯಲ್ಲಿ ಅವತರಿಸುವುದಕ್ಕೆ ಲಕ್ಷಾಂತರ ವರ್ಷಗಳ ಪೂರ್ವವೇ ಅಂದರೆ, ದ್ವಾಪರಯುಗದ ಪ್ರಾರಂಭದಲ್ಲಿ ಸುಸ್ಪಷ್ಟವಾಗಿ ಬೋಧಿಸಿರುವರು. ಈ ಅಂಶವನ್ನು ಕ್ರಿ. ಪೂ. ಐದನೇ ಶತಮಾನದಲ್ಲಿದ್ದ ಶ್ರೀಸಿದ್ಧನಾಥ ಶಿವಾಚಾರ್ಯರ ಪುತ್ರರು, ಆದ ಶ್ರೀ ಶಿವಯೋಗಿ ಶಿವಾಚಾರ್ಯ ಮಹೋದಯರು, ಶಿವಲಿಂಗೋದ್ಭವ ಶ್ರೀ ಜ|| ರೇವಣಸಿದ್ಧ ಶಿವಾಚಾರ್ಯರ ದಿವ್ಯಾನುಗ್ರಹದಿಂದ, ಜ್ಞಾನದೃಷ್ಟಿ ಪಡೆದು, ಮಹಾಗುರುವಿನ ದಿವ್ಯ ಕೃಪಾಲವಲೇಶದಿಂದ ದ್ವಾಪರ ಯುಗಾರಂಭದಲ್ಲಿ ಶಿವನ ಆದೇಶದಂತೆ ಶ್ರೀ ಅಗಸ್ತ್ಯರಿಗೆ ಬೋಧಿಸಿದ ಷಟ್ಸ್ಥಲ ಸಿದ್ಧಾಂತದ ರಸದೌತಣದ ಊಟವನ್ನು ತಾವು ಉಂಡು ಜಗದುದ್ಧಾರಾರ್ಥ ಜೀವಂತ ಅಮೃತವಾಣಿಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯೆಂಬ ಷಟ್ಸ್ಥಲೋನ್ನತಿಯ ಸಾರಾಮೃತವನ್ನು ರಚಿಸಿ ಪ್ರಕಾಶ ಗೊಳಿಸಿರುವರು. ಈ ಮಹದಂಶ "ಸತ್ಯಸ್ಯ ಸತ್ಯಃ" ವಿರುತ್ತೆ.

ಕ್ರಿ. ಶ. ೮ ನೇ ಶತಮಾನದಲ್ಲಿ ಸಾಲೋಟಗಿಯ ದಕ್ಷಿಣ ತಕ್ಷಶಿಲಾ ವಿಶ್ವ ವಿದ್ಯಾಲಯದ ಮಹೋಪಾಧ್ಯಾಯರಾಗಿ ಸೇವೆಗೈದ ಶ್ರೀ ಶಿವಯೋಗಿ ಶಿವಾಚಾರ್ಯರು ಅಲ್ಲಿದ್ದ ೫೦೦ ಅಧ್ಯಾಪಕರಿಗೆ ಆಚಾರ್ಯರಾದ್ದ ಕಾರಣ, ಆಗ ಇವರು ಶ್ರೀ ಸಿದ್ಧಾಂತ ಶಿಖಾಮಣಿ ಮಹಾಗ್ರಂಥವನ್ನು ರಚಿಸಿ ಪ್ರಕಾಶಗೊಳಿಸಿ ಪ್ರಚಾರಗೊಳಿಸಿರುವರೆಂದು ಶ್ರೀ ಪರಮಪೂಜ್ಯ ಶ್ರೀ ಜ. ಚ. ನಿ. ಮಹಾಸ್ವಾಮಿಗಳ ಅಭಿಮತ, ಇದು ನಿಜವಾಗಿರುವ ಪಕ್ಷದಲ್ಲಿ ಆ ವಿಶ್ವವಿದ್ಯಾಲಯದ ದಾಖಲಾತಿಗಳಿಂದ ಇವರ ಜನನ ಕಾಲ, ಜನಿಸಿದ ಸ್ಥಳ ಸಂವತ್ಸರ ಮತ್ತು ಇವರ ತಾಯ್ತಂದೆಗಳ ಹೆಸರು, ವಂಶಾವಳಿ ತಿಳಿಯಲು ಅವಕಾಶವಿರುತ್ತಿ. ಎರಡನೆಯದಾಗಿ ಈ ಪೂಜ್ಯರಿಂದ ಶಿಕ್ಷಣ ಲಾಭ ಪಡೆದ ೫೦೦ ಅಧ್ಯಾಪಕರುಗಳಲ್ಲಿ ಕೆಲವರಾದರೂ ತಮ್ಮ ಮಹಾ ಮಹೋಪಾಧ್ಯಾಯರಾದ್ಯ ಶ್ರೀ ಶಿವಯೋಗಿ ಶಿವಾಚಾರ್ಯರು ಇಂಥಾ ವರ್ಷದಲ್ಲಿ ಶ್ರೀ ಸಿದ್ಧಾಂತಶಿಖಾಮಣಿಯನ್ನು ಸ್ವತಃ ರಚಿಸಿ ಬೋಧಿಸಿದರು ಎಂದು ತಮ್ಮ ಕೃತಿ ರತ್ನಗಳಲ್ಲಿ ಅವರವರು ರಚಿಸಿ, ಈ ಗ್ರಂಥ ಕರ್ತೃಗಳ ಜನ್ಮಸ್ಥಳ, ಇವರ‍್ಯಾರ ಮಗ ಯಾವ ಮುಹೂರ್ತದಲ್ಲಿ ಎಷ್ಟನೇ ತಾರೀಖು ಯಾವ ವರ್ಷದಲ್ಲಿ ಜನಿಸಿದರು ಎಂಬ ವಿವರವನ್ನು ಸಂಕ್ಷಿಪ್ತವಾಗಿಯಾದರೂ ಖಚಿತವಾಗಿ ಉಲ್ಲೇಖಿಸುತ್ತಿದ್ದರು. ಶಿವಯೋಗಿ ಶಿವಾಚಾರ್ಯರು ಸೇವೆಗೈದ ಸಾಲೋಟಗಿ ದಕ್ಷಿಣ ತಕ್ಷಶಿಲಾ ವಿಶ್ವವಿದ್ಯಾಲಯದ ಅಂದಿನ ದಾಖಲಾತಿಗಳಲ್ಲಿ ಈ ಮಹಾಮಹೋಪಾಧ್ಯಾಯರ ಪೂರ್ವಾಪರ, ಲಭ್ಯವಿರಬೇಕು. ಇಂತಪ್ಪ ಸರ್ವಾನುಮತದಿಂದ ಸಂಬಲರ್ಹವಾದ ಆಧಾರವಿಲ್ಲದೆ ಇರುವಾಗ ಈ ಪೂಜ್ಯರು ಕ್ರಿ. ಶ. ಎಂಟನೇ ಶತಮಾನದಲ್ಲಿದ್ದ ಶ್ರೀ ಅಭಿನವಶಿವಯೋಗಿ ಶಿವಾಚಾರ್ಯರಿರುವರು. ಯಾಕೆಂದರೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ, "ಶ್ರೀ ಶಿವಯೋಗಿ ಶಿವಾಚಾರ್ಯ ವರ್ಣನಂ" ಎಂಬೆಡೆ ಶ್ಲೋಕ ೨೩ರಲ್ಲಿ,

ಯೇನ ರಕ್ಷಾವತೀ ಜಾತಾ । ಶಿವಭಕ್ತಿಃ ಸನಾತನೀ ।
ಬೌದ್ಧಾದಿ ಪ್ರತಿ ಸಿದ್ಧಾಂತ । ಮಹಾಧ್ವಾಂತಾಂಶು ಮಾಲಿನಃ ॥

ಎಂಬ ಶ್ಲೋಕಾರ್ಥವನ್ನು ಗಂಭೀರ ಭಾವದಿಂದ, ವೀಕ್ಷಿಸಲಾಗಿ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತರು ಕ್ರಿ. ಪೂ. ೪೮೮ ರ ಪ್ರಾರಂಭದ ಕಾಲದಲ್ಲಿ ಶಿವ ಲಿಂಗೋದ್ಭವ ಮಂಗಳ ಮೂರ್ತಿ ಆದಿ ಶ್ರೀ ಜ|| ರೇವಣಸಿದ್ಧ ಶಿವಾಚಾರ್ಯರ ನೇತೃತ್ವದ ದಿವ್ಯ ಕಟಾಕ್ಷಕ್ಕೆ ಪೂರ್ಣಪಾತ್ರರಾಗಿ, ದ್ವಾಪರ ಯುಗ ದಾದಿಯಲ್ಲಿ ಶ್ರೀ ಜ|| ರೇಣುಕಾಚಾರ್ಯರು ಆದಿ ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ಶಿವಾದ್ವೈತ ಸಿದ್ಧಾಂತವನ್ನು "ನೀನು ಕೂಲಂಕಶವಾಗಿ ಹಾಗೂ ಚಂದೋಬದ್ಧ ವಾಗಿ ರಚಿಸಿ ಜಗತ್ತಿನ ಅಸ್ತಿಕ ವೃಂದಕ್ಕೆ ಬೋಧೆಯಾಗುವಂತೆ ರಚಿಸೆಂದು" ಮಂಗಳಾಶೀರ್ವಾದಂಗಳಂ ಮಾಡಿ ಶಿವಯೋಗಿ ಶಿವಾಚಾರ್ಯರಿಗೆ ದಿವ್ಯಜ್ಞಾನ ದೃಷ್ಟಿಯನ್ನು ಹೃತ್ಪೂರ್ವಕ ಅನುಗ್ರಹಿಸಿದ್ದರ ಫಲವಾಗಿ, ಆಗಲೇ ಶ್ರೀ ಶಿವ ಯೋಗಿ ಶಿವಾಚಾರ್ಯರು, ಅಂತರ್ ಮುಖಿಗಳಾಗಿ ಪರಶಿವನನ್ನು ಧ್ಯಾನಿಸಿ, ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ಯಶಸ್ವಿಯಾಗಿ ರಚಿಸಿ, ಕೀರ್ತಿ ಕಾಯದಿಂದ ಶಾಶ್ವತ ಶಿವಯೋಗೀಶ್ವರರಲ್ಲಿ ಇಂದಿಗೂ ಅಗ್ರಗಣ್ಯರಾಗಿರುವರು.

ಈ ಕಾರಣದಿಂದ ಸಮಸ್ತ ವೀರಶೈವರೂ (ಲಿಂಗಾಂಗಿ ಶ್ರೀ ಗುರುವಿರಕ್ತ ವರ್ಗದವರೂ) ಅಖಿಲ ಅಸ್ತಿಕ ವೃಂದದವರೂ, ಏಕ್ಯೋ ಭಕ್ತಿಭಾವದಿಂದ ಪ್ರತಿ ವರ್ಷವೂ ಶ್ರೀ ಜ|| ರೇಣುಕಾದಿ ಪಂಚಾಚಾರ್ಯರ ಯುಗಮಾನೋತ್ಸವ ಗಳನ್ನೂ ಶ್ರೀಆದಿಶಿವಯೋಗಿ ಶಿವಾಚಾರ್ಯರ ಪಂಚ ವಿಂಶತಿ ಶತಮಾನೋತ್ಸವ ಗಳನ್ನೂ ಶ್ರೀ ಅಭಿನವ ಶಿವಯೋಗಿ ಶಿವಾಚಾರ್ಯರ ದ್ವಾದಶ ಶತಮನೋತ್ಸವ ಗಳನ್ನೂ ಹಾಗೂ ಮಹಾತ್ಮಾ ಶ್ರೀ ಬಸವೇಶ್ವರರ ಎಂಟನೇ ಶತಮಾನೋತ್ಸವ ಗಳನ್ನೂ ಅತಿ ವಿಜೃಂಭ ಭಕ್ತಿಭಾವದಿಂದ. || ನ ಭೂತೋ ನ ಭವಿಶ್ಯತಿ || ಎಂಬಂತೆ ಐಕ್ಯಮತ್ಯ ಮನೋಭಾವದಿಂದ ಸರ್ವರೂ ಭಿನ್ನಭಾವವಿಲ್ಲದೆ ಅಚರಿ ಸುವಂತಾಗಲೆಂದು ಪ್ರಾರ್ಥಿಸುತ್ತೇನೆ. ಶ್ರೀ ಮುದ್ದದೇವ ಶಿವಾಚಾರ್ಯರ ಮೊಮ್ಮಗ, ಶ್ರೀ ಸಿದ್ಧನಾಥ ಶಿವಾಚಾರ್ಯರ ಮಗ ಶ್ರೀ ಶಿವಯೋಗಿ ಶಿವಾ ಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃಗಳಿರುವರು. ಇವರು ಮೇಲುಕ್ತವಾದಂತೆ ಕ್ರಿ. ಪೂ. ೪೮೮ ರ ಆದಿಭಾಗದಲ್ಲಿದ್ದು, ಜಗದಾಚಾರ್ಯ ಶ್ರೀ ರೇವಣ ಸಿದ್ಧ ಶಿವಾಚಾರ್ಯರ ದಿವ್ಯಾನುಗ್ರಹಕ್ಕೆ ಪೂರ್ಣಪಾತ್ರರಾಗಿ ದ್ದರು. ಕ್ರಿ. ಶ. ೮ ನೇ ಶತಮಾನದಲ್ಲಿದ್ದ ರೆನ್ನಲಾದ ಶಿವಯೋಗಿ ಶಿವಾಚಾ ರ್ಯರು ತಕ್ಷಶಿಲಾ ವಿಶ್ವವಿದ್ಯಾಲಯದಲ್ಲಿ ಸೇವೆ ಸಲ್ಲಿಸಿದ್ದ ಕಾರಣ ಅ ವಿದ್ಯಾ

ಕೇಂದ್ರದ ರಿಕಾರ್ಡುಗಳಲ್ಲಿ ಇವರ ಜನನ ಕಾಲ ತಂದೆಯಾರೆಂಬುದು ಮತ್ತು ಕೆಲಸದಿಂದ ನಿವೃತ್ತರಾದ ವರ್ಷ ಸಹ ಅಲ್ಲಿನ ದಾಖಲಾತಿಗಳಿಂದ ತಿಳಿದು ಬರುವುದು ಮತ್ತು ಇವರು ನಿವೃತ್ತರಾದಾಗ ಬೀಳ್ಕೊಡುಗೆಯ ಸಮಾರಂಭಕಾಲದಲ್ಲಿ ಇವರ, ೫೦೦ ಅಧ್ಯಾಪಕ ಶಿಷ್ಯರು ಇವರ ಸೇವೆಯನ್ನು ಪ್ರಶಂಸಿಸುತ್ತಾ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃ ಇವರೆಂದು ಘೋಷಿಸಲೇಬೇಕು ಹೀಗೇನಾದರೂ ದಾಖಲಾತಿಗಳಿವೆಯಾ ? ಕ್ರಿ. ಶ. ೮ ನೇ ಶತಮಾನದಲ್ಲಿದ್ದ ಶ್ರೀ ಶೃಂಗೇರಿ ಜ|ಅಭಿನವ ಶಂಕರಾಚಾರ್ಯರಿಗೂ ಮತ್ತು ಶ್ರೀ ಜ|| ಪಂಚಾಚಾರ್ಯರ ಗುರುವರ್ಗಕ್ಕೆ ಸೇರಿದ ಮಹಾತಪಸ್ವಿ ಮತ್ತೂ ಜ್ಞಾನಿಗಳಾದ ಪರಮತ ಕಾಲಾನಲ ಶಿವಾಚಾರ್ಯ ಹಾಗೂ ಪರವಾದಿ ಭಯಂಕರ ಶಿವಾಚಾರ್ಯರೂ ಬ್ರಹ್ಮ ಸೂತ್ರಗಳ ವಿಷಯದಲ್ಲಿ ಶ್ರೀ ಶಂಕರಾಚಾರ್ಯರೊಂದಿಗೆ ನಮ್ಮೀ ಸಿದ್ಧಪುರುಷರು ವಿದ್ವತ್ಪೂರಿತವಾಗಿ ವಾದ ಮಾಡಿ ಬೃಹದ್ ಶಂಕರ ವಿಜಯದಲ್ಲಿ ಸಿದ್ಧಶಂಕರ ಸಂವಾದವೆಂಬ ಮಂಗಳ ಘಟ್ಟ ಪ್ರತಿಪಾದಿತವಾಗಿರುವುದು ಸರಿಯಷ್ಟೆ.

ಅಂಪ ಬಳಿಕ ಕ್ರಿ. ಶ. ೮ ನೇ ಶತಮಾನದಲ್ಲಿದ್ದ ತಕ್ಷಶಿಲಾ ವಿಶ್ವವಿದ್ಯಾಲಯದ ಶ್ರೀ ಶಿವಯೋಗಿ ಶಿವಾಚಾರ್ಯರ ಸಮಕಾಲೀನರಾದ ನಮ್ಮ ಗುರುವರ್ಗಕ್ಕೆ ಸೇರಿದ ಪರಮತ ಕಾಲಾನಲ ಶಿವಾಚಾರ್ಯರೇ ಆಗಲಿ ಅಥವಾ ಪರವಾದಿ ಭಯಂಕರ ಶಿವಾಚಾರ್ಯರೇ ಆಗಲಿ ಒಕ್ಕೊರಳಿನಿಂದ ಶ್ರೀ ಸಿದ್ಧಾಂತ **ಶಿಖಾಮಣಿ** ಗ್ರಂಥವನ್ನು ತಕ್ಷಶಿಲಾ ವಿಶ್ವವಿದ್ಯಾಲಯದಲ್ಲಿ ೫೦೦ ಅಧ್ಯಾಪಕರಿಗೆ ಶಕ್ತಿವಿಶಿಷ್ಟಾ ದ್ವೈತಸಿದ್ಧಾಂತ ಬೋಧಕರಾಗಿದ್ದ ಮಹಾಮಹೋಪಾಧ್ಯಾಯ ಶ್ರೀ ಶಿವಯೋಗಿ ಶಿವಾಚಾರ್ಯರೇ ಪ್ರಥಮತಃ ರಚಿಸಿದ ಮಹೋದಯರೆಂದು, ಮೇಲುಕ್ತವಾದ ಉಭಯ ಸಿದ್ಧ ಪುರುಷರು ಹೇಳದೆ ಇರುತ್ತಿರಲಿಲ್ಲ. ಕ್ರಿ. ಶ. ೯ ನೇ ಶತಮಾನದಲ್ಲಿದ್ದ ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ **"ನೀಲಕಂಠ ಭಾಷ್ಯದಲ್ಲಿ"** ಸಿದ್ಧಾಂತ ಶಿಖಾಮಣಿಯ ಅನೇಕ ಶ್ಲೋಕಗಳನ್ನು ಆಧಾರವಾಗಿ ಉಲ್ಲೇಖಿಸಿರುವರಾದರೂ ಸಮೀಪಕಾಲದಲ್ಲಿದ್ದ ಶಿವಯೋಗಿ ಶಿವಚಾರ್ಯರೇ ಸಿದ್ಧಾಂತ ಶಿಖಾಮಣಿ ಗ್ರಂಥ ರಚನಕಾರರೆಂದು ಜಗವರಿಯುವಂತೆ ತಮ್ಮ ಮಹಾನ್ ಕೃತಿಯಲ್ಲಿ ಉಲ್ಲೇಖಿಸದೇ ಬಿಡುತ್ತಿರಲಿಲ್ಲ. ಕ್ರಿ. ಶ. ೧೦ ನೇ ಶತಮಾನದಲ್ಲಿ ಭಾಷ್ಯಕಾರ ಶ್ರೀ ಕಂಠಾಚಾರ್ಯರು ಇವರ ಶಿಷ್ಯ ಶ್ರೀ ಅಪ್ಪಯ್ಯ ದೀಕ್ಷಿತರೂ ಶ್ರೀ ಸಿದ್ಧಾಂತ ಶಿಖಾಮಣಿ ಬಗೆಗೆ ಅಪಾರ ಭಕ್ತಿ ಗೌರವವಿಟ್ಟಿದ್ದರು.

ಹೀಗಿರುವಲ್ಲಿ ಕ್ರಿ. ಶ. ೮ ನೇ ಶತಮಾನದಲ್ಲಿದ್ದ ಶ್ರೀ ಶಿವಯೋಗಿ ಶಿವಾಚಾರ್ಯರು ಈ ಮಹಾ ಕೃತಿಕಾರರೆಂದು ಸಾರಿಲ್ಲ ಕ್ರಿ. ಶ. ೧೧ನೇ ಶತಮಾನದಲ್ಲಿದ್ದ, ಶ್ರೀಕರಭಾಷ್ಯಕಾರರಾದ ಶ್ರೀಪತಿ ಪಂಡಿತರು ಸಿದ್ಧಾಂತ ಶಿಖಾಮಣಿಯ ಅನೇಕ ಶ್ಲೋಕಗಳನ್ನು ತಮ್ಮ ಭಾಷ್ಯದಲ್ಲಿ ಬಳಸಿಕೊಂಡಿದ್ದರೂ ಇದರ ಗ್ರಂಥಕರ್ತೃ ಕ್ರಿ. ಶ. ೮ ನೇ ಶತಮಾನದಲ್ಲಿದ್ದರೆಂದು ಎಲ್ಲೂ ಉಲ್ಲೇಖಿಸಿಲ್ಲ. ಕ್ರಿ. ಶ. ೧೫ ನೇ ಶತಮಾನದಲ್ಲಿ ಶ್ರೀಮರಿತೋಂಟದಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಗೆ ಸಂಸ್ಕೃತದಲ್ಲಿ ಅಮೋಘವಾದ ವ್ಯಾಖ್ಯಾನ ಮಾಡಿರುವರಾದರೂ, ಕ್ರಿ. ಶ. ೮ ರಲ್ಲಿದ್ದ ಶ್ರೀ ಶಿವಯೋಗಿ ಶಿವಾಚಾರ್ಯರು ಈ ಬೃಹದ್ ಕೃತಿಯನ್ನು ರಚಿಸಿದರೆಂದು ಹೇಳಿಲ್ಲ. ಮೇಲುಕ್ತವಾದ ಪ್ರಸಿದ್ಧ ಭಾಷ್ಯಕಾರರಾರೂ ಹೇಳದೆ ಇರುವಾಗ, ಪರಮಪೂಜ್ಯ ಶ್ರೀ ಜ.ಚ.ನಿ. ಮಹಾಸ್ವಾಮಿಗಳು ಯಾವ ದೃಢವಾದ ಆಧಾರದ ಮೇಲೆ ಸಾಲೋಟಗಿ ದಕ್ಷಿಣ ತಕ್ಷಶಿಲಾ ವಿಶ್ವವಿದ್ಯಾಲಯದ ಮಹಾ ಪಂಡಿತ ಶ್ರೀ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧಾಂತ ಶಿಖಾಮಣಿಯನ್ನು ರಚಿಸಿರುವರೆಂದು ಪ್ರಕಟಿಸಿರುವರೋ ತಿಳಿಯದು.

ಅಂತೂ ವೀರಶೈವರು ಶ್ರೀ ಸಿದ್ಧಾಂತ ಶಿಖಾಮಣಿಯ ಆದಿಕರ್ತೃಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರ ಪಂಚ ವಿಂಶತಿ ಶತಮಾನೋತ್ಸವಗಳನ್ನೂ ಪ್ರತಿವರ್ಷ ಭಾರತದ ಮೂಲೆ ಮೂಲೆಗಳಲ್ಲೂ ಶ್ರೀ ಜ॥ ಪಂಚಾಚಾರ್ಯರ ಯುಗ ಮನೋತ್ಸವಗಳಂತೆ ಭಕ್ತಿ ಭಾವದಿಂದ ಹುರಿದುಂಬಿತರಾಗಿ ಆಚರಿಸಿ ಪುಣ್ಯ ಭಾಗಿಗಳಾಗಬೇಕೆಂದು ಸವಿನಯ ವಿನಂತಿ, ಶಿವಂ ಶಾಂತಂ.

## ಅಂಗಸ್ಥಲ ೨೦. ॥ ಅಹ್ವಾನ ನಿರಸನ ಸ್ಥಲಂ ॥

(ಪರಿ ೧೦)

ಲಿಂಗಾರ್ಚನ ಪರಃ ಶುದ್ಧಃ । ಸರ್ವಾದ್ವೈತ ನಿರಾಸಕಃ ।
ಸ್ವೇಷ್ಟಲಿಂಗೇ ಶಿವಾಕಾರೇ । ನ ತಮಾವಾಹ ಯೇಚ್ಛಿವಂ ॥
ಯದಾ ಶಿವ ಕಲಾಯುಕ್ತಂ । ಲಿಂಗಂದದ್ಯಾನ್ಮಹಾಗುರುಃ ।
ತದಾರಭ್ಯ ಶಿವಸ್ತತ್ರ ತಿಷ್ಠತ್ಯಾಹ್ವಾನ ಮತ್ರ ಕಿಂ ? ಸ ಸಂಸ್ಕಾರೇಷು ಲಿಂಗೇಷು । ಸದಾ ಸನ್ನಿಹಿತಃ ಶಿವಃ ॥ ತತ್ರಾಹ್ವಾನಂ

ಕರ್ತವ್ಯಂ ಪ್ರತಿ ಪತ್ತಿ ವಿರೋಧತಃ ॥ ನಾ ಹ್ವಾನಂ ನ ವಿಸರ್ಗಂ ಚ । ಸ್ವೇಷ್ಟಲಿಂಗೇ ತು ಕಾರಯೇತ್ ॥ ಲಿಂಗ ನಿಷ್ಠಾ ಪರೋ ನಿತ್ಯಮಿತಿ । ಶಾಸ್ತ್ರಸ್ಯ ನಿಶ್ಚಯಃ ॥

(ಶ್ಲೋ. ೪೪-೪೭)

ಮಹತ್ತಿಗೆ ಮಹತ್ತಾಗಿ ಅಣುವಿಗೆ ಅಣುವಾಗಿ, ಅಣುರೇಣುತೃಣಕಾಷ್ಟಗಳಲ್ಲಿ ಸತತ ಶಿವನು ಚರಿಸುತಿಹನು. ಅರಸು, ಅರಸನಾಗಲೂ ಬಲ್ಲ ಕಾಲಾಳಾಗಲೂ ಬಲ್ಲ ಎಂಬಂತೆ ಶಿವನು ತನ್ನ ಲೀಲೆಯಿಂದ ಅಖಂಡ ಸ್ವರೂಪನಾಗಲೂ ಬಲ್ಲ, ಭಕ್ತಾನುಗ್ರ ಲೀಲೆಗಾಗಿ ಖಂಡರೂಪಿಯೂಗಿರಲೂಬಲ್ಲ. ಸರ್ವತಂತ್ರ ಸ್ವತಂತ್ರನಾದ ಜಗದೀಶ್ವರನ ಅನಂತ ಅಪ್ರಮೇಯವೆನಿಸಿದ ಶಕ್ತಿ ಅಗೋಚರ ಅವ್ಯಕ್ತವಿರುವುದು. ಇದನ್ನೂ ನಃಕಿತ್ತ ಬಲ್ಲರು.

ದೈವೀ ಹ್ಯೇಷಾ ಗುಣಮಯೀ । ಮಮ ಮಾಯಾ ದುರತ್ಯಯಾ ।
ಮೇವ ಯೇ ಪ್ರಪದ್ಯಂತೇ ।ಮಾಯಾಮೇತಾಂ ತರಂತಿ ತೇ ॥

(ಗೀ.ಅ.೭ ಶ್ಲೋ ೧೪)

ಸ್ವೇಚ್ಛಾವಿಗ್ರಹ ಯುಕ್ತಾಯ । ಸ್ವೇಚ್ಛಾವರ್ತನ ವರ್ತಿನೇ ।
ಸ್ವೇಚ್ಛಾಕೃತ ತ್ರಿಲೋಕಾಯ । ನಮಃ ಸಾಂಭಾಯ ಶಂಭವೇ॥

ಮೇಲುಕ್ತವಾದ ಶ್ಲೋಕಗಳಿಂದ ತಿಳಿದು ಬರುವುದೇನೆಂದರೆ ಶಿವನ ಲೀಲಾ ವಿಭೂತಿಯೋಗದ ರಹಸ್ಯ, ಶಿವಾನುಗ್ರಹಕ್ಕೆ ಪಾತ್ರನಾದ ಮಾಹೇಶ್ವರನಿಗೆ ಮಾತ್ರಗೋಚರವೇ ವಿನಃ ಸರ್ವತ್ರ ಸರ್ವರನ್ನೂ ಸರ್ವಕಾಲ ನಿಬಿಡವಾಗಿ ಆವರಿಸಿರುವ ವೈಷ್ಣವೀ ಮಾಯೆಯು ವಿಚಿತ್ರ, ಹೀಗೆ ಎಂದು ನಿರ್ಣಯಾತ್ಮಕವಾಗಿ ನಿರೂಪಿಸಲು ಸಾಧ್ಯವಿಲ್ಲ. ಅದ್ದರಿಂದ ಸರ್ವಾದ್ವೈತ ನಿರಸನ ಮಾಡಿದ ॥ ಲಿಂಗಾರ್ಚನ ಪರಃ ಶುದ್ಧಃ ॥ ಪವಿತ್ರವಾದ ಮನಸ್ಸಿನಿಂದ ಅಂತರ್ಮುಖಿಯಾಗಿ ಇಷ್ಟ ಲಿಂಗವನ್ನು ದಿನವಹಿ ದ್ವಿಸಂಧ್ಯಾ ಕಾಲಗಳಲ್ಲಿ ಬಿಡದೆ ವಿಧಿವತ್ತಾಗಿ ಪೂಜಿಸುವ ವ್ರತಧಾರಿ ಮಾಹೇಶ್ವರನಿರುವನು. ಮಾಹೇಶ್ವರ ಸ್ಥಲದ ಲಿಂಗಾರ್ಚಕನಿಗೆ ಸರ್ವಾದ್ವೈತ ಸ್ಥಿತಿ ಅಳವಡದು. "ಲಿಂಗಧಾರಿ ಸದಾ ಶುಚಿಃ" ಎಂಬ ಮಾತು ಮಾಹೇಶ್ವರನಿಗೆ ಅನ್ವಯಿಸುವುದು. ಓಂ ಪ್ರಣವಮಯ ಇಷ್ಟ ಲಿಂಗವು ಸಚ್ಚಿದಾನಂದ ಶಿವಾಕಾರವಾದ್ದರಿಂದ, ಶಿವನನ್ನು ಪುನರಪಿ ಅಹ್ವಾನಿಸುವ ಅವಶ್ಯಕತೆ ಇಲ್ಲ. ಯಾಕೆಂದರೆ, ಶಿವದೀಕ್ಷಾ ಕಾಲದಲ್ಲಿ ಶ್ರೀ ಗುರು ವಿಧಿವತ್ತಾದ ಸಂಸ್ಕಾರದಿಂದ, ಶಿಲಾಂತರ್ಗತ ಶಿವಚೈತನ್ಯ ಅಭಿವ್ಯಕ್ತಿಯಾಗು

ವದು. "ಚೈತನ್ಯಂ ಬ್ರಹ್ಮ" ಎಂದಿದೆ ಉಪನಿಷತ್ತು. ಶ್ರೀ ರೇಣುಕ ಭಗವತ್ಪಾದರು, ಶಕ್ತಿ ಸಂಪುಟದಿಂದ ವಿರಾಜಿಸುವ ಲಿಂಗ ಚಿನ್ನಾದ, ಚಿದ್ಬಿಂದು, ಚಿತ್ಕಳೆ+ಚಿಚ್ಛಕ್ತಿ ಮಯವಾಗಿ ರಾರಾಜಿಸುವುದರಿಂದ, ಜಗದಾದಿಯಲ್ಲಿ ಸ್ವಯಮೇ, ಆದಿ ಮಧ್ಯಾಂತ ರಹಿತವಾದ ಮಹಾಲಿಂಗರೂಪದಲ್ಲಿ ಚಿಜ್ಯೋತಿ ಚಿನ್ಮಯ ಸ್ವರೂಪದಲ್ಲಿ ಆವಿರ್ಭವಿಸಿ ಕಾಣಿಸಿತು, ಇದರ ಬೃಹದ್ಗರ್ಭದಲ್ಲಿ ಬ್ರಹ್ಮಾಂಡ ಕೋಟಿಗಳು, ಪರಮಾಣು ರೂಪದಲ್ಲಿ ಅಂತರ್ಗತವಾಗಿರುವುವೆಂದು ಮಹಾಚಾರ್ಯರು ಅಗಸ್ತ್ಯರಿಗೆ ಬೋಧಿಸಿರುವರು.

ಅತ್ಯಂತ ಗೂಢ ಚೈತನ್ಯಂ । ಜಡ ಮ ವ್ಯಕ್ತ ಮುಚ್ಯತೇ ।
ಸರ್ವಜ್ಞಃ ಪ್ರೇರಕಃ ಶಂಭುಃ । ಕಿಂಚಿದ್ ಜ್ಞೋ ಜೀವವುಚ್ಯತೇ ॥
(ಸಿ. ಶಿ. ಪರಿ. ೫ ಶ್ಲೋ ೪೦)

ಶಿಲಾದಿ ಪ್ರಕೃತಿ ಜಡವಾಗಿದ್ದು ಅತ್ಯಂತ ಗೂಢ ಚೈತನ್ಯ ಅಂತರ್ಗತವಾಗಿಹುದು. ಕಾಷ್ಟದಲ್ಲಿ ಬೆಂಕಿ, ಬೀಜದಲ್ಲಿ ಬೃಹದಾಕಾರದ ಆಲವೃಕ್ಷ, ಜಡ ಮಾನವ ದೇಹದಲ್ಲಿ ಚೈತನ್ಯ ನೆಲಸಿರುವಂತೆ, ಶಿವಕಳೆ, ಶಿವಚೈತನ್ಯ ಸೂಕ್ಷ್ಮಾತಿ ಸೂಕ್ಷ್ಮದಿಂದ ನೆಲೆಸಿದೆ. ನಮ್ಮ ಆಹಾರ ಜಠರಾಗ್ನಿಯ ನಿರಂತರ ಸಂಪರ್ಕದಿಂದ ಅನುಕ್ರಮೇಣ ರಸ, ಲಾಲಾಜಲ, ರಕ್ತ, ಮಾಂಸ, ಮಜ್ಜೆ ಇತ್ಯಾದಿ ಸಪ್ತಧಾತುಗಳಾಗಿ ಪರಿವರ್ತಿಸುವಂತೆ ಕೊನೆಯಲ್ಲಿ ರಜ ರೇತೋ ಸ್ವರೂಪ ಹೊಂದುವುವು. ಇಲ್ಲಿಂದ ಮುಂದೆ ಸಂತಾನೋತ್ಪತ್ತಿಯಾಗುವುದು. ಇದರಂತೆ ಲಿಂಗ ಶಿಲಾಮೂರ್ತಿಗೆ ಶ್ರೀ ಗುರು ವಿಧಿವತ್ತಾಗಿ ಸಂಸ್ಕಾರವನ್ನು ಕೊಟ್ಟಾಗ ಆ ಲಿಂಗ ಶಿಲೆಯಲ್ಲೇ ಸಹಜವಾಗಿ ಗುಪ್ತವಾಗಿರುವ ಸೂಕ್ಷ್ಮ ಚೈತನ್ಯ ಅಭಿವ್ಯಕ್ತವಾಗುವುದು. ಈ ಕಾರಣಗಳೊಂದಿಗೆ ಶ್ರೀ ಗುರು ಶಿಷ್ಯನಿಗೆ ದೀಕ್ಷಾಕಾಲದಲ್ಲಿ ಇಷ್ಟಲಿಂಗಕ್ಕೆ ವಿಧಿವತ್ತಾದ ಸುಸಂಸ್ಕಾರಗಳನ್ನು ಕೊಟ್ಟು ಶಿಲಾಲಿಂಗದಲ್ಲಿ ಸಹಜವಾಗಿ ಅಂತರ್ಗತವಾಗಿರುವ ಶಿವಚೈತನ್ಯವನ್ನು ಶಿವಾನುಗ್ರಹ ಬಲದಿಂದ, ಶಿಷ್ಯನ ಉದ್ಧಾರಾರ್ಥ,

ಸ್ಥಾಪಿತೋಭವ, ಸನ್ನಿಹಿತೋ ಭವ ॥

ಎಂದು ಜಾಗೃತಗೊಳಿಸುವನು. ಹೊರಗಿನಿಂದ, ಲಿಂಗತತ್ವಕ್ಕನ್ಯವಾದ ಯಾವ ಶಕ್ತಿಯನ್ನು ಹೊಸದಾಗಿ ಆಹ್ವಾನಿಸುವುದಿಲ್ಲ. ಇದರಂತೆ ಪೂಜಾ ನಂತರ

ವಿಸರ್ಜನದ ಅವಶ್ಯಕತೆಯೇ ಮಾಹೇಶ್ವರನಿಗೆ ಇರುವುದಿಲ್ಲ. ಶಿವನ ಕಳೆ ಶಿಲಾಲಿಂಗದಲ್ಲಿ ಗೂಢವಾಗಿ ನೆಲಸಿರುವುದರಿಂದ ಇಷ್ಟಲಿಂಗ ಪೂಜಾಕಾಲದಲ್ಲಿ ಆಹ್ವಾನ ವಿಸರ್ಜನೆಗಳೆಂಬ ಕರ್ತವ್ಯ ವೀರಮಾಹೇಶ್ವರನಿಗೆ ಕಿಂಚಿತ್ತೂ ಇಲ್ಲವೇ ಇಲ್ಲ.

ಒಳ ಹೊರಗೆಂಬುದಿಲ್ಲದೆ ||ಪೂರ್ಣಮದಃ ಪೂರ್ಣ ಮಿದಂ|| ಎಂಬಂತೆ ಎಲ್ಲೆಲ್ಲೂತುಂಬಿ ತುಳುಕುವ ಪರಶಿವ ತತ್ವವನ್ನು ಕರೆಹುವುದೆಲ್ಲಿಗೆ ಆ ಪರಶಿವನೇ ತಾನಾದ ನಮ್ಮ ಇಷ್ಟಲಿಂಗದಲ್ಲಿ ಮತ್ತೆ ಆ ಪರಶಿವನ ಆಹ್ವಾನಿಸಿ ವಿಸರ್ಜಿಸಲು ಸಾಧ್ಯವಾ ? ಈ ಕಾರಣಗಳಿಂದ ಮಾಹೇಶ್ವರನು ತನ್ನ ಲಿಂಗ ಪೂಜಾ ಕಾಲವಲ್ಲಿ ಆಹ್ವಾನ ವಿಸರ್ಜನಗಳಿಂದ ದೂರವಿರುವನು.

## ಮಾಹೇ ಅಂಗಸ್ಥಲ ೨೧. ||ಅಷ್ಟಮೂರ್ತಿ ನಿರಸನ ಸ್ಥಲಂ|| (ಪರಿ ೧೦.)

ಯಥಾತ್ಮ ಶಿವಯೋ ರೈಕ್ಯಂ | ನ ಮತಂ ಕರ್ಮ ಸಂಗಿನಃ |
ತಥಾ ಶಿವಾತ್ ಪೃಥಿವ್ಯಾದೇ ರದ್ವೈತಮಪಿ ನೇಷ್ಯತೇ ||
ಪೃಥಿ ವ್ಯಾದ್ಯಷ್ಟ ಮೂರ್ತಿತ್ವ | ಮೀಶ್ವರಸ್ಯ ಪ್ರಕೀರ್ತಿತಂ |
ತದಧಿಷ್ಠಾತೃ ಭಾವೇನ ನ ಸಾಕ್ಷಾ ದೇಕ ಭಾವತಃ ||
ಪೃಥಿವ್ಯಾದ್ಯ ಮಿತಂ ಸರ್ವಂ | ಕಾರ್ಯಂ ಕರ್ತಾ ಮಹೇಶ್ವರಃ |
ನೈತತ್ಸಾಕ್ಷಾನ್ಮಹೇ ಶೋಽಯಂ | ಕುಲಾಲಃ ಕಲಶೋ ಯಥಾ||
ಪೃಥಿವ್ಯಾದ್ಯಾತ್ಮ ಪರ್ಯಂತ | ಪ್ರಪಂಚೋ ಹ್ಯಷ್ಟಧಾಸ್ಥಿತಃ |
ತನು ರೀ ಶಸ್ಯ ಚಾತ್ಮಾಯಂ | ಸರ್ವ ತತ್ತ್ವ ನಿಯಾಮಕಃ

ವಿರಾಡ್ರೂಪದಿಂದ ಬೆಳಗುವ ಅನಂತ ಬ್ರಹ್ಮಾಂಡ ಪಿಂಡಾಂಡಗಳು ಪರಮಾತ್ಮನ ಅಷ್ಟಮೂರ್ತ್ಯಾತ್ಮಕವಿರುವುವೆಂದು, ಮಹಾಕವಿಚಕ್ರವರ್ತಿ ಕಾಳಿದಾಸನು, ತನ್ನ ರಘುವಂಶ ಮಹಾಕಾವ್ಯದಲ್ಲಿ ಉಲ್ಲೇಖಿಸಿ ಸ್ತುತಿಸಿರುವನು.

ಭೂಜಲಾದಿ ಮರುದ್ವ್ಯೋಮ | ಭಾಸ್ಕರಾಶ್ಯಶಿಚೇತನಾಃ ||
ದಿವಾ ಪ್ರಕಾಶತೇ ಸೂರ್ಯೋ | ರಾತ್ರೌ ಚಂದ್ರಃ ಪ್ರಕಾಶತೇ |

**ಸರ್ವ ಚೇತನ ಆತ್ಮಾ ಚ । ಶಿವಾಂಶೋಷ್ಟ ಮೂರ್ತಯಃ॥**

ಅಂದರೆ ನೆಲ, ನೀರು, ಬೆಂಕಿ, ಗಾಳಿ, ಮುಗಿಲು, ಸೂರ್ಯ, ಚಂದ್ರ, ಆತ್ಮ ಇಂತಪ್ಪ ಎಂಟು ಬೃಹದ್ ಶರೀರಗಳಿಂದ ಆಚ್ಛಾಧಿತನಾಗಿ ಪರಿಶೋಭಿಸುತ್ತಲಿದ್ದಾನೆ. ಈ ಎಂಟು ದೇಹಗಳೇ ಅವನಲ್ಲ. ಶಿವನ ಚಿ ಚ್ಛೈತನ್ಯ ಇವುಗಳಲ್ಲಿ ಹಾಸುಹೊಕ್ಕಾಗಿ ||**ಪೂರ್ಣಮದಂ ಪೂರ್ಣ ಮಿದಂ**|| ಎಂಬ ಶೃತಿ ಯುಕ್ತಿಗನುಸಾರ,

**ಮಾಯಾ ಸಹಿತಃ ಪರಮೇಶ್ವರಃ । ಸರ್ವಂ ಜಗತ್ಸೃಷ್ಟ್ವಾ ।**
**ಸ್ವಯಂಚಾನು ಪ್ರವಿಶ್ಯ । ಭೋಕ್ತೃ ಭೋಗ್ಯಾದಿ ರೂಪೇಣ ।**
**ವಿಭಾಗಂ ಕೃತವಾ ನಿತ್ಯರ್ಥಃ ॥**

ಎಲ್ಲದರಲ್ಲೂ ಅವನು ಹಾಸು ಹೊಕ್ಕಾಗಿ ವ್ಯಾಪಿಸಿರುವನು. ಹೀಗಿದ್ದರೂ ಅಷ್ಟಮೂರ್ತಿಗಳೇ ಪರಮಾತ್ಮನಲ್ಲ. ಅಷ್ಟ ಮೂರ್ತಿಗಳೆಂಬ ಶರೀರಗಳಿಂದ ಪರಮೇಶ್ವರನು ಮುಚ್ಚಲ್ಪಟ್ಟಿರುವನು. ಇದರಂತೆಯೇ ಅಷ್ಟಾವರಣಗಳೆಂಬ ಗುರು, ಲಿಂಗ, ಜಂಗಮ, ಭಸ್ಮ ರುದ್ರಾಕ್ಷ, ಮಂತ್ರ, ಪಾದೋದಕ, ಪ್ರಸಾದ ಈ ಎಂಟು ಆವರಣಗಳಿಂದ ಶಿವನು ಆಚ್ಛಾಧಿತನಾಗಿದ್ದರೂ, ಇವು ಶಿವಾಂಶ ಸಂಭೂತ ಆವರಣಗಳೆನಿಸಿವೆ. ಲಿಂಗರೂಪಿ ಶಿವನು ತ್ಯಾಗಾಂಗ ಯೋಗಾಂಗಗಳಿಂದ ಆಚ್ಛಾಧಿತನಾಗಿದ್ದರೂ ಹೇ ಹತ್ರಯಂಗಳಿಂದ ಭಿನ್ನನಿರುವನು. ಪರಮಾತ್ಮನೇ ಅಷ್ಟಾವರಣಗಳಲ್ಲ, ದೇಹ ತ್ರಯಂಗಳೂ ಅವನಲ್ಲ. ಪರಶಿವನನ್ನು ದೇಹತ್ರಯಂಗಳು ಕಾಣಗೊಡದೆ ಮುಚ್ಚಿವೆ ಕುಂಬಾರ ಮಡಕೆಯನ್ನು ನಿರ್ಮಿಸಿದನು. ಅಂದ ಮಾತ್ರಕ್ಕೆ ಮಡಕೆಯೇ ಕುಂಬಾರನಲ್ಲ. ಇದರಂತೆ ಶಿವನಿಂದ ಸೃಷ್ಟಿಸಲ್ಪಟ್ಟ ಬೃಹದಾಕಾರದ ಅಷ್ಟತನುಗಳೇ ಈಶ್ವರನಲ್ಲ ಪರಮೇಶ್ವರನನ್ನು ಕಾಣಗೊಡದೆ ಈ ಎಂಟು ಬೃಹದ್ ದೇಹಗಳು ಪರಮಾತ್ಮನನ್ನು ಆಚ್ಛಾದಿಸಿವೆ. ಪರಮೇಶ್ವರನು ಕರ್ತೃವೆನಿಸಿಹನು. ಜಗತ್ತು ಕಾರ್ಯ ರೂಪವಾದ ಪಂಚಭೂತಗಳು ಕರ್ತೃವನ್ನು ಕಾಣಗೊಡಿಸಿದಂತೆ ಮುಚ್ಚಿವೆ. ಋಗ್ವೇದ, ಶ್ರೀಮದ್ರಂಭಾಪುರೀ ವೀರಸಿಂಹಾಸನಕ್ಕೆ ಅನ್ವಯಿಸಿದ ಪ್ರಸಿದ್ಧ ಪ್ರಥಮ ವೇದ. ಈ ವೇದದ ಉತ್ತರ ಭಾಗದ ಮಹದ್ ತತ್ವವನ್ನು ಶ್ರೀ ರೇಣುಕಾಚಾರ್ಯರು ಶ್ರೀ ಆಗಸ್ತ್ಯ ದಂಪತಿಗಳಿಗೆ ವ್ಯಾಪಕವಾಗಿ ಬೋಧಿಸಿದ ಫಲವಾಗಿ, ಶ್ರೀ ಅಗ.

ಸ್ತ್ರ್ಯರು ಅರ್ಥಗರ್ಭಿತವಾದ "ಅಗಸ್ತ್ಯ ವೃತಿಯನ್ನು ರಚಿಸಿರುವರು." ಇವರ ಧರ್ಮಪತ್ನಿ ಲೋಪಾಮುದ್ರಾದೇವಿ ಋಗ್ವೇದ ಮಂತ್ರಗಳಿಗೆ ಅಲ್ಲಲ್ಲಿ ಘನಗಂಭೀರವಾದ ವ್ಯಾಖ್ಯಾನಗಳನ್ನು ಬರೆದಿರುವುದು ಲೋಕ ಪ್ರಸಿದ್ಧವಿದೆ. ಈ ಮಾರ್ಗವನ್ನೇ ಶ್ರೀ ರಂಭಾಪುರಿ ಮಹಾಪೀಠಾಭಿಮಾನಿಗಳಲ್ಲಿ ಘನ ವಿದ್ವಾಂಸರು ಅನುಸರಿಸುವುದು ಅನುಕರಣೀಯ. ನಮಗೆ ಋಗ್ವೇದದ ಉತ್ತರ ಭಾಗದ ಹತ್ತನೆ ಮಂಡಲದಲ್ಲಿ ಕೆಲವು ಸೂಕ್ತಗಳು ಬಹು ಮುಖ್ಯವಿರುವುವು. ಇವು ಜನ ಕೋಟಿಗೆ ತಿಳಿಯುವಂತೆ ಕಿರು ಹೊತ್ತಿಗೆ ರೂಪದಲ್ಲಿ ಮಂತ್ರಗಳ ಶಬ್ದಾರ್ಥ ಗಳೊಂದಿಗೆ ಲಲಿತವಾದ ವ್ಯಾಖ್ಯಾನ ರೂಪದಲ್ಲಿ ರಚಿಸಿ ಪ್ರಕಾಶಗೊಳಿಸಿ ಜನತೆ ಯನ್ನು ಧರ್ಮದತ್ತ ಆಕರ್ಷಿಸುವುದು ಲೋಕ ಕಲ್ಯಾಣಕರವೆನಿಸಿದೆ.

ಹಿರಣ್ಮಯೇನ ಪಾತ್ರೇಣ । ಸತ್ಯ ಸ್ಯಾಪಿಹಿತಂ ಮುಖಂ ।
ತತ್ ತ್ವಂ ಪೂಸಕ್ಷನ್ನಪಾ ವೃಣು ಸತ್ಯ ಧರ್ಮಾಯ ದೃಷ್ಟಯೆ॥
(ಋಗ್ವೇದ)

ಈ ಮಂತ್ರಾರ್ಥ ಗಂಭೀರವಾಗಿದೆ. ಸತ್ಯಸ್ಯ ಮುಖಂ ಅಂದರೆ ಪರಶಿವ ಬ್ರಹ್ಮನ ಶ್ರೀಮುಖ, ಹಿರಣ್ಮಯೇನ ಪಾತ್ರೇಣ ಬಂಗಾರ ಮಯವಾದ ಪಾತ್ರೆ ಯಿಂದ, ಅಪಿಹಿತಂ ಮುಚ್ಚಲ್ಪಟ್ಟದೆ ಇದರ ತಾತ್ಪರ್ಯವೇನೆಂದರೆ, ಹಿರಣ್ಮಯ ಪಾತ್ರೆಯೆಂದರೆ ವಿಶ್ವೋತ್ತರೋತ್ತರ ವಿಚಿತ್ರಾಯ ಮಾನವಾಗಿ ನಮ್ಮನ್ನು ಆಕರ್ಷಿಸುವ ವೈಭವೋಪೇತವದ ಪ್ರಪಂಚವೆಂಬ ಅರ್ಥ ಬಂಗಾರ ಜನತೆಯನ್ನು ಸರ್ವದಾ ಆಕರ್ಷಿಸುವಂತೆ ಪ್ರಕೃತಿ ಸಂಬಂಧದ ಕನಕ, ಕಾಮಿನಿ, ಕಾಂಚನಗಳು ಮಡದಿ ಮಕ್ಕಳ ಮೇಲಿನ ಆಶಾನಾಮ ಮಾಯೆಯ ತೆರೆಗಳು ಹಾಗೂ ಧನ ಕನಕ ವಸ್ತು ವಾಹನಗಳೂ, ಅಧಿಕಾರದ ಮೇಲಿನ ದರ್ಪ ಮೋಹಾದಿಗಳೆಂಬ ಹಿರಣ್ಮಯ ಪಾತ್ರೆಯಲ್ಲಿನ ಅಸಕ್ತಿಯಿಂದಾಗಿ, ಸತ್ಯಸ್ಯ ಮುಖಂ ಪರಶಿವದರ್ಶನ ವನ್ನು ಆಗ ಗೊಡಿಸದಂತೆ ಈ ಮಾಯೆ ಅಂದರೆ ಮನದ ಮುಂದಣ ಮೋಹ, ಅಪಿಹಿತಂ ಅಡ್ಡಲಾಗಿ ತೆರೆಯಾಗಿ ನಿಂತಿದೆ. ತಾತ್ಪರ್ಯವೇನೆಂದರೆ, ಅಷ್ಟತನು ಗಳಿಗೆ ಭಿನ್ನನಾಗಿ, ಪ್ರಭುವಾಗಿ ಶಿವನು ದೀಪ್ತಿಯಿಂದ ನೆಲೆಸಿದ್ದರೂ, ಪಂಚ ಭೂತಗಳು ಭಗವಂತನನ್ನು ತೋರಗೊಡದೆ ಮುಚ್ಚಿವೆ. "ಅಜ್ಞಾನೇ ನಾ ವೃತಂ ಜ್ಞಾನಂ" ಎಂಬಂತೆ ಅಜ್ಞಾನ ಜ್ಞಾನವನ್ನು ಸೂರ್ಯನನ್ನು ಮೋಡ ಗಳು ಕ್ಷಣಕಾಲ ಆವರಿಸುವಂತೆ ಜಗತ್ತೆಂಬ ಹಿರಣ್ಮಯ ಪಾತ್ರೆ ಸತ್ಯಸ್ಯಮುಖಂ

ಶಿವನ ಮುಖವನ್ನು ನಮಗೆ ತೋರಗೊಡದಂತೆ ಅಪಿಹಿತಂ ಮುಚ್ಚಿಕೊಂಡಿದೆ. ಇದೇ ಋಗ್ವೇದದ ಮತ್ತೊಂದು ಸೂಕ್ತದಲ್ಲಿ ಅಂದರೆ ಛಾಂದೋಗ್ಯೋಪನಿಷತ್ತಿನಲ್ಲಿ,

**ಅಥ, ಯ ಏಷೋಂತರಾದಿತ್ಯೇ । ಹಿರಣ್ಮಯಃ ಪುರುಷೋ ದೃಶ್ಯತೇ ॥**

ಎಂಬ ಮಂತ್ರಭಾಗವಂದಿದೆ. ಇದಕ್ಕೆ ಶ್ರೀ ಕರಭಾಷ್ಯದಲ್ಲಿ ಶ್ರೀಪತಿಪಂಡಿತರು ಸಮರ್ಪಕವಾದ ವ್ಯಾಖ್ಯಾನ ಮಾಡಿರುವರು. ಸೂರ್ಯಮಂಡಲಮಧ್ಯಾಂತವರ್ತಿಯಾಗಿರುವವನು ಶ್ರೀಮನ್ನಾರಾಯಣನೆಂದೂ, ಉಪನಿಷತ್ತುಗಳ ಬೇರೊಂದು ಕಡೆ ಆ ಪರಮನೇ ಪರಮೇಶ್ವರನೆಂದೂ ಪ್ರೋಕ್ತವಾಗಿದೆ. ಮತ್ತೊಂದು ಕಡೆ,

**ಉದಯೇ ಬ್ರಹ್ಮ ರೂಪಂ ಚ । ಮಧ್ಯಾಹ್ನೇತು ಮಹೇಶ್ವರಃ ।**
**ಅಸ್ತಮಾನೇ ಸ್ವಯಂ ವಿಷ್ಣುಃ । ತ್ರಯ ಮೂರ್ತಿರ್ದಿವಾಕರಃ ॥**

ಇಂತು ಶಿವನು ತ್ರಿಮೂರ್ತ್ಯಾತ್ಮಕನೆಂಬೂ ಸಾರುತ್ತಿರುವರು. ಶ್ರೀಪತಿಪಂಡಿತಾರಾಧ್ಯರು ಶ್ರೀಕರಭಾಷ್ಯದಲ್ಲಿ ಎಲ್ಲ ಅಂಶಗಳನ್ನೂ ಕೂಲಂಕಷವಾಗಿ ಸ್ಪಷ್ಟೀಕರಿಸಿ, ಸೌರಮಂಡಲಾಂತರ್ವರ್ತಿತ್ವದಿಂ ರಾಜಿಸುವ ಹಿರಣ್ಮಯ ಪುರುಷನು ಮೇಲುಕ್ತವಾದ ಎಲ್ಲಾ ಅಂಶಗಳಿಗಿಂತಲೂ ಅತೀತನಾದ ಹಾಗೂ ತ್ರಿಮೂರ್ತಿಗಳಿಗೆ ಪಿತನೆನಿಸಿದ ॥ **ತ್ರ್ಯಂಬಕಂ ಯಜಾ ಮಹೇ** ॥ ತ್ರ್ಯಂಬಕೇಶ್ವರನಾದ ಪರಶಿವ ಬ್ರಹ್ಮವೆಂದು ದೃಢಪಡಿಸಿರುವರು. ರೂಪಾತೀತ, ನಾಮಾತೀತ, ಕಾಲಾತೀತನಾದ ಪರಶಿವಬ್ರಹ್ಮ ಸೂರ್ಯಮಂಡಲ ಮಧ್ಯೇ ಸ್ವಯಂ ಭುವಾಗಿ ಬೆಳಗುತ್ತಾ, "ಜ್ಯೋತಿಶಾಂ ಜ್ಯೋತಿ ಪರಂಜ್ಯೋತಿಯಾಗಿ" ಹನು. ಸೂರ್ಯನ ಅನಂತಾನಂತ ಕಿರಣಗಳಾಗಲಿ, ಆ ಮಂಡಲದ ಹೊರವಲಯದ ಪ್ರಕಾಶವಾಗಲಿ ಶಿವನಲ್ಲ, ರುದ್ರನೂ ಅಲ್ಲ. ಸೂರ್ಯಬಿಂಬದ ಮಧ್ಯಾಂತವರ್ತಿ, ಮಹಾರುದ್ರನು, ಮಾರ್ತಾಂಡನೆನಿಸಿ ಪ್ರಜ್ವಲಿಸುತ್ತಿದ್ದರೂ ಪರಶಿವನನ್ನು ಕಾಣಗೊಡದೆ, ಅನಂತ ಕಿರಣಗಳು ಪರಮಾತ್ಮನನ್ನು "ಸತ್ಯಸ್ಯಾಪಿಹಿತಂ" ಮುಖಃ" ಮುಚ್ಚಿವೆ. ಇದೇ ಅಂಶವನ್ನು ಋಗ್ವೇದದ ನಾಸದೀಯ ಸೂಕ್ತದ ೩ ನೇ ಮಂತ್ರದಲ್ಲಿ,

**॥....ತುಚ್ಛ್ಯೇನಾಭ್ವ ಪಿಹಿತಂ ಯಾದಾಸೀತ್....॥**

ಅಂದರೆ ಅಭುಃ=ಪರಶಿವನು, ತುಚ್ಛೇನ= ಮಾಯಾ ಶಕ್ತಿಯಿಂದ ಅಪಿಹಿತಂ ಮುಚ್ಚಲ್ಪಟ್ಟಿದ್ದಾನೆಂದು ನಾಸದೀಯ ಸೂಕ್ತದ ಮಂತ್ರಾರ್ಥ. ಇದ ರಿಂದಾಗಿ ಸೂರ್ಯನನ್ನು ಪ್ರಾರ್ಥಿಸುತ್ತಾ ಸ್ವಾಮಿ ನಿನ್ನ ಕಿರಣಗಳ ಸೆರಗನ್ನು ಸ್ವಲ್ಪ ಓರೆ ಮಾಡು ಮತ್ತೂ ನಿನ್ನ ಪ್ರಕಾಶದ ಕಾಂತಿಯನ್ನು ಕೃಪೆಯಿಂ ಕುಗ್ಗಿಸಿದರೆ ನಿನ್ನ ಹೃದಯದಲ್ಲಿ ಪ್ರತಿಷ್ಠಿತನಾಗಿರುವ ಪರಶಿವನ ದರ್ಶನವಾಗು ವುದು. ಇದರಿಂದ ಸೂರ್ಯನ ಬಿಂಬವಾಗಲಿ, ಅವನ ಪ್ರಕಾಶ ಅಥವಾ ಹೊಂ ಬಣ್ಣದಕಿರಣಗಳಾಗಲಿ ಶಿವನಲ್ಲ. ಇದರಂತೆ, ಕಾಣುವ ಅಷ್ಟತನುಗಳು ಸಹ ಶಿವ ನಲ್ಲವಾದ್ದರಿಂದ, ಇವುಗಳನ್ನು ಚತುರನಾದ ಮಾಹೇಶ್ವರನು ನಿರಸನ ಗೊಳಿಸಿ, ಶಿವಲಿಂಗದೊಳಿಟ್ಟ ದೃಷ್ಟಿಯಿಂ, ಲಿಂಗಾರ್ಚನ ಪರನಾಗಿರುವನು.

## ॥ ಸರ್ವಗತ್ವ ನಿರಸನ ಸ್ಥಲಂ ॥ (ಪರಿ ೧೦) ಮಾಹೇಃ ಅಂಗಸಲ್ಥ ೨೨

ಸರ್ವಗತ್ನೇ ಮಹೇಶಸ್ಯ । ಸರ್ವತ್ರಾ ರಾಧನಂ ಭವೇತ್ ।
ನ ಲಿಂಗಮಾತ್ರೇ ತನ್ನಿಷ್ಠೋ ನ ಶಿವಂ ಸರ್ವಗಂ ಸ್ಮರೇತ್ ॥
ಸರ್ವಗೋಪಿ ಸ್ಥಿತಃ ಶಂಭುಃ । ಸ್ವಾಧಾರೇ ಹಿ ವಿಶೇಷತಃ ।
ತಸ್ಮಾದನ್ಯತ್ರವಿ ಮುಖಃ । ಸ್ವೇಷ್ಟಲಿಂಗೇ ಯಜೇಚ್ಛಿವಂ ॥
(ಶ್ಲೋ ೫೫, ೫೬)

ಪರಮೇಶ್ವರನು "ಈ ಶಾವಾಸ್ಯ ಮಿದಂ ಸರ್ವಂ", ಸರ್ವಾಂತ ರ್ಯಾಮಿ, ಸರ್ವವ್ಯಾಪಿಯಾದ್ದರಿಂದ, ರೂಪಾತೀತನಾದ ಭಗವಂತನನ್ನು. ಆರಾಧಿಸುವುದು ಹೇಗೆ? ಆದ್ದರಿಂದ ಸರ್ವಶಕ್ತನೂ ಸರ್ವಜ್ಞನೂ ಆದ ಸ್ವಾಮಿ ಕೃಪೆಯಿಂ, ಲಿಂಗರೂಪದಿಂದ ಜಗತ್ತಿಗೆ ಪ್ರಥಮತಃ ಗೋಚರನಾದನು. ಲಿಂಗವು ಮೌನವಾದ್ದರಿಂದ ಅದರ ತತ್ವ ಜನತೆಗೆ ಗೋಚರ ಪಡಿಸಲು ಆ ಲಿಂಗದ ಚಿತ್ಕಳೆಯೊಂದು ಗುರು ರೂಪದಲ್ಲಿ ಸ್ವೇಚ್ಛೆಯಿಂ ಹೊರಹೊಮ್ಮಿ ಶಿವ ಶಕ್ತಿ ಸಂಪುಟದ ದೈವೀಸಂಪತ್ತಿನ ಸೌಭಾಗ್ಯವನ್ನು ಜಗತ್ತಿಗೆ ಬೋಧಿಸಿ ಅರಿವು ಮಾಡಿ ಕೊಟ್ಟಿತು. ಲಿಂಗಾರಾಧನೆ ವಿಗ್ರಹಾರಾಧನೆಯಲ್ಲ. ವಿಗ್ರಹವಾದರೋ ಅಂಗಾಂಗ ಅವಯವಗಳಿಂದ ಕೂಡಿದೆ. ಲಿಂಗ, ಸಚ್ಚಿದಾನಂದ ನಿತ್ಯಮಂಗಳ

ರೂಪವುಳ್ಳದ್ದು. ಲಿಂಗ ಹೃತ್ಕಮಲದಲ್ಲಿ ಚಿಜ್ಜ್ಯೋತಿರೂಪದಲ್ಲಿ ಪ್ರಜ್ವಲಿಸುವ ಪರಮಾತ್ಮನ ಪ್ರತೀಕ. ಕಾಣದ ರೂಪಾತೀತ ಪರಾತ್ಪರ ಚಿನ್ಮಯ ಸ್ವರೂಪ ವುಳ್ಳದ್ದು. ಭಕ್ತಕೋಟಿಗಳಿಂದ ಪೂಜೆಯನ್ನು ಸ್ವೀಕರಿಸಿ ಅವರನ್ನು ಅನುಗ್ರಹಿ ಸಲಿಕ್ಕಾಗಿ ದಯಾಮಯನಾದ ಪರಶಿವನು ಲಿಂಗರೂಪದಲ್ಲಿ ಸ್ವೇಚ್ಛೆಯಿಂ ಅವ ತರಿಸಿರುವನು ಎಂದು ಶ್ರೀಗುರು ಶಿಷ್ಯನಿಗೆ ಬೋಧಿಸಿ, ಆತ್ಮ ಕಳೆಯಾದ ತನ್ನಿ ಷ್ಟಲಿಂಗವನ್ನು ಎಡ ಕರಕಮಲದಲ್ಲಿಟ್ಟು ವಿಧಿವತ್ತಾಗಿ ಮಾಹೇಶ್ವರನು ನಿತ್ಯ ತ್ರಿಸಂಧ್ಯಾಕಾಲಗಳಲ್ಲಿ ಪೂಜಿಸಬೇಕೇ ವಿನಃ, ವಿಶ್ವಮಯ ವಿಶ್ವಾಕಾರದ ಸರ್ವ ಗತ ಪರಮಾತ್ಮನ ಪೂಜೆಯನ್ನು ನಿರಸನ ಗೊಳಿಸ ಬೇಕು.

ಮರದಿಂದ ಫಲವು ದೊರೆಯುವುದೆಂದು ಆ ಮರವನ್ನೇ ಯಾರಾದರೂ ತಿನ್ನುವುದುಂಟೆ. ಆಕಳ ಕೆಚ್ಚಲಿನಿಂದ ಹಾಲು ದೊರೆಯುವುದೆಂದು ಆ ಕೆಚ್ಚ ಲನ್ನೇ ಕೊಯ್ದವರುಂಟೆ. ಸರ್ವತ್ರ ಶಿವನಿರುವನೆಂದು ಸರ್ವವನ್ನು ಸದಾ ಆರಾಧಿಸಲುಂಟೆ. ಅಗ್ನಿ ಅಖಿಲಕಾಷ್ಟಂಗಳಲ್ಲಿದ್ದರೂ, ಶಮೀವೃಕ್ಷದ ಕಾಷ್ಟ ದಲ್ಲಿ ಮಿಗಿಲಾಗಿರ್ಪುವಂತೆ ಶಿವನು ಸರ್ವದರಲ್ಲಿರುವನೆಂದು ಸರ್ವವನ್ನು ಆರಾಧಿ ಸಲುಂಟೆ ದೇವಾ ! ನೀವೆನ್ನ ಕರಸ್ಥಲಕ್ಕೆ ಗುರುವಿನ ಅನುಗ್ರಹದಿಂದ ಬಂದಿರಾ ದ್ದರಿಂದ ಪೂಜ್ಯ ಪೂಜಕ ಭಾವದಿಂದ ನಿಮ್ಮನ್ನಾರಾಧಿಸುವ ವ್ರತ ನನ್ನದಯ್ಯಾ ಎಂದು ಮಾಹೇಶ್ವರನು ತನ್ನಿಷ್ಟ ಲಿಂಗಾರಾಧನೆಯಲ್ಲಿ ಸತತ ಮಗ್ನನಾಗಿ ರ್ಪನು.

## ಅಂಗಸ್ಥಲ ೨೩ ||ಶಿವಜಗನ್ಮಯ ಸ್ಥಲಂ||

ಆಕಾಶದ ಗರ್ಭದಲ್ಲಿ ನಾವಿದ್ದರೆ ನಮ್ಮ ಗರ್ಭದಲ್ಲಿ ಆಕಾಶವಿದೆ. ಇದರಂತೆ ಬೀಜದ ಗರ್ಭದಲ್ಲಿ ಬೃಹದ್ ಆಲದ ಮರ ಅಡಗಿರುವಂತೆ, ಪರಮಾ ತ್ಮನ ಗರ್ಭದಲ್ಲಿ ಅನಂತ ಬ್ರಹ್ಮಾಂಡಗಳು ಅವ್ಯಕ್ತವಾಗಿ ಅಡಗಿವೆ. ಶಿವನು ಸೃಷ್ಟಿಗೆ ಉನ್ಮುಖನಾದಾಗ, ಅವನ ಹಿರಣ್ಮಯ ಗರ್ಭದಿಂದ ವಿಶ್ವ ಹೊರ ಹೊಮ್ಮುವುದು. ಬಂಗಾರದಿಂದಾದ ಆಭರಣಗಳು ಬಂಗಾರವೇ ಆಗಿರುವಂತೆ ನೂಲಿನಿಂದಾದ ವಸ್ತ್ರ ನೂಲಿನ ಮಯವೇ ಆಗಿರುವಂತೆ ಶಿವನ ಸಂಕಲ್ಪದಿಂದ ಹೊರಹೊಮ್ಮಿದ ಜಗತ್ತು ಶಿವಮಯವಾಗಿರುತ್ತೆ.

ಯತೋವಾ ಇಮಾನಿ ಭೂತಾನಿ ಜಾಯಂತೇ। ಏನ ಜಾತಾನಿ

ಜೀವಂತಿ । ಯತ್ಪ್ರಯಂತ್ಯಭಿ ಸಂವಿಶಂತಿ । ತದ್ವಿಜಿ ಜ್ಞಾಸಸ್ವ
ತದ್ಬ್ರಹ್ಮ ॥

ಎಂಬ ಉಪನಿಷದ್ವಾಣಿ ಇದಕ್ಕೆ ಆಧಾರವಿರುತ್ತೆ ಸರ್ವವ್ಯಾಪಿ ಶಿವನು,

ಅಖಂಡ ಮಂಡಲಾಕಾರಂ । ವ್ಯಾಪ್ತಂ ಏನ ಚರಾ ಚರಂ ।
ತತ್ಪದಂ ದರ್ಶಿತಂ ಏನ । ತಸ್ಮೈ ಶ್ರೀ ಗುರವೇ ನಮಃ ॥
ಅಂತರ್ಭಹಿಶ್ಚ ತತ್ಸರ್ವಂ । ವ್ಯಾಪ್ತಂ ಏನ ಚರಾಚರಂ ॥

ಎಂಬಂತೆ, ಪರಶಿವನು ಅಣುವಿಗೆ ಅಣುವಾಗಿ ಮಹತ್ತಿಗೆ ಮಹತ್ತಾಗು ತ್ತಾನೆ ಎಲ್ಲವೂ ಆಗಿ ವಿರಾಜಿತನಾಗಿಹನು.

ಅಣೋರಣೀಯಾನ್ । ಮಹತೋಮ ಹೀ ಯಾನ್ ॥
ಪರಂ ಬ್ರಹ್ಮ । ಪರಂ ಧಾಮ ಪವಿತ್ರಂ ಪರಮಂ ಭವಾನ್ ।
ಪುರುಷಂ ಶಾಶ್ವತಂ ದಿವ್ಯಂ । ಆದಿದೇವ ಮಜಂ ವಿಭುಂ ॥

ಎಂದು ಸ್ತುತ್ಯನಾದ ಭಗವಂತನು ವ್ಯಕ್ತಾವ್ಯಕ್ತ ರೂಪದಲ್ಲಿ ಗಂಭೀರ ವಾಗಿ ಸರ್ವತ್ರ ಸರ್ವಕಾಲದಲ್ಲೂ ಸುಪ್ರಸನ್ನ ಭಾವದಿಂದ ಕೂಡಿದ್ದು,

ಅಭಯಂ ಸರ್ವ ಭೂತೇಭ್ಯೋ । ದಧಾಮ್ಯೇ ತದ್ ।
ವ್ರತಂ ಮಮ ॥

ಸಮಸ್ತ ಜೀವಾವಳಿಗೆ ಸತತ ಅಭಯ ಪ್ರಧಾತನಾದ ಶಿವನನ್ನು ಆರಿತ ಮಾಹೇಶ್ವರನು, ಏಕನಿಷ್ಟೆಯಿಂದ ತನ್ನ ಇಷ್ಟಲಿಂಗಾರಾಧನೆಯಲ್ಲೇ ತತ್ಪರನಾ ಗಿರ ಬೇಕು. ಆ ವ್ರತದಿಂದ ಕಿಂಚಿತ್ತೂ ಚಲಿಸ ಬಾರದು. ಶಿವ.

## ಮಾಹೇಃ ಅಂಗಸ್ಥಲ ೨೪ ॥ಭಕ್ತದೇಹಿಕ ಲಿಂಗ ಸ್ಥಲಂ ॥
## (ಪರಿ ೧೦)

ಸಮಸ್ತ ಜಗದಾತ್ಮಾಪಿ ಶಂಕರಃ ಪರಮೇಶ್ವರಃ । ಭಕ್ತಾನಾಂ
ಹೃದಯಾಂ ಭೋ ಜೇ । ವಿಶೇಷೇಣ ವಿರಾಜತೇ ॥ ಕೈಲಾಸೇ
ಮಂದರೇಚೈವ । ಹಿಮಾದ್ರೌ ಕನಕಾ ಚಲೇ । ಹೃದಯೇಷು
ಚ ಭಕ್ತಾನಾಂ । ವಿಶೇಷೇಣ ಶಿವಃ ಸ್ಥಿತಃ ॥

ನಿತ್ಯಂ ಭಾತಿ ತ್ವದೀಯೇಷು । ಯಾತೇ ರುದ್ರ ಶಿವಾ ತನೂಃ ।
ಅಘೋರಾ ಪಾಪ ಕಾಶೀತಿ ಶ್ರುತಿರಾಹ ಸನಾತನೀ ॥ ನಿತ್ಯಂ
ಸಂತೋಷ ಯುಕ್ತಾನಾಂ । ಜ್ಞಾನ ನಿರ್ಧೂತ ಕರ್ಮಣಾಂ ।
ಮಾಹೇಶ್ವರಾಣಾಂ । ಮಂತ್ರಸ್ಥೋ ।
ವಿಭಾತಿ ಪರಮೇಶ್ವರಃ ॥

(ಶ್ಲೋ ೬೭, ೬೮, ೭೦, ೭೨)

ಪರಶಿವ ಬ್ರಹ್ಮ ಅಖಿಲ ಚರಾಚರ, ನಿತ್ಯಾನಿತ್ಯ ವಸ್ತುಗಳಲ್ಲೆಲ್ಲಾ ವ್ಯಾಪಿಸಿದ್ದರೂ, ವಿಶೇಷತಃ ಭಕ್ತರ ಹೃದಯ ಕಮಲದಲ್ಲಿ ಸುಪ್ರಸನ್ನ ಭಾವ ದಿಂದ ವಿರಾಜಿತನಾಗಿಹನು. ಶಿವನು ಕೈಲಾಸದಲ್ಲೂ ಮೇರುಗಿರಿಯಲ್ಲೂ, ಹಿಮವದ್ಗಿರಿ ಮತ್ತೂ ಕನಕಾಚಲದಲ್ಲೂ ನೆಲಸಿಹನೆಂದು ಪ್ರತೀತಿ. ಆದರೆ ವಿಶೇಷತಃ ಶಿವನು ಭಕ್ತರ ಹೃನ್ಮಂದಿರದಲ್ಲಿ ವಿಜೃಂಭ ಭಾವದಿಂದ ಪ್ರಕಾಶಿತನಾ ಗಿಹನು. ಶ್ರೀ ಕೃಷ್ಣ ಗೀತೆಯಲ್ಲಿ,

ಈಶ್ವರಃ ಸರ್ವ ಭೂತಾನಾಂ । ಹೃದ್ದೇಶೇ ಅರ್ಜುನ ತಿಷ್ಟತಿ ।
ಭ್ರಾಮಯನ್ ಸರ್ವ ಭೂತಾನಿ । ಯಂತ್ರಾ ರೂಢಾನಿ
ಮಾಯಯಾ ।

(ಅ. ೧೮, ಶ್ಲೋ ೬೧)

ನನ್ನ ಭಕ್ತರ ಹೃದಯದಲ್ಲಿ ನೆಲಸಿರುವೆನೆಂದು ಅರುಹಿರುವನು. ಇದಕ್ಕೆ ನಿದರ್ಶನವಾಗಿ ಶ್ರೀ ಆಂಜನೇಯನ ಹೃದಯ ಕಮಲದಲ್ಲಿ ಸೀತಾರಾಮರು ಪ್ರಸನ್ನ ಭಾವದಿಂದ ನೆಲೆಸಿರುವರು.

ಭಾವೇ ಭಾವೇ ಹೃದಯ ಭವನೇ। ಭಾವಯೋ ಯಂ ಭವಂತಃ॥
ಭಕ್ತನ ಭಾವವೇ ಭವನ, ಯಜುರ್ವೇದದಲ್ಲಿ,
ಯಾತೇ ರುದ್ರ ಶಿವಾತನೂಃ । ಅಘೋರಾ ಪಾಪಕಾ ಶೀತಿ ॥
ಭೋ ರುದ್ರನೇ ! ಯಾವ ನಿನ್ನ ಶಾಂತವೂ ಮಂಗಳಮಯವೂ ಪವಿತ್ರ

ಮಯವೂ ಆದ ದಿವ್ಯ ಮಂತ್ರಮಯ ದೇಹವು ಅಂದರೆ ಶಿವಲಿಂಗಮೂರ್ತಿ, ಭಕ್ತರ ಹೃನ್ಮಂದಿರದಲ್ಲಿ ದೇದೀಪ್ಯಮಾನವಾಗಿ ಜ್ಯೋತಿರೂಪದಲ್ಲಿ ಪ್ರಜ್ವಲೆ ಸುತ್ತಿಹದೆಂದು ಉಕ್ತವಾಗಿದೆ. ಯೋಗಜಾಗಮದಲ್ಲಿ,

**ವೇದವೇದಾಂತ ವ್ಯಾಖ್ಯಾರ್ಥ । ಸಂದಾನಾತೀತ ವರ್ತನಂ ।**
**ಭಕ್ತಭಾವ ಪರಾನಂದೋ । ಭಕ್ತ ಭಾವೈಕ ಗೋಚರಃ ॥**

ಅಂದರೆ, ವೇದವೇದಾಂತ ಸಿದ್ಧಾಂತಾಗಮೋಪನಿಷದಾದಿಗಳಲ್ಲಿ ಅಸಕ್ತಿ ಯುಳ್ಳ ಯಾವ ಅಧಿಕಾರಿ ತತ್ವಾರ್ಥಗಳನ್ನು ಮನದಲ್ಲಿಮಥಿಸಿ. ನಿರಂತರ ಅನು ಸಂಧಾನ ಮಾಡುತ್ತಾನೋ ಅಂಥಃ ಭಕ್ತನ **॥ ಯೋಗ ಕ್ಷೇಮಂ ವಹಾ ಮ್ಯಹಂ ॥** ನನ್ನ ಅಮೃತ ಹಸ್ತದಲ್ಲಿರುತ್ತೆ. ಸ್ವಾಮಿ ಹೇಳುವುದೇನೆಂದರೆ ನಾನು ಅವನ ಯೋಗಕ್ಷೇಮವನ್ನು ವಹಿಸಿರುತ್ತೇನೆ ಎಂದಿರುವನು. ಶಿವಶರಣರು ನಿನ್ನನು ಭಜಿಸುತ್ತಾ,

**ಓ ದೇವಾ ! ಶರಣ ಜನರ ಸದು ಹೃದಯ । ನಳಿನದೊಳು ।**
**ಪರಿಶೋಭಿಸುತಿಹುದು । ನಿನ್ನಯ ದಿವ್ಯ ಪಾದ ॥**

ಎಂದು ಕೊಂಡಾಡುತ್ತಿಹರು, ಇಂತಪ್ಪ ಪರಶಿವನನ್ನು ಮಾಹೇಶ್ವರನು ಪೂಜಕ ಪೂಜ್ಯ ಭಾವದಿಂದ, ಅಂತರಂಗ ಬಾಹ್ಯಾಂಗಗಳಿಂದಲೂ ನಿತ್ಯ ಆರಾಧಿಸುತ್ತಿರ ಬೇಕು. ಅಂತರಂಗದ ಶಿವಪೂಜೆಯಷ್ಟೆ ಬಾಹ್ಯಾಂಗದ ಪೂಜೆಯೂ ಪ್ರಶಸ್ತವಿರುವುದು. ಬಹಿರಂಗದ ಪೂಜೆ ಇಲ್ಲದೆ ಅಂತರಂಗದ ಪೂಜೆ ಅಳವಡದು ನಿತ್ಯದ ಶಿವಪೂಜೆಯಿಂದ ಜೀವನು ಶಿವನಾಗುವನು ನಿತ್ಯದ ಶಿವಾ ಪೂಜಾನುಷ್ಠಾನದಿಂದ ತ್ಯಾಗಾಂಗ ಇಷ್ಟಲಿಂಗದ ಸಂಪರ್ಕ ಹೊಂದಿ ಲಿಂಗ ರೂಪಿ ಪರಶಿವನನ್ನು ಸತತ ಆರಾಧನೆಯ ಮೂಲಕ, ಆಯತ, ಸ್ವಾಯತ ಸನ್ನಿಹಿತಗೊಳಿಸಿ ಮಾಹೇಶ್ವರನು ಲಿಂಗದೇಹಿಯಾಗಿ ಪ್ರಜ್ವಲಿಸುವನು. ಅಂದ ಮೇಲೆ ಶಿವಾಗಮೋಕ್ತಿಯಂತೆ ಭಕ್ತನ ಕಾಯ ಶಿವಕಾಯ ಶಿವನ ಕಾಯವೇ ಭಕ್ತನಕಾಯ ಇದರಲ್ಲಿ ಸಂದೇಹವಿಲ್ಲ. ಭಗವತ್ಪಾದ ಶ್ರೀ ಜ॥ ರೇಣುಕಾಚಾರ್ಯರು, ದೇವಾಲಯಕ್ಕೆ ಸದೃಶವಾದೀ ಮಾನವ ದೇಹದಲ್ಲಿ ಶಿವನು,

**ಮೂಲಾಧಾರೇಚ ಹೃದಯೇ । ಭ್ರೂಮಧ್ಯೇ ಸರ್ವದೇಹಿನಾಂ।**
**ಜ್ಯೋತಿಲಿಂಗಂ ಸದಾಭಾತಿ। ಯದ್ಬ್ರಹ್ಮೇತ್ಯಾಹು ರಾಗಮಾಃ॥**

**(ಪರಿ ೬, ಶ್ಲೋ ೩೪)**

ಈ ದೇಹದ ಮೂಲಾಧಾರ ಚಕ್ರ, ಹೃತ್ಪದ್ಮ ಮತ್ತು ಭ್ರೂಮಧ್ಯೇ ಮೂರು ಸ್ಥಾನಗಳಲ್ಲಿ ಪರಮಶಿವನು ಚಿಜ್ಜ್ಯೋತಿ ರೂಪದಲ್ಲಿ ಪ್ರಕಾಶಿತನಾಗಿಹನೆಂದು ಅರುಹಿರುವರು ಅಂದ ಬಳಿಕ ಮಾನವ ದೇಹ ನಿಜಕ್ಕೂ ಶಿವಕಾಯವೇ ಇರುತ್ತೆ. ಗೀತೆಯಲ್ಲಿ ಶ್ರೀಕೃಷ್ಣ,

**ಇದಂ ಶರೀರಂ ಕೌಂತೇಯ । ಕ್ಷೇತ್ರ ಮಿತ್ಯ್ಯಭಿಧೀಯತೇ ॥**

ದೇಹವಿದು ಶಿವಕ್ಷೇತ್ರವೆಂದರುಹಿರುವನು. ಶಿವಲಾಂಛನ ಲಾಂಛಿತರಾದ ಶಿವಭಕ್ತರ ಲಲಾಟದಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿಮಾಲೆ, ಕೈಯಲ್ಲಿ ಜಪಸರ, ಮುಖದಲ್ಲಿ ಶಿವಪಂಚಾಕ್ಷರೀ ಮಹಾಮಂತ್ರ, ಅಂಗತ್ರಯಂಗಳಲ್ಲಿ ಲಿಂಗತ್ರಯಂಗಳ ಆರಾಧಿಸುತ್ತಲಿರುವ ಲಿಂಗಧಾರಿ ಸಾಕ್ಷಾತ್ ಶಿವನೇ ತಾನಾಗಿಹನು.

**ಶಿವಜ್ಞಾನಾಗ್ನಿಃ ದಗ್ಧ ಸರ್ವ ಕರ್ಮಾಣಿ । ಭಸ್ಮ ಸಾತ್ಕುರುತೇ ಶಿವೇ ॥**

ಶಿವಜ್ಞಾನಾಗ್ನಿ ಸರ್ವಪಾಪ ಕರ್ಮಗಳನ್ನು ದಹಿಸಿ ಮಾನವನನ್ನು ಕ್ರಮೇಣ ಮಹಾದೇವನನ್ನಾಗಿಸುವುದು ಇದುವೇ ನಿಜಕ್ಕೂ ಭಕ್ತದೇಹಿಕ ಲಿಂಗಸ್ಥಲವೆನಿಸಿದೆ.

ಇಲ್ಲಿಗೆ ಭಕ್ತಸ್ಥಲದ ೧೫ ಉಪಸ್ಥಲಗಳ ಮತ್ತೂ ಮಾಹೇಶ್ವರ ಸ್ಥಲದ ೯ ಉಪಸ್ಥಲಗಳೂ ಆಗಿ ಒಟ್ಟು ೨೪ ಅಂಗ ಸ್ಥಲಗಳ ಯತ್ಕಿಂಚಿತ್ ವಿವರಣೆ ಮಹಾಚಾರ್ಯರ ಕೃಪಾಲಬ್ಧ ಅನುಗ್ರಹದಿಂದ ಮೂಡಿ ಬಂದಿದೆ ಎಂದು ಹೇಳಲು ಸಂತೋಷವೆನಿಸುತ್ತೆ ಮುಂದೆ ೭ ಉಪಸ್ಥಲಗಳಿಂದ ಕೂಡಿರುವ ಮಹತ್ತರವಾದ ಪ್ರಸಾದಿ ಸ್ಥಲದ ಮಹಾಮಂಟಪದೊಳಗೆ ಪ್ರವೇಶಿಸೋಣ. ಶಿವ.

## ಪ್ರಸಾದಿಸ್ಥಲಃ ಅಂಗಸ್ಥಲಃ ೨೫ ಪ್ರಸಾದಿಸ್ಥಲಂ (ಪರಿ. ೧೧)

**ಲಿಂಗನಿಷ್ಠಾಧಿ ಭಾವೇನ ಧ್ವಸ್ತ ಪಾಪ ನಿಬಂಧನಃ । ಮನಃ**
**ಪ್ರಸಾದ ಯೋಗೇನ ಪ್ರಸಾದೀತ್ಯೇಷ ಕಥ್ಯತೇ ॥**
**ನೈರ್ಮಲ್ಯಂ ಮನಸೋ ಲಿಂಗಂ । ಪ್ರಸಾದ ಇತಿ ಕಥ್ಯತೇ ।**
**ಶಿವಸ್ಯ ಲಿಂಗರೂಪಸ್ಯ ಪ್ರಸಾದಾ ದೇವ ಸಿದ್ಧ್ಯತಿ ॥ ಶಿವ**
**ಪ್ರಸಾದೋ ಯದ್ದ್ರವ್ಯಂ ಶಿವಾಯ ವಿನಿವೇದಿತಂ ನಿರ್ಮಾಲ್ಯಂ**
**ತತ್ತು ಶೈವಾನಾಂ ಮನೋ ನೈರ್ಮಲ್ಯ ಕಾರಣಂ ॥**

ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲ ಜ್ಞಾನ ಕಾರಣಂ ||
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ ||
ನಿತ್ಯ ಸಿದ್ಧೇನ ದೇವೇನ ಭಿಷಜಾ ಜನ್ಮರೋಗಿಣಾಂ । ಯದ್ಯತ್ಪ್ರ
ಸಾದಿತಂ ಭುಕ್ತ್ವಾ, ತತ್ತಜನ್ಮರಸಾಯನಂ || ಆರೋಗ್ಯ
ಕಾರಣಂ ಪುಂಸಾಂ ಅಂತಃ ಕರಣ ಶುದ್ಧಿದಂ । ತಾಪತ್ರಯ
ಮಹಾರೋಗ ಸಮುದ್ಧರಣಂ ಭೇಷಜಂ ||

(ಶ್ಲೋಕ ೨, ೬, ೭, ೮, ೧೨, ೧೩)

## ಶ್ರೀ ಜ|| ರೇಣುಕಾದಿ ಪಂಚಾಚಾರ್ಯರ ಕೃಪಾಶೀರ್ವಾದ ಪ್ರಸಾದ

ಓಂ ಹರಃ, ನಾನು ಪಂಡಿತನಲ್ಲ. "ಫಂಡ" ಎಂಬ ಧಾತುವಿನಿಂದ ಪಂಡಿತ ಶಬ್ಧ ಉತ್ಪನ್ನವಾಗಿದೆ ಪಂಢ ಎಂದರೆ ಅಖಂಡ ಶಿವಜ್ಞಾನ ಭಂಡಾರ ವೆಂದರ್ಥ. ಇಂತಪ್ಪ ಶಿವಜ್ಞಾನ ವಿದ್ಯಾವಾರಿಧಿ ಪಂಡಿತನೆನಿಸುವನು. ಪಂಡ ಶಬ್ಧದಿಂದ FUND ನಿಧಿಯೆಂದು ಅರ್ಥವಿರುತ್ತೆ. ಆತ್ಮಾನಾತ್ಮಜ್ಞಾನ ನಿಧಿಯುಳ್ಳಾತ ನಿಜಕ್ಕೂ ಪಂಡಿತನೆನಿಸಿಹನು. ಸಿದ್ಧಾಂತ ಶಿಖಾಮಣಿ ಗ್ರಂಥ ಕರ್ತೃ ಶ್ರೀ ಶಿವಯೋಗಿ ಶಿವಾಚಾರ್ಯರು ಪಂಡಿತರಿರುವರು ಶ್ರೀ ಜ|| ರೇಣುಕಾ ಚಾರ್ಯರು ಪಂಡಿತರತ್ನನೆನಿಸಿರುವರು. ಅಜ್ಞನಾದ ನಾನು ಶ್ರೀ ಪಂಚಾಚಾರ್ಯರ ದಿವ್ಯಾನುಗ್ರಹ ಪ್ರಸಾದ ಯೋಗದಿಂದ ವೀರಶೈವದ ಬಗೆಗೆ ನಾಲ್ಕಾರು ಕೃತಿಗಳನ್ನು ರಚಿಸಲು ಸಾಧ್ಯವಾಯಿತು.

ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ ೧೦೦೮ ಜ|| ಶ್ರೀ ಪ್ರಸನ್ನ ರೇಣುಕ ವೀರರುದ್ರಮುನಿದೇವ ರಾಜ ದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರ ಮತ್ತು ಶ್ರೀ ಕಾಶಿ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜ|| ಶ್ರೀ ಶ್ರೀ ಶ್ರೀ ವಿಶ್ವೇಶ್ವರ ದೇಶೀಕೇಂದ್ರ ಶಿವಾಚಾರ್ಯ ಭಗವತ್ಪಾದರ ದಿವ್ಯ ಕೃಪಾಶೀರ್ವಾದಗಳ ಪ್ರಭಾವದಿಂದ ಭಕ್ತ್ಯಾ ರಚನಾತ್ಮಕವಾಗಿ ರಚಿಸೋಣವಾಗಿದೆ. ಶ್ರೀ ರಂ|| ಲಿಂ|| ಶ್ರೀ ಜ|| ವೀರಗಂಗಾಧರ ಶಿವಾಚಾರ್ಯರ, ಲಿಂ|| ಶ್ರೀ ಜ|| ಶ್ರೀಶೈಲವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರ ಮತ್ತು ಹಿಮವ

ತ್ಕೇದಾರ ಶ್ರೀ ಲಿಂ|| ಜ|| ಶಾಂತಲಿಂಗ ಶಿವಾಚಾರ್ಯ ಭಗವತ್ಪಾದರುಗಳ ಹೃತ್ಪೂರ್ವಕವಾದ ಶುಭಾಶೀರ್ವಾದ ಪ್ರಸಾದದ ಪ್ರಭಾವದಿಂದ ನಾನು ಷಟ್ಸ್ಥಲ ಸಿದ್ಧಾಂತ ಸಂಬಂಧದ ವಿಷಯವಾಗಿ, ಸಾಗರದಲ್ಲಿ ಸಾಸಿವೆಯಷ್ಟು ನನ್ನ ಅನುಭವಕ್ಕನುಸಾರ ಪ್ರತಿಪಾದಿಸಲು ಯತ್ನಿಸಿದ್ದೇನೆ.

ಶಿವಪ್ರಸಾದದ ಮಹಿಮೆ ವರ್ಣನಾತೀತವಾದುದು. ಪರಶಿವನ ದಿವ್ಯ ಪ್ರಸಾದ ಪರಮ ಜ್ಞಾನ ಕಾರಣ. ಪ್ರಸಾದದೊಲುಮೆಯಾದಾತಂಗೆ ವಿಶ್ವವೆಲ್ಲಾ ಶಿವ ಮಯವಾಗಿರ್ಪುದು, ಶಿವಪ್ರಸಾದದ ಮಹಿಮೆಯಿಂದ, ಜನನಮರಣ ಶೃಂಖಲೆ ಯಿಂದ ಮುಕ್ತನಾಗುವನು. ಹೆಚ್ಚೇನು, ಭುವನತ್ರಯಂಗಳಲ್ಲಿ ಹರ ಗುರು ಪ್ರಸಾದಕ್ಕಿಂತ ಸರಿ ಮಿಗಿಲು ಬೇರೊಂದಿಲ್ಲ. ಭಕ್ತಸ್ಥಲದವನು ಪರಾಭಕ್ತಿ ಯೋಗದಿಂದ ಮಾಹೇಶ್ವರನೆನಿಸುವನು.

**ಕೇನ ವಾ ಧರ್ಮ ಭೇದೇನ । ಭಕ್ತೋ ಮಾಹೇಶ್ವರೋ**
**ಭವೇತ್ ॥**

ಇದರಂತೆ ಮುಂದೆ ಮನಃ ಪ್ರಸಾದ ಯೋಗದಿಂದ ಮಾಹೇಶ್ವರನು ಪ್ರಸಾದಿ ಎನಿಸುವನು.

ನಿತ್ಯ ಇಷ್ಟಲಿಂಗ ಪೂಜಾರಾಧನೆಗಳಿಂದ ಲಿಂಗನಿಷ್ಠನಾದ ಮಾಹೇಶ್ವರನು ಅಖಿಲ ಪಾಪದೋಷಗಳಿಂದ ಮುಕ್ತನಾಗಿ ನಿರ್ಮಲ ಮನಸ್ಸಿನಿಂದ ರಂಜಿಸುತ್ತ ಲಿರ್ಪನು. ಇದರಿಂದಾಗಿ ಮಾಹೇಶ್ವರ ತಾನೇ ಪ್ರಸಾದಿಯೆಂದು ಸಂಕೀರ್ತಿಸ ಲ್ಪಡುವನು. ಹರಗುರುಗಳ ದಿವ್ಯ ಪ್ರಸಾದ ಶ್ರದ್ಧಾತ್ಮರಿಗೆ ಸುಲಭದಿಂದ ದೊರೆಯುವುದು. ಪ್ರಸಾದ ಸೇವನೆಯನ್ನು ಭಯಭಕ್ತಿಗಳಿಂದ, ಅಂಗಾಂಗ ವೆಲ್ಲಾ ಕಣ್ಣಾಗಿರ್ದು ಜಾಗರೂಕತೆಯಿಂದ ಒಂದು ಹನಿ ಸೇವಿಸಿದರೆ, ಅನಂತ ಫಲವಿರುತ್ತೆ. ನೀರು ಕುಡಿದಂತೆ, ಹಾಲ ಸೇವಿಸಿದಂತೆ ಅಮೃತವನ್ನು ಸೇವಿ ಸಲು ಯಂತು ಸಾಧ್ಯ ?.

ಹೀಗೆ ಎಚ್ಚರಿಕೆಯಿಂದ ಗುರುಲಿಂಗ ಜಂಗಮರ ದಿವ್ಯ ಪ್ರಸಾದವನ್ನು ಸೇವಿಸಲು ನಿರಾಳವಾದ ಮನಸ್ಸು, ಪವಿತ್ರವಾದ ಹೃದಯ, ನಿರ್ಮಲ ಚಿತ್ತ ಅತ್ಯಾವಶ್ಯಕವಿರುತ್ತೆ. ಶಿವಪ್ರಸಾದ ಸೇವನೆಯಿಂದ ಘೋರ ಸಂಸಾರ ಸಂತಾಪ ತೊಲಗುವುದು. ಶ್ರೀ ಗುರುಲಿಂಗಜಂಗಮರ ಪ್ರಸಾದಕ್ಕಿಂತ ಮೂರು ಲೋಕ ಗಳಲ್ಲೂ ಅತ್ಯಧಿಕವಾದ ಬೇರೆ ಪ್ರಸಾದವಿಲ್ಲ. ವಿರಾಡ್ರೂಪದ ಈ ಅಖಂಡ

ಜಗತ್ತು ಶಿವಪ್ರಸಾದ ರೂಪದಲ್ಲಿ ಪರಿಶೋಭಿತವಾಗಿದೆ. ಜೀವಾತ್ಮರ ವಿವಿಧ ಲೀಲಾ ವಿನೋದಕ್ಕೆ ಸಜ್ಜಾಗಿ ಬೆಳೆದು ನಿಂತಿರುವ ರಂಗಮಂಟಪವಿದು. ಪರಮ ಪೂಜ್ಯ ಹರ ಗುರುಗಳಲ್ಲಿ ಯಾರ ಮನೋಬುದ್ಧೀಂದ್ರಿಯಂಗಳು, ಶ್ರದಾಭಕ್ತಿ, ನಿಷ್ಕಾಮಭಕ್ತಿಗಳಿಂದ ಪ್ರಫುಲ್ಲಿತವಾಗಿ ನೆಲೆಗೊಂಡಿರುವುವೋ ಆ ಸ್ಥಿತಿ ಪ್ರಸಾದ ವೆನಿಸಿದೆ. ಪಕ್ವಾನ್ನ ಹಾಗೂ ಹಣ್ಣು ಹೂವು ಇತ್ಯಾದಿ ಪದಾರ್ಥಗಳನ್ನು ಭಕ್ತಿ ಪೂರ್ವಕ ಹರ ಗುರುಗಳಿಗೆ ಅರ್ಪಿಸಿದ ಬಳಿಕ, ಆ ಪದಾರ್ಥಗಳ ಗುಣ ಲಕ್ಷಣಗಳು ಹಿಂಗಿ ಪ್ರಸಾದ ರೂಪವನ್ನು ಹೊಂದುವುವು ಇದು ಈಶ್ವರೀಯ ದಿವ್ಯ ಚೈತನ್ಯದ ಅದ್ವಿತೀಯ ಪ್ರಭಾವವೆನಿಸಿದೆ. ಇಂತಪ್ಪ ಪರಮ ಪವಿತ್ರ ವಾದ ಶಿವಪ್ರಸಾದ ನಿತ್ಯ ಸೇವನೆಯಿಂದ ಮನೋ ನೈರ್ಮಲ್ಯ, ಚಿತ್ತ ಶುದ್ಧಿ, ಬುದ್ಧಿ ನಿಲುಗಡೆಯಿಂದಾ ಮಾಹೇಶ್ವರನು ಪ್ರಸಾದಿಯೆನಿಸುವನು. ಮಾನವ ಯಾವ ಪದಾರ್ಥಗಳನ್ನು ತನ್ನ ಭೋಗಕ್ಕಾಗಿ ಶೇಖರಿಸಿಕೊಂಡಿರುವನೋ, ಅವನ್ನು ಅನನ್ಯ ಭಕ್ತಿಭಾವದಿಂದ ಶಿವನಿಗೆ ಪ್ರಥಮತಃ, ಹರಗುರುಗಳಿಗೆ ಸಹ ವಿನಯ ಪೂರ್ವಕ;ನಾನೆಂಬ ಪೆಡಂಭೂತವ ವರ್ಜಿಸಿ, ಆರ್ಪಿಸಿಪರೆ, ಆವರ ದೃಷ್ಟಿ ಮತ್ತು ಅವರ ಅಮೃತ ಹಸ್ತ ಹಾಗೂ ಪವಿತ್ರ ಸಂಕಲ್ಪಗಳ ಸ್ಪರ್ಶವಿಶೇಷಣ ಗಳಿಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವಾಗಿ ಪರಿಣಮಿಸುವುದು ಇಂತಪ್ಪ ದಿವ್ಯ ಪ್ರಸಾದವನ್ನು ಭಕ್ತರು ನಿತ್ಯ ಕಿಂಚಿತ್ ಸೇವನೆಯಿಂದ ಚಿತ್ತಶುದ್ಧಿಯಾಗಿ, ಸಂಸಾರ ರೋಗ ನಿವಾರಣೆಯಿಂದ, ದೀರ್ಘಾಯುರಾರೋಗ್ಯ ಸಂಪತ್ ಸಂವೃದ್ಧಿ ಯಿಂದ ಸುಖಿಸುವರು. ಇದು ಪ್ರಸಾದಿ ಸ್ಥಲದ ಪ್ರಸಾದಿಯ ಧರ್ಮವಿರುತ್ತೆ. ನಿತ್ಯ ನಿರಂತರ ಶಿವಪ್ರಸಾದ ಸೇವನೆ, ಮೋಹನಾಶಕ್ಕೆ, ಶಿವಜ್ಞಾನಾವಿರ್ಭಾ ವಕ್ಕೆ, ವೈರಾಗ್ಯ ಸಂಪತ್ತಿಗೆ ಮೂಲಕಾರಣವೆನೆಸಿದೆ.

**ಪತ್ರಂ ಪುಷ್ಪಂ ಫಲಂ ತೋಯಂ । ಯಚ್ಛಿವಾಯ ನಿವೇದಿತಂ ।**
**ತತ್ತತ್ ಸ್ವೀಕಾರ ಯೋಗೇನ । ಸರ್ವ ಪಾಪಕ್ಷಯೋ ಭವೇತ್ ॥**
**(ಶ್ಲೋ. ೧೭)**

ಹಸಿರು ಪತ್ರೆ, ಪುಷ್ಪ, ಫಲ, ತೋಯ, ಯಾವುದು ಶಿವನಿಗೆ ಭಕ್ತ್ಯಾ ಅರ್ಪಿಸಲ್ಪ ಡುವುದೋ ಅವುಗಳನ್ನು ಭಕ್ತನು ಪ್ರಸಾದರೂಪದಲ್ಲಿ ಸ್ವೀಕರಿಸುತ್ತಾ ಅದ ದಿನ ಪಾಪದೋಶಗಳಿಂದ ಮುಕ್ತನಾಗ ಬೇಕು.

ಶ್ರೀಮಹಾ ಗುರುವಿನ ಪ್ರಸಾದ ಅತ್ಯಧಿಕವೆನಿಸಿದೆ.

ಪ್ರಸಾದಾ ದೇವ ಸಾ ಭಕ್ತಿಃ । ಪ್ರಸಾದೋ ಭಕ್ತಿ ಸಂಭವಃ ।

ಪ್ರಸಾದ ಪೂರ್ವಿಕಾ ಯೇಯಂ । ಭಕ್ತಿರ್ಮುಕ್ತಿ ವಿಧಾಯಿನೀ ।

(ಸಿ.ಶಿ.ಪರಿ. ೯. ಶ್ಲೋ ೧೧ ; ೧೨)

ದಯಾಮಯನಾದ ಭಗವಂತನ ಪ್ರಸಾದ ರೂಪ ಅಮೃತ ಸಾಗರದ ಮಧ್ಯೇ ಭಕ್ತಿ ತತ್ವ ಆವಿರ್ಭವಿಸುವುದು. ಪ್ರಸಾದಮಯ ಅನುಗ್ರಹ, ಭಕ್ತಿ ಕಾಂತಾಮಣಿಯ ಪ್ರಭಾವದಿಂದ ಜನ್ಯವಾದುದು.

"ಪ್ರಸಾದೋಪಿ ಮಹೇಶಸ್ಯ । ದುರ್ಲಭಃ ಪರಿಕೀರ್ತ್ಯತೇ ॥

ಘೋರ ಸಂಸಾರ ಸಂತಾಪ । ನಿವೃತ್ತಿರ್ಯೇನ ಜಾಯತೇ ॥

(ಸಿ.ಶಿ.ಪರಿ. ೧೧ ಶ್ಲೋ ೬೭)

ಭಯಂಕರವಾದ ಸಂಸಾರ ದುಃಖ ಯಾವುದರಿಂದ ನಾಶವಾಗುವುದೋ ಅಂತಪ್ಪ ಶಿವಪ್ರಸಾದ ಮಾನವರಿಗೆ ಲಭಿಸುವುದು ಅತ್ಯಂತ ದುರ್ಲಭವಿರುತ್ತೆ. ಆದರೂ ಸುಕೃತಶಾಲಿಗಳಿಗೆ ಸುಲಭದಲ್ಲಿ ದೊರಕುವುದು.

ಪ್ರಸಾದಾ ದೇವ ಸ ಭಕ್ತಿಃ | ಪ್ರಸಾದೋ ಭಕ್ತಿ ಸಂಭವಃ ।

ಯಥೈವಾಂಕುರತೋ ಬೀಜಂ । ಬೀಜತೋ ವಾ ಯಥಾಂ

ಕುರಃ ॥

(ಪರಿ. ೯ ಶ್ಲೋ ೧೧)

ಅಂಕುರದಿಂದ ಹೇಗೆ ಬೀಜ ಉತ್ಪನ್ನವಾಗುವುದೋ, ಬೀಜದಿಂದ ಅಂಕುರ ಅದರಂತೆಯೇ ಉತ್ಪನ್ನವಾಗುವುದು. ಇದರಂತೆ, ಭಕ್ತಿಯು ಶಿವಾನುಗ್ರಹ ದಿಂದ ಉತ್ಪನ್ನವಾಗುವುದು. ಅಂತೂ ಒಟ್ಟಿನಲ್ಲಿ ನಿತ್ಯ ಉಪಯೋಗಿಸುವ ಭಕ್ಷ್ಯಭೋಜ್ಯಾದಿಗಳನ್ನು ಶಿವನಿಗೆ ಭಕ್ತಿಯಿಂದ ನಿವೇದಿಸಿ, ಆದನ್ನು ಪ್ರಸಾದ ರೂಪದಲ್ಲಿ ಸೇವಿಸುವಾತ ಪ್ರಸಾದಿಯೆನಿಸಿರುವನು.

## ಪ್ರಸಾದಿ-ಅಂಗಸ್ಥಲ ೨೬ ॥ ಗುರು ಮಾಹಾತ್ಮ್ಯ ಸ್ಥಲಂ ॥

(ಪರಿ ೧೧)

ಯಥಾ ಶಿವ ಪ್ರಸಾದಾನ್ನಂ ಸ್ವೀಕಾರ್ಯಂ ಲಿಂಗ ತತ್ಪರೈಃ ।

ತಥಾ ಗುರೋಃ ಪ್ರಸಾದಾನ್ನಂ । ತಥೈವ ಶಿವಯೋಗಿನಾಂ ॥

ಗುರು ರೇವಾತ್ರ ಸರ್ವೇಷಾಂ । ಕಾರಣಂ ಸಿದ್ಧಿ ಕರ್ಮಣಾಂ ।
ಗುರುರೂಪೋ ಮಹಾ ದೇವೋ ಯತಃ । ಸಾಕ್ಷಾದುಪಸ್ಥಿತಃ॥
ಯಃ ಶಿವಃ ಸ ಗುರುರ್ಜ್ಞೇಯೋ । ಯೋ ಗುರುಃ ಸ ಶಿವಃ
ಸ್ಮೃತಃ ॥ ನ ತಯೋ ರಂತರಂ ಕುರ್ಯಾತ್ । ಜ್ಞಾನಾವಾಪ್ತ್ಯೈ
ಮಹಾಮತಿಃ ॥ ಆಚಾರ್ಯಸ್ಯಾವ ಮಾನೇನ । ಶ್ರೇಯಃ
ಪ್ರಾಪ್ತಿರ್ವಿಹನ್ಯತೇ । ತಸ್ಮಾನ್ನಿ ಶ್ರೇಯಸಃ । ಪ್ರಾಪ್ತ್ಯೈ
ಪೂಜಯೇತ್ತಂ ಸಮಾಹಿತಃ ॥

(ಶ್ಲೋ ೬, ೧೯, ೨೧, ೨೩)

ಲಿಂಗಾಂಗಿಗಳಿಗೆ ಲಿಂಗಪ್ರಸಾದ ಎಷ್ಟು ಪ್ರಶಸ್ತವೋ ಅಷ್ಟೇ ಶ್ರೀ ಗುರು ಪ್ರಸಾದವು ಶ್ರೇಷ್ಟವೆನಿಸಿದೆ. ಶ್ರೀ ಗುರು ಸಾಕ್ಷಾತ್ ಶಿವಸ್ವರೂಪಿ ಸಕಲರ ಉದ್ಧಾರಾರ್ಥ ಭುವಿಯಲ್ಲಿ ನಮ್ಮ ಮಧ್ಯೇ ಲೀಲಾಜಾಲವಾಗಿ ಸಂಚರಿಸುತ್ತಲಿದ್ದಾನೆ ಶ್ರೀ ಮಹಾಗುರುವೇ ಮಹಾದೇವನೆಂದರಿಯ ಬೇಕು.

ಪಾದಾಗ್ರರೇಣವೋ ಯತ್ರ । ಪತಂ ತಿ ಶಿವಯೋಗಿನಃ ।
ತದೇವ ಸದನಂ ಪುಣ್ಯಂ ಪಾವನಂ ಗೃಹ ಮೇಧಿನಾಂ ॥

(ಶ್ಲೋ ೪೨)

ಅಂದರೆ ಶಿವಯೋಗಿಗಳ ಶ್ರೀ ಪಾದ ಧೂಳಿ ಸ್ಪರ್ಶದಿಂದ ಹಾಗೂ ಪುಣ್ಯ ರೇಣುಗಳ ಸ್ಪರ್ಶದಿಂದ ಗೃಹ ಸ್ಥನ ನಿವಾಸ, ಆ ಪ್ರದೇಶವೆಲ್ಲಾ ಪವಿತ್ರವೆನಿಸುವುದು. ಗುರುಪಾದ ಸ್ಪರ್ಶದಿಂದ ಸಕಲ ಪಾಪಗಳು ನಶಿಸುವುವು. ಶ್ರೀ ಗುರು ಪಾದಪೂಜೆಯಿಂದ ನರನಿಗೆ ಮುಕುತಿ ಲಭಿಸುವುದು, ಗುರುವಿನ ಶ್ರೀ ಪಾದ

ದೊರ ಕೊಂಡಿತಾದೊಡೆ । ಹಿರಿದಪ್ಪ ಪಾಪ ಹರಿವುದು ।
ಕರ್ಪುರದ ಗಿರಿ ಸುಟ್ಟಂತೆ ಸರ್ವಜ್ಞ ॥ ಇದರಿಂದಾಗಿ,
ಗುರು ಚರಣಂ ಭವ ಹರಣಂ । ಸದ್ಗುರು ಚರಣಂ ಭವ ಹರಣಂ ।
ಶರಣ ಜನರಾ ಕರುಣಾ ಭರಣಂ । ಗುರು ಚರಣಂ ॥

ಹರನೇ ಗುರುವಾದ್ದರಿಂದ ಶಿವ ಪ್ರಸಾದದಷ್ಟೆ ಶ್ರೀಗುರು ಪ್ರಸಾದನ್ನ ಸಹ ಪವಿತ್ರವೆಂದು ನಾವು ಭಕ್ತಿಯಿಂದ ಸೇವಿಸ ಬೇಕು ಶ್ರೀ ಗುರು ಹರ

ಪ್ರಸಾದಗಳು ಪಾವನಾತಿ ಪಾವನವೆನಿಸಿವೆ. ಸಚ್ಚಿದಾನಂದ ಸ್ವರೂಪಿ ಪರಶಿವನು ಅಖಂಡ ಜ್ಯೋತಿರ್ಮಯ ಸ್ವರೂಪಿಯಾದ್ದರಿಂದ ಕರುಣಾ ನಿಧಿಯಾದ ಪರಶಿವನು ಜಗತ್ತಿನಲ್ಲಿ ಧರ್ಮ ಸಂಸ್ಥಾಪನೆಗಾಗಿ ಭಕ್ತರ ಉದ್ಧಾರಾರ್ಥ ಶ್ರೀ ಗುರು ರೂಪದಲ್ಲಿ ಪ್ರತ್ಯಕ್ಷನಾಗಿಹನು.

**ಅಪ್ರತ್ಯಕ್ಷೋ ಮಹಾದೇವಃ । ಸರ್ವೇಷಾಂ ಆತ್ಮಮಾಯಯಾ**
**ಪ್ರತ್ಯಕ್ಷಂ ಗುರು ರೂಪೇಣ । ವರ್ತತೇ ಭಕ್ತಿ ಸಿದ್ಧಯೇ ॥**

(ಪರಿ ೯ ಶ್ಲೋ ೫೩)

ಇದರಿಂದಾಗಿ ವೇದಾಗಮಗಳು ಗುರು ಮಾಹಾತ್ಮ್ಯವನ್ನು ಮುಕ್ತ ಕಂಠದಿಂದ ಕೊಂಡಾಡುತ್ತಾ,

**ನ ಗುರೋ ರಧಿಕಂ । ನ ಗುರೋ ರಧಿಕಂ ॥**

ಎಂದ ಒಂಭತ್ತು ಸಾರಿ ಉಚ್ಚಧ್ವನಿಯಿಂದ ಘೋಷಿಸುತ್ತಲಿವೆ.

**ನಾಸ್ತಿ ತತ್ವಂ ಗುರೋಃ ಪರಂ ॥**

ಶ್ರೀ ಗುರು ತತ್ವಕಿಂತ ಅತ್ಯಧಿಕ ಬೇರೆ ತತ್ವವಿಲ್ಲ ಶಿವನು ತನ್ನದೇ ಆದ ಜ್ಯೋತಿರ್ಲಿಂಗ ಸ್ವರೂಪದಿಂದ ಚಿತ್ಕಳಾರೂಪವಾಗಿ ಅವಿರ್ಭಸಿ, ತಕ್ಷಣ ದಿವ್ಯ ಮಂತ್ರಮಯ ದೇಹಧಾರಿಯಾಗಿ ಜಗತ್ತಿಗೆ ಕಾಣಿಸಿಕೊಳ್ಳುವನು ಶಿವಲಿಂಗೋದ್ಭವ ಮಂಗಳ ಮೂರ್ತಿಗಳಾದ ಶ್ರೀ ಜ॥ ರೇಣುಕಾದಿ ಪಂಚಾಚಾರ್ಯರು ಪರಶಿವನ ಪರಂಪರಾವತಾರಿಗಳಾದ್ದರಿಂದ ಇವರ ಮಹಿಮೆ ಶಿವನಷ್ಟೇ ಮಹತ್ವವುಳ್ಳದ್ದು. ಇವರ ಮೇಲೆ ಬೇರೆ ಗುರುಗಳಿಲ್ಲವಾದ್ದರಿಂದ ಗುರುತ್ವ ಶ್ರೀ ಜ॥ ಪಂಚಾಚಾರ್ಯರುಗಳಿಂದ ಪ್ರಥಮತಃ ಪ್ರಾರಂಭವಾಯಿತು. ಅದ್ದರಿಂದ ಇವರು ॥ **ಗುರುಣಾಂ ಗುರುಃ** ॥ ಎಂದು ಸ್ತುತ್ಯರಿರುವರು. ವೀರಶೈವರಿಗೆ ಜಗದಾದಿಯಿಂದ ಶ್ರೀ ಗುರು ಮೂಲವೇ ಹೊರ್ತು ಋಷಿ ಮೂಲ ಇವರಿಗಿಲ್ಲ. ಸಮಸ್ತ ಋಷಿ ವೃಂದಕ್ಕೆ ಶ್ರೀ ಮಹಾ ಗುರುವೇ ಆದಿ ಮೂಲ. ಶಿಷ್ಯನ ಹೃತ್ತಾಪವನ್ನು ಪರಿಹರಿಸಲು ಸಿದ್ಧನಾಗಿರುವ ಮಹಾಗುರು ತಾನೇ ಕರುಣೆಯಿಂದ ಶಿಕ್ಷಾ ಗುರು, ದೀಕ್ಷಾ ಗುರು, ಮೋಕ್ಷ ಗುರುವಾಗಿ ವಿಜೃಂಭಿಸಿ ಶಿಷ್ಯನನ್ನು ಅನುಗ್ರಹಿಸುವನು ಆದ್ದರಿಂದ,

**ಪೂಜಾ ಮೂಲಂ ಗುರೋರ್ಪಾದಂ । ಭಕ್ತಿ ಮೂಲಂ**

**ಗುರೋರ್ಮಂತ್ರಃ । ಧ್ಯಾನಮೂಲಂ ಗುರೋ ಮೂರ್ತಿಃ ।**
**ಮೋಕ್ಷ ಮೂಲಂ ಗರೋ ಕೃಪಾ ॥**

ಎಂದಿದೆ ವೇದ. ಗುರು ಶಬ್ಧ ಬಹು ಅರ್ಥ ಗರ್ಭಿತವಾಗಿದೆ.

**ಗುಕಾರಶ್ಚಂಧ ಕಾರಸ್ತುರುಕಾರಸ್ತನ್ನಿರೋಧಕೃತ್। ಅಂಧಕಾರ ನಿರೋಧ ತ್ವಾತ್ । ಗುರುರಿತ್ಯಭಿ ಧೀಯತೇ ॥**

"ಗುಕಾರ" ಗುಣಮಯ, ಅಂಧಕಾರ, ಅಜ್ಞಾನ, ಅನಿತ್ಯದ ಕುರುಹು ಇರುತ್ತೆ. "ರುಕಾರ" ಬೆಳಕು, ಜ್ಞಾನಮಯ, ಪವಿತ್ರವಿರುತ್ತೆ. ಗುರು ತನ್ನಲ್ಲಿ ಭಕ್ತಿಪೂರ್ವಕ ಶರಣಾದ ಶಿಷ್ಯನನ್ನು ಉದ್ಧರಿಸಿ ತನ್ನಂತೆ ಮಾಡಿಕೊಂಡು ಕರುಣಾನಿಧಿ ಆಶೀರ್ವದಿಸುವನು. ಶಿವಾಗಮಗಳು ಶ್ರೀ ಗುರು ಮಾಹಾತ್ಮ್ಯ ವನ್ನು ಪ್ರಶಂಶಿಸಿ,

**ಶಿವ ಪಥವನರಿಯಲು । ಗುರುಪಥವೇ ಮೊದಲು ॥**

ಎಂದು ಉಗ್ಗಡಿಸಿವೆ. ಯಾಕೆಂದರೆ,

**ಗುರು ಭಕ್ತಿರ್ವಿಹೀನಸ್ಯ । ಶಿವಭಕ್ತಿರ್ನ ಜಾಯತೇ ॥**

ಉಂಟಾಗುವುದಿಲ್ಲ ಎಂದು ಶಿವಾಗಮಗಳು ಸಾರುತ್ತಲಿವೆ.

**ಗುರು ಪಾದದ್ವಯಮೋ ದೈವಂ ॥**

## ಶ್ರೀ ಜಗದ್ಗುರು ರೇಣುಕಾಚಾರ್ಯರ ಲಿಂಗಾವತಾರ

ಯುಗ ಮಾನೋತ್ಸವಗಳಿಂದ ಭಾರತಾದ್ಯಂತ ಸಂಪೂಜ್ಯರಾದ ಶ್ರೀ ಮಜ್ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳಲ್ಲಿ, ಸದ್ಯೋಜಾತ ಮುಖ ಸಂಭೂತರೂ, ಪೃಥ್ವಿ ತತ್ವಕ್ಕೊಡೆಯರೂ ಆದ ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ, ಶ್ರೀ ಮದ್ರೇಣುಕಾಚಾರ್ಯರು, ದ್ವಾಪರಯುಗಾರಂಭದಲ್ಲಿ, ಆಂಧ್ರ ಪ್ರದೇಶದ ತ್ರಿಲಿಂಗ ರಾಜ್ಯವೆಂದು ಪೆಸರ್ಗೊಂಡು ಮಘಮುಖಿಪ ಕೊಲನುಪಾಕಿ ಸುಕ್ಷೇತ್ರದ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ ಶಿವನಾದೇಶದಂತೆ ಕ್ಷಣಾರ್ಧದಲ್ಲಿ ಪರಂ ಜ್ಯೋತಿ ಸ್ವರೂಪದಲ್ಲಿ ಮಂತ್ರಮಯ ದಿವ್ಯ ದೇಹಧಾರಿಗಳಾಗಿ ಅವತರಿಸಿ ರಾರಾಜಿಸಿದರು.

ಶ್ರೀ ಆದಿ ಜ|| ರೇಣುಕಾಚಾರ್ಯರು ಅಖಂಡ ಮಹೀಮಂಡಲಕ್ಕೊಡೆಯರಾದ್ದರಿಂದ, ಜಗದಾದಿ ಕಾಲದಿಂದ ಜಗತ್ತಿನ ಶ್ರೀ ಜಗದ್ಗುರು ಸಾರ್ವಭೌಮರೆಂದು ಸ್ತುತ್ಯರಿರುವರು. ಇದರಂತೆ ಆಪ್ ತತ್ವಕ್ಕೆ ಶ್ರೀ ದಾರುಕಾಚಾರ್ಯರೂ, ಅಗ್ನಿತತ್ವಕ್ಕೆ ಶ್ರೀ ಘಂಟಾಕರ್ಣ ಶಿವಾಚಾರ್ಯರೂ, ವಾಯುತತ್ವಕ್ಕೆ ಶ್ರೀ ಪಂಡಿತಾಚಾರ್ಯರೂ ಮತ್ತೂ ಆಕಾಶತತ್ವಕ್ಕೆ ಶ್ರೀ ಜ್ಞಾನಸಿಂಹಾಸನಾಧೀಶ ಶ್ರೀ ವಿಶ್ವಾರಾಧ್ಯರೂ ಜಗದಾದಿಯಿಂದ ಅಖಂಡ ಜಗದ್ಗುರು ಸಾರ್ವಭೌಮರೆಂದು ಸ್ತುತ್ಯರಿರುವರು. ಶಿವನೇ ಸಾಕ್ಷಾತಾಗಿ ಶಿವಾಗಮಗಳಲ್ಲಿ ಶ್ರೀ ಜಗನ್ಮಾತೆ ಗಿರಿಜೆಗೆ ಬೋಧಿಸುತ್ತಾ,

ದೇವೀ ! ಪಂಚಾನನ ವದನೋದ್ಭೂತಾನ್ । ಪಂಚ ತತ್ವಾಧಿ
ನಾಯಕಾನ್ । ಪಂಚಾಬ್ರಹ್ಮ ಮಯಾ ನೌಮಿ ।
ಪಂಚಾಚಾರ್ಯಾನ್ ಜಗದ್ಗುರೋನ್ ।
ಪಂಚಾನನ ತನೂದ್ಭೂತರ್ಾ । ಪರತರ ಶ್ರೀ ಪಂಚಲಿಂಗೋದ್ಭ
ವಾನ್ । ತಸ್ಮಾತ್ತಸ್ಮಾಚ್ಚ ಗಿರಿಜೇ । ಮದಾದಿ ಸರ್ವಲೋಕಾ
ನಾಂ । ಜಗದ್ಗುರು ವರೋತ್ತಮಾಃ ॥

ಅಂದರೆ ದೇವೀ! ನನ್ನನ್ನೂ ನನ್ನ ಲೋಕ, ಕೈಲಾಸವೇ ಮೊದಲ್ಗೊಂಡು ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆಲ್ಲಾ ಶ್ರೀ ಜಗದ್ಗುರು ಪಂಚಾಚಾರ್ಯರು ಗುರುಸಾರ್ವಭೌಮರಿರುವರೆಂದು ಶಿವನು ಘೋಷಿಸಿರುವನು.

ಕೆಲವು ಜನರು ನಿಗಮಾಗಮಗಳು ತಮಗೆ ಆಧಾರವಲ್ಲ ಶಿವಶರಣರ ವಚನಗಳೇ ಆಧಾರವೆನ್ನುತ್ತಾರೆ. ಅವರು ಕೈಲಾಸನಾಥ ಶ್ರೀ ಗೌರೀರಮಣನನ್ನು ದೇವರೆಂದು ಪೂಜಿಸ ಬಾರದು. ಮತ್ತೂ,

ನಮಃ ಪಾರ್ವತೀ ಪತಿಯೇ । ಹರಹರ ಮಹಾದೇವ ॥

ಎಂದು ಘೋಷಿಸ ಬಾರದು ಎಂಬುದಾಗಿ ಸಭೆಗಳಲ್ಲಿ ಸಾಮಾನ್ಯ ಜನ ಸಮೂಹದಲ್ಲಿ ಬೋಧಿಸಿ, ಇಷ್ಟಲಿಂಗವೇ ನಮ್ಮ ದೇವರೆಂದು ನುಡಿಯುತ್ತಾರೆ. ಅಲ್ಲದೆ ತಾವು, ಶ್ರೀ ಜಗದಾದಿ ಜಗದ್ಗುರು ರೇಣುಕಾದಿ ಪಂಚಾಚಾರ್ಯರಿಗೆ ಸರಿ ಸಮಾನರೆಂದು ಆಗಾಗ ಬಡಬಡಿಸುತ್ತಾರೆ. ವಿಧ್ವಜ್ಜನ ಈ ಅಂಶಗಳನ್ನು ವಿಮರ್ಶಿಸುವಂತಾಗಲಿ. ಶ್ರೀ ಬಸವಾದಿ ಪ್ರಮಥರು ಶಿವಾಗಮಜ್ಞರು ಅವರು.

ತಮ್ಮ ಗುರುಕುಲವಾಸ ಕಾಲದಲ್ಲಿ ತಮ್ಮ ದೀಕ್ಷಾ ಗುರುಗಳ ಶ್ರೀ ಪಾದ ಸೇವೆಯಿಂದಾಗಿ ಶಿವಾಗಮಜ್ಞರೆನಿಸಿ ಲೋಕ ಪೂಜ್ಯರಾಗಿರುವರು. ನಂದಿ ದೇವನ ವಂಶ ಕಲ್ಯಾಣದ ಶ್ರೀ ಬಸವ. ಶ್ರೀನಂದೀಶ್ವರನು ಕೈಲಾಸದ ಮಹಾ ದ್ವಾರಪಾಲಕನಾಗಿ, ಪಾರ್ವತಿ ರಮಣರ ಸೇವೆಯಲ್ಲಿ ತತ್ಪರನಾಗಿ ಅಡಿಗಡಿಗೆ,

**ನಮಃ ಪಾರ್ವತೀ ಪತೆಯೇ । ಹರಹರ ಮಹಾದೇವ**

ಎಂದು ಭಕ್ತರ ಮಧ್ಯೇ ಪುಳಕಾಂಕಿತನಾಗುವನು. ವೀರ, ನಂದಿ, ಭೃಂಗಿ, ಸ್ಕಂದ ವೃಷಭಾದಿಗಳು ವೀರಶೈವ ಮತದ ಗೋತ್ರ ಪುರುಷರಾಗಿದ್ದರೂ, ಶ್ರೀ ಜ|| ರೇಣುಕಾದಿ ಪಂಚಾಚಾರ್ಯರುಗಳಲ್ಲಿ ಪೂಜ್ಯ ಭಕ್ತಿ ಭಾವದಿಂದ ವರ್ತಿಸುತ್ತಿರುವುದನ್ನು ನೋಡಿದರೆ, ಶಿವನ ಆದೇಶಕ್ಕೆ ಮಣಿದು ವರ್ತಿಸಿಂದತೆ ಕಂಡು ಬರುತ್ತೆ.

ಶ್ರೀ ಭಗವತ್ಪಾದ ಜ|| ರೇಣುಕಾಚಾರ್ಯರು ಶ್ರೀ ಕೊಲ್ಲಿಪಾಕಿ ಸೋಮನಾಥ ಜ್ಯೋತಿರ್ಲಿಂಗಮುಖದಿಂದ, ಶಿವನ ಅಪ್ಪಣೆಯಂತೆ "ಇಚ್ಛಾಮಾತ್ರಪ್ರಭೋ ಸೃಷ್ಟಿಃ" ಎಂಬಂತೆ ಸರ್ವಜ್ಞ ಸರ್ವಶಕ್ತಿಯುತನಾದ ಭಗವಾನ್ ಶ್ರೀರೇಣುಕರು ಲೀಲಾಜಾಲವಾಗಿ, ಮಂತ್ರಮಯ ದಿವ್ಯದೇಹಧಾರಿಗಳಾಗಿ ಆವಿರ್ಭವಿಸಿದರೆಂದು ಅನೇಕ ಶಿವಾಗಮಗಳೂ, ಶಿವಯೋಗಿಗಳೂ ಎಡೆಯೂರ ಶ್ರೀ ತೋಂಟದ ಸಿದ್ಧಲಿಂಗ ಯತಿ ಸಾಂದ್ರರಂಥಾ ಅಸಂಖ್ಯಾತ ಶಿವಶರಣ ಶರಣೆಯರು ತಾವು ಅಂತರಂಗದಲ್ಲಿ ಮನಗಂಡ ಸತ್ಯಾಂಶವನ್ನು ಬಹಿರಂಗವಾಗಿ ಉದ್ಘೋಷಿಸಿದರೂ ಸಹ; ಮೌಢ್ಯವೋ, ಹಟಮಾರಿತನವೋ ತಿಳಿಯಲಿಲ್ಲ, ಪ್ರಾಜ್ಞರಾದ ಕೆಲವು ಜನ ಇಂದಿಗೂ ಲಿಂಗದಿಂದ ಮನುಷ್ಯ ರೂಪ ಹೊರ ಹೊಮ್ಮಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಯನ್ನೇ ಮುಂದೆ ಒಡ್ಡುತ್ತಲಿದ್ದಾರೆ.

**ಕೊಲ್ಲಿಪಾಕಿ, ಸೋಮೇಶ್ವರಾಭಿ ಧಾನಸ್ಯ ತತ್ರ ವಾಸವತೋ ಮಮ । ಅಸ್ಪೃಶನ್ಮಾನುಷಂ ಭಾವಂ । ಲಿಂಗಾತ್ ಪ್ರಾದುರ್ಭವಿಷ್ಯಸಿ ॥**

ಎಂಬ ಶಿವೋಕ್ತಿಯಂತೆ ಶಿವಲಿಂಗದ ಮುಖದಿಂದ ಆವಿರ್ಭವಿಸಿರುವುದು ದೈವ ಲೀಲೆಯೇ ಸರಿ.

ಸರ್ವ ವ್ಯಾಪಿ, ಸರ್ವ ಶಕ್ತನಾದ ಹಾಗೂ ಅಘಟಿತ ಘಟನಾಶಕ್ತಿ ಸಂಪನ್ನನಾದ ಶಿವನು ಅಣು ರೇಣು ತೃಣಕಾಷ್ಟದಲಿ ಚರಿಸುತಿಹನು. ಕಣ್ಣುಗಳನು ತೆರೆದವರ್ಗೆ ಗೋಚರಿಸುತಿಹನು. ನಿತ್ಯೋದಿತನಾದ ಶಂಭುಃ ಸಕಲ ನಿಷ್ಕಲನೆನಿಸಿದ ಜ್ಯೋತಿರ್ಲಿಂಗ ಗರ್ಭದಿಂದ ಸದಾ ಅತ್ಯಂತ ಸೂಕ್ಷ್ಮ ಕಳಾ ರೂಪದಲ್ಲಿ ಹೊರ ಹೊಮ್ಮುತ್ತಲಿರ್ಪನು. ಸೂರ್ಯಮಂಡಲದಿಂದ ಅಸಂಖ್ಯಾತ ಕಿರಣಗಳು ಮೇಲಿಂದ ಮೇಲೆ ಹೊರ ಹೊಮ್ಮುವಂತೆ, ಸ್ವಯಂಭುಲಿಂಗದಿಂದ ಚಿಚ್ಛಕ್ತಿಯುತ ಅತಿ ಸೂಕ್ಷ್ಮ ಕಿರಣಗಳು ಪುಂಖಾನು ಪುಂಖವಾಗಿ ಹೊರ ಹೊಮ್ಮುತ್ತಲಿದ್ದರೂ ಸಹ ನಮ್ಮ ಜಡದೃಷ್ಟಿಗೆ ಆ ಕಿರಣಗಳು ಅದೃಶ್ಯವಿರುವುವು.

ಧರ್ಮ ಸಂಸ್ಥಾಪನಾರ್ಥಾಯ । ಸಂಭವಾಮಿ ಯುಗೇ ಯುಗೇ॥

ಎಂಬ ಭಗವದ್ವಾಣಿಯಂತೆ, ಅದೃಶ್ಯವಾದ ಲಿಂಗ ಕಿರಣ ಉಬ್ಬಿ ದೇದೀಪ್ಯಮಾನದಿಂದ ಪ್ರಕಾಶಗೊಂಡು ಗೋಳಾಕಾರದ ದಿವ್ಯ ಪ್ರಕಾಶಿತವಾಯಿತು ಆ ದಿವ್ಯ ಪ್ರಕಾಶದ ಮಧ್ಯೇ ಶಿವನಿಚ್ಛೆಯೋ ಎಂಬಂತೆ ಮಂತ್ರಮಯ ದಿವ್ಯ ಪುರುಷಾಕಾರವೊಂದು ಆವಿರ್ಭವಿಸಿ ಮಹಾಚಾರ್ಯರ ದಿವ್ಯ ರೂಪವನ್ನು ತಾಳಿತು. ಇವರೇ ಜಗದ್ಗುರು ಶ್ರೀ ರೇಣುಕಾಚಾರ್ಯರು ಇಂತು ಭುವಿಯಲ್ಲಿ ಲಿಂಗಮುಖದಿಂದ ಮಹಾಚಾರ್ಯರು. ಅವತರಿಸುತ್ತಲೇ, ವಿಷ್ಣು, ಬ್ರಹ್ಮೇಂದ್ರಾದಿ ದೇವರ್ಕಳೂ ಶ್ರೀ ನಾರದಾದಿ ಮುನಿಗಳೂ, ದೇವರ್ಷಿ ಬ್ರಹ್ಮರ್ಷಿಗಳೂ ಸಿದ್ಧಜನ ಮುನಿ ಜನರೂ, ಪ್ರಸ್ಥಾನತ್ರಯಂಗಳು ಭಾಷ್ಯ ಕರ್ತೃಗಳೂ ಅಪಾರ ಸಂಖ್ಯೆಯ ಭಕ್ತವೃಂದದವರೂ ಆನಂದಾಶ್ರುಗಳನ್ನು ಸುರಿಸುತ್ತಾ,

ಭೋ ಸೋಮೇಶ್ವರ ಲಿಂಗ ಸಂಭವಾ । ಸುಧಾಮನ್ ಧನ್ಯ
ಧನ್ಯ ಪ್ರಭೋ । ದಿವ್ಯಜ್ಞಾನ ನಿರಸ್ತ ಮೋಹ ಮಹಿಮನ್ ।
ನಿತ್ಯೋದಿತಾತ್ಮನ್ | ಮಹನ್ ಯೋಗಿನ್ ಜಂಗಮ ಸಾರ್ವ
ಭೌಮ ಸದಯಂ । ಮಾಮುದ್ಧರೇ ತ್ಯುಚ್ಚರನ್ । ತಂ ವಂದೇ
ಸತತಂ ಜಗದ್ಗುರು ಮಹಂ । ಶ್ರೀ ರೇಣುಕಂ ಸಿದ್ಧಯೇ ॥

ಎಂದು ಸ್ತುತಿಸಿ ಕೊಂಡಾಡಿದರು.

ಇತರ ಜ್ಯೋತಿರ್ಲಿಂಗಗಳಿಂದ ಅಂದರೆ ಶ್ರೀ ಕುರುಕ್ಷೇತ್ರಕ್ಕೆ ಸಮೀಪದ ವಟ ಕ್ಷೇತ್ರದ ಶ್ರೀ ಸಿದ್ಧೇಶ್ವರ ಲಿಂಗದಿಂದ ಶ್ರೀ ಜ|| ದಾರುಕಾಚಾರ್ಯರೂ, ದ್ರಾಕ್ಷಾರಾಮ ಸುಕ್ಷೇತ್ರದ ಭೀಮನಾಥ ಜ್ಯೋತಿರ್ಲಿಂಗದಿಂದ ಶ್ರೀ ಜ|| ಘಂಟಾಕರ್ಣ ಶಿವಾಚಾರ್ಯರೂ, ಶ್ರೀಶೈಲ ಮಲ್ಲಿಕಾರ್ಜುನ ಜ್ಯೋತಿರ್ಲಿಂಗದಿಂದ ಶ್ರೀ ಜ|| ಪಂಡಿತಾರಾಧ್ಯರೂ, ಮತ್ತೂ ಶ್ರೀ ಕಾಶಿವಿಶ್ವನಾಥ ಜ್ಯೋತಿಲಿಂಗ ಮುಖದಿಂದ ಶ್ರೀ ಜ|| ವಿಶ್ವಾರಾಧ್ಯ ಜಗದ್ಗುರುಗಳೂ ಸಹ ಆ ಆಲಿಂಗಗಳ ಚಿತ್ಕಳಾ ರೂಪದಲ್ಲಿ ಹೊರಹೊಮ್ಮಿ ತೇಜಸ್ಸಂಪನ್ನರಾಗಿ ಅವತರಿಸಿರುವರು. ಇಂತು ಲಿಂಗೋದ್ಭವರಾದ ಪಂಚಾಚಾರ್ಯರ ದಿವ್ಯ ಮಂಗಳ ಸ್ವರೂಪ ವರ್ಣನಾತೀತವೆನಿಸಿ, ಸ್ತುತ್ಯವಿರುತ್ತೆ. ಆಸ್ತಿಕ ವೃಂದ ನಂಬ ಬೇಕು. ಹಿತವಿದೆ.

**ಲಿಂಗಂ ಮಸ್ತಕದೋಳ್ | ಜಟಾಮುಕುಟ ಭೂಶಂ ಶೀರ್ಷದೋಳ್ | ಫಾಲದೋಳ್ ತುಂಗ ಶ್ರೀ ಭಸಿತ ತ್ರಿಪುಂಡ್ರ ಮನಲಾಕ್ಷಿಸ್ಫಾರ | ಭ್ರೂ ಮಧ್ಯದೋಳ್ || ಮಾಂಗಲ್ಯಾಕ್ಷಸರಂ ಮಹಾಗಲದೊಳಿಂ ತೋರೋರ್ವರುಂ | ಶ್ರೀ ಸಾಂಬನ ಸನ್ನಿಧಿಯೋಳ್ | ಶೃಂಗಾರಾನ್ವಿತರಾಗಿ ಭೂವಲಯಮಂ | ಶ್ರೀ ರೇಣುಕಾಧೀಶ್ವರಾ ||**

ಎಂದು ಭಕ್ತಿ ಪೂರ್ವಕ ಸ್ತುತಿಸಿ ಕೊಂಡಾಡಿರುತ್ತಾರೆ.

ಸಿನಿಮಾ ಆಟ ಪ್ರಾರಂಭಿಸುತ್ತಲೇ ಕತ್ತಲಾಗಿಸಿ, ನಂತರ ಒಂದು ಬಿಳಿ ಪರದೆಯ ಮೇಲೆ ಪೂರ್ಣ ಚಂದ್ರಾಕಾರದ ಬೆಳಕನ್ನು ತೋರಿಸುತ್ತಾರೆ. ಆ ಗುಂಡಾದ ಬೆಳಕಿನಲ್ಲಿ ಒಬ್ಬ ನಟನು ಕಾಣಿಸಿ ಕೈ ಮುಗಿಯುವಷ್ಟರಲ್ಲಿ ತಾರೆಯೊಬ್ಬಳು ಅವನೊಂದಿಗೆ ಹಾಡುತ್ತಾ, ನರ್ತಿಸುವ ದೃಶ್ಯ ಮನಮೋಹಕವಿರುತ್ತೆ. ಇಷ್ಟೆಲ್ಲಾ ಅದ್ಭುತ ಚಮತ್ಕಾರವನ್ನು ಮಾನವ ಕೆಲವು ನಿಮಿಷಗಳಲ್ಲಿ ತೆರೆಯ ಮೇಲೆ ತೋರಿಸುವ ಶಕ್ತಿಯಿರುವಾಗ, ಜಗತ್ ಸೃಷ್ಟಿ ಕರ್ತ ಪರಮೇಶ್ವರನ ಶಕ್ತಿಯುವೈಭವ ಕೋಟಿ ಕೋಟಿಪಾಲು ವರ್ಣನಾತೀತವೆನಿಸಿದೆ.

ಲಿಂಗ ಇಬ್ಭಾಗವಾಗಿ ಮೊಡೆದು ಆ ಗರ್ಭದಿಂದ ತೇಜಃ ಸಂಪನ್ನವಾದ ಗುರುರೂಪ ಕಾಣಿಸಿತೆಂಬ ಭಾವ ಸರಿಯಲ್ಲ. ಜ್ಯೋತಿರ್ಲಿಂಗ ಅನಂತ ಬ್ರಹ್ಮಾಂಡಗಳನ್ನು ತನ್ನ ಗರ್ಭದಲ್ಲಿ ಪರಮಾಣು ರೂಪದಲ್ಲಿ ಧರಿಸಿ ಸರ್ವಾಂತರ್ಯಾಮಿ ಸರ್ವವ್ಯಾಪಿ ಎನಿಸಿ,

**ಪೂರ್ಣ ಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ ಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ । ಪೂರ್ಣ ಮೇವಾವ ಶಿಷ್ಯತೇ ॥**

ಎಂಬ ಉಪನಿಷದ್ವಾಣಿಯಂತೆ ಲಿಂಗ ಪರಿಪೂರ್ಣ ವಸ್ತುವಾದ್ದರಿಂದ ಅದು ಇಬ್ಭಾಗವಾಗಲು, ಲಿಂಗವಿಲ್ಲದ ಕಾಲ ಸ್ಥಳವೆಲ್ಲಿಯದು ಪ್ರೋತಪ್ರೋತವಾಗಿ ಇವೆರಡನ್ನು ಒಂದು ಗೂಡಿಸುವ ಕೂಟಸ್ಥನೂ ತಾನೇ ಆಗಿರುವಾಗ, ಲಿಂಗ ಇಬ್ಭಾಗವಾಗಲು ಸ್ಥಳವಿಲ್ಲವಷ್ಟೇ.

**ಆಲಯಂ ಸರ್ವ ಭೂತಾನಾಂ । ಲಯಾನಾಂ ಲಿಂಗ ಮುಚ್ಯತೇ ॥**

ಸಮಸ್ತವೂ ಲಿಂಗದಲ್ಲಿ ಸ್ಥಾಪಿತವಾಗಿರಲಾಗಿ ಲಿಂಗಕ್ಕೆ ಅನ್ಯವಾದ ಬಾಹ್ಯ, ಹೊರಗಿನದು ಮತ್ತೊಂದಿಲ್ಲ.

**ಅಂತರ್ಬಹಿಶ್ಚ ತತ್ಸರ್ವಂ । ವ್ಯಾಪ್ತಂ ಏನ ಚರಾಚರಂ ॥**

ಎಂಬಂತೆ ಲಿಂಗ ಪರಿಪೂರ್ಣವಿರುವಲ್ಲಿ ಲಿಂಗ ಇಬ್ಭಾಗವಾಗಲು ಸ್ಥಳವೀಯುವ ಲಿಂಗವಿಲ್ಲದ ಸ್ಥಳವೇ ಇಲ್ಲವಷ್ಟೆ. ಇತ್ಯಾದಿ ಕಾರಣಗಳಿಂದ ಲಿಂಗವನ್ನು ಭೇದಿಸಿಕೊಂಡು ಶ್ರೀ ರೇಣುಕರು ಅವತರಿಸಿದರೆಂಬುದು ಶೃತಿ ಶಾಸ್ತ್ರ ಪ್ರಮಾಣಗಳಿಗೆ ಸರಿತೂಗದು. ಲಿಂಗ ಮುಖದಿಂದ ಸದಾ ಅಪೃಷ್ಯ ಚಿತ್ಕಳೆಗಳು "ನಿತ್ಯೋದಿತಃ" ಚಿಮ್ಮಿ ಪುಟ ಹಾರುತ್ತಿರುವವು. ನಮ್ಮ ಸ್ಥೂಲ ಕಣ್ಣುಗಳಿಗೆ ಆ ರಶ್ಮಿಗಳು ಅಗೋಚರ ಅವ್ಯಕ್ತವಿರುವುವು. ಇದು ಹೌದೆಂಬುದಕ್ಕೆ ಋಗ್ವೇದಾಂತರ್ಗತ ನಾಸದೀಯ ಸೂಕ್ತದ ಐದನೇ ಮಂತ್ರದಲ್ಲಿ,

**ತಿರಶ್ಚೀನೋ ವಿತತೋ । ರಶ್ಮಿ ರೇಷಾ ಮಧಃ । ಸ್ವಿದಾಸೀದು ಪರಿ ಸ್ವಿದಾಸೀತ್॥ ರೇ ತೋಧಾ ಅಸನ್। ಮಹಿಮಾನಾ ಆಸನ್ ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್॥** ಎಂದಿದೆ. ಸೂರ್ಯಮಂಡಲದಿಂದ ಅಸಂಖ್ಯಾತ ಕಿರಣಗಳು ಮೇಲೂ ಕೆಳಗೂ ಸುತ್ತಲೂ ಹೊರಹೊಮ್ಮಿದರೂ, ಸೂರ್ಯನ ಪೂರ್ಣತ್ವಕ್ಕೆ ಕಿಂಚಿತ್ತೂ ಭಂಗವಿಲ್ಲದ ತೆರದಲ್ಲಿ,

ಲಿಂಗಮುಖದಿಂದ ಅತಿ ಸೂಕ್ಷ್ಮ ಕಿರಣಗಳು ಸರ್ವತ್ರ ಸದಾ ಅನಂತಾನಂತವಾಗಿ ನಿತ್ಯೋದಿತವಾಗುತ್ತಿದ್ದರೂ, ಲಿಂಗದ ಪರಿ ಪೂರ್ಣತ್ವಕ್ಕೆ ಕೊರತೆಯಿಲ್ಲ. ಪೂರ್ಣ ಮದಃ ಪೂರ್ಣಮಿದಂ ॥

ಎಂಬಂತೆ ಘನ ಲಿಂಗ ತತ್ವದ ಪರಿಪೂರ್ಣತ್ವಕ್ಕೆ ಕಿಂಚಿತ್ತೂ ಲೋಪವಿಲ್ಲ. ಅಂದ ಬಳಿಕ, ಲಿಂಗ ಎರಡು ಹೋಳಾಗಿ ಅಲ್ಲಿಂದ ಶ್ರೀ ರೇಣುಕರು ಅವತರಿಸಿದರೆಂಬುದು ಸರಿಯಲ್ಲ ಪ್ರಹ್ಲಾದನಿಗಾಗಿ ಶ್ರೀ ನರಸಿಂಹ ಸ್ವಾಮಿ ಕಲ್ ಕಂಭವನ್ನು ಪಠಾರೆಂಬ ಶಬ್ದದಿಂದ ಎರಡು ಹೋಳು ಮಾಡಿಕೊಂಡು ಭಯಂಕರ ರೂಪದಲ್ಲಿ ತೋರಿದನು ಆಕಲ್ ಕಂಭವಷ್ಟೆ ಲಿಂಗವಲ್ಲಷ್ಟೆ.

ಶ್ರೀ ಕೊಲ್ಲಿಪಾಕಿ ಸೋಮನಾಥ ಲಿಂಗಪೂರ್ಣವಿರುವಲ್ಲಿ ಅಲ್ಲಿಂದ ಚಿನ್ಮಾತ್ರಿದ್ದ ಚಿತ್ಕಳಾ ರಶ್ಮಿಗಳಲ್ಲಿ, ಶಿವನಿಚ್ಛೆಯಂತೆ ಒಂದು ಕಳೆ ಬಹ್ವಂಶಗಳಿಂದ ಬೆಳಗಿ ಗೋಲಾಕಾರವಾಗಲು, ಅಲ್ಲಿಂದ ತೇಜಸ್ಸಂಪನ್ನರಾದ ಮಹಾಚಾರ್ಯರು ಮಂತ್ರಮಯ ದಿವ್ಯ ದೇಹಧಾರಿಗಳಾಗಿ ಅವತರಿಸಿರುವರು.

ಇಚ್ಛಾ ಮಾತ್ರ ಪ್ರಭೋ ಸೃಷ್ಟಿಃ ॥

## ॥ ಲಿಂಗ ಮಾಹಾತ್ಮ್ಯ ಸ್ಥಲಂ ॥ (ಪರಿ ೧೧)

### ಪ್ರಸಾದಿ ಅಂಗಸ್ಥಲ ೨೭

ಗುರು ಮಾಹಾತ್ಮ್ಯ ಯೋಗೇನ । ನಿಜ ಜ್ಞಾನಾತಿ ರೇಕತಃ ।
ಲಿಂಗಸ್ಯಾಪಿ ಚ ಮಾಹಾತ್ಮ್ಯಂ ಸರ್ವೋತ್ಕೃಷ್ಟಂ ವಿಭಾವ್ಯತೇ ॥

ಪರಂ ಪವಿತ್ರ ಮಮಲಂ ಲಿಂಗಂ । ಬ್ರಹ್ಮ ಸನಾತನಂ ಶಿವಾಭಿಧಾನಂ ಚಿನ್ಮಾತ್ರಂ । ಸದಾನಂದಂ ನಿರಂಕುಶಂ ॥ ಕಾರಣಂ ಸರ್ವ ಲೋಕಾನಾಂ । ವೇದ ನಾಮಪಿ ಕಾರಣಂ । ಪೂರಣಂ ಸರ್ವ ತತ್ವಾನಾಂ । ತಾರಣಂ ಜನ್ಮವಾರಿಧೇಃ । ಜ್ಯೋತಿರ್ಮಯ ಮನಿದೇಶ್ಯಂ । ಯೋಗಿನಾಮಾತ್ಮನಿ ಸ್ಥಿತಂ ॥ ಕಥಂ ವಿಜ್ಞಾಯತೇ ಲೋಕೇ ! ಮಹಾಗುರುದಯಾಂ ವಿನಾ ॥ ಬ್ರಹ್ಮಣಾ ವಿಷ್ಣುನಾ ಪೂರ್ವಂ ಯಲ್ಲಿಂಗಂ ಜ್ಯೋತಿರಾತ್ಮಕಂ ।

ಅಪರಿಚ್ಛೇದ್ಯಮಭವತ್ ಕೇನ ವಾ ಪರಿಛೋಧ್ಯತೇ ॥

ಬಹೂನಾತ್ರ ಕಿಮುಕ್ತೇನ ಲಿಂಗಂ ಬ್ರಹ್ಮ ಸನಾತನಂ

ಯೋಗಿನೋ ಯತ್ರಲೀಯಂತೇ ಮುಕ್ತ ಪಾಶ ನಿಬಂಧನಾಃ ॥

ಪೀಠಿಕಾ ಪರಮಾಶಕ್ತಿರ್ಲಿಂಗಂ । ಸಾಕ್ಷಾತ್ಪರಃ ಶಿವಃ ॥

ಶಿವಶಕ್ತಿ ಸಮಾಯೋಗಂ ವಿಶ್ವಂ ಲಿಂಗಂ ತದುಚ್ಯತೇ ॥

ಬ್ರಹ್ಮಾದಯಃ ಸುರಾಃ ಸರ್ವೇ ಮುನಯಃ ಶೌನಕಾದಯಃ ।

ಶಿವಲಿಂಗಾರ್ಚನಾ ದೇವ । ಸ್ವಂ ಸ್ವಂ ಪದಮವಾಪ್ನುವನ್ ॥

ವಿಶ್ವಾಧಿಪತ್ಯ ಮೀಶಸ್ಯ ಲಿಂಗ ಮೂರ್ತೇಃ ಸ್ವಭಾವಜಂ ।

ಅನನ್ಯ ದೇವಸಾ ದೃಶ್ಯಂ ಶ್ರುತಿ ರಾಹ ಸನಾತನೀ ॥

(ಪರಿ ೧೧. ಶ್ಲೋ ೩೦, ೩೧, ೩೨, ೩೩, ೩೪)

ಲಿಂಗ ಮಾಹಾತ್ಮ್ಯವನ್ನು ಶ್ರೀ ಮಹಾವಿಷ್ಣು ಬ್ರಹ್ಮಾದಿಗಳಿಂದಲೂ ಪೂರ್ಣ ವರ್ಣಿಸಲು ಅಶಕ್ತರಿರುವರು.

ಒಮ್ಮೆ, ಹರಿಕಂಜೋದ್ಭವರೀರ್ವರೊಮ್ಮೆ। ಮುದದಿಂ ಕಾದಾಡುವಂದುಜ್ವಲಾಕರ ಕೋಟಿ । ದ್ಯುಮಣಿಯುದಯಿಸಿದ ವೋಲ್ ॥

ವಿಷ್ಣು ಬ್ರಹ್ಮರ ಮಧ್ಯೇ ಯಾರು ಹೆಚ್ಚು ಎಂದು ವಾದವೇರ್ಪಡಲು, ಇವರೀರ್ವರಿಗೆ ಬುದ್ಧಿ ಕಲಿಸಲೋ ಎಂಬಂತೆ ಅಲ್ಲೇ ಅಪ್ರತ್ಯಕ್ಷನಾಗಿದ್ದ ಪರಶಿವನು, ತನ್ನ ಪರಂಜ್ಯೋತಿ ರೂಪದಲ್ಲಿ,

ತವೈಶ್ವರ್ಯಂ ಯತ್ನಾದ್ ಯದು ಪರಿ । ವಿರಿಂಚಿರ್ಹರಿ ರಧಃ ಪರಿಚ್ಛೇತ್ತುಂ ಯಾತಾವನಲ ಮನಲ ಸ್ಕಂಧ ವಪುಷಃ । ತತೋ ಭಕ್ತಿಃ ಶ್ರದ್ಧಾಭರಗುರು । ಗೃಣದ್ಭ್ಯಾಂ ಗಿರಿಶಯತ್ । ಸ್ವಯಂ ತಸ್ಥೇ ತಾಭ್ಯಾಂ ತವ ಕಿಮನು ವೃತ್ತಿರ್ನ ಫಲತಿ ॥

(ಶಿವ ಮಹಿಮ್ನಾ ಸ್ತುತಿ ಶ್ಲೋ ೧೦)

ಶಿವನ ಸಂಕಲ್ಪ ಮಾತ್ರೇಣ ಭೂಮ್ಯಾಕಾಶ ದೆತ್ತರಕ್ಕೆ ಜ್ಯೋತಿರ್ಲಿಂಗವು ಸ್ಥಂಭಾಕಾರವಾಗಿ ವಿರಾಡ್ರೂಪದಿಂದ ಬೆಳೆದು, ಪರಂಜ್ಯೋತಿ ರೂಪದಲ್ಲಿ ಉಜ್ವಲವಾಗಿ ಪ್ರಜ್ವಲಿಸುತ್ತಿರಲು, ಇದನ್ನು ಕಂಡ ಹರಿಬ್ರಹ್ಮಾದಿಗಳು ಸ್ಥಂಭೀ ಭೂತರಾಗಿ ನೋಡುತ್ತಾ, ಅಡಿಮುಡಿಗಳನ್ನು ಕಾಣದೆ ಭಗ್ನ ಮನೋರಥರಾದ ಅಂಶ ಈ ಶ್ಲೋಕದಿಂದ ವ್ಯಕ್ತವಿರುತ್ತೆ. ಅಂದ ಬಳಿಕ ಲಿಂಗದ ನಿಜ ಮಾಹಾತ್ಮ್ಯವನ್ನು ಅರಿತವರಾರು ? ಶ್ರೀ ಮಹಾ ಗುರುವಿನ ಮಾಹಾತ್ಮ್ಯವನ್ನು ಸ್ವಾನುಭೂತಿಯಲ್ಲಿ ಅರಿತವನೇ ಲಿಂಗ ಮಾಹಾತ್ಮ್ಯವನ್ನು ಅರಿಯಬಹುದೇ ವಿನಃ ಅನ್ಯರಿಂದ ಸಾಧ್ಯವಿಲ್ಲ. ಚಿನ್ಮಯ ಚಿಜ್ಯೋತಿರ್ಲಿಂಗ ಸ್ವಯಂಭುವಾದ್ದರಿಂದ ಸರ್ವಕ್ಕೂ ಕಾರಣವಾಗಿರುವುದು. ಲಿಂಗ ಮಾಹಾತ್ಮ್ಯವು ನಿಜಕ್ಕೂ ಅಗೋಚರ, ಅಚಿಂತ್ಯ, ಅನಿರ್ವಚನೀಯ ಅಪ್ರಮೇಯವೆನಿಸಿರುವುದು. ಶ್ರೀ ಮಹಾ ಗುರುವಿನ ಮಾಹಾತ್ಮ್ಯವನ್ನರಿತಾತ, ನಿಜ ಜ್ಞಾನಾತಿ ರೇಖದಿಂದ ಸರ್ವೋತ್ಕೃಷ್ಟವಾದ ಲಿಂಗ ಮಾಹಾತ್ಮ್ಯವನ್ನು ತನ್ನ ಅಂತರಂಗದಲ್ಲಿ ಕಂಡನುಭವಿಸಲು ಶಕ್ತನಾಗುವನು. ಶ್ರೇಷ್ಠವೂ, ಪವಿತ್ರವೂ, ಸನಾತನವೂ, ನಿರಂಕುಶವೂ, ಸಚ್ಚಿದಾನಂದ ಮಯವೂ, ನಿಗಮಾಗಮಗಳಿಗೆ ಕಾರಣೀ ಭೂತವೂ, ಶೌನಕಾದಿ ತತ್ವವೇತ್ತರಿಂದಲೂ ಸಮಗ್ರವಾಗರಿಯಲು ಸಾಧ್ಯವಿಲ್ಲದ, ಷಟ್ತ್ರಿಂಶ ತತ್ವಪೂರಿತ ಮಹಾಲಿಂಗದ ಮಾಹಾತ್ಮ್ಯವನ್ನು ಶ್ರೀ ಮಹಾಗುರುವಿನ ಕೃಪಾಲವಲೇಶದಿಂದ ಮಾತ್ರ ಸ್ವಾತ್ಮದಲ್ಲಿ,

**ಸ್ವಾನು ಭೂತ್ಯೇಕ ಮಾನಾಯ । ನಮಃ ಶಾಂತಾಯ ತೇಜಸೇ ॥**

ಎಂಬಂತೆ ಕಿಂಚಿತ್ ತಿಳಿಯಲು ಸಾಧ್ಯವಿರುತ್ತೆ. ಶಿವಶಕ್ತಿ ಸಂಪುಟದಿಂದ ತಾನೇ ತಾನಾಗಿ ಪ್ರಜ್ವಲಿಸುವ ಮಹಾಲಿಂಗ,

**ಕ್ರಿಯಾಶಕ್ತ್ಯಾತ್ಮಕಂ ಪೀಠಂ। ಜ್ಞಾನ ಶಕ್ತ್ಯಾತ್ಮನಃ ಪ್ರಭೋಃ॥**

ಎಂಬ ಶಿವಾಗಮೋಕ್ತಿಯಂತೆ, ಶಕ್ತಿ ಲಿಂಗದ ಪೀಠವೆನಿಸಿರಲು ಶಿವನು ತಾನೇ ಮಹಾಲಿಂಗ ರೂಪಿಯೆಂದು ವೇದ್ಯವಿರುತ್ತೆ.

**ಪರತತ್ವಂ ಗೋಳಾಕಾರಃ । ಚಿನ್ಮಯಂ ಸದ್ವಿಲಾಸಿತಂ ॥
ಶರಣ್ಯಂ ಸರ್ವತತ್ವಾನಾಂ । ಲಿಂಗಾಕಾರೇಣವರ್ತತೇ ॥
ಆಲಯಂ ಸರ್ವ ಭೂತಾನಾಂ । ಲಯಾ ನಾಂ ಲಿಂಗ ಮುಚ್ಯತೇ ॥**

ಇಂತಾಗಿ ಲಿಂಗದ ಮಾಹಾತ್ಮ್ಯ ಅನಂತ ಅಪಾರ ವರ್ಣನಾತೀತವಿರುತ್ತೆ ಸಹಸ್ರ ನಾಲಗೆಯುಳ್ಳ ಆದಿಶೇಷನು ಸಹಸ್ರ ವರ್ಷ ಶಿವಲಿಂಗದ ಮಹಿಮೆ ಯನ್ನು ಅಹೋರಾತ್ರಿ ಪ್ರಶಂಸಿದರೂ ಅಪೂರ್ಣವಿರುತ್ತೆ. ಶಿವನ ಮಹಿಮೆಗೆ ಪಾರವಿಲ್ಲಿಯದು. ಪುಷ್ಪದಂತನು ತನ್ನ ಶಿವ ಮಹಿಮ್ನಾ ಸ್ತುತಿಯಲ್ಲಿ,

ಮಹಿಮ್ನಃ ಪಾರಂತೇ ಪರಮ ವಿದುಷೋ। ಯದ್ಯ ಸದೃಷೀ
ಸ್ತುತಿ ಬ್ರಹ್ಮಾದೀನಾ ಮಪಿ । ತದವಸನ್ನಾಸ್ತ್ವಯಿಗಿರಃ ।
ಅಥಾವಾಚ್ಯಃ ಸರ್ವಃ ಸ್ವಮತಿ ಪರಿಣಾಮಾವಧಿ ಗೃಣನ್ ।
ಮಮಾ ಪ್ಯೇಷ ಸ್ತೋತ್ರೇ ಹರ ನಿರಪವಾದಃ ಪರಿಕರಃ ॥

ಇದರ ಅಭಿಪ್ರಾಯವೇನೆಂದರೆ ಜ್ಯೋತಿರ್ಲಿಂಗರೂಪಿ ಪರಶಿವನ ಮಹಿಮೆ ಯನ್ನು ಹರಿಬ್ರಹ್ಮಾದಿಗಳೂ ಪೂರ್ಣವರ್ಣಿಸಲು ಅಶಕ್ಯರಿರುವರೆಂದ ಬಳಿಕ, ಭೋ ! ಶ್ರೀ ಕಾಶಿ ವಿಶ್ವನಾಥ ನಾನು ಯಥಾಶಕ್ತಿ ಭಕ್ತಿ ಪೂರ್ವಕ ಸ್ತುತಿಸುವ ಸ್ತೋತ್ರವನ್ನು ಮನ್ನಿಸಿ ಅನುಗ್ರಹಿಸೆಂದು ಬೇಡಿರುವನು. ಒಮ್ಮೆ ವಿದ್ಯಾಂಬೆ ಶ್ರೀ ಶಾರದೆ ಶಿವನ ಮಾಹಾತ್ಮ್ಯವನ್ನು ಪೂರ್ಣವರ್ಣಿಸ ಬೇಕಂದು ಶುಭ ಮುಹೂ ರ್ತದಲ್ಲಿ ಕಳಿತಳು ಹಿಮವದ್ಗಿರಿ ಮಸಿ ಗುಳಿಗೆ, ಸಮುದ್ರ ದೌತಿ (ಇಂಕ್ ಬಾಟ್ಲ) ಯಾಗಿಸಿ, ಭೂಮಂಡಲವನ್ನೇ ಒಂದು ಹಾಳೆ ಕಾಗದವಾಗಿಸಿಕ್ಕೊಂಡು,

ಬ್ರಹ್ಮನ ರಾಣಿ ವೀಣಾಪಾಣಿ, ಅಸಿತಗಿರಿಸಮಂಸ್ಯಾತ್ ।
ಕಜ್ಜಲಂ ಸಿಂಧು ಪಾತ್ರಂ ಸುರತರುವರ ಶಾಖಾ ಲೇಖನೀ ।
ಪತ್ರ ಮುರ್ವೀಂ, ಲಿಖತಿ ಯದಿ ಗೃಹಿತ್ವಾ। ಶಾರದಾ ಸರ್ವ
ಕಾಲಂ । ತಡಪಿ ತವಗುಣಾನಾಮೀಶ ಪಾರಂ ನ ಯಾತಿ ॥

ನೂರಾರು ಯುಗಗಳವರವಿಗೂ ಶಿವನ ಮಹಿಮೆಯನ್ನು ಅಖಂಡವಾಗಿ ರಚಿಸಿದ ಕಾರಣ, ಮಸಿ ಮುಗಿದು ಕಾಗದವೂ ತುಂಬಲು ಮುಂದೆ ಬರೆಯಲು ಸಾಧ್ಯವಿಲ್ಲದೆ, ಅಷ್ಟಕ್ಕೆ ನಿಲ್ಲಿಸಿ, ಇನ್ನೂ ಬರೆಯ ಬೇಕಾದ ಮಹಿಮೆ ಎಷ್ಟಿದೆ ಯೆಂದು, ತಲೆ ಎತ್ತಿ ನೋಡಿದಾಗ, ಸಮುದ್ರದಿಂದ ಕೋಟ್ಯಾನುಕೋಟಿ ಅಲೆಗಳು ತನ್ನತ್ತ ಹಾಯುವ ದೃಶ್ಯವನ್ನು ಕಂಡ ಶಾರದೆ ಕಂಪಿತಳಾದಳು. ಪರಂತು ಈವರವಿಗೆ ವಿದ್ಯಾಂಬೆ ರಚಿಸಿದ್ದು ಒಂದು ಹಿಡಿ ಮಣ್ಣಿನಷ್ಟೇ, ಭುವಿ

ಮೇಲಿನ ಉಳಿದ ಮಣ್ಣಿನಷ್ಟು ಇನ್ನೂ ಬರೆಯ ಬೇಕೆಂದರಿತು, ಅದು ತನ್ನಿಂದ ಸಾಧ್ಯವಿಲ್ಲವೆಂದರಿತು ತನ್ನೆರಡು ಕೋಮಲವಾದ ಕರಗಳನ್ನು ಶಿರದಲ್ಲಿರಿಸಿ, ಶಂಭೋ ಗೌರೀ ರಮಣ! ಇಲ್ಲಿಯವರೆವಿಗೆ ಭಕ್ತ್ಯಾ ತಾನು ಬರೆದಿರುವ, ಲಿಂಗ ರೂಪಿ ನಿನ್ನ ಮಾಹಾತ್ಮ್ಯವನ್ನು ಮುದದಿಂ ಸ್ವೀಕರಿಸಿ, ನನ್ನನ್ನು ಅನುಗ್ರಹಿಸೆಂದು ಬೇಡಿಕೊಂಡಿರುವಳು.

ಶ್ರೀ ಶಾರದಾಂಬೆಯ ಸ್ತುತಿ :

ನಮೋ ನಮಸ್ತೇ ಖಿಲ ಕಾರಣಾಯ । ನಿಷ್ಕಾರಣಾಯಾದ್ಭುತ ಕರರ್ಣಾಯ । ಸರ್ವಾಗಮಾಮ್ನಾಯ ಮಹಾರ್ಣವಾಯ । ನಮೋ ಪವರ್ಗಾಯ ಪರಾಯಣಾಯ ॥ ನಮಸ್ತೇ ಭಕ್ತ ಸಂರಕ್ಷಾ । ನಮಸ್ತೇ ಪುರುಷೋತ್ತಮಾ । ನಮಸ್ತೇ ಸರ್ವ ಲೋಕಾತ್ಮಾ । ನಮಸ್ತೇ ಶ್ರೀ ಪರಮೇಶ್ವರಾ ॥

ಲಿಂಗಮಾಹಾತ್ಮ್ಯ ಅನಂತಾನಂತ ಕೋಟಿ ಮುಖವುಳ್ಳದ್ದು ಅಸ್ತು.

ನಮಸ್ತೇ ಶ್ರೀ ಕಂಠ ಪ್ರಿಯಗಿರಿಸುತಾ ಶ್ಲೇಷ ಮಧುರ ।
ಪ್ರಭೋ ಪೂರ್ವಾಸಂಧ್ಯಾಲಸತಿ । ಪುರತೋ ರಾಗ ಸುಭಗಾ ॥
ಸಮುತ್ತಿಷ್ಠತ್ವಂ ಭೋಗರಲ ನಗರಾಧೀಶ ಜಗತಾಂ । ಸಮಸ್ತಾನಾಮಾಸು ಪ್ರದಿಶ ಕೃಪಯಾನಂದ ಲಹರೀಂ ॥ ಕೈಲಾಸ ಶೈಲೆ ನಿಲಯಾದಪಿ । ರಮ್ಯಮೇ ತತ್ । ಧಾಮ ಪ್ರಿಯಂ ಮಮ ಸದೇತ್ಯಭಿಧಾಯ । ಗೌರೀಂ ॥ ಕ್ಷೇತ್ರಂ ವರಂ, ಗರ ಪುರಂ । ಪ್ರಿಯ ಯಾಗ ತೋಸಿ । ಶ್ರೀ ಪಾರ್ವತೀ ಪ್ರಿಯ ವಿಭೋ ತವ ಸುಪ್ರಭಾತಂ ॥

## ಪ್ರಸಾದಿ ಲಿಂಗಸ್ಥಲ ೨೮ ॥ ಜಂಗಮ ಮಾಹಾತ್ಮ್ಯ ಸ್ಥಲಂ ॥
## (ಪರಿ ೧೧)

ಜ್ಞಾನಂ ತ್ವತಿಶಯಾದ್ಯೇ ತು । ಶಿವಂ ವಿಶ್ವ ಪ್ರಕಾಶಕಂ ।
ಸ್ವಸ್ವರೂಪತಯಾ ತೇ ತು । ಜಂಗಮಾ ಇತಿ ಕೀರ್ತಿತಾಃ ॥

(ಶ್ಲೋ ೩೬)

ಸ್ಥಾವರ ಜಂಗಮಾತ್ಮಕ ವಿಶ್ವವನ್ನು ಪ್ರಕಾಶ ಗೊಳಿಸುವ ಪರಶಿವನು ಕ್ರಿಯಾಶಕ್ತಿ ಜ್ಞಾನ ಶಕ್ತಿಗಳಿಂದ ವಿಜೃಂಭಿತನಾಗಿಹನೆಂದು ಯಾರು ತನ್ನ ಸ್ವಸ್ವರೂಪಾನು ಸಂಧಾನದಿಂದ ಸ್ವಾತ್ಮದಲ್ಲಿ ತಿಳಿಯುವರೋ ಅಂತಪ್ಪ ಮಹಾ ಯೋಗಿ ಜಂಗಮನೆನಿಸುವನು. ಜೀವಭಾವವ ಅಳಿದು ತನು ಕರಣಗಳನ್ನೆಲ್ಲಾ ತನ್ನ ಶಿವಯೋಗ ಪ್ರಭಾವದಿಂದ ಲಿಂಗಮಯವೆಂದರಿತು, ಪರಮ ಚೈತನ್ಯ ಜ್ಞಾನ ಸ್ವರೂಪಿ ಜಂಗಮನೆನಿಸುವನು. ಜಂಗಮನೆಂದರೆ ಅವನಲ್ಲಿ ಗುರು ಲಿಂಗಗಳ ಮಾಹಾತ್ಮ್ಯ ಸ್ವಾಭಾವಿಕವಾಗಿಯೇ ಅಂತರ್ಗತವಾಗಿರುವುವು. ಲಿಂಗತತ್ವ ಪೂಜನೀಯ ಗುರುತತ್ವ ಬೋಧಕವಾಗಿರಲು, ಜಂಗಮ ತತ್ವ ಅನುಗ್ರಹ ಶಕ್ತಿಯಿಂದ ವಿರಾಜಿತವಾಗಿದೆ.

ಏಕಮೂರ್ತಿ ಸ್ತ್ರಯೋ ಭಾಗಃ । ಗುರು ಲಿಂಗಂತು ಜಂಗಮಃ॥

ಗುರು ಲಿಂಗ ಜಂಗಮ ಪ್ರಭೇದಗಳು ಒಂದೇ ತತ್ವದ ಮೂರು ಮಹದಂಶಗಳಿರುವುವು. ಈ ಕಾರಣದಿಂದ ಜಂಗಮ ಮಾಹಾತ್ಮ್ಯ ಗುರು ಲಿಂಗ ಮಾಹಾತ್ಮ್ಯಗಳಷ್ಟೇ ಪ್ರಶಂಸನೀಯವಿರ್ಯವುದು.

ಯೇ ಪಶ್ಯಂತಿ ಜಗಜ್ಜಾಲಂ । ಚಿದ್ರೂಪಂ ಶಿವಯೋಗತಃ ।
ನಿರ್ಧೂತ ಮಲ ಸಂಸ್ಪರ್ಶಾಸ್ತೇ । ಸ್ಮೃತಾಃ ಶಿವಯೋಗಿನಃ ॥
(ಶ್ಲೋ ೩೭)

ಯಾರು ಆಣವ, ಮಾಯಾ ಕಾರ್ಮಿಕ ಮಲತ್ರಯಗಳಿಂದ ವ್ಯಾಪಕವಾದೀ ಮಾಯಾ ಜಗತ್ತನ್ನು ಕಂಡು ಮೋಹಿತರಾಗರೋ ವಿಷಯೇಂದ್ರಿಯಗಳಿಗೆ ಗುಲಾಮರಾಗದೆ ಸರ್ವವನ್ನೂ ಶಿವಯೋಗ ಪ್ರಭಾವದಿಂದ ಚಿದ್ರೂಪಗೊಳಿಸಿ ನೋಡುವಾತ ಜಂಗಮ ಶಿವಯೋಗಿಯೆನಿಸುವನು. ಅಂದರೆ ಯಾರು ಈ ಅಖಿಲಾಂಡಕೋಟಿ ಬ್ರಹ್ಮಾಂಡವನ್ನೆಲ್ಲಾ ಶಿವನ ಸಂಪರ್ಕದಿಂದ. ಚಿತ್ಕ್ರಿಯಾ ಸ್ವರೂಪವಾಗಿ ತಿಳಿಯುತ್ತಾರೋ, ಆ ಮಹಾಪುರುಷ ಜಂಗಮನೆನಿಸಿ ಸ್ತುತ್ಯನಿರುವನು.

ಅಂಗಸ್ಥಲ ೨೯ ॥ಭಕ್ತ ಮಾಹಾತ್ಮ್ಯಸ್ಥಲಂ॥ (ಪರಿ ೧೧)

ಯೋ ಭಜಂತಿ ಮಹಾದೇವಂ । ಪರಮಾತ್ಮಾನ ಮವ್ಯಯಂ।
ಕರ್ಮಣಾ ಮನಸಾ ವಾಚಾ ತೇ ಭಕ್ತಾಯಿತಿ ಕೀರ್ತಿತಾಃ॥

ಶಿವಭಕ್ತಿರ್ವಿಹೀನಸ್ಯ । ಸುಕೃತಂ ಚಾಪಿ ನಿಷ್ಫಲಂ । ವಿಪರೀತ ಫಲಂ ಚ । ಸಾ ದ್ದಕ್ಷಸ್ಯಾಪಿ ಮಹಾಧ್ವರೇ ॥ ಸುಕೃತಂ ದುಷ್ಕೃತಂ ಚಾಪಿ । ಶಿವಭಕ್ತಸ್ಯ ನಾಸ್ತೀ ಹಿ । ಶಿವಭಕ್ತಿ ವಿಹೀನಾನಾಂ। ಕರ್ಮಪಾಶ ನಿಭಂದನಂ ॥

(ಶ್ಲೋ। ೪೬, ೪೯, ೫೧)

ಭಕ್ತ ಭಕ್ತಿ ಭಗವಂತ ಈ ಮೂರು ಒಂದು ಶ್ರೇಣಿಗೆ ಸೇರಿದ ಪರಮೋತ್ಕೃಷ್ಟವಾದ ದೈವೀ ಅಂಶಗಳು. ಭಕ್ತನನ್ನು ಭಗವಂತನೊಂದಿಗೆ ಸಮರಸಗೊಳಿಸಿ ತಾದಾತ್ಮ್ಯಭಾವವನ್ನುಂಟು ಮಾಡುವ ಅದ್ಭುತ ಶಕ್ತಿ ಭಕ್ತಿ ರಸಾಯನದಲ್ಲಿ ಎದ್ದು ಕಾಣುತ್ತದೆ. ಯಾರು ತ್ರಿಕರಣ ಪೂರ್ವಕ ಪರಮೇಶ್ವರನನ್ನು ಅನನ್ಯ ಭಕ್ತಿ ಭಾವದಿಂದ ನಿರಂತರ ಸ್ತುತಿಸಿ ಭಜಿಸುತ್ತಾರೋ, ಅಂಥವರನ್ನು ಭಕ್ತರೆಂದು ಕರೆಯಲಾಗಿದೆ. ಯಾವಾತನಲ್ಲಿ ರಕ್ತಗತವಾದ ಶಿವಭಕ್ತಿಯಿಲ್ಲವೋ ಅಂಥವನ ಸುಕೃತ, ನಿಷ್ಫಲನೆನಿಸಿ ವ್ಯರ್ಥವಾಗುವುದು. ಅಂದರೆ ಅನಿಷ್ಟ ಅವನ ಬೆನ್ನೇರಿರುವುದೆಂದರ್ಥ. ದಕ್ಷ ಪ್ರಜಾಪತಿ ಶಿವನ ಮಾವನೆಂದು, ದರ್ಪದಿಂದ ಕೂಡಿದ್ದ ಪುಣ್ಯಶಾಲಿಯಾಗಿದ್ದರೂ, ಶಿವಭಕ್ತಿ ಹೀನನಾದ್ದರಿಂದ, ತನ್ನ ಯಜ್ಞದಲ್ಲಿ ಅನಿಷ್ಟ ಫಲಗಳೊಂದಿಗೆ ಅನರ್ಥಕ್ಕೆ ಗುರಿಯಾದನು. ಪರಾಭಕ್ತಿಯುತನಾದ ಶಿವಭಕ್ತನಿಗೆ ಪಾಪ ಪುಣ್ಯಗಳ ಲೇಪನ ಕಿಂಚಿತ್ತೂ ಇರುವುದಿಲ್ಲ. ಎಣ್ಣೆ ಸವರಿದ ಕತ್ತಿಯಿಂದ ಕೈಗಳಿಗೆ ಹೇಗೆ ಹಲಸಿನ ಹಣ್ಣಿನ ಅಂಟು ಅಂಟುವುದಿಲ್ಲವೋ ಅದರಂತೆ ಶಿವಭಕ್ತನಿರುವನು. ಶಿವಭಕ್ತಿ ಹೀನರು. ತಮ್ಮ ದುಷ್ಕರ್ಮಂಗಳಿಗನುಸಾರ ದುಃಖಕ್ಕೀಡಾಗುವರು ಭಕ್ತನ ಮಾಹಾತ್ಮ್ಯ ವರ್ಣನಾತೀತವೆನಿಸಿದೆ.

## ಪ್ರಸಾದಿ ಅಂಗಸ್ಥಲ ೩೦ ॥ ಶರಣ ಮಹಾತ್ಮ್ಯ ಸ್ಥಲಂ ॥ (ಪರಿ ೧೧)

ಬ್ರಹ್ಮಾದಿ ವಿಭುಧಾನ್ ಸರ್ವಾನ್ । ಮುಕ್ತ್ವಾ ಪ್ರಾಕೃತ ವೈಭವಾ । ಪ್ರಪದ್ಯತೇ ಶಿವಂ ಯತ್ತು ಶರಣಂ ತದುದಾಹೃತಂ ॥ ಶರಣ್ಯಃ ಸರ್ವ ಭೂತಾನಾಂ । ಶಂಕರಃ ಶಶಿಶೇಖರಃ । ಸರ್ವಾತ್ಮನಾ ಪ್ರಪನ್ನಸ್ತಂ । ಶರಣಾಗತ ಉಚ್ಯತೇ ॥ ಪ್ರಪನ್ನಾ

ನಾಂ ಮಹಾದೇವಂ । ಪರಿಪಕ್ವಾಂತರಾತ್ಮನಾಂ । ಜನ್ಮೈವ ಜನ್ಮನಾನ್ಯೇಷಾಂ । ವೃಥಾ ಜನನ ಸಂಗಿನಾಂ ॥ ದುರ್ಲಭಂ ಮಾನುಷಂ ಪ್ರಾಪ್ಯ । ಜನನಂ ಜ್ಞಾನ ಸಾಧನಂ । ಯೇ ನ ಜಾನಂತಿ ದೇವೇಶಂ । ತೇಷಾಮಾತ್ಮಾ ನಿರರ್ಥಕಃ ॥ ತತ್ಕುಲಂ ಹಿ ಸದಾ ಶುದ್ಧಂ । ಸಫಲಂ ತಸ್ಯ ಜೀವಿತಂ । ಯಸ್ಯ ಚಿತ್ತಂ ಶಿವೇ ಸಾಕ್ಷಾದ್ವಿಲೀನ । ಮ ಬಹಿರ್ಮುಖಂ ॥

(ಶ್ಲೋ ೫೬, ೫೭, ೬೨, ರಿಂದ ೬೪)

ಆಕಾಶಾಂಗನಾದ ಶರಣನ ಮಹಿಮೆ ನಭೋ ಮಂಡಲ ದೆತ್ತರ ಬೆಳೆದು ನಿಂತಿದೆ. ಶರಣನು ಗುರು ಲಿಂಗ ಜಂಗಮರ ಮಹಾತ್ಮ್ಯವನ್ನು ಕೂಲಂಕಶ ವಾಗಿ ಅರಿತು, ಲಿಂಗಾಚಾರಾದಿ ಪಂಚಾಚಾರಗಳ ತತ್ವವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಅದರಂತೆ ಆಚರಿಸುವಾತನವನು.

ಶಿವ ಏಕೋ ಧ್ಯೇಯಃ ಶಿವಂ ಕರಃ । ಸರ್ವ ಮನ್ಯತ್ಪರಿ ತ್ಯಜ್ಯ॥

ಎಂಬ ನಿಷ್ಠಾವಂತನಾಗಿರ್ಪುದೇ ಶರಣನ ಧ್ಯೇಯ ಬೋಗಲಾಲಸೆಗಳಿಂದ ಕೂಡಿದ ಹರಿ ಬ್ರಹ್ಮೇಂದ್ರಾದಿ ಅಖಿಲ ಪ್ರಮುಖ ದೇವ ಗಣಗಳು. ಪ್ರಕೃತಿ ವೈಭವಗಳಿಂದ ವಿಭೂಷಿತರಾಗಿ ಮೈಮರೆತು ವರ್ತಿಸುತ್ತಲಿರುವರಾದ್ದರಿಂದ ಶರಣನು ಇವರನ್ನೆಲ್ಲಾ ಉಪೇಕ್ಷಾ ಭಾವದಿಂದ ದೂರೀಕರಿಸಿ, ಶಿವನಲ್ಲಿ ಅನನ್ಯ ಭಕ್ತಿ ಭಾವದಿಂದ ಶರಣಾಗಿರುವನು, ಎಂಭತ್ತು ನಾಲ್ಕುಲಕ್ಷ ಜೀವ ಕೋಟಿಗಳಿಗೆ ಶರಣ್ಯ ಶಂಭು, ಶಿವ ನುಳಿದು ಶರಣ್ಯರಿಲ್ಲ.

ಅಭಯಂ ಸರ್ವ ಭೂತೇ ಭ್ಯೋ । ದಧಾಮ್ಯೇ ತದ್ ವ್ರತಂ ಮಮ ॥

ಎಲ್ಲ ಜೀವ ಕೋಟಿಗಳಿಗೆ ಅನವರತ ಅಭಯವನ್ನು ನೀಡುವುದೇ ನನ್ನ ವ್ರತವೆಂದು ಶಿವನ ಆಶ್ವಾಸನೆಯಿದೆ.

ಅನನ್ಯಾಶ್ಚಿಂತಯಂತೋ ಮಾಂ। ಯೇಜನಾಃ ಪರ್ಯುಪಾಸತೇ॥ ತೇಷಂ । ನಿತ್ಯಾಭಿ ಯುಕ್ತಾನಾಂ । ಯೋಗ ಕ್ಷೇಮಂ ವಹಾಮ್ಯಹಂ ॥

ಎಂದು ಭಗವಂತನು ಭಕ್ತರನ್ನುದ್ದೇಶಿಸಿ ಸಂತೈಸಿಸಿರುವನು. ಯಜ್ಞಾಯಾಗಾದಿಗಳಿಂದ ಏರ್ಪಡುವ ಫಲ ಕಾಲಾಂತರದಲ್ಲಿ ಕ್ಷಯಿಸುವುದು. ಶಿವಪೂಜೆ ಶಿವಧ್ಯಾನ, ಶಿವಜ್ಞಾನಗಳಿಂದ ಶಿವಶರಣನಿಗೆ ಅಕ್ಷಯ ಫಲವಿರುತ್ತೆ. ಹೀಗಿರುವಾಗ ದೇವ, ಋಷಿ, ಪಿತೃಗಳ ತರ್ಪಣಕ್ಕಿಂತ, ಶಿವ ವ್ರತ, ಇಷ್ಟಲಿಂಗ ಪೂಜೆ ಮೋಕ್ಷ ಪ್ರದವೆನಿಸಿದೆ ದುರ್ಲಭವಾದ ಮಾನವ ಜನ್ಮ ಇರುವಾಗಲೇ ಮೋಕ್ಷಕ್ಕೆ ಕಾರಣವಾದ ಶಿವಾರಾಧನೆಯೊಂದರಿಂದಲೇ ಶರಣ ಮಹಾತ್ಮ್ಯೆ ಗಂಭೀರವಾಗಿ ಗರ್ಭಿತವಾಗಿದೆ.

## ಅಂಗಸ್ಥಲ ೩೧ ॥ ಪ್ರಸಾದ ಮಹಾತ್ಮ್ಯೆ ಸ್ಥಲಂ ॥
## (ಪರಿ ೧೧)

ಭಕ್ತಮಹಾತ್ಮ್ಯೆ, ಗುರುಮಹಾತ್ಮ್ಯೆ, ಲಿಂಗ, ಜಂಗಮ ಮಹಾತ್ಮೆಗಳನ್ನು ಮನಗಂಡ ಶರಣನು, ಶಿವನ ಪ್ರಸಾದಕ್ಕೆ ಅರ್ಹನೆನಿಸುವನು.

ಸದಾ ಲಿಂಗೈಕ ನಿಷ್ಠಾನಾಂ | ಗುರು ಪೂಜಾನು ಷಂಗಿಣಾಂ ॥
ಪ್ರಸನ್ನಾನಾಂ ವಿಶುದ್ಧಾನಾಂ । ಪ್ರಸೀದತಿ ಮಹೇಶ್ವರಃ ॥
ಪ್ರಸಾದೋಪಿ ಮಹೇಶಸ್ಯ । ದುರ್ಲಭಃ ಪರಿ ಕೀರ್ತ್ಯತೇ !
ಘೋರ ಸಂಸಾರ ಸಂತಾಪ । ನಿವೃತ್ತಿರ್ಯೇನ ಜಾಯತೇ ॥
ಪ್ರಸಾದ ಮೂಲಾ ಸರ್ವೇಷಾಂ । ಭಕ್ತಿ ರವ್ಯಭಿಚಾರಿಣೀ ।
ಶಿವಪ್ರಸಾದ ಹೀನಸ್ಯ ಭಕ್ತಿಶ್ಚಾಪಿ ನ ಸಿಧ್ಯತಿ ॥ ಬ್ರಹ್ಮಾದ್ಯಾ
ವಿಭುದಾಃ ಸರ್ವೇ । ಸ್ವ ಸ್ವ ಸ್ಥಾನ ನಿವಾಸಿನಃ । ನಿತ್ಯ ಸಿದ್ಧಾ
ಭವಂತ್ಯೇವ । ಪ್ರಸಾದಾ ತ್ಪಾರ ಮೇಶ್ವರಾತ್ ॥ ಪ್ರಸಾದೇ
ಶಾಂಭವೇ ಸಿದ್ಧೇ | ಪರಮಾನಂದ ಕಾರಿಣೀ । ಸರ್ವಂ ಶಿವ
ಮಯಂ ವಿಶ್ವಂ । ದೃಶ್ಯತೇ ನಾತ್ರ ಸಂಶಯಃ ॥ ಬಹುನಾತ್ರಕಿ
ಮುಕ್ತೇನ । ನಾಸ್ತಿ ನಾಸ್ತಿ ಜಗತ್ರಯೇ । ಸಮಾನ ಮಧಿಕಂ
ಚಾಪಿ | ಪ್ರಸಾದಸ್ಯ ಮಹೇಶಿತುಃ ॥

(ಶ್ಲೋ ೬೬, ೬೭, ೬೯, ೭೧, ೭೩, ೭೪)

ಶ್ರೀ ಗುರುಲಿಂಗ ಜಂಗಮರ ದಿವ್ಯ ಪ್ರಸಾದ, ಪರಿಶುದ್ಧಾತ್ಮರಿಗಲ್ಲದೆ, ಬದ್ಧ ಜೀವಿಗಳಿಗೆ ಲಭಿಸದು. ಶಿವ ಪ್ರಸಾದದಿಂದ ಭವಬಂಧನಗಳು ಬಿಟ್ಟೋಡುವುವು. ಯಜ್ಞ, ತಪಸ್ಸು, ಜಪ ಧ್ಯಾನಾದಿಗಳೆಲ್ಲಾ ಶಿವ ಪ್ರಸಾದ ಪ್ರಾಪ್ತಿಗಾಗಿ ಆಚರಿಸಲಾಗುತ್ತಿದೆ, ಭಕ್ತಿ ಶಿವಪ್ರಸಾದಕ್ಕೆ ಜನನೀ ಭವನವಾದರೆ, ಪ್ರಸಾದ ಭಕ್ತಿಗೆ ಜನ್ಮ ಭೂಮಿ ವಿಷ್ಣು ಬ್ರಹ್ಮಾದಿ ದೇವತೆಗಳು,

ಯಸ್ಯ ಪ್ರಸಾದಾದ್ದೇವಸ್ಯ । ಬ್ರಹ್ಮಾ ಬ್ರಹ್ಮತ್ವ ಮಾಪ್ತವಾನ್।
ವಿಷ್ಣುತ್ವ ಮಪಿ ವಿಷ್ಣುಶ್ಚ । ಸ ಶಿವಃ ಕೈರ್ನ ಸೇವ್ಯತೇ ॥
ಸಾಕ್ಷಾಲ್ಲಿಂಗ ಪ್ರಸಾದಂ ತು ಸ್ವದೇಹೇ । ಧಾರಯೇನ್ನರಃ ।
ವಜ್ರಕಾಯಶ್ಚ ಭವತಿ । ಶಿವಸಾಯುಜ್ಯ ಮಾಪ್ನುಯಾತ್ ॥

ಅಂದರೆ ಶಿವನ ಪ್ರಸಾದವನ್ನು ನಿತ್ಯ ಬ್ರಹ್ಮನು ಭಕ್ತಿಯಿಂದ ಸ್ವೀಕರಿಸಿ ಬ್ರಹ್ಮಾತ್ವಾಧಿಕಾರವನ್ನೂ ಶ್ರೀವಿಷ್ಣು ಶ್ರೀವಿಷ್ಣುತ್ವಾಧಿಕಾರವನ್ನೂ ದರ್ಪದಿಂದ ನೆರವೇರಿಸುತ್ತಲಿದ್ದಾರೆ. ಇದರಂತೆ ಯಾವ ಮಾನವನು ಶಿವನ ಪ್ರಸಾದವನ್ನು ಅನುದಿನ ಭಕ್ತಿಪೂರ್ವಕ ಶರೀರದಲ್ಲಿ ಧರಿಸಿ ಸೇವಿಸುತ್ತಾನೆಯೋ ಅಂಥವನು ವಜ್ರಕಾಯನಾಗಿ ಶೋಭಿಸಿ ಅಂತ್ಯದಲ್ಲಿ ಶಿವ ಪದವಿಯನ್ನು ಹೊಂದಿ ಅಮೃತ ಸ್ವರೂಪಿಯಾಗುವನು. ಇದರಿಂದಾಗಿ ಪ್ರಸಾದ ಮಹಾತ್ಮ್ಯೆ ಎಲ್ಲಕ್ಕೂ ಕಿರೀಟಪ್ರಾಯವಾಗಿರುವುದು. ಅಸ್ತು ಪ್ರಸಾದಿ ಸ್ಥಲ ನಿರೂಪಣೆ ಪೂರ್ಣವೆನಿಸಿತು.

ಓಂಕಾರರಂಗ ನಿಲಯಾಂತರ ನಿತ್ಯಸಂಗ । ಸ್ವಾಮಿನ್ನಸಂಗ
ಜಗತೀಹ ಸಮಸ್ತ ಜಂತೋಃ । ತ್ವಂ ಪ್ರೇರ ಯಸ್ಯುರು ತರಂಗ
ಸಮಾಂತರಂಗಂ । ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥
ನಮ್ರೇಂದಿರಾ ಪ್ರಿಯ ಮುಖಾಮರ ವೃಂದ ವಂದ್ಯ । ಸ್ತಂದ್ರೀಂ
ವಿನೇಂದ್ರರಿಪು ಕೇಶಿನ ಮಾಶುದಗ್ಧ್ವಾ । ಜಗಾದ್ಧ್ವದೀಯ ವಿಷ
ಮುದ್ಧಧಿಷೇ ತ್ರಿಲೋಕೀಂ । ಶ್ರೀ ಕಂಠನಾಥ ಜಗತಾಂ ತವ
ಸುಪ್ರಭಾತಂ ॥

## ಪ್ರಾಣಲಿಂಗಿ ಅಂಗಸ್ಥಲ ೩೨ ॥ ಪ್ರಾಣಲಿಂಗಿ ಸ್ಥಲಂ ॥
## (ಪರಿ. ೧೨)

ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣ ರೂಪಿಣೀ ।
ತದ್ರೂಪ ಲಿಂಗ ವಿಜ್ಞಾನೀ ಪ್ರಾಣ ಲಿಂಗೀ ತಿ ಕಥ್ಯತೇ ॥
ಶಿವಯೋಗ ಸಮಾಧಿಸ್ತ್ವ ತತೋ ಲಿಂಗ ನಿಜ ಸ್ಥಲಂ । ಅಂಗ
ಲಿಂಗ ಸ್ಥಲಂ ಚಾಥ । ಕ್ರಮಾದೇಷಾಂ ಭಿದೋಚ್ಯತೇ ॥ಪ್ರಾಣಾ
ಪಾನ ಸಮಾಘಾತಾತ್ । ಕಂದ ಮಧ್ಯಾದ್ಯದುತ್ಥಿತಂ । ಪ್ರಾಣ
ಲಿಂಗಂ ತದಾಖ್ಯಾತಂ । ಪ್ರಾಣಾ ಪಾನ ನಿರೋಧಿಭಿಃ ॥
ಪ್ರಾಣೋ ಯತ್ರಲಯಂ ಯಾತಿ ಭಾಸ್ಕರೇಂದು ವಿಘಟ್ಟನಾತ್।
ತತ್ಪ್ರಾಣ ಲಿಂಗ ಮುದ್ಧಿಷ್ಟಂ ತದ್ಧಾ ಸ್ಯಾತ್ತದಾ ಕೃತಿಃ ॥
ಜ್ಞಾನಿನಾಂ ಯೋಗ ಯುಕ್ತಾ ನಾಮಂತಃ ಸ್ಫುರತಿ ದೀಪವತ್ ॥
ಚಿದಾಕಾರಂ ಪರಂ ಬ್ರಹ್ಮ ಲಿಂಗ ಮಜ್ಞೈರ್ನ ಭಾವ್ಯತೇ ॥
ಅಂತಃ ಸ್ಥಿತಂ ಪರಂ ಲಿಂಗಂ ಜ್ಯೋತೀ ರೂಪಂ ಶಿವಾತ್ಮಕಂ
ವಿಹಾಯ ಬಾಹ್ಯ ಲಿಂಗಸ್ಥಾ । ವಿಮೂಢಾ ಇತಿ ಕೀರ್ತಿ ತಾಃ ॥
ಮಾಯಾ ವಿಕಲ್ಪಜಂ ವಿಶ್ವಂ । ಹೇಯಂ ಸಂಚಿಂತ್ಯ ನಿತ್ಯಶಃ ।
ಚಿದಾನಂದಮಯೇ ಲಿಂಗೇ ವಿಲೀನಃ ಪ್ರಾಣ ಲಿಂಗವಾನ್ ॥
(ಶ್ಲೋ॥ ೩, ೫, ೬, ೭, ೮, ೯, ೧೧)

ಭಕ್ತ, ಮಾಹೇಶ್ವರ, ಪ್ರಸಾದಿ ಸ್ಥಲಗಳು ಕ್ರಿಯಾ ಯೋಗ ಪ್ರಾಧಾನ್ಯ ವನ್ನು ಪ್ರತಿಪಾದಿಸುತ್ತಲಿವೆ, ಪ್ರಾಣ ಲಿಂಗಿ, ಶರಣ, ಐಕ್ಯ ಸ್ಥಲಗಳು ಜ್ಞಾನ ಯೋಗದ ಮಹತ್ವವನ್ನು ಎತ್ತಿ ಹಿಡಿದಿವೆ. ಪ್ರಜ್ಞಾನಾನಂದ ಸ್ವರೂಪ ಲಿಂಗ ವೆನಿಸಿದೆ. ॥ ಪ್ರಜ್ಞಾನಂ ಬ್ರಹ್ಮ ॥ ಎಂಬ ಉಪನಿಷತ್ತು ಶಿವನು ನಿತ್ಯ ಸತ್ಯ ಸುಂದರ ಸ್ವರೂಪಿ, ಸಚ್ಚಿದಾನಂದ ಸ್ವರೂಪಿ, ಚಿದ್ಬಿಂದು, ಚಿನ್ಮಯ, ಚಿಜ್ಯೋತಿ ಚಿಲ್ಲಿಂಗ ಸ್ವರೂಪಿ ಎಂದು ಸಾರುತ್ತಲಿದೆ, ಜ್ಯೋತಿರ್ಲಿಂಗ ಸ್ವಯಂಭುವಾದ್ದ

ರಿಂದ ಅದು ಸತ್ಯಂ ಜ್ಞಾನ ಮನಂತಂ ಲಿಂಗಂ ಬ್ರಹ್ಮೇ ಎಂಬ ಸ್ತುತ್ಯವಿರುತ್ತೆ.- ಶ್ರೀ ಜ|| ರೇಣುಕಾಚಾರ್ಯರು ಈ ಕಾರಣದಿಂದ ಲಿಂಗ ತತ್ವದ ಗೂಢಾರ್ಥವನ್ನು ಅಗಸ್ತ್ಯರಿಗೆ ಬೋಧಿಸುತ್ತಾ || ಲಿಂಗಂ ಚಿದಾತ್ಮಕಂ ಬ್ರಹ್ಮ || ಎಂದು ನಿಗಮಾಗಮಗಳಲ್ಲಿ ಪ್ರೋಕ್ತವಾದ ಮಹದಂಶವನ್ನೇ ಪ್ರಕಾಶ ಪಡಿಸಿರುವರು. ಶಕ್ತಿ ಲಿಂಗಕ್ಕೆ ಅಭಿನ್ನವೆನಿಸಿ ಪ್ರಾಣ ಸ್ವರೂಪಿಣಿಯಾಗಿ ರಂಜಿಸುತ್ತಲಿದೆ. ಶ್ರೀ ಮಹಾಚಾರ್ಯರು ||ತಚ್ಛಕ್ತಿಃ ಪ್ರಾಣ ಸ್ವರೂಪಿಣಿ || ಯೆಂದೂ, ಸಹಜವಾಗಿ ಶಿವಶಕ್ತಿ ಸಂಪುಟದಿಂದ ರಾರಾಜಿಸುವ ಶಕ್ತಿ,

ಮಾಯಾಂತು ಪ್ರಕೃತಿಂ ನಿತ್ಯಂ । ಮಾಯಿ ನಂತು
ಮಹೇಶ್ವರಃ ||

ಎಂಬ ಶಿವಾಗಮೋಕ್ತಿಯಂತೆ ಸಮವಾಯ ಸ್ವರೂಪಿಣಿ ಯೆನಿಸಿರುವಳೆಂದು ಹರುಹಿರುವರು ಈ ಅಂಶವನ್ನು ಶೃತಿಮಾತೆ,

ನ ಶಿವೇನ ವಿನಾಶಕ್ತಿಃ । ನ ಶಕ್ತಿ ರಹಿತಃ ಶಿವಃ | ಪುಷ್ಪಗಂಧ
ವದನ್ಯೋನ್ಯಂ । ಮಾರುತಾಂಬರ ಯೋ ರಿವ ||

ಹೂವು ಅದರ ಗಂಧ ಹಾಗೂ ಆಕಾಶ ಅದರೊಡಲಿನಲ್ಲಿ ಗಾಳಿ ಸಹಜವಾಗಿ ಅಂತರ್ಗತವಾಗಿರುವಂತೆ ಶಿವಶಕ್ತಿ ಸಂಪುಟ ಅತಿ ಮನೋಹರವೆನಿಸಿದೆ. ಇಂತಪ್ಪ ಜ್ಞಾನ ಪ್ರಾಣಗಳ ಸಂಯೋಗವುಳ್ಳದೇ ದಿವ್ಯ ಪರಮ ಪರಾತ್ಪರ ವಸ್ತು ಪ್ರಾಣಲಿಂಗವೆನಿಸಿದೆ. ಪ್ರಾಣಲಿಂಗದ ನೆಲೆ ಕಲೆಗಳ ಸೌರಭವ ಅರಿತ ಶಿವಯೋಗಿ ಪ್ರಾಣಲಿಂಗಿಯೆನಿಸಿರುವನು. ಇದರಿಂದಾಗಿ ಲಿಂಗಾಂಗಿ ಶಿವಯೋಗಿ ಜೀವಂತನಾಗಿರುವವರೆಗೂ ನಿಷ್ಕಾಮ ಯೋಗದಿಂದ ಶಿವಜ್ಞಾನಾನಂದ ಚಿತ್ತನಾಗಿ, ಕ್ರಿಯಾಜ್ಞಾನ ಸಮುಚ್ಚಯ ಮಾರ್ಗಾವಲಂಬಿಯಾಗಿ. ತನ್ನಿಷ್ಟಲಿಂಗ ಪೂಜಾರಾಧನೆಯೊಂದಿಗೆ ಮಗ್ನನಾಗಿರ ಬೇಕು. ಶಿವಶಕ್ತಿ ಸಂಪುಟದಿಂದ ವಿರಾಜಿಸುವ ಲಿಂಗ ಸಚ್ಚಿದಾನಂದ ಪರಶಿವ ಬ್ರಹ್ಮವೆನಿಸಿದೆ. ಲಿಂಗದ ಪೀಠ ಶಕ್ತಿ ಮಯವಾಗಿದೆ ಪ್ರಾಣಾಯಾಮಾದಿ ವಿಧಾನವನ್ನು ಶ್ರೀ ಗುರು ಮುಖದಿಂದ ಅರಿತ ಅಧಿಕಾರಿ ಇಡಪಿಂಗಳ ಸಂದಣಿಯಂತೆ ಪ್ರಾಣವನ್ನು ವಿಧಿಗನುಸಾರ ನಿಲ್ಲಿಸಲು, ಆ ಪ್ರಾಣವಾಯುವಿನಲ್ಲಿ ತಲ್ಲೀನ ಗೊಳ್ಳುವ ಆ ಪರವಸ್ತುವೇ ಪ್ರಾಣಲಿಂಗವೆನಿಸಿರುವುದು. ಪ್ರಾಣದೊಳಗಿನ ಪ್ರಾಣ, ಮಹಾಪ್ರಾಣ. ಇದನ್ನೇ

ವೇದಮಾತೆ ॥ ಅಥ ಏವ ಪ್ರಾಣಃ ॥ ಯೆಂದು ಉಗ್ಗಡಿಸಿರುವಳು. ಹೊಗೆ ಯಿಲ್ಲದ ಸೊಡಿರಿನಂತೆ ಶಿವಯೋಗಿಗಳ ಹೃದಯದಲ್ಲಿ ಸ್ಫುರಿಸಬಲ್ಲ ಚಿದಾಕಾರ ಪರಬ್ರಹ್ಮವೇ ಲಿಂಗವೆಂದು ನಿರ್ಣಯಿಸಲಾಗಿದೆ ಲಿಂಗ ಶರಣ ಜನರ ಸದು ಹೃದಯ ನಳಿನದೊಳು ಪರಿಶೋಭಿಸುತ್ತಿಹುದು ಇಂತಪ್ಪ ಪ್ರಾಣಲಿಂಗದಲ್ಲಿ ತನ್ಮಯನಾದಾತನೆ ಪ್ರಾಣಲಿಂಗಿಯೆನಿಸಿರುವನು.

ಪ್ರಾಣ ಮೇವ ಲಿಂಗಃ । ಲಿಂಗಮೇವ ಪ್ರಾಣಃ ॥
ಪೀಠಿಕಾ ಪರಮಾ ಶಕ್ತಿ ಃರ್ಲಿಂಗಂ ಸಾಕ್ಷಾತ್ ಪರಃ ಶಿವಃ ॥
ಎಂದಿದೆ ಶೃತಿವಾಣಿ.
ಹೃದ ಏವೈ ಬ್ರಹ್ಮ । ಸೋಮ ಸೂರ್ಯಾಗ್ನಿ ಮಂಡಲೇ ।
ನಿವಾತ ದೀಪೋ । ಪಮಸ್ಥಾಯಿ । ಹೃದ್ಯಂತರ್ಜೋತಿಃ
ಪುರುಷಃ ॥

ಅಂದರೆ ಹೃದಯ ಕಮಲದಲ್ಲಿ ಬೆಳಗುವ ಜ್ಯೋತಿ ಸ್ವರೂಪವಾದ ಪ್ರಾಣ ಲಿಂಗವನ್ನು ದೀಪದಂತೆ ಕಂಡು ಆರಾಧಿಸುವಾತ ಪ್ರಾಣ ಲಿಂಗಿಯೆನಿಸಿರುವನು.

ಇಂತಪ್ಪ ಪ್ರಾಣಲಿಂಗವನ್ನು ಸ್ವಾತ್ಮದಲ್ಲಿ ಧರಿಸಿ ಸದಾ ಆರಾಧಿಸುವವನು ನಿಜಕ್ಕೂ ಪ್ರಾಣಲಿಂಗಿಯೆನಿಸುವನು.

## ಅಂಗ ಸ್ಥಲ ೩೩ ॥ಪ್ರಾಣ ಲಿಂಗಾರ್ಚನ ಸ್ಥಲಂ॥ (ಪರಿ ೧೨)

ಅಂತರ್ಗತಂ ಚಿದಾಕಾರಂ ಲಿಂಗಂ ಶಿವಮಯಂ ಪರಂ ।
ಪೂಜ್ಯತೇ ಭಾವ ಪುಷ್ಪೈರ್ಯತ್ಪ್ರಾಣ ಲಿಂಗಾರ್ಚನಂ ಹಿ ತತ್॥
ಬುದ್ಧೀಂದ್ರಿಯ ನವದ್ವಾರೇ । ಬೋಧ ದೀಪೇ ಹೃದಾಲಯೇ ।
ಪದ್ಮ ಪೀಠೇ ಸಮಾಸೀನಂ ಚಿಲ್ಲಿಂಗಂ ಶಿವ ವಿಗ್ರಹಂ ॥
ಭಾವಯಿತ್ವಾ ಸದಾಕಾಲಂ ಪೂಜಯೇ ದ್ಭಾವಸ್ತುಭಿಃ ॥ ಕ್ಷಮಾ
ಭಿಷೇಕ ಸಲಿಲಂ । ವಿವೇಕೋ ವಸ್ತ್ರ ಮುಚ್ಯತೇ ॥ ಸತ್ಯಮಾ
ಭರಣಂ ಪ್ರೋಕ್ತಂ ವೈರಾಗ್ಯಂ ಪುಷ್ಪ ಮಾಲಿಕಾ ॥ ಗಂಧಃ
ಸಮಾಧಿ ಸಂಪತ್ತಿ ರಕ್ಷತಾ ನಿರಹಂ ಕೃತಿಃ ॥ ಶ್ರದ್ಧಾ ಧೂಪೋ
ಮಹಾಜ್ಞಾನಂ ಜಗದ್ಭಾಸಿ ಪ್ರದೀಪಿಕಾ ॥ ಭ್ರಾಂತಿ ಮೂಲ

ಪ್ರಪಂಚಸ್ಯ । ನೈವೇದ್ಯಂತನ್ನಿವೇದನಂ ॥ ವರ್ತನಂ ಘಂಟಾ ಪರಿಸ್ಪಂದ ಸ್ತಾಂಬೂಲಂ ವಿಷಯಾರ್ಪಣಂ ॥ ವಿಷಯ ಭ್ರಾಂತಿ ರಾಹಿತ್ಯಂ । ತತ್ ಪ್ರದಕ್ಷಿಣ ಕಲ್ಪನಾ ॥ ಬುದ್ಧಿ ಸ್ತದಾತ್ಮಿಕಾ ಸಕ್ತಿರ್ನಮಸ್ಕಾರ ಕ್ರಿಯಾಮತಾ ॥ ಏವಂ ವಿಧೈರ್ಭಾವ ಶುದ್ಧೈ ರು ಪಚಾರೈರ ದೂಷಿತೈಃ॥ ಪ್ರತ್ಯಙ್ಮುಖಮನಾ ಭೂತ್ವಾ । ಪೂಜ ಯೇಲ್ಲಿಂಗ ಮಾಂತರಂ ॥

(ಶ್ಲೋ॥ ೧೩, ೧೪, ೨೦)

ಪ್ರಾಣ ಲಿಂಗಾರ್ಚನೆ ನಿಷ್ಕಲ ಬ್ರಹ್ಮನ ಉಪಾಸನೆ ಇದು ಅನಾದಿ ಪರಶಿವರೂಪವಾಗಿದ್ದು ಅರಿವುಮಯವೆನಿಸಿದೆ. ಇದನ್ನು ಮಾನಸಿಕವಾಗಿ ಪೂಜಿಸುವುದೇ ಪ್ರಾಣ ಲಿಂಗಾರ್ಚನೆಯೆನಿಸಿದೆ. ಅಂತಃಕರಣ ವೃತ್ತಿಗಳಿಂದ ವಿಶೇಷವಾಗಿ ಮಾಡುವ ಪೂಜೆ ಪ್ರಾಣಲಿಂಗಾರ್ಚನೆ ಎನಿಸಿದೆ.

ಪ್ರಾಣಲಿಂಗದ ನೆಲೆ ಕಲೆಗಳ ಅರಿವು ಅವಶ್ಯವಿರುತ್ತೆ. ಪ್ರಾಣವಾಯು ವಿನಿಂದ ವ್ಯಾಪ್ತವಾದುದು, ಅತ್ಯಂತ ಸೂಕ್ಷ್ಮಾಕಾರದಿಂದ ಪರಿಶೋಭಿತವಾದುದೂ, ಬ್ರಹ್ಮರಂಧ್ರದಲ್ಲಿರುವ ಚಂದ್ರ ಮಂಡಲದಿಂದ ಪ್ರವಹಿಸುತ್ತಿರುವ ಚಂದ್ರ ಮಂಡಲದಿಂದ ಪ್ರವಹಿಸುತ್ತಿರುವ ಅಮೃತದ ಅಭಿಷೇಕದಿಂದ ಶೀತಲ ವಾಗಿ ನವಧ್ವಾರಗಳನ್ನು ನಿಷೇಧಿಸುವ, ಶಿವಜ್ಞಾನ ರೂಪ ದೀಪವುಳ್ಳ, ಕೋಮಲವಾದ ಹೃನ್ಮಂದಿರದಲ್ಲಿ ದ್ವಾದಶ ದಳಗಳುಳ್ಳ ಕಮಲ ಕರ್ಣಿಕೆಯಲ್ಲಿ ನಿರಂತರ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿರುವ ಮಂಗಳ ಮೂರ್ತಿ ಪ್ರಾಣ ಲಿಂಗವನ್ನು ಗುರೂಕ್ತಿಯಂತೆ ಮಾನಸಿಕವಾಗಿ ಅಂದರೆ ಅಂತರ್‌ಮುಖಿಯಾಗಿ ನಿತ್ಯ ಪೂಜಿಸಿ ಸದಾ ಧ್ಯಾನಿಸುತ್ತಲಿರಬೇಕು. ಪ್ರಾಣಲಿಂಗೋಪಾಸನೆಯ ಅಂತರಿಕ ಪೂಜಾದ್ರವ್ಯಗಳಾವುವೆಂದರೆ ಹೃದಯವೆಂಬ ಬಂಗಾರದ ಗುಡಿಯೊ ಳಗೇ ಅನಾಹತ ಚಕ್ರವೆ ಹೊಂಬಣ್ಣದ ರತ್ನ ಸಿಂಹಾಸನವಾಗಿಸಿ, ಪ್ರಣವಮಯ ಪ್ರಾಣ ಲಿಂಗವ ಈ ಸಿಂಹಾಸನದ ಮೇಲೆ ಪ್ರತಿಷ್ಠೆಗೊಳಿಸಿ, ಸಂಭ್ರಮದಿಂದ ಪೂಜಿಸುವ, ಪೂಜಾ ಸಾಮಗ್ರಿಗಳಾವುವೆಂದರೆ ಕ್ಷಮೆಯೇ ಗಂಗೋದಕ, ನಿತ್ಯಾ ನಿತ್ಯ ವಸ್ತು ವಿವೇಕವೇ ವಸ್ತ್ರ, ಸತ್ಯವೇ ತೊಡಿಸುವ ತೊಡಿಗೆ, ವಿರತಿಯೇ ಧರಿಸುವ ಪುಷ್ಪಮಾಲೆ, ಸಮಾದಿ ಸಂಪತ್ತಿಯೇ ಗಂಧ, ನಿರಹಂಕೃತಿಯೇ

ಅಕ್ಷತೆ ಶ್ರದ್ಧೆಯೇ ಧೂಪ, ಸಕಲ ಲೋಕಂಗಳ ನಿರಂತರ ಬೆಳಗುವ ಮಹಾ ಜ್ಞಾನವೇ ದೀಪ, ಭ್ರಾಂತಿಯೇ ನಿವೇದನೆಯು ನೈವೇದ್ಯ, ಮೌನವೇ ಘಂಟಾ ನಾದ, ವಿಷಯಾರ್ಪಣವೇ ತಾಂಬೂಲ ವಿಷಯ ಮೋಹವ ತ್ಯಜಿಸಿರ್ಪುದೇ ಪ್ರದಕ್ಷಣ ಮತ್ತು ಸರ್ವಭಾವೇನ ಶಿವಾಸಕ್ತಿಯಿಂದ ಬಾಗಿರುವ ನಮ್ರ ಭಾವವೇ ನಮಸ್ಕಾರ. ಇಂತು ಭಾವ ಶುದ್ಧ ಮಾನಸಿಕೋಪಚಾರಗಳಿಂದ ಅಂತರ್ಮುಖ ವಾಗಿ ಹೃನ್ಮಂದಿಲ್ಲಿರುವ ಚಿನ್ಮಯ ಪ್ರಾಣಲಿಂಗವನ್ನು ಅನವರತ ಅವಧಾನ ಭಕ್ತಿಯಿಂದ ಆರಾಧಿಸುವುದು ಪ್ರಾಣಲಿಂಗಾರ್ಚನೆಯೆನಿಸಿದೆ.

## ಪ್ರಾಣಲಿಂಗಿ ಅಂಗಸ್ಥಲ ೩೪ ||ಶಿವಯೋಗ ಸಮಾಧಿ ಸ್ಥಲಂ||

(ಪರಿ ೧೨)

ಅಂತಃ ಕ್ರಿಯಾ ರತಸ್ಯಾಸ್ಯ | ಪ್ರಾಣಲಿಂಗಾರ್ಚನ ಕ್ರಮೈಃ | ಶಿವಾತ್ಮಧ್ಯಾನ ಸಂಪತ್ತಿಃ | ಸಮಾಧಿ ರಿತಿ ಕಥ್ಯತೇ || ಸರ್ವ ತತ್ತ್ವೋ ಪರಿಗತಂ ಸಚ್ಚಿದಾನಂದ ಭಾಸುರಂ| ಪರಬ್ರಹ್ಮ ಮಹಾ ಲಿಂಗಂ | ಪ್ರಾಣೋ ಜೀವಃ ಪ್ರಕೀರ್ತಿತಃ | ತದೇಕ ಭಾವ ಮನ ನಾತ್ | ಸಮಾಧಿಸ್ಥಃ ಪ್ರಕೀರ್ತಿತಃ || ಭ್ರೂ ಮಧ್ಯಾದೂರ್ಧ್ವ ಭಾಗೇ | ತು ಸಹಸ್ರದಲ ಮಂಬುಜಂ | ಭಾವಯೇತ್ತತ್ರ ವಿಮಲಂ | ಚಂದ್ರ ಬಿಂಬಂ ತದಂ ತರೇ || ಸೂಕ್ಷ್ಮ ರಂಧ್ರಂ ವಿಜಾನೀಯಾತ್ | ತತ್ಕೈಲಾಸ ಪದಂ ವಿದುಃ || ತತ್ರಸ್ಥಂ ಭಾವಯೇಚ್ಛಂಭುಂ | ಸರ್ವಕಾರಣ ಕಾರಣಂ ||

(ಶ್ಲೋ ೨೧, ೨೨, ೨೮, ೨೯)

ಅಂತರೇಂದ್ರಿಯಗಳನ್ನು ಜಯಿಸಿದ ಶಿವಯೋಗಿ ಪ್ರಾಣಲಿಂಗಾರ್ಚನೆ ಯಲ್ಲಿ ನಿರತನಾಗಿರ್ಪನು ಮನಪ್ರಾಣಂಗಳನ್ನು ಓಂಕಾರಧ್ವನಿಯೊಡನೆ ಕೂಡಿಸಿ ಧ್ಯಾನಯೋಗದಲ್ಲಿ ನಿರತನಾಗಿರ್ಪಾತನೆ ಶಿವಯೋಗಿ. ರಾಜಯೋಗವು ಶಿವ ಯೋಗಕ್ಕೆ ತಳಪಾಯದಂತಿದೆ. ರಾಜಯೋಗವು ಸಾಂಖ್ಯ, ತಾರಕ, ಅಮ ನಸ್ಕ ಎಂದು ಮೂರು ಪ್ರಕಾರವಾಗಿದೆ. ಆತ್ಮತತ್ವ ಇಪ್ಪತ್ತೈದು ತತ್ವ

ಗಳೊಂದಿಗೆ ಸಮ್ಮಿಲನವಾಗಿ ವಿರಾಜಿಸುವ ಅನುಭವವೇ ಸಾಂಖ್ಯ ಯೋಗವೆನಿಸಿದೆ. ಸಂಸಾರವೆಂಬ ವಿಷ ವೃಕ್ಷದಲ್ಲಿ ಅವಿದ್ಯೆಯೇ ಬೇರುಗಳು, ಇವುಗಳಿಂದ ಉಂಟಾದ ಪಂಚಕ್ಲೇಶಗಳೇ ಈ ವೃಕ್ಷದ ಎಲೆಗಳು. ಇಂತಪ್ಪ ವಿಷವೃಕ್ಷದ ಬೇರು, ಕೊಂಬೆ, ಎಲೆಗಳನ್ನು ಪೂರ್ಣ ಕತ್ತರಿಸುವುದರಲ್ಲಿ ಶಿವ ಧ್ಯಾನವು ಕೊಡಲಿಯಾಗಿದೆ. ತಾರಕದ ನಿಲವೆಂತಹದು. ಬ್ರಹ್ಮರಂಧ್ರದ ಕಲೆಯೊಂದು ಭ್ರೂಮಧ್ಯದಲ್ಲಿಳಿದು ನಾದವಾಯಿತು. ಈ ನಾದ ನೇತ್ರಂಗಳಲ್ಲಿ ಎರಡು ಬಿಂದುಗಳ ರೂಪದಲ್ಲಿ ತೋರಿ, ಇವೆರಡೂ ವಂದು ಗೂಡಿ, ಊರ್ಧ್ವ ಬಿಂದುವಾಗಿ, ಅಂತರ್ಲಕ್ಷ್ಯದಿಂದ ಶ್ರೀ ಊರ್ಧ್ವ ಲಿಂಗಾಯ ನಮಃ ಎಂಬಂತೆ, ಪ್ರಜ್ವಲಿಸುವ ಕೂಟಸ್ಥನನ್ನು ತನ್ನ ಶುದ್ಧಾಂತರಂಗದಲ್ಲಿ ನಿಟ್ಟಿಸಿ ನೋಡುವ ದೃಶ್ಯತಾರಕವೆನಿಸಿದೆ. ರಾಜಯೋಗದ ಶಿವಯೋಗದ ಶಿವಯೋಗ ಸಮಾಧಿ ಸ್ಥಲವೆಂದರೆ ಕೂಟಾತ್ಮಯೋಗದ ಚಿಜ್ಯೋತಿಯಲ್ಲಿ ಮನಸ್ಸು ಚಲಿಸದೆ ತಲ್ಲೀನವಾಗಿರುವ ಸ್ಥಿತಿ ಅಮನಸ್ಕವೆನೆಸಿದೆ. ಈ ಮೂರರ, ರಹಸ್ಯವನ್ನು ಶ್ರೀ ಗುರುಮುಖದಿಂದ್ರ ತಿಳಿದು ಆಚರಿಸುವುದೇ ರಾಜ ಯೋಗವೆನೆಸಿದೆ. ಇದರಿಂದಾಗಿ ಪ್ರಾಣ ಲಿಂಗಗಳೆರಡರ ಸಮರಸಾನು ಸಂಧಾನವೇ ಶಿವಯೋಗ ಸಮಾಧಿಯೆನಿಸಿದೆ.

ಭ್ರೂಮಧ್ಯಕ್ಕೆ ಊರ್ಧ್ವ ಭಾಗದಲ್ಲಿ ಸಹಸ್ರಾರ ಪದ್ಮವಿದೆ. ಆ ಪದ್ಮದಲ್ಲಿ ಚಂದ್ರಮಂಡಲ ವಿರಾಜಮಾನವಾಗಿದೆ. ಈ ಮಂಡಲದ ಮಧ್ಯೇ ಒಂದು ಸೂಕ್ಷ್ಮ ರಂಧ್ರವಿದೆ. ದೇದೀಪ್ಯ ಕಾಂತಿಯಿಂದ ರಂಜಿಸುವ ಈ ರಂಧ್ರವು ಮಹೋನ್ನತವಾದ ಕೈಲಾಸವೆಂಬರು. ಇದರಲ್ಲಿ ಸರ್ವಕಾರಣಕ್ಕೆ ಕಾರಣನಾದ ಪರಶಿವನು ಅಖಂಡಾನಂದ ಪರಂಜ್ಯೋತಿ ಸ್ವರೂಪದಲ್ಲಿ ಉಜ್ಜ್ವಲವಾಗಿ ಪ್ರಜ್ವಲಿಸುತಿಹನು ಇಂತಪ್ಪ ಪರತತ್ವವನ್ನು ಅನನ್ಯ ಭಾವೇನ ಚಿಂತಿಸುವ ಸ್ಥಿತಿಯನ್ನು ಶಿವ ಯೋಗವೆನ್ನುವರು. ಅಸ್ತು.

ಮನ್ಯು ಜ್ವಲ ಜ್ವಲನ ಸಾಗರ ದಾಹದೋಷಾತ್ । ಉನ್ಮೋಚನಾಯ ಚರತೇ ಕಂಠಿನಂತಪೋತ್ರ । ತುಷ್ಟೋ ಭವಾನಿಹ ದದೌ ಕಪಿಲಾಯ ಮುಕ್ತಿಂ । ಶ್ರೀ ಕಂಠನಾಥ ಜಗತಾಂ ತವ ಸುಪ್ರಭಾತಂ ॥ ಶಿಷ್ಟಸ್ಯ ತಸ್ಯ ಕಪಿಲಸ್ಯ ಮುನೇಃ ಪ್ರಭಾವಾತ್। ಪ್ರಾದುರ್ಭಭೂವ ಕಪಿಲಾ ತಟನೀ ತುಲಸ್ಯಾಃ । ಮೂಲಾತ್

ಸುಖಾಯ ಜಗತೋ ಭವತಃ ಪ್ರಸಾದಾತ್ । ಶ್ರೀಕಂಠನಾಥ
ಜಗತಾಂ ತವ ಸುಪ್ರಭಾತಂ ॥

ಪ್ರಾಣಲಿಂಗಿ ಅಂಗಸ್ಥಲ ೩೫ ॥ ಲಿಂಗನಿಜಸ್ಥಲಂ ॥ (ಪರಿ ೧೨)

ಸ್ವಾಂತಃಸ್ಥ ಶಿವ ಲಿಂಗಸ್ಯ । ಪ್ರತ್ಯಕ್ಷಾನು ಭವಸ್ಥಿತಿಃ ।
ಯಾ ಸೈವ ಪರಲಿಂಗಸ್ಯ ನಿಜ ಮಿತ್ಯುಚ್ಯತೇ ಬುಧೈಃ ॥
ಅವ್ಯಕ್ತಂ ಲಿಂಗ ಮಿತ್ಯಾ ಹು । ಜಗತಾಂ ಮೂಲ ಕಾರಣಂ ।
ಲಿಂಗೀ ಮಹೇಶ್ವರ ಶ್ಚೇತಿ । ಮತ ಮೇ ತದ ಸಂಗತಂ ॥
ಜ್ಯೋತಿರ್ಮಯಂ ಪರಂ ಲಿಂಗಂ ಶೃತಿ ರಾಹ ಶಿವಾತ್ಮಕಂ ।
ತಸ್ಯ ಭಾಸಾ, ಸರ್ವ ಮಿದಂ ಪ್ರತಿಭಾತಿ ನ ಸಂಶಯಃ॥ ಲಿಂಗಾ
ನ್ನಾಸ್ತಿ ಪರಂ ತತ್ವಂ। ಯದಸ್ಮಾಜ್ಜಾಯತೇ ಜಗತ್ ।
ಯದೇ ತದ್ರೂಪತಾಂ ಧತ್ತೇ । ಯದ ತ್ರಲಯ ಮಶ್ನುತೇ ॥
ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ। ನಿಜ ರೂಪ
ಮಿತಿ ಧ್ಯಾನಾತ್ತದವಸ್ಥಾ ಪ್ರಜಾಯತೇ ॥

(ಶ್ಲೋ ೩೨, ೩೩, ೩೭ ರಿಂದ ೪೦)

ಶಿವಯೋಗಾನುಷ್ಠಾನ ಪರನಾದ ಯಾವ ಪ್ರಾಣ ಲಿಂಗಿಯ ಶುದ್ಧಾಂತರಂಗದಲ್ಲಿ ಪ್ರತ್ಯಕ್ಷಾನು ಭೂತಿಗೆ ಗೋಚರವಾಗುವ, ಸಚ್ಚಿದಾನಂದ ಪರಶಿವ ಸ್ವರೂಪವೇ ನಿಜಲಿಂಗವೆಂದರಿಯ ಬೇಕು. ನಿಜಲಿಂಗ ಸ್ವರೂಪದಿಂದ ವಿಷ್ಣು ಬ್ರಹ್ಮಾದಿ ದೇವರ್ಕಳೂ, ಋಗಾದಿ ಚತುರ್ವೇದಗಳೂ, ಅರವತ್ನಾಲ್ಕು ವಿದ್ಯೆಗಳೂ ಆವಿರ್ಭವಿಸಿರುವುವು. ಘನಲಿಂಗ ತತ್ವ ಅಚಿಂತ್ಯ ಅನಿರ್ವಚನೀಯ ಅಪ್ರಮೇಯವೆನಿಸಿದೆ. ನಿಜಲಿಂಗ ಚಿದಾನಂದಮಯ, ಚಿನ್ಮಯ ಸ್ವರೂಪವದು ಆದಿ ಮಧ್ಯಾಂತರ ರಹಿತವಾದುದು. ಅರಿವುಮಯವದು. ಆದಿ ಮಧ್ಯಾಂತ ರಹಿತವಾದುದು. ಅರಿವುಮಯವದು. ಚಿಚ್ಛಕ್ತಿಯುತವದು. ಸರ್ವತಂತ್ರ ಸ್ವತಂತ್ರವದು. ಚರಾ ಚರಾತ್ಮಕ ವಿಶ್ವಕ್ಕೆ ಪರಮ ಧಾಮವದು ನಿಜಲಿಂಗ. ॥ ಪ್ರಜ್ಞಾನಂ ಬ್ರಹ್ಮ ॥ ವೆಂಬ ಚತುರ್ವೇದಗಳ ಮಹಾ ವಾಕ್ಯಗಳನ್ನು

ಉಚ್ಚರಿಸುವುದರಿಂದ ಜನಿಸುವ ಸುಜ್ಞಾನವೇ ಜ್ಯೋತಿರ್ಲಿಂಗ. ಇದು ಜ್ಞಾನಕ್ಕೆ ಜ್ಞೇಯವೆನಿಸಿದ ಪರ ವಸ್ತುವೆಂದರಿಯಬೇಕು. ಸುಜ್ಞಾನ ದಿಂದಲೂ ಹಾಗೂ ಗುರುವಿನ ಕಟಾಕ್ಷದಿಂದ ಅಂತರಂಗದಲ್ಲಿ ಅರಿಯುವ ಪರಂ ಜ್ಯೋತಿ ನಿಜ ಲಿಂಗವೆನಿಸಿದೆ.

ಸ್ಥೀಯತೇ ಲೀಯತೇ ಯತ್ರ । ಜಗದೇತ್ಚ್ಚರಾಚರಂ ।
ತದ್ಬ್ರಹ್ಮಸ್ಥಲ ಮಿತ್ಯುಕ್ತಂ । ಸ್ಥಲ ತತ್ವ ವಿಶಾರದೈಃ ॥

ಅನಂತ ಬ್ರಹಾಂಡ ಕೋಟಿಗಳು ಎಲ್ಲಿಂದ ಆವಿರ್ಭವಿಸಿ, ವಿಶ್ವೋತ್ತರೋತ್ತರ ವಿಚಿತ್ರಾಯ ಮಾನವಾಗಿ ತೋರಿ, ಅಂತ್ಯದಲ್ಲಿ ಯಾವ ಅಗೋಚರ ಅವ್ಯಕ್ತ ಸ್ವರೂಪದಲ್ಲಿ ವಿಲೀನವಾಗುವುವೋ, ಆ ಪರತತ್ವವೇ ಲಿಂಗವೆನಿಸಿ ಸ್ತುತ್ಯವಿರುತ್ತೆ, ಮತ್ತೂ,

ಯಸ್ಮಾದಿದಂ ಜಗತು ಜಾಯತ । ಯತ್ರತಿಷ್ಠತ್ಯಂತೇ ।
ಸಮಸ್ಥ ವಿಥ ಮಸ್ತ । ಮುಪೈತಿ ಯತ್ರ । ತಸ್ಮೈ ನಮಃ ।
ಸದಸದಾದಿ ವಿಕಲ್ಪ ಶೂನ್ಯಃ । ಚೈತನ್ಯ ಮಾತ್ರಮಪುಷೇ ।
ಪುರುಷೋತ್ತಮಾಯ ॥

ಎಂಬ ಉಪನಿಷದ್ ಮಂತ್ರ ಸಹ, ಮೇಲುಕ್ತವಾದ ಸಾರಾಂಶವನ್ನೇ ದೃಢೀಕರಿಸುತ್ತಲಿದೆ. ನಿಜಲಿಂಗವು ದೃಶ್ಯಾದೃಶ್ಯ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಮೂಲಸ್ಥಂಭಾಯ ಮಾನ ಪರವಸ್ತುವೆನಿಸಿರುತ್ತೆ.

ಲಿಂಗ ಮಧ್ಯೇ ಜಗತ್ಸರ್ವಂ । ಲಿಂಗ ಬಾಹ್ಯಾತ್ಪರಂ ನಹಿ ॥

ಇತಿ ಶೃತ್ಯಾಪಿ ತಥಾ ಸೂಚಿತಂ. ನಿಜಲಿಂಗದ ಸಾನ್ನಿಧ್ಯದಲ್ಲಿ ಚಂದ್ರ ನಕ್ಷತ್ರಗಳು ಅಪ್ರಕಾಶವಾಗುವುವು. ಮಿಂಚು ಮಿನುಗದು, ಬೆಂಕಿ ಚುಕ್ಕೆಗಳು ಬೆಳಗವು ಆದರೆ ಮಹಾಲಿಂಗದ ಬೆಳಗಿನಲ್ಲಿ ಇವೆಲ್ಲಾ ಬೆಳಗುತ್ತವೆ. ಜ್ಯೋತಿರ್ಲಿಂಗ ಸ್ವಯಂ ಜ್ಯೋತಿ, ಪರಂ ಜ್ಯೋತಿ, ಜ್ಯೋತಿಶಾಂ ಜ್ಯೋತಿಯೆನಿಸಿದೆ. ಈ ಅಂಶವನ್ನು ದೃಢಪಡಿಸುವ ತೆರದಲ್ಲಿ ಶೃತಿಯು

ತಸ್ಯ ಭಾಸಾ ಸರ್ವಮಿದಂ ವಿಭಾತಿ । ತಮೇವ ಭಾಂತ ಮನು ಭಾತಿ ಸರ್ವಂ ॥

ಎಂಬುದು ನಿಜ ಲಿಂಗವಿರುತ್ತೆ. ಇಂತಪ್ಪ ಘನ ಲಿಂಗ ತತ್ವವು,

**ಸ್ವಸ್ವರೂಪೈಕ ಚಿಚ್ಛಕ್ತಿಯಿಂ । ಸ್ಫುರಿಸುತಿರ್ದುದದ್ವೈತ ಪರಮಾತ್ಮ ತತ್ವಂ ॥**

ಇದುವೇ ಲಿಂಗ ನಿಜ ಸ್ಥಲವೆಂದರಿಯ ಬೇಕು. ಇತ್ಯಾದಿ ಕಾರಣಗಳಿಂದ ಲಿಂಗಕ್ಕಿಂತಲೂ ಪರಮೋತ್ಕೃಷ್ಟ ತತ್ವ ಬೇರಿಲ್ಲ.

**॥ ನಿಜ ಪದಂ ಕರ ಬಿಲ್ವ ಫಲಂ ಶಿವಾಥವಾ ॥**

ಯೆಂಬಂತೆ, ತನ್ನ ನಿಜ ಲಿಂಗದಲ್ಲಿ ಕೂಡಿ, ರಂಜಿತನಾಗಿ ಆನಂದಿಸಬೇಕು. ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡಾ ದ್ವಿತೀಯ ಪರ ವಸ್ತುವೇ ನಿಜ ಲಿಂಗವೆಂಬುದನ್ನು ಶ್ರೀ ಗುರು ಮುಖದಿಂದ ಅರಿತು,

**ಧ್ಯಾನಾವಸ್ಥಿತ ತದ್ಗತೇನ ಮನಸಾ। ಪಶ್ಯಂತಿ ಯಂ ಯೋಗಿನಃ॥**

ಶಿವಯೋಗಿಗಳು ಆದರಲ್ಲೂ ವಿಶೇಷತಃ ಪ್ರಾಣಲಿಂಗಿ ತನ್ನ ಆತ್ಮ ಸ್ವರೂಪವಾದ ನಿಜಲಿಂಗವನ್ನು ಸ್ವಾನುಭೂತಿಯಲ್ಲಿ ಸದಾ ಅರಿತು ತುಂಬು ಹೃದಯ ಸ್ವಾಂತನಾಗಿರ್ಪುದೇ ಲಿಂಗ ನಿಜ ಸ್ಥಲವೆಂದು ಶ್ರೀ ಜ। ರೇಣುಕಾ ಚಾರ್ಯರು ಹೃದಯಂಗಮವಾಗಿ ಬೋಧಿಸಿರುವರು.

## ಪ್ರಾ. ಅಂಗಸ್ಥಲ ೩೬ ॥ ಅಂಗ ಲಿಂಗ ಸ್ಥಲಂ ॥ (ಪರಿ ೧೨)

**ಜ್ಞಾನ ಮಂಗಮಿತಿ ಪ್ರಾಹು । ಜ್ಞೇಯಂ ಲಿಂಗಂ ಸನಾತನಂ ।**
**ವಿದ್ಯತೇ ತದ್ವಯಂ ಯಸ್ಯ । ಸೋಂಗ ಲಿಂಗೀತಿ ಕೀರ್ತಿತಃ ॥**
**ಅಂಗೇ ಲಿಂಗಂ ಸಮಾರೂಢಂ । ಲಿಂಗೇಚಾಂಗ ಮುಪಸ್ಥಿತಂ ।**
**ಏತದಸ್ತಿದ್ವಯಂ ಯಸ್ಯ । ಸ ಭವೇದಂಗ ಲಿಂಗವಾನ್ ॥**
**ಜ್ಞಾತ್ವಾಯಃ ಸತತಂ ಲಿಂಗಂ । ಸ್ವಾಂತಃ ಸ್ಥಂ ಜ್ಯೋತಿರಾ ತ್ಮಕಂ ಪೂಜಯೇ ದ್ಭಾವ ಕುಸುಮೈಸ್ತಂ । ವಿದ್ಯಾದಂಗ ಲಿಂಗಿನಂ ॥ ಜ್ಞಾಯತೇ ಲಿಂಗಮೇ ವೈಕಂ । ಸರ್ವೈಃ ಶಾಸ್ತ್ರೈಃ ಸನಾತನೈಃ ॥ ಬ್ರಹ್ಮೇತಿ ವಿಶ್ವಧಾಮೇತಿ ವಿಮುಕ್ತೇಃ ।**

**ಷದಮಿ ತ್ಯಪಿ ॥ ಅನಾದಿ ನಿಧನಂ ಲಿಂಗಂ। ಕಾರಣಂ ಜಗತಾಮಿತಿ । ಯೇನ ಜಾನಂತಿ ತೇ ಮೂಢಾಃ । ಮೋಕ್ಷ ಮಾರ್ಗ ಬಹಿಷ್ಕೃತಾಃ ॥**

**(ಶ್ಲೋ. ೪೧, ೪೨, ೪೪, ೪೩, ೪೪, ೪೬)**

ಅಂಗ ಲಿಂಗಗಳ ಸಹಜ ಸಂಬಂಧ ಅನಾದಿ ಅವಿನಾಭಾವವುಳ್ಳ ದಿವ್ಯಕರ ವಾದುದು. ಇದರ ಗೂಢಾರ್ಥವನ್ನು ಶ್ರೀ ಗುರುಮುಖದಿಂದರಿಯ ಬೇಕು.

**॥ ಅಂ-ಗಚ್ಛ ಯು ತೀತಿ ಅಂಗಃ ॥** ಯೆಂದಿದೆ ವೇದ. "ಅಂ"ಯೆಂದರೆ **"ಅಕ್ಷರಾಣಾಂ ಅಕಾರೋಸ್ಮಿ"**, ಪರಶಿವ ಲಿಂಗವೆಂದರ್ಥ. **"ಅಂ"** ಎಂದರೆ **॥ ಅಕ್ಷರಂ ಬ್ರಹ್ಮ ಪರಮಂ ॥** ನಾಶವೆಂಬುದಿಲ್ಲದ, ಶಾಶ್ವತ ಫಲ ದಾಯಕ, ಕಲ್ಯಾಣಾದ್ಭುತ ಗಾತ್ರ ಪರಶಿವ ಬ್ರಹ್ಮವೆಂಬರ್ಥ. **॥ ಗಚ್ಛಯು ತೀತಿ ॥** ಜೀವಾತ್ಮನು ಅಂದರೆ ಅಂಗನು, ಜ್ಯೋತಿರ್ಲಿಂಗ ದತ್ತ ಆಂತರಿಕ ಭಾವೇನ, ಧಾವಿಸುತ್ತಿಹನೆಂದರ್ಥ. ಅಂದ ಬಳಿಕ ಅಂಗನು ಶ್ರೀ ಗುರು ಬೋಧೆಯಂತೆ ತನ್ನ ಹೃನ್ಮಂದಿರವನ್ನು **॥ ಸ್ವ ಹೃದಯ ಪ್ರಕಾಶಃ ॥** ಬೆಳಗಿಸುತ್ತಿರುವ ಪರಶಿವ ಬ್ರಹ್ಮವೇ ಮಹಾಲಿಂಗವೆನಿಸಿದೆ. ಯಾವ ಪ್ರಾಣ ಲಿಂಗಿಯ ಅಂತರಂಗದಲ್ಲಿ, ಅಂಗಲಿಂಗಗಳ ಸಂಯೋಗದ ದಿವ್ಯ ಅರಿವು ಅನುಭವ ಗಳು ಒಂದು ಗೂಡಿ ರಂಚಿತವಾಗಿವೆಯೋ, ಆ ಮಹಾ ಪುರುಷನನ್ನು ಅಂಗ ಲಿಂಗಿಯೆಂಬುವರು. ಅಂಗನ ಹೃದಯ ಕಮಲದಲ್ಲಿ ಜ್ಯೋತಿರ್ಲಿಂಗ ಪ್ರಕಾಶಿ ಸುತ್ತಿರಲು, ಮೊಡಲಿಲ್ಲದ ಮೊಡಲುಳ್ಳ ಆ ಲಿಂಗದಲ್ಲಿ ಅಂಗನು, ಓಜಸ್ಸಂಪನ್ನ ನಾಗಿ ಮಂದು ಗೂಡಿ ಬೆಳಗುವ, ಸಮರಸ ಜ್ಞಾನವುಳ್ಳ ತನನ್ನು ಅಂಗಲಿಂಗಿ ಯೆಂಬರು ಇಂತಪ್ಪ ಮಹಾ ಬೆಳಗನ್ನು ಆಂತರಿಕವಾಗಿ ಭಾವ ಪುಷ್ಪಗಳಿಂದ ಅನನ್ಯ ಭಾವೇನ ಪೂಜಿಸುವಾತನೇ ಅಂಗ ಲಿಂಗಿ ನೋಡಾ. ಅಖಂಡ ವಿಶ್ವ ಧಾಮವೆಂದೂ, ಆದಿ ಅನಾದಿಗಳಿಗೆಲ್ಲಾ ಪರಮ ಮೂಲ ಸ್ಥಾನವೆಂದೂ, ಸೀ ಮಾತೀತವಾದುದೆಂದೂ, ಅಖಿಲಾಗ ಮೋಪನಿಷದಾದಿಗಳು, ಸಮುದ್ರ ಘೋಷ ದಂತೆ ಘೋಷಿಸುತ್ತಲಿವೆ. ಮುಕ್ತಿ ಸುಖಕ್ಕೆ ಮೋಕ್ಷ ಸಾಮ್ರಾಜ್ಯದ ಅಖಂಡ ಸಂಪದ ಭ್ಯುದಯಕ್ಕೆ ಲಿಂಗಾರ್ಚನೆ, ಅಂಗ ಲಿಂಗಗಳ ನಿಕಟ ಸಂಬಂಧ ಇತ್ಯಾದಿ ವಿಷಯುಗಳನ್ನು ಮನಸಾ ಕಂಡನುಭವಿಸುವಾತ ನಿಜಕ್ಕೂ ಪ್ರಾಣಲಿಂಗಿಯೆನಿಸಿ ಸಂಪೂಜ್ಯನಾಗಿಹನು.

ಜೀವಂತ ಕಾಲದಲ್ಲಿ ಯಾವ ಮಾನವನು ಅಂಗ ಲಿಂಗಗಳ ಸಹಜ ಸಂಘ ಸಮರಸ ಜ್ಞಾನವನ್ನು ಪಡೆದು ಕೊಳ್ಳಲಿಲ್ಲವೋ ಅಂಥವ ಮೂಢಾತ್ಮನೆನಿಸಿ, ಮೋಕ್ಷಮಾರ್ಗಕ್ಕೆ ಬಹಿಷ್ಕೃತನೆನಿಸಿರುವನು. ಇಂಥ ಪುರುಷನನ್ನು ಪತಿತನೆನ್ನಲಾಗಿದೆ.

ಲಿಂಗದ ನಿಜವರಿತು ಅಂಗಲಿಂಗಗಳ ಸಂಘ ಸಮರಸ ದನುವರಿತು ಬೆರೆತು ಭಾವ ಪೂರ್ಣ ಪ್ರಾಣ ಲಿಂಗವ ಅವಧಾನ ಭಕ್ತಿಯಿಂದ ನಿತ್ಯ ಪೂಜಿಸಿ, ಪರಿಣಮಿಸಿ ಪರವಶನಾದ, ಪ್ರಾಣಲಿಂಗಿ, ತನ್ನ ಅಂತರಿಕ ಪರಿಜ್ಞಾನ ಪರಿಕಾಕದಿಂದ ಮುಂದೆ ಈ ಮಹಾಪುರುಷನೇ ಶರಣಸ್ಥಲದ, ಶರಣನೆನಿಸುವನು. ಅಸ್ತು.

ಶ್ರೀ ಕಂಠೇಶ್ವರಾಯ ನಮಃ । ವಾತಾಶನೇಶ ಶಯನಾ ಚರಿತಾ
ಗಸಾಪ್ತಂ।ಕೌಂಡಿನ್ಯಶೋಕಮುಪಹೃತ್ಯ।ನಿಜಾಂಘ್ರಿಮೂಲಾತ್।
ಶ್ರೀ ಕೌಂಡಿನೀಂ ಸಮುಸೃಜ ಸ್ತ್ವಮನಂತರೂಪೀ । ಶ್ರೀ ಕಂಠ
ನಾಥ ಜಗತಾಂ ತವ ಸುಪ್ರಭಾತಂ ॥ ಯಃ ಕೌಂಡಿನೀ ಕಪಿಲ
ಯೋರಿಹ ಸಂಗಮಸ್ತಾಂ । ನೃತ್ಯನ್ನುಮುದಂಚಿತ ಸ ವೀತ
ಗದೋಸ್ತು ಭೂಮ್ಯಾಂ । ದೇವೈಃಭುವೇವರಮುದಾಃ ಕೃಪ
ಯಾತ್ಮಮೇವಂ । ಶ್ರೀ ಕಂಠನಾಥ ಜಗತಾಂ ತವ ಸುಪ್ರಭಾತಂ॥

ಶರಣಸ್ಥಲಂ-ಅಂಗ ಸ್ಥಲಂ ೩೭ ಶರಣ ಸ್ಥಲಂ (ಪರಿ. ೧೩)

ಅಂಗಲಿಂಗೀ ಜ್ಞಾನರೂಪಃ ಸತೀಜ್ಞೇಯಃ ಶಿವಃ ಪತಿಃ ।
ಯತ್ಸೌಖ್ಯಂ ತತ್ಸಮಾವೇಶೇ ತದ್ವಾನ್ ಶರಣನಾಮವಾನ್ ॥
ತದನ್ಯ ವಿಮುಖಃ ಸೋಽಯಂಜ್ಞಾತಃ ಶರಣನಾಮವಾನ್ ॥
ಶಿವಾನಂದಂ ಸಮಾಸಾದ್ಯ ಕೋ ವಾನ್ಯಮುಪತಿಷ್ಠತೇ ।
ಗಂಗಾಮೃತಂ ಪರಿತ್ಯಜ್ಯ ಕಃ ಕಾಂಕ್ಷೇನ್ಮೃಗ ತೃಷ್ಣಿಕಾಂ ॥
ಶಿವ ಏವ ಸಮಸ್ತಾನಾಂ ಶರಣ್ಯಃ ಶರಣಾರ್ಥಿನಾಂ ।
ಸಂಸಾರೋರಗದಷ್ಟಾನಾಂ ಸರ್ವಜ್ಞಃ ಸರ್ವದೋಷಹಾ ॥

ಶಿವಜ್ಞಾನೇ ಸಮುತ್ಪನ್ನೇ । ಪರಾನಂದಃ ಪ್ರಕಾಶತೇ ।
ತದಾಸಕ್ತಮನಾ ಯೋಗಿನಾನ್ಯತ್ರ ರಮತೇ ಸುಧೀಃ ॥

(ಶ್ಲೋ. ೨, ೫, ೭, ೧೦, ೧೧)

ಶರಣನದು ಆಕಾಶಾಂಗ, ಷಟ್ಸ್ಥಲವಲ್ಲಿ ಶರಣನದು ಐದನೆಯ ಸ್ಥಲ ಮಹತ್ವ ಪೂರ್ಣವಾದುದು, ಶರಣ ಸರ್ವಾಂಗ ಲಿಂಗಿಯಾಗಿ ಲಿಂಗ ಭೋಗೋಪ ಭೋಗಿಯಾಗಿರ್ಪನು, ಭಕ್ತಸ್ಥಲದ ಭಕ್ತನು, ಗಂಗಾ ಪ್ರವಾಹದ ಭಕ್ತಿ ಪುಣ್ಯೋದಕದಲ್ಲಿ ಮಿಂದು ಶುದ್ಧಾಂಗನಾಗಿ, ಚಿತ್ತಶುದ್ಧಿಯಿಂದ ಬೆಳಗುವಾತ ಭಕ್ತನೆನಿಸಿಹನು. ಮಾಹೇಶ್ವರನು ಜಿತೇಂದ್ರಿಯನಾಗಿ, ಬಾಹ್ಯಾಭ್ಯಂತರ ಇಂದ್ರಿಯಗಳನ್ನು ಸ್ವಾಧೀನದಲ್ಲಿರಿಸಿಕೊಂಡು; ಮನೋಬುದ್ಧೀಂದ್ರಿಯಂಗಳ ಏಕೀಕರಣದಿಂದ, ಸುಜ್ಞಾನದ ಬೆಳಕಿನಲ್ಲಿ ಮುಂದುವರಿಯುತ್ತಿಹನು. ಪ್ರಸಾದಿ, ಚಿತ್ತ ಚಾಂಚಲ್ಯವಿಲ್ಲದೆ, ನಾನು, ನನ್ನದು ಯೆಂಬ ಪೆಡಂಭೂತಗಳಿಂದ ದೂರನಾಗಿ, ನಿರಹಂಕಾರಿಯಾಗಿ ಸತ್ವ ಶಾಂತನಾಗಿರ್ಪನು. ಪ್ರಾಣಲಿಂಗಿ ಮಾನಸಿಕ ಚಿತ್ತಭ್ರಮಣೆಯಿಂದ ದೂರನಾಗಿ, ಘನಮನದ ದಿವ್ಯಾನುಭವದಿಂದ ಪ್ರದೀಪ್ತನಾಗಿ, ಪ್ರಾಣವೇ ಲಿಂಗ, ಲಿಂಗವೇ ಪ್ರಾಣವೆಂಬ ಅರಿವು ಅನುಭವಗಳಿಂದ ರಾರಾಜಿಸುತ್ತಿರ್ಪನು. ಶರಣನಮ ಸದಾ ಶಿವಾಕಾರ ಚಿತ್ತ ವೃತ್ತಿಯಿಂದ ರಮಿಸುವುದೇ ಶರಣ ಜೀವನದ ಜೀವಾಳ. ಶಿವಯೋಗವೇ ಪೂರ್ಣ ಯೋಗವೆಂದು ಶರಣನು ಅರಿತಿಹನು. ಇದರಿಂದಾಗಿ "ಶರಣಸ್ಯ ಪ್ರಾಪಂಚಿಕ ಸುಖಂ ನಾಸ್ತಿ" ಎಂದಿದೆ ಆಚಾರ್ಯವಾಣಿ. ನಿಜ ಶರಣನನ್ನು ಕಾಣುವುದು ಕಷ್ಟ. "ಶರಣ ಶಿವನ ಚಿದಾಭರಣ"

ಸತೀವ ರಮಣೀ ಯಸ್ತು । ಶಿವೇ ಶಕ್ತಿಂ ವಿಭಾವಯನ್ ॥

ಲಿಂಗಪತಿ, ತಾ ಮಹಾಸತಿಯೆಂಬುದು ಶಿವಶರಣನ ನಿರ್ಧಾರ. ಪತಿವ್ರತೆಯಾದ ಸ್ತ್ರೀ ತನ್ನ ರಮಣನಲ್ಲಿ ರಕ್ತಿಯಿಂದ ಸುಖಿಸುವಂತೆ ಶರಣನು ತನ್ನ ಲಿಂಗವೇ ಪತಿಯೆಂದು, ತಾನೇ ಮಹಾಸತಿ ಎಂದು ಭಾವಿಸಿ, ಭಕ್ತಿಯಿಂದ ಲಿಂಗಪತಿಯಲ್ಲಿ ಸುಮುಖಿಯಾಗಿ ಆತ್ಮಾರ್ಪಣ ಮಾಡಿರ್ಪನು.

ಅಂಗ ಸ್ಥಲ ೩೮ (ತಾಮಸ ನಿರಸನ ಸ್ಥಲ (ಪರಿ. ೧೩)

ಶಿವಭಕ್ತಿಪರಾನಂದ ಮೋದಿನಾ ಗಂರುಣಾಯುತಃ ।
ನಿರಸ್ಯಂತೇ ತಮೋ ಭಾವಾಃ ಸ ತಾಮಸ ನಿರಾಸಕಃ ॥
ಯಸ್ಯ ಜ್ಞಾನಂ ತಮೋ ಮಿಶ್ರಂ ನ ತಸ್ಯ ಗತಿರಿಷ್ಯತೇ ।
ಸತ್ತ್ವಂ ಹಿ ಜ್ಞಾನಯೋಗಸ್ಯ ನೈರ್ಮಲ್ಯಂ ವಿದುರುತ್ತಮಾಃ ॥
ಕಾಮಕ್ರೋಧ ಮಹಾಮೋಹ । ಮದಮತ್ಸರವಾರಣಾಃ ।
ಶಿವಜ್ಞಾನ ಮೃಗೇಂದ್ರಸ್ಯ । ಕಥಂ ತಿಷ್ಠಂತಿ ಸನ್ನಿಧೌ ॥

(ಶ್ಲೋ. ೧೩, ೧೪, ೧೭).

ಪ್ರಕೃತಿ ಗುಣಗಳಾದ ಸತ್ವ ರಜಸ್ಸು, ತಮೋಗುಣಗಳು ಮಾನವನನ್ನು ಆವರಿಸಿವೆ. ಅಜ್ಞಾನ, ಅವಿದ್ಯೆಗಳಿಗೆ ತವರು ಮನೆಯಂತಿರುವ ತಮೋಗುಣ, ರಜೋಗುಣಗಳು ಅನರ್ಥಕ್ಕೆ ಕಾರಣವಾಗಿರುವುದರಿಂದ ; ಶರಣನು ಈ ದುರ್ಗುಣಗಳಿಂದ ದೂರಇರುವುದರಿಂದ, ತಾಮಸ ನಿರಾಸನನೆಂದು ಕರೆಯಲಾಗಿದೆ.

ಸತ್ವಂ ರಜಸ್ತಮ ಇತಿ ಗುಣಾಃ । ಪ್ರಕೃತಿ ಸಂಭವಾಃ ।
ನಿಭಧ್ನಂತಿ ಮಹಾಬಾಹೋ । ದೇಹೇ ದೇಹಿನಮವ್ಯಯಂ ॥

ತ್ರಿಗುಣಗಳು ಪ್ರಕೃತಿಜನ್ಯವಾದವುಗಳು. ಸತ್ವಪ್ರಕಾಶಮಯ ಹಾಗೂ ನಿರ್ಮಲವಾದುದು. ರಜೋಗುಣರಾಗಾದಿಗಳನ್ನು ವೃದ್ಧಿಗೊಳಿಸಿ ಆಶಾನಾಮ ಸರೋವರದಲ್ಲಿ ತಳ್ಳುತ್ತೆ. ತಮಸ್ಸು ಮೋಹಜನ್ಯವಾದುದು. ಆಲಸ್ಯ, ನಿದ್ರಾ, ಭಯ, ಇತ್ಯಾದಿ ಲಕ್ಷಣಗಳಿಂದ ಕೂಡಿದೆ ಸಂಸಾರ ದುಃಖಕ್ಕೆ ಮೂಲ ಕಾರಣವಾಗಿರುವ ರಜೋಗುಣಗಳನ್ನು ನಿರಾಕರಿಸಿ, ಯಾವ ಜ್ಞಾನ ; ಗುರುವಿನಿಂದ ಬೋಧಿತವಾಗಿದೆಯೋ ಅದು ನಿರಸನ ಸ್ಥಲವೆನಿಸಿದೆ. ತಾಮಸಾದಿ ಅಜ್ಞಾನ ದೋಷವನ್ನು ಮಹಾಗುರು ನಾಶಗೊಳಿಸುವನು. ರೋಗದ ಮೂಲವನ್ನು ಬಲ್ಲ ನಿಧಾನಜ್ಞನಾದ ವೈದ್ಯನ ವಿನಃ, ರೋಗ ನೀಗದೋ ಅದರಂತೆ, ಜ್ಞಾನ ಸಿದ್ಧನಾದ ಶ್ರೀ ಗುರುವಿನ ಉಪದೇಶ ನಿರ್ದೇಶಗಳಿಲ್ಲದೆ ತಾಮಸಾದಿ ಅಜ್ಞಾನ ನೀಗದು. ಕಾಮ, ಕ್ರೋಧ, ಮೋಹ, ಮದ, ಮತ್ಸರಗಳೆಂಬ ಆನೆಗಳು, ಶಿವಜ್ಞಾನವೆಂಬ

ಸಿಂಹದ ಮುಂದೆ ಹೇಗೆ ನಿಲ್ಲಲು ಸಾಧ್ಯ. ಶಿವಸ್ವರೂಪವನ್ನು ಜಗತ್ತಿನಲ್ಲಿ ದ್ವೇಶಿಸಿದರೆ, ಅದು ರಾಜಸ ವೆನಿಸುವುದು. ಆಸತ್ಯ ಅನ್ಯಾಯಗಳಿಗೊಳಗಾಗಿದ್ದರೆ ಅದು ತಾಮಸವೆನಿಸುವುದು. ಶಿವಜ್ಞಾನವೆಂಬ ಮಹಾ ತೇಜಸ್ಸಿನ ಮುಂದೆ ತಮೋ ವಿಕಾರಗಳಿಗೆ ಸ್ಥಳವೆಲ್ಲಿಯದು. ಇಂತಪ್ಪ ಶರಣರ ಶೈವೀ ಉಜ್ವಲ ಸ್ಥಿತಿಯನ್ನು ತಾಮಸ ನಿರಸನ ಸ್ಥಲವೆಂಬರು.

## ಅಂಗಸ್ಥಲ ೩೯ || ನಿರ್ದೇಶ ಸ್ಥಲಂ || (ಪರಿ ೧೩)

**ನಿರಾಕೃತ್ಯ ತಮೋ ಭಾಗಂ ಸಂಸಾರಸ್ಯ ಪ್ರವರ್ತಕಂ ।**
**ನಿರ್ದಿಶ್ಯತೇ ತು ಯಜ್ಞಾನಂ ಸ ನಿರ್ದೇಶ ಇತಿ ಸ್ಮೃತಃ ॥**
**ಅಜ್ಞಾನ ಮಲಿನಂ ಚಿತ್ತ ದರ್ಪಣಂ । ಯೋ ವಿಶೋಧಯೇತ್ ।**
**ಪ್ರಜ್ಞಾ ವಿಭೂತಿ ಯೋಗೇನ । ತಮಾಹು ರ್ಗುರು ಸತ್ತಮಂ ॥**
**ಕೈವಲ್ಯ ಕಲ್ಪತರವೋ ಗುರವಃ । ಕರುಣಾಲಯಾಃ ॥ ದುರ್ಲಭಾ ಹಿ ಜಗತ್ಯ ಸ್ಮಿನ್ । ಶಿವಾ ದ್ವೈತ ಪರಾಯಣಾಃ ॥**

**(ಶ್ಲೋ ೨೨, ೨೫, ೨೭)**

ಶಿಷ್ಯನ ಹೃದಯದ ಅಜ್ಞಾನ ಗ್ರಂಥಿಗಳನ್ನು ನಿರ್ಮೂಲ ಗೊಳಿಸಲು ಹಾಗೂ ಲೋಕವನ್ನು ಕವಿದಿರುವ ತಮಸ್ಸನ್ನು ಹೋಗಲಾಡಿಸಲು ಹೇಗೆ ಚಿದಾದಿತ್ಯನ ಹಾಗೂ ಭೌತಿಕ ಸೂರ್ಯನ ತೇಜಸ್ಸಿನ ಬೆಳಕು ಅತ್ಯಾವಶ್ಯಕ ವಿರುತ್ತೋ, ಇದರಂತೆ ಅಜ್ಞಾನಾಂಧಕಾರವನ್ನು ನೀಗಿಸಲು, ಜ್ಞಾನ ಸೂರ್ಯನಂತಿರುವ ಮಹಾಗುರುವಿನ ಅವಶ್ಯಕತೆಯಿರುತ್ತೆ ಅನಾದಿ ಕಾಲದಿಂದ ಸಂಸಾರಮಯ ಘೋರ ದುಃಖಕ್ಕೆ ಅಜ್ಞಾನ ಕಾರಣವಾಗಿರುವುದರಿಂದ, ಇದರ ಅಂಗಗಳಾದ ರಜೋ ತಮೋ ಗುಣಗಳನ್ನು ನಿರಾಕರಿಸಿ ಯಾವ ಜ್ಞಾನವನ್ನು ಶ್ರೀ ಗುರುವಿನಿಂದ ನಿರ್ದೇಶಿಸಲ್ಪಡುವುದೋ, ಅಂತಪ್ಪ ಜ್ಞಾನ ನಿರ್ದೇಶಸ್ಥಲ ವೆನಿಸಿದೆ. ಗುರುವಿನ ವಿನಃ ತಾಮಸಾದಿ ಗುಣಗಳನ್ನು ನಾಶಗೊಳಿಸಬಲ್ಲ ವ್ಯಕ್ತಿ ಬೇರೊಬ್ಬರಿಲ್ಲ.

**ಗುರುವೇ ಸರ್ವ ಲೋಕಾನಾಂ । ಭಿಷಜೇ ಭವರೋಗಿಣಾಂ ।**

ನಿಧಯೇ ಆತ್ಮ ವಿದ್ಯಾನಾಂ।ಶ್ರೀ ದಕ್ಷಿಣಾ ಮೂರ್ತಯೇ ನಮಃ।

ರೋಗದ ಮೂಲವನ್ನು ಬಲ್ಲ ನಿಧಾನಜ್ಞನಾದ ವೈದ್ಯನ ವಿನಃ ರೋಗ ಹೇಗೆ ನೀಗದೋ ಅದರಂತೆ ಜ್ಞಾನ ಸಿದ್ಧನಾದ ಕ್ರಿಯಾವಂತ ಶ್ರೀ ಗುರುವಿನ ಉಪದೇಶ ನಿರ್ದೇಶಗಳಿಲ್ಲದೆ, ತಾಮಸಾದಿ ಅಜ್ಞಾನನೀಗದು, ಅಜ್ಞಾನ ಅವಿದ್ಯೆಗಳಿಂದ ಮಲಿನವಾದ ಚಿತ್ತವೆಂಬ ಕನ್ನಡಿಯ ಮೇಲಿನ ಕಾಮಾದಿ ಕೊಳೆಯನ್ನು ತೊಳೆಯಲು ಸಮರ್ಥನಾದ, ಪ್ರಜ್ಞಾ ವಿಭೂತಿ ಯೋಗದ ಗುರುವೇ, ಭವದುಃಖದಿಂದ ಮುಕ್ತನಾಗಲು ಸೂಕ್ತ ನಿರ್ದೇಶನ ನೀಡಲು ಅರ್ಹನಿರುವನು ಕರುಣೆಯೇ ಅಭರಣವಾಗುಳ್ಳ ಭಕ್ತರ ಪಾಲಿಗೆ ಕಲ್ಯಾಣ ಕಲ್ಪತರುಗಳಂತೆ ಪರಿಶೋಭಿಸುವ ಗುರುಗಳು, ಮೋಕ್ಷಧಾತರು ಸಿಗುವುದು ದುರ್ಲಭವಿರುತ್ತೆ. ಶ್ರೀ ಗುರುವಿನ ನಿರ್ದೇಶದಿಂದಾಗಿ, ಶರಣನ ಮನಸ್ಸು ಶುದ್ಧ ಸ್ಫಟಿಕದಂತೆ ಪ್ರಜ್ವಲಿಸುತ್ತಲಿರ ಬೇಕು.

ಯದ್ವತ್ ರಾಗ ದ್ವೇಶಾದಿ ಧೂಷಿತ ಚಿತ್ತೇ ಆತ್ಮನ ಪ್ರತಿಫಲತಿ।
ಕಿಂತು ನಿರ್ಮಲೇ ಮುಕುರೇ ॥ ತದ್ವತ್ ರಾಗದ್ವೇಶಾದಿ ರಹಿತೋ ಶುದ್ಧೋ ಚಿತ್ತೇ । ಆತ್ಮ ಪ್ರತಿಫಲತಿ ॥

ಓಂ ಶ್ರೀಕಂಠಾಯ ನಮಃ ॥ ತ್ವನ್ನಿರ್ವಿತಾಮರ ಧುನೀಯುತ ಪುಣ್ಯತೀರ್ಥೇ। ಪಾಪಾಗ್ನಿ ನಾಶನಚಣೀ ಮಣಿಕರ್ಣಿಕಾಖ್ಯೇ ।
ಸ್ನಾತಸ್ಯ ಭಕ್ತನಿಕರಸ್ಯವರಂ ಪ್ರದಾತುಂ। ಶ್ರೀ ಕಂಠನಾಥ ಜಗತಾಂ ತವಸುಪ್ರಭಾತಂ ॥ ಕೈಲಾಸ ಶೃಂಗಪತನಾದತಿ ಪುಣ್ಯರಮ್ಯೇ । ಭರ್ತಾರ ಮಾಪ್ತುಮಿಹ ಘೋರತಪಃಶ್ಚರಂ ತ್ಯಾಃ ।
ಲಕ್ಷ್ಮ್ಯಾ ವಿವಾಹಮತನೋಃ ಸಹ ಕೇಶವೇನ । ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥

ಅಂಗಸ್ಥಲ ೪೦ ॥ ಶೀಲ ಸಂಪಾದನ ಸ್ಥಲಂ॥ (ಪರಿ ೧೩)

ಜಿಜ್ಞಾಸಾ ಶಿವ ತತ್ವಸ್ಯ ಶೀಲ ಮಿತ್ಯುಚ್ಯತೇ ಬುಧೈಃ ನಿರ್ದೇಶ
ಯೋಗದಾರ್ಯಾಣಾಂ ತದ್ವಾನ್ ಶೀಲೀತಿ ಕಥ್ಯತೇ ॥

ಪ್ರಪನ್ನಾರ್ತಿ ಹರೇ ದೇವೇ ಪರಮಾತ್ಮನಿ ಶಂಕರೇ । ಭಾವಸ್ಯ ಸ್ಥಿರ ತಾಯೋಗಃ । ಶೀಲಮಿತ್ಯುಚ್ಯತೇ ಬುಧೈಃ ॥ ಶೀಲಂ ಶಿವೈಕ ವಿಜ್ಞಾನಂ । ಶಿವಧ್ಯಾನೈಕ ತಾನ ತಾ । ಶಿವ ಪ್ರಾಪ್ತಿ ಸಮುತ್ಕಂಠಾ । ತದ್ಯೋಗೀ ಶೀಲವಾನ್ ಸ್ಮೃತಃ ॥ ಪತಿವ್ರತಾಯಾ ಯಚ್ಛೀಲಂ । ಪತಿರಾಗಾತ್ರ್ರಶಸ್ಯತೇ । ತಥಾ ಶಿವಾನು। ರಾಗೇಣ ಸುಶೀಲೋ ಭಕ್ತ ಉಚ್ಯತೇ ॥

(ಶ್ಲೋ ೩೦, ೩೧, ೩೨, ೩೪)

ಶರಣ ಶೀಲವಂತ ಈ ಕಾರಣದಿಂದ ಶಿವನು, "ಶರಣ ಜನರ ಸದು ಹೃದಯ ನಳಿನದೊಳು ಪರಿಶೋಭಿಸುತ್ತಿಹುದು ನಿನ್ನಯ ದಿವ್ಯ ಪಾದ" ಎಂದು ಶಿವಶರಣರಶರಣೆಯರುಸ್ತುತಿಸಿಹರು, ಗುರುವಿನಿಂದ ನಿರ್ದೇಶಿಸಲ್ಪಟ್ಟ ಆಚಾರ ಯುಕ್ತ ಶಿವಜ್ಞಾನದಿಂದ ಲಭಿಸುವ ಶಿವತತ್ವ, ಜಿಜ್ಞಾಸ ಶೀಲವೆನಿಸಿದೆ ಶರಣಾ ಗತ ಜನರ ದುಃಖವನ್ನು ಹೋಗಲಾಡಿಸುವವನೂ, ದೀನ ಬಂಧುವೂ ಆದ ಶಿವನು.

ಭಜತಾಂ ಕಲ್ಪವೃಕ್ಷಾಯ । ನಮತಾಂ ಕಾಮಧೇನವೇ ॥

ಎಂಬ ವಿಶ್ವಾಸಭರಿತ ಚಿತ್ತಸ್ಥಿರೀಕರಣವೇ ಶೀಲವೆನಿಸಿರುವುದು. "ಇಡಬೇ ಕೀಶ್ವರನಲ್ಲಿ ಭಕ್ತಿರಸವಂ" ಎಂಬ ದೃಢತೆಯಿಂದ ಶಿವನೊಬ್ಬನಲ್ಲಿಯೇ ತನ್ನ ಸರ್ವಸ್ವ ಭಕ್ತಿ ಭಾವವನ್ನು ನೆಲೆಗೊಳಿಸಿ, ವಿಶೇಷವಾಗಿ ಶಿವವ್ರತ, ಶಿವಪೂಜೆ, ಶಿವಧ್ಯಾನಾದಿಗಳಲ್ಲಿ ಅನವರತ ನಿಷ್ಠನಾಗಿ, ಅನನ್ಯ ಭಾವೇನ ಶಿವಪ್ರಾಪ್ತಿಗಾಗಿ ಅಪರಿಮಿತ ಆಸಕ್ತಿ ನಿಜಕ್ಕೂ ಶೀಲವೆನಿಸಿರುವುದು. ಪದ್ಮಿನಿ ಜಾತಿಗೆ ಸೇರಿದ ಪತಿ ವ್ರತಾಸ್ತ್ರೀಯಳ ಪಾತೀವ್ರತ್ಯವು, ಪತಿಯ ಪ್ರೇಮ ಪೂರಿತ ದಿವ್ಯ ಕಟಾಕ್ಷ ದಂತೆ ಶರಣನು ಶೀಲವಂತನೆನಿಸುವನು,

ಬಹೂನಾತ್ರ ಕಿಮುಕ್ತೇನ ಶಿವಜ್ಞಾನೈಕ ನಿಷ್ಠತಾ । ಶೀಲ ಮಿತ್ಯುಚ್ಯತೇ ಸದ್ಭಿಃ । ಶೀಲವಾಂಸ್ತತ್ಪರೋ ಮತಃ ॥

(ಶ್ಲೋ ೩೬)

ಬಹುವಾಗಿ ವಿವರಿಸುವುದರಿಂದ ಯೇನು ಪ್ರಯೋಜನ ? ಶಿವಜ್ಞಾನ ಶಿವಧ್ಯಾನಾದಿಗಳಲ್ಲಿ ಪೂರ್ಣ ತಲ್ಲೀನನಾಗಿ, ಶಿವಂಕರಭಾವದಿಂದ—

**ಶಿವ ಏಕೋ ಧ್ಯೇಯಃ ಶಿವಂಕರಃ । ಸರ್ವ ಮನ್ಯತ್ಪರಿತ್ಯಜ್ಯ ॥**

ಯೆಂಬ ಪರಮೋತ್ಕೃಷ್ಟವಾದ ಶರಣನ ಧ್ಯೇಯ ಶೀಲವೆನಿಸಿರುತ್ತೆ-ಆಸ್ತು. ಶರಣ ಸ್ಥಲದ ಸಂಕ್ಷಿಪ್ತ ವಿವರಣೆಯು ಸಮಾಪ್ತಿ. ಶಿವ.

## ಅಂಗಸ್ಥಲ ೪೧ ॥ ಐಕ್ಯಸ್ಥಲಂ ॥ (ಪರಿ ೧೪)

**ವಿಷಯಾನಂದ ಕಣಿಕಾನಿಃಸ್ಪೃಹೋ ನಿರ್ಮಲಾಶಯಃ ।**
**ಶಿವಾನಂದ ಮಹಾಸಿಂಧೌ ಮಜ್ಜನಾದ್ಯೈಕ್ಯಮುಚ್ಯತೇ ॥**

**ಶಿವೇನೈಕ್ಯಂ ಸಮಾಪನ್ನಶ್ಚಿದಾನಂದ ಸ್ವರೂಪಿಣಾ ।**
**ನ ಪಶ್ಯತಿ ಜಗಜ್ಜಾಲಂ ಮಾಯಾಕಲ್ಪಿತ ವೈಭವಂ ॥**

**ಪಶುತ್ವಂ ಚ ಪತಿತ್ವಂ ಚ ಮಾಯಾಮೋಹವಿಕಲ್ಪಿತಂ ।**
**ತಸ್ಮಿನ್ ಪ್ರಲಯಮಾಪನ್ನೇ ಕಃ ಪಶುಃ ಕೋ ನು ವಾ ಪತಿಃ ॥**

**ಅದ್ವೈತಭಾವನಾಜಾತಂ ಕ್ಷಣಮಾತ್ರೇಽಪಿ ಯತ್ಸುಖಂ ।**
**ತತ್ಸುಖಂ ಕೋಟಿವರ್ಷೈಸ್ತು ಪ್ರಾಪ್ಯತೇ ನೈವ ಭೋಗಿಭಿಃ ॥**

**(ಶ್ಲೋ. ೪, ೬, ೯, ೧೪)**

ಕ್ರಿಯಾವಂತ ಬ್ರಹ್ಮನಿಷ್ಠನಾದ ಶಿವಯೋಗಿ, ಷಟ್ಸ್ಥಲ ಸನ್ಮಾರ್ಗದಲ್ಲಿ ದೃಢಭಾವ ಹೆಜ್ಜೆಯೂರಿ ಭಕ್ತ ಸ್ಥಲದಿಂದ ಹಂತಹಂತವಾಗಿ ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣಸ್ಥಲಗಳ ತತ್ತ್ವಾನು ಸಂಧಾನದಿಂದ ಊರ್ಧ್ವಗಾಮಿಯಾಗಿ ಅಂತರಂಗದಲ್ಲಿ ಐಕ್ಯಸ್ಥಲದ ಮೆಟ್ಟಲನ್ನು ಏರಿರುವನು. ಇಲ್ಲಿನ ಸ್ಥಿತಿ ಅಸತ್ತಿನಿಂದ ಸತ್ಯದತ್ತ ಕತ್ತಲಿನಿಂದ ಬೆಳಕಿನಕಡೆ ಮತ್ತು ಮೃತ್ಯುವಿನ ದವಡೆಯಿಂದ ಪಾರಾಗಿ ಅಮೃತದತ್ತ ಸಾಗುವ ಕಾರ್ಯದಲ್ಲಿ ತನ್ಮುಖನಾಗಿರುವುದನ್ನು ಕಾಣಬಹುದು. ಅವಿದ್ಯಾ ಆಲಸ್ಯ ನಿದ್ರೆಯಿಂದ ಎಚ್ಚೆತ್ತ ಶರಣನು, ವಿಷಯಾನಂದ ಕ್ಷಣಿಕವಾಗಿರುವುದರೊಂದಿಗೆ ಅಂತ್ಯದಲ್ಲಿ ಅಗಣಿತ ದುಃಖದ ಮಡುವಿನಲ್ಲಿ ಕೊನೆಗೊಳ್ಳುವುದೆಂದು ಅರಿತಿರುವನು. ಈ ಕಾರಣದಿಂದ ಎಚ್ಚೆತ್ತ ಶರಣನು, ನಿರ್ಮಲಾಶಯನೆನಿಸಿ ನಿಸ್ಪೃಹಭಾವದಿಂದ ಶಿವಾನಂದ ಮಹಾಸಿಂಧುವಿನಲ್ಲಿ ಮಗ್ನನಾಗಿ, ತದೇಕ ಧ್ಯಾನದಲ್ಲಿ ತನ್ಮಯನಾಗಿ ಮೂರ್ಛಿತರ್ಪ ಶಿವಶರಣನನ್ನು ಮಹದೈಕ್ಯ ಸ್ಥಲದವನೆನಿಸಿಹನು. ಐಕ್ಯ ಸ್ಥಲದ ಶಿವಾನುಭವಿ,

ಕರ್ಪೂರಾಂಗನೆನಿಸಿ ಶುದ್ಧ ಸ್ಫಟಿಕದಂತೆ ವಿರಾಜಿಸುವ ಸ್ಥಿತಿಯನ್ನು ಎತ್ತಿ ತೋರಿಸುವ ಅಂಶವನ್ನು ಇಲ್ಲಿ ಮನಗಾಣಿಸಲಾಗಿದೆ. ಸ್ವಲ್ಪ ನೀರಿರುವ ಕನ್ನಡಿ ಲೋಟದಲ್ಲಿ ನಾಲ್ಕು ಉಪ್ಪಿನ ಹರಳುಗಳನ್ನು ಹಾಕಿದಾಗ ಅವು ನೀರಿನಡಿಯಲ್ಲಿ ಕ್ಷಣ ಕಾಲ ಹಾಗೆಯೇಯಿರುವುದನ್ನು ಕಾಣಬಹುದು ಅಲ್ಲವೇ. ಇಂತಪ್ಪ ಸ್ಥಿತಿ ಶರಣನ ಐಕ್ಯ ಸ್ಥಲದ ಶರಣನ ಸ್ವರೂಪವನ್ನು ತೋರಿಸುತ್ತೆ. ಆದರೆ ಸ್ವಲ್ಪ ಹೊತ್ತಾದ ಬಳಿಕ ಉಪ್ಪಿನ ಹರಳುಗಳು ತಮ್ಮ ಸ್ವಸ್ವರೂಪದಲ್ಲಿ ವಿಲೀನವಾಗಿರುವುದನ್ನು ಕಾಣುತ್ತೇವೆ. ಇದರಂತೇ ಕರ್ಪೂರಾಂಗನಾದ ಶರಣನು ಜ್ಯೋತಿಯು ಕಿಂಚಿತ್ ಸ್ಪರ್ಷವಾದ ತಕ್ಷಣ ಕರ್ಪೂರ ಜ್ಯೋತಿಯಾಗಿ, ಚಿಜ್ಯೋತಿಯಲ್ಲಿ ಶರಣನ ಕರ್ಪೂರಾಂಗ ಜ್ಯೋತಿಮಯವಾಗಿ ಪ್ರಕಾಶಿಸುವುದು. ಅಂದ ಬಳಿಕ ಶರಣನು ಐಕ್ಯಸ್ಥಲದಲ್ಲಿ "ಶಿವಾನಂದ ಮಹಾ ಸಿಂಧೌ ಮಜ್ಜನಾದೈಕ್ಯ ಮುಚ್ಯತೇ ಯೆನ್ನಲಾಗಿದೆ.

ಇಂತು ಶಿವಾನಂದ ಸಾಗರದಲ್ಲಿ ಸಂಪೂರ್ಣವಾಗಿ ಮುಳುಗಿರುವ ಶಿವಶರಣನಿಗೆ ಅಂತರ್ಭಾಹ್ಯ ಮಾಯಾ ಪ್ರಪಂಚವೆಲ್ಲಾ ಶಿವನಾಗಿ ಕಾಣುವನು. ಎತ್ತೆತ್ತ ನೋಡಿದರೆ ಅತ್ತತ್ತ ಶಿವನನ್ನು ಕಾಣುವನೇ ವಿನಹ ಮಾಯಾ ಪ್ರಪಂಚ ಅವನಿಗೆ ಕಾಣದು. ತಾನು ಪಶುವೆಂದೂ ಶಿವನು ಪತಿಯೆಂದೂ ಕಾಣುವ ನೋಟ ಮಾಯಾ ಪ್ರಪಂಚದ ಜಾಲ ನೋಡಾ. ಮಹಾ ಪ್ರಳಯ ಕಾಲದಲ್ಲಿ ಎಲ್ಲವೂ ಶಿವನ ವಿರಾಟ್ ಗರ್ಭದಲ್ಲಿ ವಿಲೀನವಾದ ನಂತರ, ಪಶುವೂ ಅಲ್ಲ ಪತಿಯೂ ಇಲ್ಲವಷ್ಟೆ, ಆದ್ದರಿಂದ ಐಕ್ಯಸ್ಥಲದ ಶರಣನು, ಲಿಂಗಾಂಗ ಸಾಮರಸ್ಯದ ಸುಖಾನಂದ ಭಾವ ಅದ್ವಿತೀಯವೆನಿಸಿದೆ. ಶಿವಯೋಗಿ ಸ್ವಸ್ವರೂಪದ ಐಕ್ಯಾಂದವನ್ನು ಕ್ಷಣದಲ್ಲಿ ಅನುಭವಿಸುವ ಅಪಾರ ಶಾಶ್ವತಾನಂದ ಸುಖವನ್ನು, ಚಕ್ರವರ್ತಿ ತನ್ನ ರಾಜಭೋಗವನ್ನು ಕೋಟಿ ವರ್ಷ ಅನುಭವಿಸಿದರೂ, ಆತ್ಮಾನಂದವನ್ನು ಕ್ಷಣಕಾಲ ಅನುಭವಿಸಿದ ಸುಖಕ್ಕೆ ಸಾಟಿಯಾಗಲಾರದೆಂದು ಶ್ರೀ ಜ॥ ರೇಣುಕಾಚಾರ್ಯರು ಅಗಸ್ತ್ಯಮುನಿ ಚಂದ್ರನಿಗೆ ಐಕ್ಯಸ್ಥಲದ ವಿವರಣೆ ನೀಡಿದಾಗ, ಮುನಿಸತ್ತಮನಿಗೆ ಉಂಟಾದ ಆನಂದಕ್ಕೆ ಪಾರವಿಲ್ಲದಂತಾಯಿತು.

ಲಿಂಗಸ್ಥಲ ೪೨ ॥ ಆಚಾರ ಸಂಪತ್ತಿ ಸ್ಥಲಂ ॥ (ಪರಿ. ೧೪)

ಶಿವೈಕಭಾವನಾ ಪನ್ನ ಶಿವತ್ವೋ ದೇಹವಾನಪಿ ।
ದೇಶಿಕೋ ಹಿ ನ ಲಿಪ್ಯೇತ ಸ್ವಾಚಾರ್ಯೈಃ ಸೂತಕಾದಿ ಭಿಃ ॥

ವರ್ಣಾಶ್ರಮಸದಾಚಾರ್ಯೈರ್ಜ್ಞಾನಿನಾಂ ಕಿಂ ಪ್ರಯೋಜನಂ ।
ಲೌಕಿಕಸ್ತು ಸದಾಚಾರಃ ಫಲಾಭಾವೇಪಿ ಭಾವ್ಯತೇ ॥

ನಿರ್ದಗ್ಧ ಕರ್ಮಬೀಜಸ್ಯ ನಿರ್ಮಲ ಜ್ಞಾನ ವಹ್ನಿನಾ ।
ದೇಹಿವದ್ಭಾಸಮಾನಸ್ಯ ದೇಹಯಾತ್ರಾ ಲೌಕಿಕೀ ॥

ಶಿವಜ್ಞಾನ ಸಮಾಪನ್ನ ಸ್ಥಿರವೈರಾಗ್ಯ ಲಕ್ಷಣಃ ।
ಸ್ವ ಕರ್ಮಣಾ ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥

ಯದ್ಯಚ್ಚಿಂತಯತೇ ಯೋಗೀ ಮನಸಾ ಶುದ್ಧ ಭಾವನಃ ।
ತತ್ತಚ್ಛಿವಮಯತ್ವೇನ ಶಿವಧ್ಯಾನಮುದಾಹೃತಂ ॥

ಯತ್ಕಿಂಚಿದ್ಭಾಷಿತಂ ಲೋಕೇ ಸ್ವೇಚ್ಛಯಾ ಶಿವಯೋಗಿನಾ ।
ಶಿವಸ್ತೋತ್ರ ಮಿದಂ ಸರ್ವಂ ಯಸ್ಮಾತ್ಸರ್ವಾತ್ಮಕಃ ಶಿವಃ ॥

(ಶ್ಲೋ ೧೬, ೨೦, ೨೨, ೨೪, ೨೬)

ಅಂತರಂಗದಲ್ಲಿ ಶಿವೈಕ್ಯ ಭಾವದಿಂದ ಸತತ ಶಿವತ್ವವನ್ನು ಪಡೆದ ಲಿಂಗೈಕ್ಯ ನಿಷ್ಠಾನಂತನು, ದೇಹಧಾರಣದಿಂದಿದ್ದರೂ ಪಂಚ ಸೂತಕಾದಿಗಳ ದೋಷ ಆತನಿಗಿರುವುದಿಲ್ಲ. ಅವಸ್ಥಾತ್ರಯಂಗಳಲ್ಲೂ ಈತ ಶಿವಾದ್ವೈತ ಭಾವದಿಂದ ಪರಿಪ್ಲುತನಾದ್ದರಿಂದ, ಯಾವ ಕರ್ಮದಿಂದಲೂ ಲಿಪ್ತನಾಗುವುದಿಲ್ಲ ಶಿವ ಸಾಮರಸ್ಯ ಭಾವ ಭರಿತನಾಗಿ, ಸರ್ವ ಸಮದರ್ಶಿಯಾಗಿ ಬಾಳುವಾತಂಗೆ ಪಾಪ ಪುಣ್ಯಗಳ ಕರ್ಮ ಫಲಗಳು ಅನ್ವಯಿಸುವುದಿಲ್ಲ. ಸರ್ವತ್ರ ಸಮ ದರ್ಶನ ಶೀಲಂಗೆ ಎಲ್ಲವೂ ಶಿವಮಯವಾದ್ದರಿಂದ, ಇಂತಪ್ಪ ಶಿವಯೋಗಿಗೆ, ಪುಣ್ಯಾತ್ಮನಾಗಲಿ, ಪಾಪಿಯಾಗಲಿ, ಬ್ರಾಹ್ಮಣನಾಗಲಿ, ಅಂತ್ಯಜನಾಗಲಿ,

॥ **ಪಂಡಿತಃ ಸರ್ವತ್ರ ಸಮ ದರ್ಶಿನಃ** ॥

ಆತ್ಮದರ್ಶಿ ಎಲ್ಲರನ್ನೂ ಶಿವಸ್ವರೂಪವಾಗಿಯೇ ಕಾಣುವನು ಅರ್ಥಾತ್ ಶಿವಾದ್ವೈತ ಅನ್ಮೃತರಸಾನುಭೂತಿಗೆ ಎಲ್ಲವೂ ಶಿವಸ್ವರೂಪವಾಗಿ ಕಾಣುವುವು. ಶರಣಲೋಕಾಚಾರದಿಂದ ಲೇಪಿತನಾಗದೆ ಅತೀತನಾಗಿರ್ಪನು. ಈ ಮಹಾನುಭಾವನು ಶಿವಜ್ಞಾನ ರೂಪ ದಿವ್ಯಾಗ್ನಿಯಿಂದ ಸುಟ್ಟ ಬೀಜದಂತೆ, ದಗ್ಧಪಟದಂತೆ, ಮಾನವ ದೇಹಧಾರಿಯಾಗಿ ಕಂಡರೂ, ಕರ್ಮ ಲೇಪವಿಲ್ಲದೆ, ವರ್ಣಾಶ್ರಮ ಧರ್ಮಗಳಿಂದ ಅತೀತನಾಗಿ, ತೋರ್ಕೆಗೆ ಮಾತ್ರ ಪುರುಷನಾಗಿ ಕಾಣುವನು. ದೇಹ ಧರ್ಮದ ಸೋಂಕಿಲ್ಲದೆ ನಿರ್ದೇಹಿಯಂತೆ ನಮ್ಮ ಮಧ್ಯೇ ಪರಿಶೋಭಿಸುವನು. ಹಿಮಗಾಲದಲ್ಲಿ ತಾವರೆ ಎಲೆ ಮೇಲೆ ಬಿದ್ದ ಹನಿ ನೀರು, ದೂರಕ್ಕೆ ಎಲೆಯೊಂದಿಗೆ ಅಂಟಿಕೊಂಡಿರುವಂತೆ ಕಂಡರೂ, ಹತ್ತಿರದಿಂದ ನೋಡಿದಾಗ ಆ ಜಲಬಿಂದು ತಾವರೆ ಎಲೆಗೆ ಅಂಟದೆ, ಅಂಟಿಯೂ ಅಂಟದ ಹಾಗೆ ಪೃಥಗ್ಭಾವದಿಂದ ಇರುವಂತೆ, ಐಕ್ಯಸ್ಥಲದ ಪರಮ ಶಿವಶರಣನು ಪ್ರಾಪಂಚಿಕ ವಿಷಯಗಳ ಮಧ್ಯೇ ವ್ಯವಹರಿಸುತ್ತಲಿದ್ದರೂ, ಅಂಟಿಯೂ ಕಿಂಚಿತ್ತೂ ಅಂಟದಂತೆ ಮುಕ್ತನಾಗಿರ್ಪ ಶ್ರೇಷ್ಠ ಸ್ಥಿತಿಯನ್ನು ಆಚಾರ ಸಂಪತ್ತಿ ಸ್ಥಲವೆಂದು ಶ್ರೀ ಜಗದಾಚಾರ್ಯರು ಮನಮುಟ್ಟುವಂತೆ ಬೋಧಿಸಿರುವರು. ಪಂಚಾಚಾರಯುಕ್ತನಾದ ಮಹಾಶಿವಯೋಗಿ ಶಿವಶರಣ ಏನನ್ನೆಲ್ಲಾ ಆಚರಿಸುತ್ತಾನೋ, ನೋಡುತ್ತಾನೋ, ನುಡಿಯುತ್ತಾನೋ, ಸಂಕಲ್ಪಿಸುತ್ತಾನೋ, ಇವೆಲ್ಲವೂ ಆ ಮಹಾನುಭಾವನಿಗೆ ಶಿವಪೂಜೆಯೆನಿಸಿರುವುವು. ಇದರಿಂದಾಗಿ ಆಚಾರ ಸಂಪತ್ತಿಸ್ಥಲ, ವೈಭವೋಪೇತವೆನಿಸಿಸುವುದು,

ಆಚಾರಃ ಪ್ರಿಯ ಶಂಭುಃ । ಆಚಾರೇಣ ತುಷ್ಯತಿ ।
ಅಚಾರಂ ವಿನಃ ತಸ್ಯ ಪ್ರಸಾದೋ ನೈವ ಜಾಯತೇ ॥

## ಅಂಗಸ್ಥಲ ೪೩ ॥ ಏಕ ಭಾಜನ ಸ್ಥಲಂ ॥ (ಪರೆ ೧೪)

ವಿಶ್ವಂ ಶಿವಮಯಂ ಚೇತ್ | ಸದಾ ಭಾವಯತೋಧಿಯಾ ।
ಶಿವೈಕ ಭಾಜನಾತ್ಮತ್ವಾ ದೇಕ ಭಾಜನ ಮುಚ್ಯತೇ ॥ ಶಿವೇ ವಿಶ್ವ
ಮಿದಂ ಸರ್ವಂ । ಶಿವಃ ಸರ್ವತ್ರ ಭಾಸತೇ । ಆಧಾರಾದೇಯ
ಭಾವೇನ । ಶಿವಸ್ಯ ಜಗತಃ ಸ್ಥಿತಿಃ ॥ ಚಿತ್ರಕಾತಯೋಶೇ ವಿಶ್ವಂ ।

ತದ್ಭಿನ್ನಾ ವಸ್ತುನಾಸ್ತಿ ಹಿ । ಚಿದೇಕ ನಿಷ್ಠ ಚಿತ್ತಾನಾಂ ।
ಕಿಂ ಮಾಯಯಾ ಪರಿ ಕಲ್ಪಿತೈಃ ॥

(ಶ್ಲೋ ೨೮, ೩೦, ೩೨)

"ಈಶಾವಾಸ್ಯ ಮಿದಂ ಸರ್ವಂ, ಸರ್ವಂ ಖಲ್ವಿದಂ ಬ್ರಹ್ಮ, ವಾಸುದೇವಃ ಸರ್ವ ಮಿತಿ, ರೇ ರೇ ಸರ್ವಂ ಬ್ರಹ್ಮಮಯಂ, ಶಿವಮಯಂ ಜಗತ್" ಎಂಬಿವೇ ಶೃತಿ ವಾಣಿಗಳಿಗನುಗುಣವಾಗಿ, ಸರ್ವಾಂಗಗಳಲ್ಲಿ ಶಿವಾಚಾರ, ಸದಾಚಾರ, ಲಿಂಗಾಚಾರಂಗಳಲ್ಲಿ ನೆಲೆಗೊಂಡ ಸರ್ವಾಂಗ ಲಿಂಗಿ, ಲಿಂಗ ಭೋಗೋಪಭೋಗಿ ಲಿಂಗೈಕ್ಯನು, ಅಖಂಡ ಜಗದಾಕಾರವನ್ನು ಶಿವಸ್ವರೂಪವೆಂದರಿತು. ಎಲ್ಲಾ ಶಿವಮಯವೆಂದಂತ ಭಾವ ಏಕಭಾಜನವೆನಿಸಿರುವುದು.

ಅಂದರೆ ತನಗೂ, ಕಾಣುವ ಚರಾಚರ ಜಗತ್ತಿಗೂ ಮತ್ತೂ ಶಿವನಿಗೂ ಭೇದವಿಲ್ಲೆಂದರಿತು, ಅಭಿನ್ನ ಭಾವದಿಂದ ಸರ್ವತ್ರ ॥ ಏಕತ್ವ ಮನುಪಶ್ಯತಃ॥ ಶಿವನನ್ನೇ ಕಂಡು ಏಕ ಪ್ರಕಾರವಾದ ಭಾವೈಕ್ಯದಿಂದ ಕೂಡಿರುವ ಸ್ಥಿತಿ, ಏಕ ಪ್ರಕಾರವಾದ ಭಾವೈಕ್ಯದಿಂದ ಕೂಡಿರುವ ಸ್ಥಿತಿ, ಎಕ ಭಾಜನ ಸ್ಥಲವೆನಿಸಿದೆ. ಜೀವ, ಜಗತ್ತು, ಜಗದೀಶ್ವರರಲ್ಲಿ ಅದ್ವೈತ ಭಾವನೆಯಿಂದ ಸತತ ಕಾಣುವುದೇನೆಂದರೆ ಶಿವೈಕ್ಯನು ಶಿವಾನು ಗ್ರಹವೆಂಬ ದಿವ್ಯ ಪ್ರಸಾದದಲ್ಲಿ ಐಕ್ಯಭಾವನೆಯಿಂದ ತನ್ಮಯನಾಗಿ ಏಕ ಕೂಟತ್ವದಲ್ಲಿ ವಿರಾಜಿಸುವನು. ವಿಶ್ವಕ್ಕೆ ಶಿವನೇ ಆಧಾರ, ಶಿವನಿಗೆ ವಿಶ್ವ ಅಧೇಯವೆನಿಸಿ, ಪರಸ್ಪರಾನುಭಾವವುಳ್ಳ ಸ್ಥಿತಿ ನಿಜಕ್ಕೂ ಏಕ ಭಾಜನ ಸ್ಥಲವೆನಿಸಿರುತ್ತೆ. ಇಂತಪ್ಪ ಶಿವಭಾವ ಭರಿತ ಸುಜ್ಞಾನ,

ಚಿತ್ಪ್ರಕಾಶಯುತೇ ವಿಶ್ವಂ । ತದ್ಭಿನ್ನಾ ವಸ್ತುನಾಸ್ತಿಃ ॥

ಅಂದರೆ ಚರಾಚರ ಜಗತ್ತನ್ನೆಲ್ಲಾ ಅನವರತ ಪ್ರಕಾಶಗೊಳಿಸುತ್ತ ಅದರ ವಿನಃ ಬೇರೆ ವಸ್ತುವಿಲ್ಲ. ಈ ಮಹದಂಶವನ್ನು ಶೃತಿ ಹೊರಗೆಡಹುತ್ತಾ,

ಪ್ರಜ್ಞಾನಂ ಬ್ರಹ್ಮ, ಸತ್ಯಂ ಜ್ಞಾನಮನಂತಂ ಬ್ರಹ್ಮ ॥

ಎಂದು ಜಗತ್ತಿಗೆ ಬೋಧಿಸಿ, ಮುಮುಕ್ಷುವಾದ ಶಿವೈಕ್ಯನು, ತೀವ್ರವಾದ ಶಿವಜ್ಞಾನಾನು ಸಂಧಾನದಲ್ಲಿ ತಲ್ಲೀನನಾಗಿ ಕೈವಲ್ಯ ಸುಖವನ್ನು ಸದಾ ಚಿತ್ತದಲ್ಲಿ ಅನುಭವಿಸುವ ಆನಂದಾತಿರೇಖ ದಿವ್ಯಸ್ಥಿತಿ ನಿಜಕ್ಕೂ ಏಕಭಾಜನವೆನಿಸಿದೆ.

ಕೈಲಾಸ ಶೃಂಗ ಪತನಾದತಿ ಪುಣ್ಯ ರಮ್ಯೇ । ಭರ್ತಾರ ಮಾಪ್ತು ಮಿಹ ಘೋರ ತಪಃಶ್ಚರಂ ತ್ಯಾಃ। ಲಕ್ಷ್ಮ್ಯಾ ವಿವಾಹ ಮತನೋಃ ಸಹ ಕೇಶವೇನ । ಶ್ರೀ ಕಂಠನಾಥ ಜಗತಾಂ ತವ ಸುಪ್ರಭಾತಂ॥ ತಾತಾಜ್ಞಯಾ ರಚಿತ ಮಾತೃ ವಧಾದ ವಾಪ್ತಂ । ಪಾಪಂ ವಿಲೋಪಯಿತು ಮಾಪ ಮುನೇಸ್ತನೂ ಭೂಃ । ರಾಮಃ ಶಿವಂ ಕರ ವಿದಂತವ ಧಾಮ ದಿವ್ಯಂ । ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥

## ಅಂಗಸ್ಥಲ ೪೪ ॥ ಸಹಭಾಜನ ಸ್ಥಲಂ ॥ (ಪರಿ ೧೪)

ಗುರೋಃ ಶಿವಸ್ಯ ಶಿಷ್ಯಸ್ಯ ಸ್ವಸ್ವರೂಪತಯಾ ಸ್ಮೃತಿಃ । ಸಹ ಭಾಜನ ಮಾಖ್ಯಾತಂ ಸರ್ವ ಗ್ರಾಸಾತ್ಮ ಭಾವತಃ ॥ ಶಿವಂ ವಿಶ್ವಂ ಗುರು ಸಾಕ್ಷಾದ್ಯೋಜಯೇನ್ನಿತ್ಯ ಮಾತ್ಮನಿ । ಏಕತ್ವೇನ ಚಿದಾಕಾರೇ ತದಿದಂ ಸಹ ಭಾಜನಂ ॥ ಅಯಂ ಶಿವೋ ಗುರು ಶ್ಚೈಷ ಜಗದೇ ತಚ್ಚರಾ ಚರಂ । ಅಹಂ ಚೇತಿ ಮತಿರ್ಯಸ್ಯ ನಾಸ್ತ್ಯ ಸೌ ವಿಶ್ವ ಭಾಜಕಃ ॥ ಅಹಂ ಶಿವೋ ಗುರುಶ್ಚಾಹ ಮಹಂ ವಿಶ್ವಂ ಚರಾಚರಂ । ಯಯಾ ವಿಜ್ಞಾಯತೇ ಸಮ್ಯಕ್ ಪೂರ್ಣಾಹಂ ತೇತಿ ಸಾ ಸ್ಮೃತಾ॥ ಚಿದಾಕಾರೇ ಪರಾಕಾಶೇ ಪರ ಮಾನಂದ ಭಾಸ್ವತಿ । ವಿಲೀನ ಚಿತ್ತ ವೃತ್ತೀನಾಂ । ಕಾ ವಾ ವಿಶ್ವಕ್ರಮ ಸ್ಥಿತಿಃ ॥ (ಶ್ಲೋ. ೩೪, ೩೬, ೩೬, ೩೯, ೪೧)

ನಲವತ್ತಾಲ್ಕು ಅಂಗ ಸ್ಥಲಗಳಲ್ಲಿ ಪಿಂಡಸ್ಥಲ ಮೊದಲನೆಯದಾದರೆ, ಸಹಭಾಜನ ಸ್ಥಲ ಕೊನೆಯದು. ಈ ಸ್ಥಲದ ವಿದ್ಯಮಾನ ತನ್ನ ಸ್ವಸ್ವರೂಪ ಸಾಕ್ಷಾತ್ಕಾರದ ಸ್ವಾನುಭೂತಿಯೊಂದಿಗೆ ವಿರಮಿಸುತ್ತೆ. ಈ ಹಂತದಲ್ಲಿ ಗುರು, ಶಿವ, ಶಿಷ್ಯರೆಂಬ ಭಿನ್ನ ಭಾವಕ್ಕೆ ಎಡೆಯಿರುವುದಿಲ್ಲ. ಈ ತ್ರಿಕೂಟಗಳ ಮಧ್ಯೇ ಸಮತಾಭಾವ ಮೂರ್ತಿವತ್ತಾಗಿ ಎದ್ದು ಕಾಣುತ್ತೆ. ಇಂತಪ್ಪ ಮಹೋನ್ನತ ಸ್ಥಿತಿಯನ್ನು ಸಹ ಭಾಜನ ಸ್ಥಲವೆನ್ನಲಾಗಿದೆ.

ಸಾಕ್ಷಾತ್ಪರಶಿವಬ್ರಹ್ಮದಲ್ಲಿ ಮೂರ್ತರೂಪ ಶಿವನನ್ನೂ ಗುರುವನ್ನೂ, ಪ್ರಪಂಚವನ್ನೂ ಏಕರೂಪದಿಂದ ಅನವರತ ಸಂಯೋಜಿಸುವುದೇ ಸಹಭಾಜನ

ಸ್ಥಲವೆನಿಸಿದೆ: ಸಹ ಭಾಜನ ಸ್ಥಲದ ಶಿವಾನುಭೂತಿಯ ಸದ್ಭಾವದಲ್ಲಿ, ನಾನೇ ಶಿವನು, ನಾನೇ ಗುರುವು, ಅಖಿಲ ವಿಶ್ವ ನನ್ನ ಸಹಜ ಸ್ವರೂಪದಲ್ಲಿ ತನ್ಮಯ ವಾಗಿರುವ ಸ್ಥಿತಿಯನ್ನು ಐಕ್ಯ ಸ್ಥಲದ ಶರಣನು ಅಂತರಂಗದಲ್ಲಿ ಕಂಡನುಭವಿಸಿ ರುವ ಉನ್ನತ ಸ್ಥಿತಿಯನ್ನು ಪೂರ್ಣಾಹಂತವೆನಿಸಿದೆ ಅಖಂಡಾ ದ್ವಿತೀಯ ದಿವ್ಯ ಜ್ಞಾನ ಸ್ವರೂಪನೂ, ಪರಮಾನಂದ ತುಂದಿಲ ಹೃದಯ ಸ್ವಾಂತನೂ, ಸ್ವಯಂ ಚಿತ್ಪ್ರಕಾಶ ಸ್ವರೂಪನೂ, ಚಿದಾದಿತ್ಯಮಯನೂ ಆದ ಪರಂ ಜ್ಯೋತಿಯಲ್ಲಿ, ಮನೋವ್ಯಾಪಾರವನ್ನು ಪೂರ್ಣ ವಿಲೀನಗೊಳಿಸಿರುವ ಮಹಾ ಶಿವಯೋಗಿಗೆ, ಬಾಹ್ಯಪ್ರಪಂಚದ ವ್ಯವಹಾರ ಮನೋವೃತ್ತಿಯೆಲ್ಲಿಯದು.

ಇದರ ಸಾರಾಂಶವೇನೆಂದರೆ ನೀರಿನಲ್ಲಿ ಬಿದ್ದ ಉಪ್ಪಿನ ಹಳಿಗಳು ನೋಡು ತ್ತಿದ್ದಂತೆಯೇ ನೀರಾಗುವಂತೆ, ಘಟ್ಟ ತುಪ್ಪ ಬಿಸಿ ತಗುಲಿ ತಿಳಿ ತುಪ್ಪವಾಗು ವಂತೆ ತ್ರಿಗುಣಗಳಿಂದಲೂ ಪೃಥಗ್ಭಾವವನ್ನು ಹೊಂದಿದ ಷಟ್ಸ್ಥಲ ಸಂಪನ್ನನು, ಸಚ್ಚಿದಾನಂದ ನಿತ್ಯ ಪರಿಪೂರ್ಣ ತತ್ವದಲ್ಲಿ ಸಮಾನತಾ ಭಾವದಿಂದ ಸ್ವಸ್ವರೂಪ ವನ್ನು ಸಮಂಜಸವಾಗಿ ವಿಲೀನ ಗೊಳಿಸುವ ಸಮ್ಯಗ್ಭಾವ, ಸಹಭಾಜನವೆನಿಸಿದೆ. ಶಿವಂ ಶಾಂತರ.

ಇಲ್ಲಿಗೆ ಅಂಗಷಟ್ಸ್ಥಲಾಂತರ್ಗತ ಸಿದ್ಧಾಂತಶಿಖಾಮಣಿ ಪ್ರೋಕ್ತ ೪೪ ಅಂಗಸ್ಥಲಗಳ ವಿವರಣೆ ಮಹಾಚಾರ್ಯರ ದಿವ್ಯ ಪ್ರೇರಣೆಯಂತೆ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ.

ಇನ್ನು ಮುಂದೆ, ಲಿಂಗ ಷಟ್ಸ್ಥಲಾಂತರ್ಗತ, ಮಹೋನ್ನವಾದ ಪರಂ ಜ್ಯೋತಿರ್ಮಲಯದ ೫೭ ಲಿಂಗಸ್ಥಲಗಳನ್ನು, ಶ್ರೀ ಜ|| ರೇಣುಕರ ದಿವ್ಯ ಪ್ರೇರಣೆಯಂತೆ ವಿವರಿಸಲಾಗುವುದು.

ಶ್ರೀ ಗುರುವೇ ನಮಃ

ಇಲ್ಲಿಗೆ ೪೪ ಅಂಗಸ್ಥಲಗಳಿಂದ ಕೂಡಿದ ಸಕ್ಷಿಪ್ತ ಕನ್ನಡ ವ್ಯಾಖ್ಯಾನದ

ಪೂರ್ವಾರ್ಧ ಮುಕ್ತಾಯವಾಯಿತು.

---

॥ ಶ್ರೀಃ ॥

ಓಂ ಅಂಬಿಕಾಪತಯೇ ಉಮಾಪತಯೇ ಪಶುಪತಯೇ
ನಮೋ ನಮಃ

ಇನ್ನು ಮುಂದೆ ೫೭ ಲಿಂಗಸ್ಥಲಗಳ ವಿವರಣೆಯೊಂದಿಗೆ
ಶ್ರೀಲಂಕೆಯಲ್ಲಿ ಮೂರು ಕೋಟಿ ಲಿಂಗಾವತಾರದ ಲೀಲೆಯವರೆವಿಗೂ
ಉತ್ತರಾರ್ಧದಲ್ಲಿ ನಿರೂಪಿಸಲಾಗಿರುತ್ತೆ

# ಲಿಂಗ ಷಟ್ಸ್ಥಲಗಳಲ್ಲಿನ
# ೫೭ ಲಿಂಗಸ್ಥಲಗಳ ಸಂಕ್ಷಿಪ್ತ ವಿವರಣೆ

## ಲಿಂಗಸ್ಥಲಾನಿ ೫೭

॥ ಶ್ರೀ ರೇಣುಕ ಉವಾಚ ॥

**ಷಟ್ಸ್ಥಲೋಕ್ತ ಸದಾಚಾರ ಸಂಪನ್ನಸ್ಯ । ಯಥಾ ಕ್ರಮಂ ॥**
**ಲಿಂಗಸ್ಥಲಾನಿ ಕಥ್ಯಂತೇ । ಜೀವನ್ಮುಕ್ತಿ ಪರಾಣಿ ಚ ॥**

ಹೇ ಅಗಸ್ತ್ಯ ಮಹಾಮುನೇ, ಲಿಂಗಸ್ಥಲಾಂತರ್ಗತ ಷಟ್ಸ್ಥಲಗಳನ್ನು ಕುರಿತು ಹೇಳುವೆನು. ಅವರ ಭಾವದಿಂದ ಸ್ವಲ್ಪ ಲಾಲಿಸು ಈಗ ಪ್ರತಿಪಾದಿಸಲಿರುವ ರಮ್ಯ ವಿಷಯಗಳು ಜೀವಾತ್ಮನನ್ನು ಕ್ರಮೇಣ ಲಿಂಗರೂಪಿಯಾಗಿ ಪರಿವರ್ತಿಸುವಂಥಾ ದೇದೀಪ್ಯಮಾನ ದಿವ್ಯಾಮೃತವಿದೆಂದು ತಿಳಿ. ಸದಾಚಾರ ಸಂಪನ್ನನೂ, ಶ್ರೀ ಗುರುಭಕ್ತಿ ಪರಾಯಣನಾದ ಶಿವಶರಣನಿಗೆ ಅನುಕ್ರಮವಾಗಿ ಜೀವನ್ಮುಕ್ತ ಪರವಾದ ೫೭ ಅತ್ಯುನ್ನತವಾದ ಲಿಂಗಸ್ಥಲಗಳ ಪರಂಜ್ಯೋತಿರ್ವಲಯದ ದಿವ್ಯ ತೇಜಸ್ಸನ್ನು ಬೋಧಿಸುವೆನೆಂದರುಹಿದರು. ಶ್ರೀಜಗದ್ಗುರು ರೇಣುಕಶಿವಾಚಾರ್ಯ ಮಹೋದಯರು "ತ್ವಮೇವಾಹಂ । ತತ್ವಮಸಿ ತದೇವಾಹಂ ॥ ತ್ವಂ ತದಸಿ" (Thou art that) ಯೆಂಬ ಆತ್ಮಸಾಕ್ಷಾತ್ಕಾರದ ಸ್ವಾನುಭವವನ್ನು ಅಗಸ್ತ್ಯಮುನಿಚಂದ್ರನಿಗೆ ಮನಗಾಣಿಸಿದ ಶಿವಶಕ್ತಿ ಸಂಪುಟದಿಂದ ತಾನೇ ತಾನಾಗಿ, ಕೋಟಿ ಅನಂತ ಕೋಟಿಸ್ಯುಮಣಿ ತೇಜಃ ಪುಂಜ ಪ್ರಭಾಮಯ ತತ್ವ,

**ಶ್ರೀಮಚ್ಛಾಂಭವ ಭಕ್ತಿಯೋಗ ವಿಲಸನ್ನಿರ್ವಾಣ ನಿತ್ಯೋತ್ಸವಾ ।**
**ಪ್ರೇಮಾನಂದರಸಾಬ್ಧಿ ವರ್ಧನ । ಸದಾಚಾರಕ್ರಿಯಾ ಕೌಶಲಾ ॥**

**ರಾಮೋದ್ಧಾಮ ಗುಣ ಪ್ರಭೂತ । ಮಹದೈಶ್ವರ್ಯಾನುಭೂತಿ ಪ್ರಭಾಧಾಮಂ ।**

**ತತ್ಪರಮಂ ಪದಂ ಗುರುಪದಂ ವಂದೇ ಶಿವಾವಲ್ಲಭಂ ॥**

ಶ್ರೀಗುರು ಸನ್ನಿಧಾನವು ಮಹಾ ನಿತ್ಯೈಶ್ವರ್ಯಾನುಭೂತಿ ಪ್ರಭಾಮಯ ಪರಮೋತ್ಕೃಷ್ಟಧಾಮವೆಂದು ಶಿಷ್ಯನು ತ್ರಿಕರಣಪೂರ್ವಕ ಅರಿತು, ಗುರೂಕ್ತಮಂತ್ರ ಮಾರ್ಗೇಣ ಮುಂದುವರಿದು, ಸ್ವಧರ್ಮ ನಿಷ್ಠಾಗರಿಷ್ಠನಾಗಿ ಸದಾ ರಂಜಿತನಾಗಿರಬೇಕು.

ಅಂಗಸ್ಥಲಾಂತರ್ಗತ 44 ಉಪಸ್ಥಲಗಳ ವೈಭವವನ್ನು ಗುರುಮುಖದಿಂದ ಭಕ್ತ್ಯಾ ಶ್ರವಣ ಮಾಡಿದ ಪ್ರಭಾವದಿಂದಾಗಿ, ಪರಿಶುದ್ಧಾಂತಃಕರಣವುಳ್ಳ ನೀನು ಈಗ ಜಾಜ್ವಲ್ಯಮಾನವಾದ ೫೭ ಲಿಂಗಸ್ಥಲಗಳ ದಿವ್ಯಸ್ವರೂಪಾನುಭವವನ್ನು ಸ್ವಯಂ ಅರ್ಥಮಾಡಿಕೊಳ್ಳಲು ಶಕ್ತನಾಗಿರುವೆ. ಇದರಿಂದಾಗಿ ಈ ಪ್ರಭಾವಲಯದ ಪ್ರಪ್ರಥಮ ಸ್ಥಲ ದೀಕ್ಷಾಗುರುಸ್ಥಲದಿಂದಾರಂಭಿಸಿ, ಜ್ಞಾನಶೂನ್ಯ ಸ್ಥಲಾಂತರ್ಗತ ಐವತ್ತೇಳು ಲಿಂಗಸ್ಥಲಗಳ ವ್ಯಾಖ್ಯಾನವನ್ನು ಶ್ರವಣ ಮಾಡುವ ಭಾಗ್ಯ ನಿನ್ನದಾಗಿದೆ ಮಹಾಮುನೆ.

ಒಂದು ಸಂದರ್ಭದಲ್ಲಿ ಮಾರ್ಜಾಲ ಮುನಿ (ಬೆಕ್ಕು), ಹೇಗೋ ಅದೃಷ್ಟವಶಾತ್, ಕ್ಷೀರಸಾಗರದ ದಡವನ್ನು ಸೇರಿತು. ಹಾಲೆಂದರೆ ಬೆಕ್ಕಿಗೆ ಪರಮಾನಂದವಲ್ಲವೆ. ಕ್ಷೀರಸಾಗರವನ್ನು ಎಂದೂ ಕಾಣದ ಬೆಕ್ಕು, ಹಾಲಿನ ಅಲೆಗಳು ಮೇಲಿಂದ ಮೇಲೆ ದಡವನ್ನು ಅಪ್ಪಳಿಸುತ್ತಿರುವುದನ್ನು ಕಂಡ ಬೆಕ್ಕು ವಿಜೃಂಭಿಸಿ ಮಿಯಾಂ ಎಂದು, ಅಹಹಾ! ಕ್ಷೀರ ಸಾಗರವನ್ನು ಒಂದೇ ಬಾರಿಗೆ ಹೀರಿ ಬಿಡುತ್ತೇನೆಂದು, ತನ್ನ ಪುಟ್ಟ ನಾಲಿಗೆಯನ್ನು ಚಾಚಿ ಹತ್ತಾರು ಸಾರಿ ಹಾಲನ್ನು ನೆಕ್ಕಿ ಕುಡಿಯುವಷ್ಟರಲ್ಲಿ ಬೆಕ್ಕಿನ ಪುಟ್ಟ ಹೊಟ್ಟೆ ತುಂಬಿಹೋಯಿತು ಇದರಂತೆ ೫೭ ಘನಲಿಂಗಸ್ಥಲಗಳ ವಿದ್ಯಮಾನದ ವೈಖರಿ, ಅಮೃತಸಿಂಧುವಿನಂತೆ ಝಗಝಗಿಸುತ್ತಿರಲು, ಅಜ್ಞನಾದ ನಾನು ಐವತ್ತೇಳು ಜ್ಯೋತಿರ್ಲಿಂಗಗಳ ದಿವ್ಯ ಪ್ರಭಾವಳಿಯ ವಿವರಿಸಲು ಯಂತು ಸಾಧ್ಯವಾದೀತು ಆದರೂ ಗುರುಭಕ್ತಿ ವಿಶೇಷದಿಂದ ಶ್ರೀ ರೇಣುಕರ ಪ್ರೇರಣೆಯಂತೆ ರಚಿಸಿ, ಸ್ಮರಿಸಿ, ಆನಂದಿಸಲು ಸದಾವಕಾಶವನ್ನು ಶ್ರೀ ಜ॥ ಪಂಚಾಚಾರ್ಯರು ನನಗೆ ದೊರಗಿಸಿಕೊಟ್ಟಿದ್ದರಿಂದ ನನ್ನೀ ಜನ್ಮ ಸಾರ್ಥಕವಾಯಿತೆಂದು ಆನಂದಿಸುತ್ತೇನೆ.

## ಲಿಂಗಸ್ಥಲ ೧

## ॥ ದೀಕ್ಷಾಗುರುಸ್ಥಲ ॥ (ಪರಿ. ೧೫)

**ದೀಯತೇ ಪರಮಂ ಜ್ಞಾನಂ । ಕ್ಷೀಯತೇ ಪಾಶಬಂಧನಂ ।**
**ಯಯಾ ದೀಕ್ಷೇತಿ ಸಾ ತಸ್ಯಾಂ ಗುರುರ್ದೀಕ್ಷಾ ಗುರುಃ ಸ್ಮೃತಃ ॥**

**ಗುಣಾತೀತಂ ಗುವರ್ಣಂ ಚ । ರೂಪಾತೀತಂ ರುವರ್ಣ ಕಂ ।**
**ಗುಣಾತೀತಮ ರೂಪಂ ಚ ಯೋ ದದ್ಯಾತ್ ಸ ಗುರುಸ್ಮೃತಃ ॥**

**ಆಚಿನೋತಿ ಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।**
**ಸ್ವಯಮಾಚರತೇ ಯಸ್ತು ಸ ಆಚಾರ್ಯ ಇತಿ ಸ್ಮೃತಃ ॥**

(ಶ್ಲೋ. ೭, ೮, ೯)

ಗುರುಶಬ್ದ ಗುರುತರವಾದುದು. **"ಮಹತೋ ಮಹೀಯಾನ್"** ಎಂದು ಸ್ತುತ್ಯವಿರುತ್ತೆ.

**ಗುಕಾರಶ್ಚಾಂಧಕಾರಸ್ತು ರುಕಾರ । ಸ್ತನ್ನಿರೋಧಕೃತ್ ॥**
**ಅಂಧಕಾರ ನಿರೋಧತ್ವಾತ್ । ಗುರುರಿತ್ಯಭಿಧೀಯತೇ ॥**

ಶಿಷ್ಯನ ಅಜ್ಞಾನಾಂಧಕಾರವನ್ನು ಸದ್ಬೋಧೆಯಿಂದ ಹೋಗಲಾಡಿಸಿ, ಸುಜ್ಞಾನವೆಂಬ ಬೆಳಕನ್ನು ಅವನ ಹೃನ್ಮಂದಿರದಲ್ಲಿ ಪ್ರಕಾಶಿಸುವಂತೆ ಅನುಗ್ರಹಿಸುವಾತ ಗುರು, ದೀಕ್ಷಾ ಗುರುವೆನಿಸಿಹನು. **"ಗುಣಾತೀತ ರೂಪಾತೀತ ಶಿವಂಕರ ॥"** ಎಂದೆನಿಸಿದ ಮಹಾಪುರುಷ ಗುರುವೆಂದು ಸ್ತುತ್ಯನೂ ಪೂಜ್ಯನೂ ಆಗಿರುವನು. **"ತಸ್ಮೈ ಶ್ರೀಗುರುವೇ ನಮಃ ॥"**

ಶಿಷ್ಯೋದ್ಧಾರಾರ್ಥ ಶ್ರೀಗುರು ತಾನೇ ದೀಕ್ಷಾಗುರು, ಶಿಕ್ಷಾಗುರು ಮತ್ತು ಮೋಕ್ಷಗುರುವೆಂದು ೩ ತೆರನಾಗಿ ರಾರಾಜಿಸಿಹನು. **"ದೀಯತೇ ಪರಮಂಜ್ಞಾನಂ ॥"** ದೇಹೇಂದ್ರಿಯಂಗಳು ನಾನಲ್ಲ. ಹಸಿವು ಬಾಯಾರಿಕೆ ಪ್ರಾಣಧರ್ಮ. ಶೋಕ ಮೋಹಾದಿಗಳು ಮನೋಧರ್ಮ. ಜನನಮರಣಾದಿ

ಗಳು ದೇಹಧರ್ಮ. ಇವು ಯಾವೂ ನನಗೆ ಸಂಬಂಧಿಸಿಲ್ಲ. "ನಾನು" ಎಂಬ ಪರವಸ್ತು ಬುದ್ಧಿತತ್ವಕ್ಕೂ ಅತೀತವಾದುದು. **"ಪ್ರಕೃತೇಃ ಪರಃ"** ಪ್ರಕೃತಿ ತತ್ವಕ್ಕೆ ಸಂಬಂಧವಿಲ್ಲದೆ ಸ್ವಯಮೇ ವಿರಾಜಿತವಾಗಿದೆ. ಪ್ರಕೃತಿಗೆ ವಿಲಕ್ಷಣ ವಾಗಿ, ಪರಾತ್ಪರ ಪರಶಿವ ಬ್ರಹ್ಮವೇ ತಾನೆಂಬ ಅರಿವನ್ನುಂಟುಮಾಡಿಕೊಡುವ ದೇಶಿಕ, ದೀಕ್ಷಾಗುರುವೆನಿಸಿಹನು. **"ಅಹಂ ಬ್ರಹ್ಮಾಸ್ಮಿ-ಅಯಮಾತ್ಮಾ ಬ್ರಹ್ಮಾ ಶಿವೋಹಂ ತತ್ವಮಸಿ ॥"** ಇತ್ಯಾದಿ ವೇದೋಕ್ತ ಶಿರೋವಾಕ್ಯಗಳು ನಾನು ದೇಹವಲ್ಲ. ನಾನು ಶಿವಸ್ವರೂಪಿಯೆಂದು ಅಖಂಡವಾಗಿ ಅನಾದಿ ಕಾಲ ದಿಂದ ಬೋಧಿಸುತ್ತಲಿವೆ. ನಾನು ಕೇವಲ ಶಿವಸ್ವರೂಪಿ ಎಂದು ಚಿಂತಿಸುತ್ತಾ ಬಂದಲ್ಲಿ **"ಕ್ಷೀಯಂತೇ ಪಾಶಬಂಧನಂ ॥"** ಬಹು ಪೂರ್ವಕೃತ ಘೋರ ಪಾತಕರಾಶಿ ನಶಿಸಿ, ಅಂಗನು ಪರಿಶುದ್ಧಾಂತಃಕರಣದಿಂದ ಶುದ್ಧ ಸ್ಫಟಿಕದಂಥಾ ತನ್ನ ಸ್ವಸ್ವರೂಪ ದರ್ಶನದಿಂದ ಆನಂದಿಸಿ ರಂಜಿತನಾಗಿರ್ಪನು. ಶಿವದೀಕ್ಷೆಯ ಫಲವಿದು. ಇಂತಪ್ಪ ಫಲವನ್ನು ಉಣಬಡಿಸುವವನು ನಿಜಕ್ಕೂ ದೀಕ್ಷಾಗುರು ವೆನಿಸಿಹನು.

**ರಮ್ಯಾಶ್ರಮಸ್ಥಲ ವಿನಿರ್ಮಿತಿ, ಬದ್ಧ ಶಕ್ತೇಃ ।**
**ಶಿಷ್ಯಸ್ಯ ತೀಷ್ಣ ಪರಶೋರ್ಹತಿ ಮಪ್ಯ ಸಹ್ಯಾಂ ।**
**ಕಾಂತಾಂ ಕಲಾನಿಧಿಕಲಾಮಿವ ಸಂಭಿಭರ್ಷಿ ।**
**ಶ್ರೀ ಕಂಠನಾಥ ಜಗತಾಂ ತವ ಸುಪ್ರಭಾತಂ ॥**

**ಕೃತ್ವಾ ತಪಃ ಸ್ವಯುವತೀ ದುರಿ ತೋಪಶಾಂತ್ಯೈಃ ।**
**ಶ್ರೀ ಗೌತಮೋತ್ರ ಸಮ ವಾಪ್ಯ ತವ ಪ್ರಸಾದಂ ।**
**ಮೀನೇ ಮಘಾಸು ಹಿ ರಥೋತ್ಸವ ಮಾತತಾನ ।**
**ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥**

---

## ಲಿಂಗಸ್ಥಲ ೨ ॥ ಶಿಕ್ಷಾಗುರು ಸ್ಥಲಂ ॥ (ಪರಿ. ೧೫)

**ದೀಕ್ಷಾಗುರು ರಸೌ ಶಿಕ್ಷಾಹೇತುಃ । ಶಿಷ್ಯಸ್ಯ ಬೋಧಕಃ ।**
**ಪ್ರಶ್ನೋತ್ತರ ಪ್ರವಕ್ತಾ ಚ ಶಿಕ್ಷಾ ಗುರುರಿತೀರ್ಯತೇ ॥**

**ಬೋಧಕೋಯಂ ಸಮಾಖ್ಯಾತೋ । ಬೋಧ್ಯಮೋ ತದಿತಿ ಸ್ಫುಟಂ ।**
**ಶಿಷ್ಯೋ ನಿಯುಜ್ಯತೇ ಯೇನ ಸ ಶಿಕ್ಷಾ ಗುರು ರುಚ್ಯತೇ ॥**

**ದದಾತಿ ಯಃ ಪತಿಜ್ಞಾನಂ ಜಗನ್ಮಾಯಾನಿವರ್ತಕಂ ।**
**ಅದ್ವೈತವಾಸನೋಪಾಯಂ । ತಮಾಚಾಯಃ ವರಂ ವಿದುಃ ॥**

**ಶಿಷ್ಯಾಣಾಂ ಹೃದಯಾಲೇಖ್ಯಂ । ಪ್ರದ್ಯೋತ ಯತಿ ಯಃ ಸ್ವಯಂ ।**
**ಜ್ಞಾನದೀಪಿಕಯಾ ತೇನ ಗುರುಣಾ ಕಃ ಸಮೋ ಭವೇತ್ ॥**

(ಶ್ಲೋ. ೧೨, ೧೩, ೧೫, ೧೯).

ಕರುಣಾರಸಪೂರಿತನಾದ ದೀಕ್ಷಾಗುರುವೇ ಶಿಷ್ಯರ ಉದ್ಧಾರಾರ್ಥ ಶಿಕ್ಷಾ ಗುರುವೆನಿಸಿ ನಿತ್ಯಾನಿತ್ಯ ವಸ್ತುಗಳ ಸ್ಥಿತಿಯನ್ನು ಸಮಂಜಸವಾಗಿ ಬೋಧಿಸಿ, ಅವರ ಪ್ರಶ್ನಾವಳಿಗೆ ಸಮರ್ಪಕ ಉತ್ತರವಿತ್ತು ಎಲ್ಲಾ ಸಂಶಯಗಳನ್ನು ನೀಗಿಸುವ ಜ್ಞಾನನಿಧಿ ನಿಜಕ್ಕೂ ಶಿಕ್ಷಾಗುರುವೆನಿಸಿಹನು. ಶಿವಾದ್ವೈತ ಸಿದ್ಧಾಂತದ ಅಂಗಭೂತಗಳೆನಿಸಿದ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ಸಾರವನ್ನು ಶಿಷ್ಯನಿಗೆ ಮನಗಾಣಿಸುವಾತ ಶಿಕ್ಷಾಗರುವೆನಿಸಿಹನು. ಗುರು ಉಪದೇಶಿಸಿದ ನಿಗಮಾಗಮಗಳ ತಿರುಳು ಬೋಧ್ಯವೆನಿಸಿಹುದು. ಯಾವ ಗುರು ಸೇವೆ ಸಲ್ಲಿಸುತ್ತಾ, ಸರ್ವ ವಿದ್ಯಾಪಾರಂಗತನಾದ ಶಿಷ್ಯ ಆ ಗುರುವಿನ ಆಜ್ಞಾನು ಸಾರ ನಡೆದು ಶುಶ್ರೂಷೆಗೈಯ್ಯುತ್ತಾ ಭಕ್ತಿಯಿಂ, ವರ್ತಿಸುವನೋ ಆ ಗುರುವನ್ನು ಆಚಾರ್ಯನೆಂಬುವರು ಗುರುವು ಶಿಷ್ಯನಿಗೆ ಮಾಯಾ ಪ್ರಪಂಚದ ದುಃಖಮಯ ಅಸ್ಥಿರತೆಯನ್ನು ವಿವರಿಸುತ್ತಾ,

**ತದ್ಯತೇಹ ಕರ್ಮ ಚಿತೋ ಲೋಕಃ ಕ್ಷೀಯತೇ ।**
**ಏವಮೇವಾಮುತ್ರ ಪುಣ್ಯ ಚಿತೋ ಲೋಕಃ ಕ್ಷೀಯತೇ ॥**

ಅಂದರೆ, ಕರ್ತಾರನ ಕಮ್ಮಟವಾದೀ ಕರ್ಮಭೂಮಿ ಎಂತು ನಶ್ವರವೋ ಇದರಂತೆ ಕಾಲಭೇದಕ್ಕನುಗುಣವಾಗಿ, ಸ್ವರ್ಗಾದಿ ಲೋಕಗಳು ನಶ್ವರವಿರುವುವು ಎಂದರುಹಿ ಚಿತ್ತದ ಭ್ರಾಂತಿಯನ್ನು ನೀಗಿಸುವ ಮಹಾಪುರುಷ ಆಚಾರ್ಯ ನೆನಿಸಿಹನು. ಭವಭೇದ ಕಲ್ಪನೆಗೆ ಕಾರಣವಾದ ಪೂರ್ವ ಪಕ್ಷವ ಪರಿಹರಿಸಿ, ಷಟ್ಸ್ಥಲ ಸಿದ್ಧಾಂತವ ಬೋಧಿಸಿ ರಕ್ಷಿಸುವ ಗುರುವೇ ಶಿಕ್ಷಾ ಗುರು. ಪರಮ ಶಿಷ್ಯನ ಚಿತ್ತವೆಂಬ (ಹೃದಯುವೆಂಬ) ಭಿತ್ತಿಯ ಮೇಲೆ, ಸಚ್ಚಿದಾನಂದಮಯ

ಪರಶಿವನ ಚಿತ್ತವನ್ನು, ಚಿದ್ರೂಪ ದೀಪದಿಂದ ಪ್ರಕಾಶಿತವಾಗಿ ಕಾಣಿಸುವ ಚಿದ್ಗುರುವಿಂಗೆ ಸಮಾನರು ಬೇರಿಲ್ಲ. ಕ್ರಿಯ ಜ್ಞಾನಂಗಳ, ಸತ್ಯ ಸದಾ ಚಾರಂಗಳ, ಭಕ್ತಿ ಶಕ್ತಿಗಳ ಮಹತ್ವವನ್ನು ಶೃತಿಗನುಗುಣವಾಗಿ ಪರಮ ಆದರದಿಂದ ಬೋಧಿಸುವ ಗುರುರಾಯ ಶಿಕ್ಷಾಗುರುವೆನಿಸಿದ್ದಾರೆ.

## ಲಿಂಗಸ್ಥಲ ೩ || ಜ್ಞಾನ ಗುರುಸ್ಥಲಂ || (ಪರಿ. ೧೫)

**ಪಾರ್ಶ್ವಸ್ಥಂ ತಿಮಿರಂ ಹಂತಿ ಪ್ರದೀಪೋ ಮಣಿ ನಿರ್ಮಿತಃ।**
**ಸರ್ವಗಾಮಿ ತಮೋ ಹಂತಿ । ಬೋಧದೀಪೋ ನಿರಂಕುಶಃ ॥**

**ಬಹಿಸ್ತಿಮಿರ ವಿಚ್ಛೇತ್ತಾದೀ ಭಾನುರೇಷ ಪ್ರಕೀರ್ತಿತಃ ।**
**ಬಹಿರಂತಸ್ತ ಮಶ್ಚೇದೀ ವಿಭುರ್ದೇಶಿಕ ಭಾಸ್ಕರಃ ॥**

**ಶಿವ ವೇಧಕರೇ ಜ್ಞಾನೇ ದತ್ತೇ ಯೇನ ಸುನಿರ್ಮಲೇ ।**
**ಜೀವನ್ಮುಕ್ತೋ ಭವೇಚ್ಛಿಷ್ಯಸ್ಸ ಗುರುಜ್ಞಾನ ಸಾಗರಃ ॥**

(ಶ್ಲೋ ೨೪, ೨೭, ೨೯)

ಕಳಂಕ. ರಹಿತ ನಿತ್ಯ ಸತ್ಯ ಸುಂದರ ಜ್ಞಾನ ಚಂದ್ರ ನೆನಿಸಿದ್ದಾನೆ ಶ್ರೀ ಜ್ಞಾನ ಗುರು. ಶಿಷ್ಯಕೋಟಿಯ ಮನೋ ಸಂಶಯ ಹರಿಸಿ ಅವರಿಗೆ ತನ್ನಾತ್ಮ ಜ್ಞಾನವನ್ನು ಅನುಗ್ರಹಿಸುವಾತ ಗುರುವೆನಿಸಿದ್ದಾನೆ. ರತ್ನಮಯ ದೀಪವನ್ನು ಎತ್ತರದ ಸ್ಥಳದಲ್ಲಿರಿಸಿದಾಗ, ಅದರ ಪ್ರಕಾಶ ಸುತ್ತಲೂ ಸ್ವಲ್ಪ ದೂರದವರವಿಗೆ ಹರಡಬಲ್ಲದು ಅಷ್ಟೆ. ಶ್ರೀ ಗುರುವಿನಿಂದ ಬೋಧಿತವಾದ ಸುಜ್ಞಾನವೆಂಬ ದೀಪ "ಅಂತ ರ್ಜ್ಯೋತಿ,"

**ಬಹಿರಂತಸ್ತಮಶ್ಚೇದಿ । ವಿಭುರ್ದೇಶಿಕ ಭಾಸ್ಕರಃ ॥**

ಅಂದರೆ, ಚಿದಾನಂದ ನಿತ್ಯ ಸದೃಶನಾದ ಪ್ರಭುವಿನ ಜ್ಞಾನಾಮೃತ ಬೋಧೆ ಸ್ವಯಂ ಜ್ಯೋತಿಯು, ಒಳ ಹೊರಗೆಲ್ಲಾ ಸದಾ ಏಕ ಪ್ರಕಾರವಾಗಿ ಬೆಳಸಿ ಬೆಳಗಿನಿಂದ ದೇದೀಪ್ಯಮಾನವಾಗಿ ಬೆಳಗಿಸಿ, ಶಿಷ್ಯನ ಅಜ್ಞಾನಾಂಧಕಾರವನ್ನು, ಮಲತ್ರಯಗಳನ್ನೂ ಪೂರ್ಣ ನಾಶಗೊಳಿಸುವುದು. ಜಗವ ಬೆಳಗುವ ಸೂರ್ಯನು ಕತ್ತಲನ್ನು ಹೋಗಲಾಡಿಸಿದರೂ, ಸೂರ್ಯಾಸ್ತಮಾನವಾದೊಡನೆ

ಕತ್ತಲು ಜಗವ ಪುನಃ ಆವರಿಸುವುದು. ಇದರಂತಲ್ಲದೆ ಶ್ರೀ ಗುರುವೆಂಬ ಜ್ಞಾನ ಭಾಸ್ಕರನು ಬಾಹ್ಯಾಭ್ಯಂತರಗಳನ್ನು ಆವರಿಸಿರುವ ಅಜ್ಞಾನವೆಂಬ ಕತ್ತಲೆಯನ್ನು ಶಿಷ್ಯನ ಹೃದಯದಲ್ಲಿ ಅನಾದಿ ಕಾಲದಿಂದ ಆವರಿಸಿರುವ ಅಜ್ಞಾನ ಗ್ರಂಥಿಗಳನ್ನೂ ಪೂರ್ಣನಾಶಗೊಳಿಸಿ ಆ ದೋಷ ತಲೆಯೆತ್ತದಂತೆ ಮಾಡುವನು. ಅಷ್ಟೇ ಅಲ್ಲದೆ ಪರುಷ ಸೋಂಕಿದ ಕಬ್ಬಿಣ ಬಂಗಾರವಾಗುವಂತೆ ಶ್ರೀ ಜ್ಞಾನ ಗುರು ಶಿಷ್ಯನನ್ನು, ಕೃಪೆಯಾ ಹಸ್ತ ಮಸ್ತಕ, ಕಟಾಕ್ಷ ದೀಕ್ಷೆಯಿಂದ ತನ್ನಂತೆಯೇ ಅಮೃತ ಸ್ವರೂಪಿಯನ್ನಾಗಿಸುವನು. ಅಭಯ ಹಸ್ತನಾದ ಶ್ರೀ ಜ್ಞಾನ ಗುರು ಮೋಕ್ಷ ಗುರುವೂ ಅಹುದು. **ಮೋಕ್ಷಮೂಲಂ ಗುರೋಃ ಕೃಪಾ॥**

## ಲಿಂಗಸ್ಥಲ ೪ ॥ ಕ್ರಿಯಾಲಿಂಗ ಸ್ಥಲಂ॥ (ಪರಿ ೧೫)

**ಗುರೋರ್ವಿಜ್ಞಾನ ಯೋಗೇನ ಕ್ರಿಯಾ ಯತ್ರ ವಿಲೀಯತೇ ।**
**ತತ್ಕ್ರಿಯಾಲಿಂಗ ಮಾಖ್ಯಾತಂ ಸರ್ವೈರಾಗ ಮ ಪಾರಗೈಃ ॥**

**ಪರಾನಂದಂ ಚಿದಾಕಾರಂ ಪರಬ್ರಹ್ಮೈವ ಕೇವಲಂ ।**
**ಲಿಂಗಂ ಸದ್ರೂಪ ತಾಪನ್ನಂ । ಲಕ್ಷ್ಯತೇ ವಿಶ್ವ ಸಿದ್ಧಯೇ ॥**

**ಲಿಂಗ ಮೇವ ಪರಂ ಜ್ಯೋತಿರ್ಭವತಿ ಬ್ರಹ್ಮ ಕೇವಲಂ ।**
**ತಸ್ಮಾತ್ತತ್ಪೂಜನಾ ದೇವ ಸರ್ವ ಕರ್ಮ ಫಲೋದಯಃ ॥**

**ಯಜ್ಞಾದಯಃ ಕ್ರಿಯಾಃ ಸರ್ವಾ ಲಿಂಗ ಪೂಜಾಂಶ ಸಮ್ಮಿತಾಃ।**
**ಇತಿ ಯತ್ಪೂಜ್ಯತೇ ಸಿದ್ಧೈಸ್ತತ್ಕ್ರಿಯಾಲಿಂಗ ಮುಚ್ಯತೇ ॥**

**ಕಿಂ ಯಜ್ಞೈರಗ್ನಿ ಹೋತ್ರಾದ್ಯೈಃ ಕಿಂ ತಪೋಭಿಶ್ಚ ದುಶ್ಚರೈಃ।**
**ಲಿಂಗಾರ್ಚನರತಿರ್ಯ॥ ಸ್ಯ ಸ ಸಿದ್ಧಃ ಸರ್ವ ಕರ್ಮಸು ॥**

**ಬ್ರಹ್ಮವಿಷ್ಣ್ವಾದಯಃ ಸರ್ವೇ ವಿಭುದಾ ಲಿಂಗಮಾಶ್ರಿತಾಃ ।**
**ಸಿದ್ಧಾಃ ಸ್ವ ಸ್ವಪದೇಭಾಂತಿ । ಜಗತ್ತಂತ್ರಾಧಿಕಾರಿಣಃ ॥**

**(ಶ್ಲೋ ೩೦, ೩೧, ೩೨, ೩೪, ೩೫, ೩೬)**

ಸರ್ವಾನಿಷ್ಟ ಪರಿಹಾರಕವಾದ ಇಷ್ಟಲಿಂಗ ಕ್ರಿಯಾ ಶಕ್ತಿ ಯಿಂದೊಡಗೂಡಿದೆ. ಶ್ರೀ ಗುರುವಿನ ಪರಮಾನುಗ್ರಹದಿಂದ ಪ್ರಾಪ್ತವಾದ ಶಿವಜ್ಞಾನ, ಕ್ರಿಯಾ ಯೋಗ ಸಿದ್ಧಿಗೆ ಹೇತುವೆನಿಸಿದೆ ತನ್ನ ಸ್ವಸ್ವರೂಪದರ್ಶನಕ್ಕೆ ಶಿವಜ್ಞಾನಾನಂದಕ್ಕೆ ಕಾರಣೀಭೂತವಾದ ಯೆಲ್ಲಾ ಸತ್ಕ್ರಿಯೆಗಳನೊಳಗೊಂಡಿರುವ ಪರವಸ್ತು ಕ್ರಿಯಾಲಿಂಗ ವೆನಿಸಿದೆ. ಕರಸ್ಥಲದ ಲಿಂಗವು ಕಾಯಕ್ಕೆ ವೇಧಿಸಿದಲ್ಲಿ ಕಾಯಲಿಂಗವಾಗಿತ್ತು. ಎಂಬಂತೆ ಪರಶಿವನ ಸೊತ್ತಾದ ದೇಹೇಂದ್ರಿಯಾದಿಗಳು ಪರವಸ್ತುವಿನಲ್ಲಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣವಾಗಬೇಕು. ಇಂತಪ್ಪ ಶರಣನು ಆಚರಿಸುವ ಸದ್ಭಕ್ತಿ, ಕ್ರಿಯಾಲಿಂಗವೆನಿಸಿದ, ಇಷ್ಟಲಿಂಗಕ್ಕೆ ಅಪ್ಯಾಯನಕರವೆನಿಸಿದೆ. ಇಂತಪ್ಪ ಪೂಜೆ ಆತ್ಮಪೂಜೆ ಯೆನಿಸಿದೆ. ಇದು ನಿಜೇಷ್ಟ ಲಿಂಗ ಪೂಜೆಯೂ ಹೌದು. ನಮ್ಮ ಅಂಗದ ಮೇಲಿನ ಲಿಂಗ ಶ್ರೀ ಗುರುದತ್ತವಾದ ಇಷ್ಟಲಿಂಗ ಕ್ರಿಯಾ ಜ್ಞಾನ ಇಚ್ಛಾ ಶಕ್ತಿಯುತವಾಗಿದ್ದು ಚಿಚ್ಛಕ್ತಿಯಿಂದ ಪೂರಕವಾಗಿದೆ. ಚಿಚ್ಛಕ್ತಿ ಪ್ರಣವಮಯ ಓಂಕಾರ ಮಹಾಲಿಂಗವೆಂದರಿಯಬೇಕು. ಶಿವ ಮಹಾ ಪಂಚಾಕ್ಷರ ಮಂತ್ರದ, ನಕಾರ ಬೀಜಾಕ್ಷರ ಆಚಾರ ಲಿಂಗ ಕ್ರಿಯಾ ಶಕ್ತಿ ಸ್ವರೂಪ. ಮಕಾರ ಗುರುಲಿಂಗ ಜ್ಞಾನಶಕ್ತಿ ಸ್ವರೂಪವಾಗಿಯೆಲ್ಲಾ ಕ್ರಿಯೆಗಳನ್ನೊಳಗೊಂಡ ಅಂಗದ ಮೇಲಿನ ಲಿಂಗವೇ ಇಷ್ಟಲಿಂಗ ಮತ್ತಿದೇ ಕ್ರಿಯಾ ಲಿಂಗವೆನಿಸಿದೆ. ಸರ್ವಾಗಮವೇತ್ತರ ಅಭಿಮತವೂ ಇದೇ ಆಗಿರುತ್ತೆ, ತೆರಹಿಲ್ಲದ ಕುರುಹಿಲ್ಲದ ಪರಶಿವಬ್ರಹ್ಮ ತಾನೇ ತಾನಾಗಿ ಶಿವಾನಂದ ರೂಪದಲ್ಲಿ ಪ್ರಕಾಶಿಸಿ ಲೋಕ ಕಲ್ಯಾಣಾರ್ಥ ಸದ್ರೂಪವ ತಳೆದು ಕ್ರಿಯಾಲಿಂಗವಾಗಿಹುದೆಂದು ಭಗವತ್ಪಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಸ್ಪಷ್ಟಪಡಿಸಿರುವರು. ಆದ್ದರಿಂದ ಕ್ರಿಯಾಲಿಂಗ ಪರಂ ಜ್ಯೋತಿ ಸ್ವರೂಪವಹುದು. ಭಕ್ತೋದ್ಧಾರಾರ್ಥ ಸದ್ರೂಪವಾಗಿ ಅರ್ಚನ ಮುಖದಿಂದ ಸಕಲಾಭೀಷ್ಟಗಳು ಫಲಿಸುವವು, ವಿವಿಧ ಯಜ್ಞಾದಿ ಕ್ರಿಯೆಗಳು ಲಿಂಗಪೂಜೆಯ ಶತಾಂಶಕ್ಕೆ ಸರಿತೂಗಲಾರವು, ಯಜ್ಞಾದಿಗಳು ಪ್ರಾಕೃತ ಕರ್ಮಗಳು. ಬಹುಶ್ರಮ ಅಲ್ಪ ಫಲವೀಯುವ ನಶ್ವರ ಕರ್ಮಗಳು. ಈ ಕಾರಣದಿಂದ ಸಿದ್ಧರೂ ಶಿವಶರಣರೂ ನಿತ್ಯ ಅರ್ಚಿಸುವ ಲಿಂಗ ಕ್ರಿಯಾಲಿಂಗ ಅಹುದು. ಅಂದ ಬಳಿಕ ಅಲ್ಪ ಫಲದಾಯಕವಾದ ಅಗ್ನಿ ಹೋತ್ರಾದಿ ಕರ್ಮಗಳಿಂದೇನು ಫಲ. ಯಾವಾತ ತಾನು ಜನಿಸುತ್ತಲೇ ಶ್ರೀ ಗುರುವಿನ ಹಸ್ತದಿಂದ

ಧರಿಸಲ್ಪಟ್ಟ ಇಷ್ಟ ಲಿಂಗದಲ್ಲಿ ಪರಮ ಭಕ್ತಿ ವಿಶೇಷದಿಂದ ಪೂಜಿಸಿ ಶರಣಾಗತ ನಾದರೆ ಸರ್ವ ಸಿದ್ಧಿಯುಂಟಾಗುವುದು ಈ ರಹಸ್ಯವನ್ನು ಮನಗಂಡ ಹರಿ ಬ್ರಹ್ಮಾದಿ ದೇವತೆಗಳು ಮನಗಂಡು, ಮಹಾಗುರು ಶ್ರೀ ರೇಣುಕಾಚಾರ್ಯ ರಿಂದ ಅನುಗ್ರಹೀತವಾದ ಮಹಾಲಿಂಗಾರ್ಚನೆಯಿಂದ, ತಮ್ಮ ತಮ್ಮ ಸ್ಥಾನ ಗಳಲ್ಲಿ ಅಧಿಕೃತವಾಗಿದ್ದು ಲೋಕ ಸಂರಕ್ಷಣ ಕಾರ್ಯಗಳನ್ನು ಯಶಸ್ವಿಯಾಗಿ ನಿರಂತರ ನಿರ್ವಹಿಸುತ್ತಲಿರುವರು. ಕರ್ತಾರನ ಕಮ್ಮಟವಾದೀ ಕರ್ಮಭೂಮಿ ಯಲ್ಲಿ ಈಗಲೇ ನಾವು ಕ್ರಿಯಾ ವಂತರಾಗಿ, ಶಿವ ಪ್ರೀತ್ಯರ್ಥ ನಿತ್ಯ ಸ್ವಧರ್ಮಾನುಷ್ಠಾನ ಪರರಾಗಬೇಕು.

ಸ್ವಲ್ಪ ಮಪ್ಯಸ್ಯ ಧರ್ಮಸ್ಯ| ತ್ರಾಯತೇ ಮಹತೋ ಭಯಾತ್ ||

ಶ್ರೀ ಕೌಂಡಿನೀ ಕಪಿಲಯೋರಿಹ ಸಂಘ ತೀರ್ಥೇ ।
ಸ್ನಾತಾ ನಿರಸ್ತ ಕಲಿ ಕಲ್ಮಷ ಶುದ್ಧ ಸತ್ವಾಃ ।
ತ್ವಾಂ ವೀಕ್ಷ್ಯಯಾಂತಿ ಪರಮಾಂ ಗತಿಮತ್ರ ಧನ್ಯಾಃ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥

ಉನ್ಮೋಚ್ಯ ರಾಜಕರಿಣಂ ನ ಯಾನೋಪತಾಪಾತ್ ।
ಪ್ರಾಚೀಕಟಃ ಶ್ರುತಿ ಗಿರಿಂ ಭೆಷಜಾಂ ಭಿಷರ್ ತ್ವಮ್ ।
ಷಟ್ಕಾಲ ಪೂಜಿತ ಮಹೀಸುರ ಭೂಪಸೇವ್ಯಃ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥

---

ಲಿಂಗಸ್ಥಲ ೫] ಭಾವಲಿಂಗಸ್ಥಲಂ (ಪರಿ. ೧೫)

ಕ್ರಿಯಾಯಥಾಲಯಂ ಪ್ರಾಪ್ತಾ ತಥಾ ಭಾವೋಪಿ ಲೀಯತೇ ।
ಯತ್ರ ತದ್ದೇಶಿಕೈ ರುಕ್ತಂ ಭಾವಲಿಂಗಮಿತಿ ಸ್ಫುಟಂ ॥

ಭಾವೇನ ಗೃಹ್ಯತೇ ದೇವೋ ಭಗವಾನ್ ಪರಮಃ ಶಿವಃ ।
ಕಿಂ ತೇನ ಕ್ರಿಯತೇ ತಸ್ಯ ನಿತ್ಯ ಪೂರ್ಣೋ ಹಿ ಸ ಸ್ಮೃತಃ ॥

ವಿಹಾಯ ಬಾಹ್ಯಲಿಂಗಾನಿ ಚಿಲ್ಲಿಂಗಂ ಮನಸಿಸ್ಮರನ್ ।
ಪೂಜಯೇದ್ಭಾವಪುಷ್ಪೈರ್ಯೋ ಭಾವಲಿಂಗೀತಿ ಕಥ್ಯತೇ ॥

**ಮೂಲಾಧಾರೇಥವಾ ಚಿತ್ತೇ ಭ್ರೂಮಧ್ಯೇ ವಾ ಸುನಿರ್ಮಲಂ।**
**ದೀಪಾಕಾರಂ ಯಜನ್ ಲಿಂಗಂ ಭಾವದ್ರವ್ಯೈಃ ಸ ಯೋಗವಾನ್॥**

**ಸ್ವಾನುಭೂತಿಪ್ರಮಾಣೇನ ಜ್ಯೋತಿರ್ಲಿಂಗೇನ ಸಂಯುತಃ।**
**ಶಿಲಾಮೃದ್ದಾರು ಸಂಭೂತಂ ನ ಲಿಂಗಂ ಪೂಜಯತ್ಯಸೌ॥**

**ಕ್ರಿಯಾರೂಪಾ ತು ಯಾ ಪೂಜಾ ಸಾ ಜ್ಞೇಯಾ ಸ್ವಲ್ಪ ಸಂವಿಧಾಂ।**
**ಅಂತರಾ ಭಾವ ಪೂಜಾ ತು ಶಿವಸ್ಯ ಜ್ಞಾನಿನಾಂ ಮತಾ॥**

(ಶ್ಲೋ. ೩೭, ೩೮, ೪೧, ೪೨, ೪೩, ೪೪)

ಕ್ರಿಯೆಯನ್ನು ಗರ್ಭೀಕರಿಸಿಕೊಂಡಿರುವುದು ಕ್ರಿಯಾಲಿಂಗವೆಂಬಂತೆ, ಭಕ್ತಿ ಭಾವವನ್ನು ಭಾವಲಿಂಗ ಸುಂದರವಾಗಿ ಅಳವಡಿಸಿಕೊಂಡಿದೆ ಎಂದು ಮಹಾ ಚಾರ್ಯರು ಬೋಧಿಸಿರುವರು. ಪ್ರಾಣಲಿಂಗವು ಈ ಉಭಯ ಲಿಂಗಗಳನ್ನೊಳ ಗೊಂಡಂತೆ ಸಕಲ ನಿಷ್ಕಲವೆನಿಸಿ ಎಲ್ಲಕ್ಕೂ ಪೂರಕವೆನಿಸಿದೆ. ಇಷ್ಟ, ಭಾವಲಿಂಗ ಗಳಿಗೆ ಪ್ರಾಣಲಿಂಗವು ಮಧ್ಯಮಣಿ ನ್ಯಾಯಾನುಸಾರ ಅಪ್ರಾಕೃತ ಮಹಾ ಸೇತುವೆಯಂತೆ ಉಜ್ವಲವಾಗಿ ಪ್ರಜ್ವಲಿಸುತ್ತಲಿದೆ. ಇಷ್ಟಲಿಂಗದಲ್ಲಿ ಪ್ರಾಣ ಲಿಂಗದ ದಿವ್ಯ ಕಳೆ ಪ್ರತಿಫಲಿಸುತ್ತಲಿದೆ. ಭಾವಲಿಂಗದಲ್ಲಿ ಪ್ರಾಣಲಿಂಗದ ಚಿನ್ಮುದ್ರೆ ಪ್ರಜ್ವಲಿಸುತ್ತಲಿದೆ. ಇಷ್ಟ ಪ್ರಾಣ ಭಾವಲಿಂಗಗಳು ಒಂದರಲ್ಲೊಂದು ಪೂರಕವಾಗಿ ಅವಿನಾಭಾವ ಸಂಬಂಧದಿಂದ ರಂಜಿತವಾಗಿವೆ. ನಮ್ಮ ಹೃದಯಾಂ ತರ್ಯಾಮಿ ಪರಶಿವಬ್ರಹ್ಮ ಭಾವಗಮ್ಯನಿರುವನು. ಬಾಹ್ಯಲಿಂಗ ಪೂಜಾರಾಧನ ದರ್ಶನಕ್ಕಿಂತ ಅಂತರ್ಯಾಮಿಯಾದ ಪರಶಿವ ಬ್ರಹ್ಮರೂಪ ಭಾವಲಿಂಗಾರಾಧನೆ. ದರ್ಶನ, ಸ್ಪರ್ಶನ ಈಕ್ಷಣಾದಿ ಸದ್ಭಾವಾದಿಗಳು ಸಹಸ್ರಪಟ್ಟು ಅಧಿಕ ಫಲಪ್ರದ ವೆನಿಸಿದೆ. ನಿತ್ಯ ವಿಧಿವತ್ತಾದ ಇಷ್ಟಲಿಂಗಾರಾಧನೆಯೊಂದಿಗೆ ಪ್ರಾಣಲಿಂಗ ಭಾವ ಲಿಂಗಾರಾಧನೆಗಳನ್ನು ಸೂಕ್ಷ್ಮವಾಗಿ ಅಂತರಂಗದಲ್ಲಿ ಭಾವಪುಷ್ಪಗಳಿಂದ ಅರ್ಚಿಸಿ, ಸ್ತುತಿಸಿ, ಧ್ಯಾನಿಸಿ, ಶಿವಾತ್ಮ ಜ್ಞಾನಮಾರ್ಗಕ್ಕೆ ದೀಪಂ ಜ್ಯೋತಿ ದರ್ಶನವನ್ನು ಅಂತರಂಗದ ಕಣ್ಣಿನಿಂದ ಕಂಡುಂಡನುಭವಿಸಬೇಕು. ಯಾಕೆಂದರೆ ಮೇಲೆ ಹೇಳಿದಂತೆ, ಷಡ್ಗುಣೈಶ್ವರ್ಯಸಂಪನ್ನನಾದ ಸದಾಶಿವನು ಭಾವಗೋಚರ ನಿಹನು, ಈ ಅಂಶವನ್ನು ಅಥರ್ವಶೃತಿ “**ತತ್ರಾಣೇಶ್ವಂತ ಮನಸೋ ಲಿಂಗ ಮಾಹುಃ॥**” ಎಂದು ಘೋಷಿಸಿರುತ್ತೆ. ಅಂದರೆ, ಯಾವಾತನು ತನ್ನಂತ

ರಂಗದ ಚಿನ್ಮಯಕರ ಪ್ರಾಣಲಿಂಗವನ್ನು ತನ್ನ ಹೃನ್ಮಂದಿರದಲ್ಲಿ ಸದಾ ಧರಿಸಿ, ಸ್ಮರಿಸಿ, ಜೀವಂತವಾದ ಬಾಡದ ದಿವ್ಯಭಾವ ಕುಸುಮಗಳಿಂದ ಸದಾ ಭಕ್ತಿ ಯುತನಾಗಿ ಪೂಜಿಸುವನೋ, ಅಂಥಪ್ಪ ಶಿವಶರಣನು ಆತ್ಮಲಿಂಗ ದರ್ಶನಕ್ಕೆ ಅರ್ಹನಿರುವನು. ಭಾವಲಿಂಗಸ್ಥಲದಲ್ಲಿ ಇಷ್ಟ ಪ್ರಾಣಲಿಂಗಗಳ ಘನ ತತ್ವ ವನ್ನೊಳಗೊಂಡ ಭಾವಲಿಂಗದ ದಿವ್ಯಜ್ಯೋತಿಯನ್ನು ಸಾಧಕನು ತನ್ನೊಳಗಿನ ಮೂಲಾಧಾರ, ಹೃದಯ, ಭ್ರೂಮಧ್ಯ ಸ್ಥಾನಗಳಲ್ಲಿ ಕಂಡು ತನ್ಮಯನಾಗಿ ಆನಂದಿಸುವಾತ ನಿಜಕ್ಕೂ ಶರಣನೆನಿಸುಹನು. ಬಾಹ್ಯಲಿಂಗ ಪೂಜಾರಾಧನೆ ಗಳು ಗೃಹಸ್ಥರಿಗೂ ಅಂತರ್ಲಿಂಗ ಪೂಜಾ ವೈಭವ ಶಿವಯೋಗಿಗಳಿಗೂ ಅನ್ವಯಿ ಸುವಂಥವುಗಳಾಗಿವೆ.

ಮಂತ್ರಾಕ್ಷರರೂಪ ಕ್ರಿಯಾಲಿಂಗವಾದರೆ, ಮಂತ್ರಾರ್ಥರೂಪ ಭಾವಲಿಂಗ ವೆಂದರಿಯಬೇಕು. ಈ ಉಭಯ ಲಿಂಗಗಳು ಒಂದರಲ್ಲೊಂದು ಪೂರಕವಾಗಿ ಪ್ರಜ್ವಲಿಸುತ್ತಿವೆ. ಆಂದ ಬಳಿಕ ತತ್ವವೇತ್ತರಾದ ಲಿಂಗಾಂಗಿ ಶಿವಯೋಗಿಗಳು, ಅಖಂಡ ಪರಮಾನಂದ ಸ್ವರೂಪನೂ, ಚಿನ್ಮಯ ಚಿತ್ಸ್ವರೂಪನೂ ಆಗಿ ಬೆಳಗುವ ಪರಶಿವನನ್ನು ಗಂಧಾಕ್ಷತ ಧೂಪ ದೀಪಾದಿ ಬಾಹ್ಯೋಪಚಾರಗಳಿಂದ ಪೂಜಿಸದೆ, ಶಾಂತಿ ವಿವೇಕಾದ್ಯನಂತ ಅಂತರೋಪಚಾರಗಳಿಂದ ಪೂಜಿಸಬೇಕೆಂದು ಭಾವವು. ಕರದಲ್ಲಿ ಕುರುಹುಗೊಂಡುದು ಕ್ರಿಯಾಲಿಂಗ, ಕರಸ್ಥಲದಲ್ಲಿ ಪರಂಜ್ಯೋತಿಯಾಗಿ ಸತತ ಬೆಳಗುತಿರ್ಪುದು ಭಾವಲಿಂಗ.

## ಲಿಂಗಸ್ಥಲ ೬] ಜ್ಞಾನಲಿಂಗ ಸ್ಥಲ [ (ಪರಿ. ೧೫)

ತದ್ಭಾವಜ್ಞಾಪಕಂ ಜ್ಞಾನಂ ಲಯಂ ಯತ್ರ ಸಮಶ್ನುತೇ ।
ತಜ್ಞಾನಲಿಂಗಮಾಖ್ಯಾತಂ ಶಿವತತ್ವಾರ್ಥಕೋವಿಧೈಃ ॥

ತ್ರಿಮೂರ್ತಿ ಭೇದನಿರ್ಮುಕ್ತಂ ತ್ರಿಗುಣಾತೀತ ವೈಭವಂ ।
ಬ್ರಹ್ಮಯದ್ಬೋಧ್ಯ ತೇ ತತ್ತು ಜ್ಞಾನಲಿಂಗಮುದಾಹೃತಂ ॥

ಪರಾತ್ಪರಂ ತು ಯದ್ಬ್ರಹ್ಮ ಪರಮಾನಂದಲಕ್ಷಣಂ ।
ಶಿವಾಖ್ಯಂ ಜ್ಞಾಯತೇ ಯೇನ ಜ್ಞಾನಲಿಂಗೀ ಕಥ್ಯತೇ ॥

**ಬಾಹ್ಯ ಕ್ರಿಯಾಂ ಪರಿತ್ಯಜ್ಯ ಚಿಂತಾಮಪಿ ಚ ಮಾನಸೀಂ ।**
**ಅಖಂಡಜ್ಞಾನರೂಪತ್ವಂ ಯೋ ಭಜೇನ್ಮುಕ್ತ ಏವ ಸಃ ॥**

(ಶ್ಲೋ. ೪೫, ೪೬, ೪೯, ೫೦)

ಮಹಾಮಂತ್ರಾರ್ಥರೂಪ ಭಾವಲಿಂಗವೆಂದರಿತ ಬಳಿಕ ಅಂತಪ್ಪ ಮಹೋತ್ಕೃಷ್ಟ ಭಾವವ ಜ್ಞಾಪಿಸುವುದು ಹಾಗೂ ಚಿಂತಿಸುವುದು ನಿರಂತರ ಶಂಭುಸ್ಮರಣೆಯುಳ್ಳದು ಜ್ಞಾನ ನೋಡಾ. ಈ ಜ್ಞಾನದಲ್ಲಿ ಇಂಬುಗೊಂಡಿ ಪ್ಪುದು ಜ್ಞಾನಲಿಂಗವೆಂದರಿಯಬೇಕು. ಭಾವಾತೀತ ಪರಬ್ರಹ್ಮ, ಅಪ್ರಮೇಯ. ಅಚಿಂತ್ಯ, ಅಗೋಚರ, ಅನಿರ್ವಚನೀಯ. ಅನಾಮಯ ಅಂತರ್ಜ್ಯೋತಿ ಜ್ಞಾನ ಲಿಂಗವೆಂದು ಮಹಾಚಾರ್ಯರು ಬೋಧಿಸಿರುವರು. ಮಾಡುವ ಮಾಟದಲ್ಲಿ ಹಾಗೂ ನೋಡುವ ನೋಟದಲ್ಲಿ ನಿಂದಿತ್ತು ಕ್ರಿಯಾಲಿಂಗ ಇದರಂತಲ್ಲದೆ ನನಹಿನ, ನೆರವಿನಲ್ಲಿ ನಿಂತು ಪರಿಶೋಭಿಸುವುದು ಜ್ಞಾನಲಿಂಗ. ನೆಚ್ಚಿನ ನೆಲೆಯಲ್ಲಿ ಪ್ರಜ್ವಲಿಸುವುದು ಜ್ಞಾನಲಿಂಗ. ಅರಿವಿನ ಗಹನಾಂತರ್ಗಹನವಾದ ಆಳದಲ್ಲಿ ನಿರಂತರಂ ಕಂಗೊಳಿಸುವುದು ಜ್ಞಾನಲಿಂಗ. ಹೆಚ್ಚೇನು ಶಿವಾನುಭಾವಿ ಗಳ ಆಂತರಿಕ ಅನುಭವ ಸ್ವಾನುಭೂತಿಯಲ್ಲಿ ರಂಜಿತವಾಗಿರ್ಪುದು ಜ್ಞಾನಲಿಂಗ ಶಿವಜ್ಞಾನಕ್ಕೆ ಆಶ್ರಯವಾದುದು ಜ್ಞಾನಲಿಂಗ. ಯಾವ ಪರಬ್ರಹ್ಮವು, ಬ್ರಹ್ಮ ವಿಷ್ಣು ರುದ್ರರೂಪ ಮೂರ್ತಿತ್ರಯ ಭೇದರಹಿತವಾದುದೋ, ಸತ್ವ, ರಜಸ್ತಮೋ ಗುಣಾತೀತ ವೈಭವವುಳ್ಳದೋ ಆ ಪರಾತ್ಪರ ಪರಶಿವಬ್ರಹ್ಮನೇ ಜ್ಞಾನಲಿಂಗ ವೆಂದು ಪರಮಾಚಾರ್ಯ ಶ್ರೀ ಜ॥ ರೇಣುಕರು ಅಪ್ಪಣೆಕೊಡಿಸಿರುವರು. ಸ್ಥೂಲ ಸೂಕ್ಷ್ಮಾತೀತವಾದ ಜ್ಞಾನಲಿಂಗಸ್ಥಲದ ಜ್ಞಾನಲಿಂಗ, ತೃಪ್ತಿಲಿಂಗ ವೆನಿಸಿದೆ. ಇತ್ಯಾದಿ ಕಾರಣಗಳಿಂದ, ಪರಶಿವಬ್ರಹ್ಮರೂಪ ಜ್ಞಾನಲಿಂಗವನ್ನೇ ಸರ್ವೋತ್ಕೃಷ್ಟವೆಂದು ತಿಳಿಯಬೇಕು.

## ಲಿಂಗಸ್ಥಲ ೭] ಸ್ವಸ್ಥಲಂ [ (ಪರಿ. ೧೫)

**ತದ್ಭಾವಜ್ಞಾಪಕಂ ಜ್ಞಾನಂ ಯತ್ರ ಜ್ಞಾನೇ ಲಯಂ ವ್ರಜೇತ್ ।**
**ತದ್ಭಾವೇಷ ಸಮಾಖ್ಯಾತಃ ಸ್ವಾಭಿಧಾನೋ ಮುನೀಶಿಭಿಃ ॥**

ಸ್ವಚ್ಛಂದಾಚಾರಸಂತುಷ್ಟೋ ಜ್ಯೋತಿರ್ಲಿಂಗಪರಾಯಣಃ ।
ಆತ್ಮಸ್ಥಸಕಲಾಕಾರಃ ಸ್ವಾಭಿಧೋ ಮುನಿಸತ್ತಮಃ ॥

ಪಶ್ಯನ್ ಸರ್ವಾಣಿ ಭೂತಾನಿ ಸಂಸಾರಸ್ಥಾನಿ ಸರ್ವಶಃ ।
ಸ್ಮಯಮಾನಃ ಪರಾನಂದೇ ಲೀನಾತ್ಮಾವರ್ತತೇ ಸುಧೀಃ ॥

ಧ್ಯಾನಂ ಶೈವಂ ತಥಾ ಜ್ಞಾನಂ ಭಿಕ್ಷಾ ಚೈಕಾಂತ ಶೀಲತಾ ।
ಯತೇಶ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ ॥

(ಶ್ಲೋ. ೫೧, ೫೨, ೫೫, ೫೬)

ಮೇಲುಕ್ತವಾದ ಜ್ಞಾನಲಿಂಗದ ದಿವ್ಯಜ್ಞಾನ ಸ್ವರೂಪವನ್ನು ಸ್ವಚ್ಛಂಧವಾಗಿ ತೋರ್ಪಡಿಸುವ, ಯಾವ ಉಜ್ವಲತರ ಜ್ಞಾನ ಎಲ್ಲಿ ಲಯವಾಗುವುದೋ ಅಂತಃ ದಿವ್ಯಜ್ಞಾನಾನುಭವ ಸ್ವಸ್ಥಲದ ಜಂಗಮನೆನಿಸಿ ಸುಪ್ರಸಿದ್ಧನಿಹನು ಇಂತಪ್ಪ ಸ್ವಸ್ಥಲದ ಸ್ವಜಂಗಮನು, ಸ್ವೇಚ್ಛಾಚಾರ ಸಂತುಷ್ಟನೂ, ಜ್ಯೋತಿರ್ಲಿಂಗದಲ್ಲಿ ನಿರಂತರ ನಿಷ್ಠೆಯುಳ್ಳವನೂ, ದೃಶ್ಯಾದೃಶ್ಯ ಪ್ರಪಂಚವನ್ನು ತನ್ನಲ್ಲಿ ಸೂಕ್ಷ್ಮವಾಗಿ ಗರ್ಭೀಕರಿಸಿಕೊಂಡಿರುವ ಸ್ವಸ್ಥಲದ ಮುನಿರಾಟ್ ಎಂದು ಮಹಾಚಾರ್ಯರು ಅಗಸ್ತ್ಯಮುನಿಸತ್ತಮನಿಗೆ ಬೋಧಿಸಿರುವರು. ಸ್ವಸ್ಥಲದ ವಿಚಾರ ವಿನಿಮಯ ಪರಿಜ್ಞಾನ ಅವಶ್ಯವಿರುತ್ತೆ. ಮಾನವ ಪ್ರಜ್ಞೆಯ ಸ್ಥಾನದಲ್ಲಿ ಬ್ರಾಹ್ಮೀಪ್ರಜ್ಞಾ ಸ್ಥಾಪಿತವಾದರೆ, ನಿರಂತರ ಪರಮ ಶಾಂತಿ, ಅನವಚ್ಛಿನ್ನ ಶಕ್ತಿ ಅನುಭವಕ್ಕೆ ಬರುತ್ತದೆ. ಇಂತಪ್ಪ ಶಿವಾನುಭೂತಿಯಿಂದ ಅನಂತತೆಯು ದಿವ್ಯ ಪ್ರಜ್ಞೆ ಅಂತರಂಗದಲ್ಲಿ ಗೋಚರವಾಗುತ್ತದೆ. ಅನಂತತೆ ಮಾತ್ರವಲ್ಲದೆ ತ್ರಿಕಾಲಾತೀತ ನಿತ್ಯತೆಯಲ್ಲೂ ತಾನು ಇದ್ದೇನೆಯೆಂದು ತನ್ನ ಅನುಭವಕ್ಕೆ ವೇದ್ಯವಾಗುತ್ತದೆ. ಅಷ್ಟೇ ಅಲ್ಲ ಆತ್ಮಾನುಭವದ ಯೋಗದಿಂದ ಅಮೃತತತ್ವವು ಸಾಕ್ಷಾತ್ಕಾರವಾಗಿ, ದೇಹಾವಸಾನವನ್ನು ತೃಣವಾಗಿ ಕಾಣುವನೆಂದು ಅಮೃತತತ್ವವು ಸಾಕ್ಷಾತ್ಕಾರವಾಗಿ, ದೇಹಾವಸಾನವನ್ನು ತೃಣವಾಗಿ ಕಾಣುವನೆಂದು ಶ್ರೀ ಜ|| ರೇಣುಕರು ಅಗಸ್ತ್ಯರಿಗೆ ಮನಗಾಣಿಸಿರುವರು. ಅಸ್ತು.

ಲಿಂಗಸ್ಥಲ ೮] ಚರಸ್ಥಲಂ [(ಪರಿ. ೧೫)

**ಸ್ವರೂಪಜ್ಞಾನಸಂಪನ್ನೋ ಧ್ವಸ್ತಾಹಂ ಮಮತಾ ಕೃತಿಃ |**
**ಸ್ವಯಮೇವ ಸ್ವಯಂ ಭೂತ್ವಾ ಚರತೀತಿ ಚರಾಭಿಧಃ ||**

**ಕಾಮ ಕ್ರೋಧಾದಿ ನಿರ್ಮುಕ್ತಃ | ಶಾಂತಿ ದಾಂತಿ ಸಮನ್ವಿತಃ |**
**ಸಮ ಬುಧ್ಯಾ ಚರೇದ್ಯೋಗೀ ಸರ್ವತ್ರ ಶಿವ ಬುದ್ಧಿಮಾನ್ ||**

**ಅಪ್ರಾಕೃತ ಗುಣೈಃಸ್ವೀಯೈಃ ಸರ್ವಂ ವಿಸ್ಮಾಪಯನ್ ಜನಂ |**
**ಅದ್ವೈತ ಪರಮಾನಂದ ಮುದಿತೋ ದೇಹಿವಚ್ಚರೇತ್ ||**

**ಪ್ರಾಕೃತೈ ಶ್ವರ್ಯ ಸಂಪತ್ತಿ | ಪರಾಙ್ಮುಖಮನಃ ಸ್ಥಿತಿಃ |**
**ಚಿದಾನಂದ ನಿಜಾತ್ಮ ಸ್ಥೋ ಮೋದತೇ ಮುನಿಪುಂಗವಃ ||**

(ಶ್ಲೋ ೫೭, ೫೮, ೬೧, ೬೩)

ಚರಸ್ಥಲದ ಶಿವಯೋಗಿ ಸ್ವಸ್ವರೂಪಜ್ಞಾನ ಸಂಪನ್ನನ.. ರಾಗ ರಹಿತನು ಆಗಿ, ತಾನೇ ತಾನಾಗಿ ಸಂಚರಿಸುವನು. ಮನೆ ಮಠಂಗಳ ಮಾತು ತನು ಕರಣಂಗಳ ಗೋಜು, ತಾನೆಂಬ ಹಮ್ಮು ಎಲ್ಲಾ ನೀಗಿ, ತೊರೆದು ನಿಜ ತತ್ವಾನುಚಿಂತೆಯಿಂದ ಸ್ವೇಚಾನುಸಾರ ಸಂಚರಿಸುವಾತ ಬ್ರಾಹ್ಮೀ ಮಹಾಪುರುಷನೆಂದು ಸಂಪೂಜ್ಯನಿಹನು ಆಂಪರೆ ಚರಲಿಂಗ ಸ್ಥಲದ ಶಿವಶರಣ, ದೇಹಾಭಿಮಾನವ ತೊರೆದು, ಪ್ರಕೃತಿ ತತ್ವಕ್ಕತೀತನಾಗಿ, ಸೋಹಂ, ಶಿವೋ ಹಂ ತತ್ವಮಸಿ, ಎಂಬೀತ್ಯಾದಿ ಪರಂಭಾವದಿಂದ ಶಿವಾಭಿನ್ನ ಸಂಸ್ಮರಣೆಯಿಂದ, ಆತ್ಮಾನುಸಂಧಾನದಿಂದ ಸರ್ವತ್ರ ಸಂಚರಿಸುತ್ತಿರ್ಪನು. ಶ್ರೀ ಶ್ರೀ ಸದಾಶಿವ ಬ್ರಹ್ಮೇಂದ್ರರು "**ಸರ್ವಂ ಶಿವಮಯಂ ||**" ಜಗತ್ತೆಂದು ಅರಿತ ಅಂತರ್ಮುಖಿ ಶಿವಶರಣ. "**ಶರಣಸ್ಯ ಪ್ರಾಪಂಚಿಕ ಸುಖಂ ನಾಸ್ತಿ |**" ಎಂಬ ಶೃತಿವಾಣಿಗನುಸಾರ ವರ್ತಿಸುತ್ತಲಿದ್ದರು. ಪ್ರಪಂಚದ ಹಾಗೂ ತನ್ನ ದೇಹಾಭಿಮಾನಗಳನ್ನು ಪೂರ್ಣ ತೊರೆದ ಮಹಾನ್ ಇವರು. ಹೀಗೆ ಸಂಚರಿಸುತ್ತಿರುವಾಗ ಒಂದು ದಿನ ವಿಷ ಮುಳ್ಳೊಂದು ಕಾಲಿನಲ್ಲಿ ಹೊಕ್ಕು ನಾಲ್ಕೈದು ದಿನಗಳ ನಂತರ, ಕೀವು ರಕ್ತಗಳಿಂದಾಗಿ ಕಾಲು ಊತವಾಗಿ ನೋವಿನ ಬಾಧೆಯಿಂದ ಸ್ಮರಣೆ ತಪ್ಪಿ

ಚರಂಡಿಯಲ್ಲಿ ಉರುಳಿದರು. ಯಾರು ಇವರನ್ನು ಗಮನಿಸಲಿಲ್ಲ ಇಷ್ಟಾದರೂ ದೇಹಾಭಿಮಾನ ತೊರೆದಿದ್ದ ಕಾರಣ ಮತ್ತೂ ಸತತ ಆತ್ಮಲಿಂಗಾನುಸಂಧಾನ ದಲ್ಲಿ ಮುಳುಗಿದ್ದ ಮಹಾನ್ ಚರಜಂಗಮರಾದ್ದರಿಂದ, ಇವರ ಮುಖದಲ್ಲಿ ಶಿವ ತೇಜಸ್ಸು ಪೂರ್ಣಚಂದ್ರನ ಕಳೆಯಂತೆ ಹೊರಸೂಸುತ್ತಲಿತ್ತು. ಮತ್ತೊಂದು ಸಂದರ್ಭದಲ್ಲಿ ಶ್ರೀಸದಾಶಿವಬ್ರಹ್ಮೇಂದ್ರರು-"**ರೇ ರೇ ಸರ್ವಂ ಬ್ರಹ್ಮಮಯಂ ಜಗತ್ ||**" ಎಂದು ಹಾಡುತ್ತ ಅರಣ್ಯದಲ್ಲಿ ಸಂಚರಿಸುತ್ತಾ ಒಂದು ಮಧ್ಯ ರಾತ್ರಿ, ಬಾದುಷಾ (ಚಕ್ರವರ್ತಿ) ಪೊಬ್ಬ ತನ್ನ ರಾಣಿ ಬೇಗಂ ಜೊತೆಗೂಡಿ ಅರಣ್ಯದ ಗುಡಾರವೊಂದರಲ್ಲಿ ಮಲಗಿ ನಿದ್ರಿಸುತ್ತಿದ್ದ. ಡೇರಾವೊಳಗೆ ನುಗ್ಗಿದರು ಬೇಟೆಗಾಗಿ ರಾಣಿಯೊಂದಿಗೆ ಬಂದಿದ್ದ ಬಾದುಷಾ ಸುಭದ್ರವಾದ ಟೆಂಟಿನೊಳಗೆ ನಿದ್ರಿಸುತ್ತಿದ್ದ, ಕತ್ತಿ ಹಿಡಿದ ಕಾವಲಾಳುಗಳು, ಕಣ್ಮುಚ್ಚದೆ ಟೆಂಟಿನ ದ್ವಾರದಲ್ಲಿ ಕಾವಲಿದ್ದರೂ ಸಹ, ಅಕಾಯ ಸ್ವರೂಪಿಗಳಾದ ಅವರು ಯಾರಿಗೂ ಕಾಣಿಸದೆ, ಸರ್ವಂ ಶಿವಮಯಂ ಎಂದುಕೊಂಡು ಟೆಂಟಿನೊಳಗಿನ ಅಂತಃಪುರ ಮಂಟಪ ದೊಳಗೆ ನುಗ್ಗಿದರು. ಕಾರಣ ಶ್ರೀ ಸದಾಶಿವಬ್ರಹ್ಮೇಂದ್ರರಿಗೆ ಸರ್ವತ್ರ ಅನವ ಚ್ಛಿನ್ನವಾದ ಬ್ರಹ್ಮದ ವಿನಃ ಮತ್ತೇನು ಕಾಣಲಿಲ್ಲ. ತಕ್ಷಣ ನಿದ್ರೆಯಿಂದೆದ್ದ ಬಾದುಷಾನವಾಬ್, ಕೋಪೋದ್ದೀಪಿತನಾಗಿ ಹರಿತವಾದ ಕತ್ತಿಯನ್ನು ಸದಾಶಿವಬ್ರಹ್ಮೇಂದ್ರರ ಉದರದೊಳಗೆ ಹಲವಾರು ಬಾರಿ ಬೀಸಿದರೂ ಅತಿಥಿಯ ದೇಹ ಕೋಮಲವಾಗಿಯೇ ಇತ್ತು, ಅವರ ಮುಖಮಂಡಲ ಪೂರ್ಣಚಂದ್ರ ಬಿಂಬದಂತೆ ಹಸನ್ಮುಖವಾಗಿತ್ತು. ಒಂದು ತೊಟ್ಟು ರಕ್ತವಾಗಲಿ ಅಥವಾ ಆ ದೇಹದಲ್ಲಿ ಕಿಂಚಿತ್ ಗಾಯವಾಗಲಿ ಆಗಲಿಲ್ಲ. ಸ್ವಾಮಿ ಅನುಗ್ರಹ ಮೂರ್ತಿ ಗಳಾಗಿ, ಶ್ರೀ ದಕ್ಷಿಣಮೂರ್ತಿಯಂತೆ ಚಲಿಸದೆ ನಿಂತಿದ್ದಾರೆ. ರಾಜನು ಹಲವಾರು ಬಾರಿ ಹರಿತವಾದ ಕತ್ತಿಯನ್ನು ಅವರ ದೇಹದೊಳಗೆ ಬಲವಾಗಿ ಬೀಸಿದರೂ ಆಕಾಶವ ನ್ನೊಡಲನ್ನು ಸೀಳಿದಂತೆ ಇತ್ತೇ ವಿನಃ, ಆ ಮಹಾತ್ಮರನ್ನು ಎಳ್ಳಿನ ಮೊನೆಯಷ್ಟೂ ಘಾಸಿಗೊಳಿಸಲಾಗಲಿಲ್ಲ. ಚಕಿತನಾದ ಬಾದುಷಾ ಬೇಗಂ ನೊಂದಿಗೆ ಕ್ಷಮೆಕೋರಿ ಮಹಾತ್ಮರ ಶ್ರೀಪಾದದಲ್ಲಿ ಶರಣಾದನು. ಕಾವಲಾಳು ಗಳು ದಿಗ್‌ಭ್ರಮೆಗೊಂಡರು. ಇದು ಸತ್ಯವಾಗಿ ನಡೆದ ವಿಷಯ,

ಶ್ರೀ ಶ್ರೀ ಸದಾಶಿವಬ್ರಹ್ಮೇಂದ್ರರ ಜೀವಂತ ಸಮಾಧಿ, ತಮಿಳುನಾಡಿನ ತಿರುಚಿನಾಪಳ್ಳಿ ಜಿಲ್ಲೆಗೆ ಸೇರಿದ ಕರೂರು ನಗರಕ್ಕೆ ಕೇವಲ ೨೦ ಕಿಲೋಮೀಟರ್

ಗಳ ದೂರದಲ್ಲಿ ಸ್ಥಾಪಿತವಾಗಿ, ಕೆಲವಾರು ಶತಮಾನಗಳಿಂದ ಸಹಸ್ರಾರು ಭಕ್ತರ ಅಭೀಷ್ಟಗಳನ್ನೂ ಪೂರ್ಣಗೊಳಿಸುವ ಧೈವೀಶಕ್ತಿಯಿಂದ ಸರ್ವರನ್ನೂ ಆಕರ್ಷಿಸುತ್ತಲಿದೆ. ಇದರಿಂದಾಗಿ ಚರಲಿಂಗಸ್ಥಲದ ಪರಮಜಂಗಮಮೂರ್ತಿ ಅಖಂಡ ಜ್ಯೋತಿರ್ಲಿಂಗಮೂರ್ತಿಯಾದ್ದರಿಂದ ಪ್ರತ್ಯಗಾತ್ಮನಲ್ಲಿ ಪರವಶನಾದ ಮೇಲೆ, ಈ ಮಹಾತ್ಮನನ್ನು ಭಕ್ತರು ಸನ್ಮಾನಿಸಿದರೂ ಅಥವಾ ದುಮ್ಮಾನಿಸಿದರೂ. ಧ್ವೇಷ ಕಾರಿದರೂ ಯಾವುದಕ್ಕೂ ಅಂಜದೆ ಅಳುಕದೆ, ಮನಗೊಂಡಂತೆ ಸುಳಿದಾಡುತ್ತಾ ತಾನು ಅಂತರ್ಮುಖಿಯಾಗಿ ಶಿವಾದ್ವೈತ ಪರಮಾನಂದದಿಂದ ನಸುನಗುತ್ತಾ ಕರುಣಾರಸವನ್ನು ಬೀರಿದರೂ, ತೋರ್ವಿಕೆಗೆ ತನುವಿಡಿದು ಕಾಂಬನು ಚರಸ್ಥಲದ ಆ ದಿವ್ಯ ಚರಮೂರ್ತಿ. ಸುಳಿವಡೇನು ತನುಕರಣಂಗಳಿಲ್ಲ. ಪ್ರಪಂಚ ಪರಮಾರ್ಥಂಗಳಿಲ್ಲ, ಆತಂಗೆ ವಿಧಿ ನಿಷೇಧಂಗಳಿಲ್ಲ. ಪಾಪ ಪುಣ್ಯಂಗಳಿಲ್ಲ, ಧರ್ಮಕರ್ಮಂಗಳಿಲ್ಲ ದ್ವಂಧ್ವ ಧ್ವೇಷಗಳಿಲ್ಲ, ಪರಶಿವಾನಂದ ಸಾಗರದಲ್ಲಿ ನಿಜಾತ್ಮ ಸ್ವರೂಪನಾಗಿ ತೃಪ್ತನಿಹನು.

ನಿತ್ಯ ಸ್ವಸ್ವರೂಪಾನುಸಂಧಾನದಲ್ಲಿ ರಮಿಸುವ ವಿಶ್ವೋತ್ತರೋತ್ತರ ವಿಚಿತ್ರಾಯಮಾನವಾಗಿ ಪರಿಶೋಭಿಸುವ ಜಗಜ್ಜಾಲವನ್ನು ಶಿವಯೋಗಿರಾಟ್ ತೃಣೀಕರಿಸಿ ವಿಷಯಾನಂದದಿಂದ ವಿಮುಖನಾಗಿರುವನು. ಸ್ವಸ್ವರೂಪ ದರ್ಶನಾನುಸಂಧಾನಕ್ಕೆ ಸಮಾನವಾದುದು ಮತ್ತೊಂದಿರಲಿಕ್ಕಿಲ್ಲವೆಂಬುದು ಖಚಿತವಷ್ಟೆ. ಸ್ವಸ್ವರೂಪ ದರ್ಶನವೆಂದರೇನು? ಒಂದು ಬಂಧುರವಾದ ಕೊಟ್ಟಡಿಯ ನಾಲ್ಕು ಗೋಡೆಗಳು ರನ್ನ ಕನ್ನಡಿಗಳಿಂದ ಸುಸಜ್ಜಿತವಾಗಿವೆ. ನೆಲವೆಲ್ಲಾ ಹಾಸುಗನ್ನಡಿ. ಮೇಲ್ಛಾವಣಿ ಸಹ ಶುದ್ಧ ಕನ್ನಡಿಗಳಿಂದ ಅಲಂಕೃತಗೊಳಿಸಿದೆ. ಇಂತಪ್ಪ ಭವ್ಯ ಕೊಟ್ಟಡಿಯೊಳಗೆ ಓರ್ವನು ಪ್ರವೇಶಿಸಿದರೆ, ಅಲ್ಲಿ ಆತ ಎತ್ತೆತ್ತ ನೋಡಿದರು ಅತ್ತತ್ತ ತನ್ನ ನೈಜ ಸ್ವರೂಪವನ್ನು ಕಂಡು ವಿಸ್ಮಯನಾಗುವನು ಎತ್ತ ನೋಡಿದಡತ್ತಾ ತಾನೇ ತಾನು. ಇವನಿಗೆ ತನ್ನ ಸುಂದರರೂಪದ ವಿನಃ ಏನು ಕಾಣಿಸುವುದಿಲ್ಲ. ಕನ್ನಡಿಯೂ ಸಹ ಕಾಣದಂತಾಗಿ, ತನ್ನ ಸ್ವಸ್ವರೂಪ ದರ್ಶನದಿಂದ ಉನ್ಮತ್ತನಾಗಿ ಆನಂದೋ ಬ್ರಹ್ಮಸ್ವರೂಪದಲ್ಲಿ ಮುಳುಗಿ, ವಿಚಿತ್ರಾಯಮಾನವಾದ ತನ್ನ ಸುತ್ತಲಿನ ಪ್ರಪಂಚವನ್ನೇ ಮರೆತು ವಿಸ್ಮಿತನಾಗಿ ನಿಲ್ಲುವನು. ಇದು ಸ್ವಸ್ವರೂಪ ದರ್ಶನದ ಹಿನ್ನೆಲೆ. ತನ್ನ ಸ್ವರೂಪದ ವಿನಃ ಏನೂ ಕಾಣುವುದಿಲ್ಲ.

ಇದರಂತೆ ಶ್ರೀಗುರು ಕಟಾಕ್ಷದಿಂದ ಅಂತರ್ಮುಖಿಯಾದ ಬ್ರಹ್ಮನಿತ್ತು, ಸ್ವಸ್ವರೂಪ ದರ್ಶನದಿಂದ ಪ್ರಭಾವಾನ್ವಿತನಾಗಿ, ಸರ್ವದರಲ್ಲಿಯೂ ಏಕೈಕ ತನ್ನ

ನಿಜಸ್ವರೂಪದ ಪ್ರತ್ಯಕ್ಷಾನುಭವದಿಂದ ವಿಜೃಂಭಿತನಾಗಿರ್ಪನು. ತಾನೇ ಎಲ್ಲವೂ ಎಂಬ ಅನಂತತ್ವ ಭಾವನೆಯೊಂದಿಗೆ ತನ್ನ ನೈಜ ನಿತ್ಯತ್ವದ ನೆಲೆಯನ್ನು ಕಂಡನುಭವಿಸುತ್ತಾ, **"ಸರ್ವಂ ಖಲ್ವಿದಂ ಬ್ರಹ್ಮ"** ಎಂಬ ಪರಾಕಾಷ್ಠದಲ್ಲಿ ತನ್ಮಯನಾದ, ಪರಸ್ಥಲಸ್ಥಿತಿಯಲ್ಲಿ ಎಲ್ಲವೂ ತಾನೇ ಎಂದೂ, ತಾನು ಎಲ್ಲದರಲ್ಲಿಯೂ ವ್ಯಾಪಕನಾಗಿ ಪ್ರಜ್ವಲಿಸುವ ಭಾವ ಅದ್ವಿತೀಯವೆನಿಸಿ ತನ್ನ ವಿನಃ ಎಲ್ಲೆಲ್ಲೂ ತನಗೆ ಅನ್ಯವಾಗಿಲ್ಲವೆಂಬ ಸತ್ಯಾಂಶದಿಂದ ತನ್ಮಯನಾಗಿರುವ ಶ್ರೇಷ್ಠ ಸ್ಥಿತಿ ಪರಸ್ಥಲವೆನಿಸಿದೆ. ಈ ಸ್ಥಿತಿಯಲ್ಲಿ ಮನೆ, ಮಠ, ಗೋಡೆ, ಬೆಂಚು ಕುರ್ಚಿ ಪುಸ್ತಕ ವಾಹನಾದಿ ವಿವಿಧ ವಸ್ತುಗಳೆಲ್ಲಾ ಪರಶಿವಬ್ರಹ್ಮವೆನಿಸಿದ ತನ್ನ ಸ್ವಸ್ವರೂಪವಾಗಿ ಕಾಣುವನು. ಇಂತು ಪರಸ್ಥಲದಲ್ಲಿ ಶಿವಯೋಗಿಯು ಕಂಡನುಭವಿಸುವ ಅದ್ಭುತವಾದ ದೈವೀಸಾಕ್ಷಾತ್ಕಾರದ ದಿವ್ಯಾನುಭವವಿದು.

ಮೊಟ್ಟನಲ್ಲಿ "ಪರಸ್ಥಲಂ" ಯೆಂದರೆ ಪರಮೋತ್ಕೃಷ್ಟವಾದ ಹಾಗೂ ತಾನೇ ತಾನಾದ ಸ್ವಸ್ವರೂಪಾನಂದದ ಹಿರಿಮೆ ಅದ್ವಿತೀಯವೆನಿಸಿ ವರ್ಣನಾತೀತವಿರುತ್ತೆ. ಈ ಮಹದಂಶವನ್ನೇ ಶ್ರೀಪರಮಾಚಾರ್ಯ ರೇಣುಕ ಭಗವತ್ಪಾದರೂ ಕುಂಭಸಂಭವನನ್ನುದ್ದೇಶಿಸಿ—

**" ನಿತ್ಯೇ ನಿರ್ಮಲಭಾವನೇ | ನಿರುಪಮೇನಿರ್ಧೂತ ವಿಶ್ವಭ್ರಮೇ ||**
**ಸತ್ತಾನಂದ ಚಿದಾತ್ಮಕೇ ಪರಶಿವೇ | ಸಾಮ್ಯಂಗತಃ ಸಂಯಮೀ||"**

ಅಂದರೆ, ಮಾನಾಭಿಮಾನ, ದೇಹಾಭಿಮಾನಗಳನ್ನು ಪೂರ್ಣ ಬಿಟ್ಟಿರುವ ಶಿವಶರಣನು ಸ್ವೇಚ್ಛೆಯಿಂದ ಸಂಚರಿಸುವವನಾಗಿ, ತನ್ನ ದರ್ಶನ ಸ್ಪರ್ಶನಗಳಿಂದ ಸಮಸ್ತರನ್ನೂ ಮುಕ್ತರನ್ನಾಗಿ ಮಾಡುವನೋ, ಆ ಮಹಾಪುರುಷನೇ ಪರಮ ಜಂಗಮನೆಂದು ಸ್ತುತ್ಯನಿರುವನು ಪರಸ್ಥಲದ ಶಿವಶರಣ ನಿದ್ರೈಗೈದರೆ ಜಪವೋ ಶರಣನೆದ್ದಿರ್ದಡೆ ಶಿವರಾತ್ರಿ, ಶರಣ ನಡೆದುದೇ ಪಾವನ, ನುಡಿದುದೇ ಶಿವತತ್ವ, ಹೆಚ್ಚೇನು ಮಹಸ್ಥಲದ ಶಿವಶರಣನ ದಿವ್ಯ ಮಂತ್ರಮಯ ಕಾಯಕವೇ ಕೈಲಾಸ ಈ ಸಿದ್ಧಾಂತವನ್ನು ಅರ್ಥೈಸುವ ರೀತಿಯಲ್ಲಿ—

**"ದೇಹೇಪ್ಯದ್ಭುತವೈಭವೋ। ವಿಜಯತೇ ಜೀವನ್ವಿಮುಕ್ತಃ ಸಧೀಃ||"**

ನಿತ್ಯನೂ ಸ್ಫಟಿಕದಂತೆ ನಿರ್ಮಲಸ್ವರೂಪನೂ, ಸಚ್ಚಿದಾನಂದಸ್ವರೂಪನೂ, ಆದ ಪರಶಿವನಲ್ಲಿ ತನ್ನ ಅದ್ವಿತೀಯ ಶಿವಯೋಗದಿಂದ ಸಮಾನತ್ವ ಪಡೆದವನೂ, ಸ್ವೇಚ್ಛಾಚಾರವುಳ್ಳವನೂ, ಜೀವನ್ಮುಕ್ತನೂ ಆದ ಪರಸ್ಥಲದ ಜಂಗಮ

ಶ್ರೇಷ್ಠನು, ದೇಹಧಾರಿಯಾಗಿದ್ದರೂ, ಆಶ್ಚರ್ಯಕರ ಮಹಿಮಾಸಂಪತ್ತಿಯಿಂದೊಡಗೂಡಿದವನಾಗಿ ಸರ್ವೋತ್ಕೃಷ್ಟನಾಗಿ ವರ್ತಿಸುವನೆಂಬಂಶ ಮನನೀಯವಿರುತ್ತೆ.

ಉನ್ಮೋಚ್ಯ ರಾಜಕರಿಣಂ ನಯನೋ ಪತಾಪಾತ್ ।
ಪ್ರಾಚೀಕಟಃ ಶೃತಿಗಿರಂ ಭಿಷಜಾಂ ಭಿಷಕ್‍ತ್ವಂ ।
ಷಟ್ಕಾಲ ಪೂಜಿತ ಮಹೀಸುರ ಭೂಪಸೇವ್ಯಃ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥
ಸ್ನಾತ್ವಾನರಾ ವಿಮಲ ಸಂಗವನ ತೀರ್ಥ ರಾಜೇ ।
ಧೃತ್ವಾಗದಾಪಹರ ಮೃತ್ತಿಲಕಂ ಲಲಾಟೇ ।
ಪ್ರಾಪ್ತಾಃ ಪ್ರದಕ್ಷಿಣರತಾಸ್ತವ ಪುಣ್ಯ ಧಾಮ್ನಃ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಮ್ ॥
ಓಂ ಹರಃ ಶ್ರೀಕಂಠನಾಥ ಕೃಪಯಾ ಪಾಲಾಯಮಾಂ ನಿರಂತರಮ್ ॥

---

ಲಿಂಗಸ್ಥಲ ೯] ಪರಸ್ಥಲಂ [(ಪರಿ ೧೫)

ಸ್ವಯ ಮೇವ ಸ್ವಯಂ ಭೂತ್ವಾ ಚರತಃ ಸ್ವಸ್ವರೂಪತಃ ।
ಪರಂ ನಾಸ್ತೀತಿ ಬೋಧಸ್ಯ । ಪರತ್ವಮಭಿಧೀಯತೇ ॥

ಸ್ವತಂತ್ರಃ ಸರ್ವ ಕೃತ್ಯೇಷು । ಸ್ವಪರತ್ವೇನ ಭಾವಿತಃ ।
ತೃಣೀ ಕುರ್ವನ್ ಜಗಜ್ಜಾಲಂ । ವರ್ತತೇ ಶಿವಯೋಗಿರಾಟ್ ॥

ವಿಶ್ವಾತೀತಂ ಪರಂ ಬ್ರಹ್ಮ । ಶಿವಾಖ್ಯಂ ಚಿತ್ಸ್ವರೂಪಕಂ ।
ತದೇವಾಹಮಿತಿ ಜ್ಞಾನೀ ಸರ್ವೋತ್ಕೃಷ್ಟಃ ಸ ಉಚ್ಯತೇ ॥

**ಅಚಲಂ ಧೃವಮಾತ್ಮಾನ ಮನುಪಶ್ಯನ್ನಿರಂತರಂ ।**
**ನಿರಸ್ತವಿಶ್ವವಿಭ್ರಾಂತಿ ಜೀವನ್ಮುಕ್ತೋ ಭವೇನ್ಮುನಿಃ ।**

**ಸ್ವೇಚ್ಛಯಾ ಸಂಚರನ್ ಯೋಗೀ ವಿಮುಂಚನ್ ದೇಹಮಾನಿತಾಂ ।**
**ದರ್ಶನೈಃ ಸ್ಪರ್ಶನೈಃ ಸರ್ವಾನ ಜ್ಞಾನಪಿ ವಿಮೋಚಯೇತ್ ॥**

**ನಿತ್ಯೇ ನಿರ್ಮಲಭಾವನೇ ನಿರುಪಮೇ ನಿರ್ಧೂತ ವಿಶ್ವಭ್ರಮೇ ।**
**ಸತ್ತಾನಂದ ಚಿದಾತ್ಮಕೇ ಪರಶಿವೇ ಸಾಮ್ಯಂ ಗತಃ ಸಂಯಮೀ ॥**

**ಪ್ರಧ್ವಸ್ತಾಶ್ರಮವರ್ಣ ಧರ್ಮನಿಗಲಃ ಸ್ವಚ್ಛಂದ ಸಂಚಾರವಾನ್ ।**
**ದೇಹೇಪ್ಯದ್ಭುತ ವೈಭವೋ ವಿಜಯತೇ ಜೀವನ್ನಿಮುಕ್ತಃ ಸುಧೀಃ ॥**

(ಶ್ಲೋ. ೬೪, ೬೫, ೬೮, ೭೦, ೭೧, ೭೨)

ಸ್ವಯಸ್ಥಲದ ಸ್ವಯನೆನಿಸಬಹುದು ಜಿತೇಂದ್ರಿಯನಾಗಿ, ಇದರಂತೆ, ಚರನೆನಿಸಬಹುದು ಇಷ್ಟಲಿಂಗದಲ್ಲಿ ಚಿತ್ತ ಲಯವಾಗಿ, ಅಂದರೆ ಪರನೆನಿಸುವುದು ಕಠಕಷ್ಟವಿರುತ್ತೆ. ಮಾನವ ಸಹಜವಾಗಿ ಗುಣಮಯಿ. ಸತ್ವ, ರಜಸ್ತಮೋ ಗುಣಗಳಿಂದ ಸದಾ ಬಂಧಿತನಾಗಿ, ರಾಗಾದಿಗಳಿಂದ ಆವೃತನಾಗಿದ್ದಾನೆ. ಈ ಕೆಸರಿನಿಂದ ಇವನನ್ನು ಮೇಲೆತ್ತುವವರೊಬ್ಬರು ಬೇಕು. ಈ ಕಾರ್ಯ ಮಹಾ ಗುರುವಿನಿಂದಲ್ಲದೆ ಬೇರೆಯವರಿಂದ ಸಾಧ್ಯವಿಲ್ಲ.

**ತಮೋ ಮೂಲಾಹಿ ಸಂಜಾತಾ ರಾಗದ್ವೇಶಾದಿ ಪಾದಪಾಃ ।**
**ಶಿವಜ್ಞಾನ ಕುಠಾರೇಣ ಛಿದ್ಯಂತೇಹಿ ನಿರಂತರಂ ॥**

(ಸಿ.ಶಿ. ಪರಿ. ೧೩. ಶ್ಲೋ ೨೦)

ಹೊಳೆಯ ನೀರನ್ನು ಧೂಳು ಆವರಿಸಿರುವುದರಿಂದ ಆಗಗ ಮೇಲಿನ ನೀರನ್ನು ಕೈಯಿಂದ ಅತ್ತಿತ್ತ ಆಡಿಸಿದಾಗ ತಿಳಿನೀರಲ್ಲಿ ಮುಖ ಕಾಣುವುದು, ಇದರಂತೆ ನಮ್ಮ ಮನಸ್ಸೆಂಬ ಸರೋವರದಲ್ಲಿ, ತ್ರಿಗುಣಗಳ ಫಲವಾಗಿ, ಕಾಮ ಕ್ರೋಧಾದಿ ರಜ(ಧೂಳು)ಆವರಿಸುವುದು ಸಹಜವಿರುತ್ತೆ. ಈ ತ್ರಿಮಲಗಳನ್ನು,—

**ಶಿವಜ್ಞಾನ ಕುಠಾರೇಣ । ಛಿದ್ಯಂತೇ ಹಿ ನಿರಂತರಂ ॥**

ಅಂದರೆ ಆಗಾಗ ಮನೋಮಂಡಲದಲ್ಲಿ, ವಾಸನಾ ದೋಷದಿಂದ ತಲೆದೋರುವ

ಕಾಮಾದಿ ವಾಸನೆಗಳನ್ನು ಬೇರು ಸಹಿತ, ಶಿವಜ್ಞಾನವೆಂಬ ಹರಿತವಾದ ಖಡ್ಗದಿಂದ ಕತ್ತರಿಸಿ, ಕಡಿದು ತುಂಡು ತುಂಡು ಮಾಡಿ, ಚೂರ್ಣ ಪ್ರಚೂರ್ಣ ಗೊಳಿಸಿ, ಮನೋಬುದ್ಧಿಗಳನ್ನು ಗಂಗಾಜಲದಂತೆ ಪ್ರಶಾಂತಗೊಳಿಸಬೇಕು. ಇದು ಸಾಧಕನ ಪ್ರಥಮ ಕರ್ತವ್ಯ.

ಈ ಅಂಶವನ್ನೇ ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ, ಓ ಪಾರ್ಥಾ ! ಪರಂತಪ—

**ನ ರೂಪಮಸ್ಯೇಹ ತಥೋ ಪಲಭ್ಯತೇ ।**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಂ ಮೂಲಂ ।**
**ಅಸಂಘ ಶಸ್ತ್ರೇಣ ದೃಢೇನಛಿತ್ವಾ ॥**

(ಅ. ೧೫ ಶ್ಲೋ ೩)

ಅಶ್ವತ್ಥನಾಮಕ ಸಂಸಾರ ವೃಕ್ಷವನ್ನು ಬೇರು ಸಮೇತ ಕತ್ತರಿಸಲು ಬೇಕಾದ ಹರಿತವಾದ ಆಯುಧವೆಂದರೆ ಅಸಂಘವೆಂಬ ಶಸ್ತ್ರ. ಅಂದರೆ, ದುಃಖಮಯ ಕ್ಷಣಿಕ, ಕಾಮಾದಿಗಳನ್ನು ದೂರೀಕರಿಸಿ, ಸರ್ವೇಂದ್ರಿಯಗಳನ್ನು ಶಿವಚಿಂತನೆ ಧ್ಯಾನಾದಿಗಳಲ್ಲಿ ವಿಲೀನಗೊಳಿಸುವ ಪ್ರಯತ್ನವೆಂಬುದೆ ಖಡ್ಗವೆಂದರಿಯಬೇಕು. ವಿಷಯಾದಿಗಳ ಸಂಘ ಸಂಸ್ಕಾರಗಳಿಂದ ಪೂರ್ಣ ವಿಮುಖನಾಗಿರುವ ಯಾವ ದೃಢಭಾವವಿದೆಯೋ ಅದೇ ಅಸಂಘ ಶಾಸ್ತ್ರವೆನಿಸಿದೆ. ಪರಸ್ಥಲ ತತ್ವವನ್ನರಿಯಲು, ಈ ಅಸಂಘ ಶಸ್ತ್ರ ಅರ್ಥಾತ್ ಶಿವಜ್ಞಾನ ಕುಠಾರದ ಬಳಕೆ ಅವಶ್ಯ ಸರ್ವದಾ ಸಾಧಕನಿಗೆ ಬೇಕು. "ಪರಸ್ಥಲ"ದ ಘನತತ್ವವನ್ನು ಅಳವಡಿಸಿಕೊಳ್ಳಲು "**ನಿಸ್ತ್ರೈಗುಣ್ಯೋ ಭವಾರ್ಜುನ**" ಎಂಬಂತೆ, ನಾವು ತ್ರಿಗುಣಾತೀತವಾದ ಪವಿತ್ರ ಭಾವದಿಂದ ಕೂಡಿ ಶುದ್ಧ ಸ್ಫಟಿಕ ಶಂಕಾಶ ಸ್ಥಿತಿಯಲ್ಲಿರಬೇಕು, ಶಿವ ಶರಣನಿಗೆ. ಸ್ವಸ್ವರೂಪಾನುಸಂಧಾನಕ್ಕಿಂತ ಅಧಿಕವಾದುದು ಬೇರೊಂದಿಲ್ಲವೆಂದು ಮನವರಿಕೆಯಾಗುವುದೇ ಪರಸ್ಥಲದ ಸಂಜ್ಞೆ.

**ತ್ವತ್ಪಾದ ಪಂಕಜ ಯುಗಾನತ ಭಕ್ತ ಪಂಕ್ತಿಃ ।**
**ಲೋಕದ್ವಯಂ ತ್ರಿಯಮಿಯಾದಿತಿ ಬೋಧಯಂ ತಾ ॥**
**ಶ್ರೀಪಾದ ಪೌಹಿ ನಿಲಯೋ ಪರ ತೇ ವಿಭಾತಃ ।**
**ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥**

ಉತ್ತುಂಗ ಗೋಪುರ ನಿರೀಕ್ಷಣ ಹೃಷ್ಟ ಚಿತ್ತಾಃ ।
ಭಕ್ತಾಸ್ತ್ವನೀಕ್ಷ್ಯ ಭವತಃ ಪರಿವಾರ ಮಂತಃ ।
ತ್ವದ್ದರ್ಶನೋತ್ಕಮನಸಃ ಪ್ರಣತಾಃ ಪ್ರಪನ್ನಾಃ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಂ ॥

---

ಲಿಂಗಸ್ಥಲ ೧೦] ಕ್ರಿಯಾಗಮಸ್ಥಲ [(ಪರಿ. ೧೬)

ಶಿವೋಹಿ ಪರಮಃ ಸಾಕ್ಷಾತ್ ಪೂಜಾತಸ್ಯ ಕ್ರಿಯೋಚ್ಯತೇ ।
ತತ್ಪರಾ ಆಗಮಾ ಯಸ್ಮಾತ್ತದುಕ್ತೋsಯಂ ಕ್ರಿಯಾಗಮಃ ॥

ಪ್ರಕಾಶತೇ ಯಥಾನಾಗ್ನಿರರಣ್ಯಾಂ ಮಥನಂ ವಿನಾ ।
ಕ್ರಿಯಾಂ ವಿನಾ ತಥಾಂತಸ್ಥೋ ನ ಪ್ರಕಾಶೋ ಭವೇಚ್ಛಿವಃ ॥

ಗುರೋರಾದೇಶಮಾಸಾಧ್ಯ ಪೂಜಯೇತ್ಪರಮೇಶ್ವರಂ ।
ಪೂಜಿತೇ ಪರಮೇಶಾನೇ ಪೂಜಿತಾಃ ಸರ್ವ ದೇವತಾಃ ॥

ಅಂಧಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣೀ ।
ಫಲೋತ್ಪತ್ತೌ ವಿರಕ್ತಸ್ತು ತಸ್ಮಾತ್ತದ್ದ್ವಯ ಮಾಚರೇತ್ ॥

ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪತೇ ।
ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ ॥

ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।
ತಸ್ಮಾದಾಚಾರವಾನ್ ಜ್ಞಾನೀ ಭವೇದಾ ದೇಹ ಪಾತನಂ ॥

(ಶ್ಲೋ- ೫, ೬, ೯, ೧೧, ೧೩, ೧೪)

ನಿರವಯವವಾದ ಬ್ರಹ್ಮದಲ್ಲಿ, ಮಾಯೆಯೂ, ಅವಿದ್ಯೆಯೂ ಸೇರಿ ಉಪಾದಿಪ್ಪಯಗಳ ಸೇರ್ಕೆಯಿಂದ ಈಶ್ವರ, ಜೀವ ಎಂಬೆರಡು ತತ್ವಗಳುಂಟಾದಂತೆ, ನಿರವಯವ ಬ್ರಹ್ಮದಲ್ಲಿ ಈಶ್ವರ, ಆತ್ಮ, ನಿಷ್ಕಲ, ಸಕಲ ಬ್ರಹ್ಮವೆಂಬವುಗಳು ತಲೆದೋರುವುವು. ಈಶ್ವರ ಯೋಗಮಾಯೆಯು ತ್ರಿಗುಣಾತ್ಮಕವಾದುದು. ಎಲ್ಲಾ ಜೀವರುಗಳು ಯೋಗಮಾಯೆಯ ಸೆಳತಕ್ಕೆ ಸಿಕ್ಕಿ ನರಳು

ತ್ತಲಿದ್ದಾರೆ. ದೇಹಾಭಿಮಾನ, ಕ್ಷಣಿಕ ದುಃಖಮಯ ಭೋಗಾಭಿನಿವೇಶಗಳು ಅವಿದ್ಯೆಯೆನಿಸಿವೆ. ಮಾಯಾ ಶಕ್ತಿಯಲ್ಲಿ ಪ್ರಪಂಚವನ್ನು ಸೃಷ್ಟಿಸುವ ಶಕ್ತಿ ಮತ್ತೂ ತಾನು ಸೃಷ್ಟಿಸಿದ ವಸ್ತುಗಳ ಮೇಲೆ ಅಭಿಮಾನದಿಂದಾಗಿ ಮೋಹಿಸುವ ಶಕ್ತಿ ಈ ಎರಡೂ ಒಂದುಗೂಡಿರುವುದಾಗಿ ಕಂಡುಬರುತ್ತದೆ. ಇಂತಪ್ಪ ಸಂಘಟನೆಯನ್ನು ಅವಿದ್ಯೆಯೆಂದು ಕರೆಯಲಾಗಿದೆ. ಯೋಗಮಾಯಾಮಯ ದೇಹದಿಂದ ಪಂಚಭೂತಗಳೂ, ಪಂಚಪ್ರಾಣಗಳೂ, ಅಂತಃಕರಣ ಚತುಷ್ಟಯಗಳೂ ತ್ರಿಗುಣಗಳೂ, ಪುಣ್ಯ ಪಾಪಕೋಟಿಗಳೂ, ಅಡಿಗಡಿಗೆ ಅಲೆಗಳೋಪಾದಿ ಉಕ್ಕೇರುತ್ತವೆ. ಇವುಗಳ ಸಂದಣಿಯ ಮಧ್ಯೇ, ನಿರ್ಗುಣ ಬ್ರಹ್ಮ ಭಾವನೆ ತ್ರಿಗುಣಗಳಲ್ಲಿನ ಸತ್ವದ ವಿಕಾರವಾದ ಮಾಯೆಯೊಂದಿಗೇ ಕೂಡಿ, ಮಾಯಾ ತತ್ವವನ್ನು ವಶೀಕರಿಸಿ, ಈಶ್ವರನೆನಿಸಿರುವನು. ಅವಿದ್ಯೆಯ ನಾಮರೂಪಾಂತರಗಳಾದ ಸತ್ವ, ರಜ, ಸ್ತಮೊಗುಣಗಳ ಪ್ರಾಬಲ್ಯಕ್ಕೊಳಗಾಗಿ ಪ್ರತಿಷ್ಠಿತವಾದೀ ದೇಹದಲ್ಲಿ ಪಶುಗುಣಗಳಿಂದ ಅಂಗನು ಜೀವನೆನಿಸಿಹನು. ಪ್ರಜ್ಞಾವಂತನಾದೀ ಅಂಗನು ಮೇಲುಕ್ತವಾದ ಅವಿದ್ಯಾ ಸಂಬಂಧವನ್ನು ತನ್ನೊಳಗಿನ ಜ್ಞಾನಾಂಜನ ಶಲಾಖೆಯಿಂದ ಛಿನ್ನಗೊಳಿಸಿ ತನ್ಮೂಲಕ ಅವಿದ್ಯೆಯ ಪ್ರಾಬಲ್ಯವನ್ನು ಜಯಿಸಬೇಕಾಗಿದೆ. ತನ್ನ ಸಹಜ ಸುಂದರ ಈಶ್ವರತ್ವವನ್ನು (ಆತ್ಮಶ್ರೀಯನ್ನು) ಸಾಕ್ಷಾತ್ ಕರಿಸಿಕೊಳ್ಳಲಾರದೆ ಕ್ಷಣಿಕ ಹಾಗೂ ದುಃಖಮಯವಾದ ದೇಹೇಂದ್ರಿಯಗಳ ಭೋಗಾಸಕ್ತಿಯಲ್ಲಿ ಮುಳುಗಿ ದುಃಖ ಮಡುವಿನಲ್ಲಿ ಬಿದ್ದು ನೊಂದು, ಬೆಂದು ಬೆಂಡಾಗಿ ಕಂಪಿತನಾಗಿರ್ಪನು. ಅನೇಕ ಜನ್ಮಾರ್ಜಿತ ಶಿವಪೂಜಾ ಸುಕೃತ ವಿಶೇಷದಿಂದ ಎಚ್ಚೆತ್ತ ಮಾನವ ಸತ್ಸಂಘ ಸದ್ವಾಸನಾ ಬಲದಿಂದ ಪರಿವರ್ತನೆ ಹೊಂದಿ ಶಿವಾರಾಧನ ಕ್ರಿಯೆಯಲ್ಲಿ ತೊಡಗಿದರೆ,

ಕ್ಷಿಪ್ರಂ ಭವತಿ ಧರ್ಮಾತ್ಮಾ । ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ । ನ ಮೇ ಭಕ್ತಃ ಪ್ರಣಶ್ಯತಿ ॥

(ಗೀ. ಅ. ೯. ಶ್ಲೋ ೩೧)

ಎಂಬ ಗೀತೋಕ್ತಿಯಂತೆ ಸಾಧಕನು ಶೀಘ್ರದಲ್ಲಿ ವಿವೇಕ ಸಂಪನ್ನನಾಗಿ ಶರಣನೆನಿಸುವನು. ಶರಣನು ಲಿಂಗಾಂಗಿ ಧರ್ಮದಲ್ಲಿ ಆಸಕ್ತನಾಗಿ ಕ್ರಿಯಾಯೋಗದಿಂದ ಸಂಪನ್ನನೆನಿಸುವನು. ಈ ಹಂತದಲ್ಲಿ ಮೃಡನ ನಿತ್ಯನೈಮಿತ್ತಿಕ ಪೂಜಾದಿ

ಗಳೇ ಕ್ರಿಯೆ ಎನಿಸಿವೆ. ನಿಷ್ಕಾಮ ಕ್ರಿಯೆಯೇ ಮನೋ ನೈರ್ಮಲ್ಯಕ್ಕೆ ಸ್ಥಿರ ಬುದ್ಧಿಗೆ ಕಾರಣವೆನಿಸಿದೆ. ಫಲಾಭಿಲಾಸೆಯಿಲ್ಲದೆ ಈಶ್ವರಾರಾಧನೆ ಕ್ರಿಯೆಯಲ್ಲಿ ತೊಡಗಿ, ಆಚಾರದಿಂದ ಕೂಡಿದ ಸ್ವಧರ್ಮ ನಿಷ್ಠಾವಂತನಾಗಿ, ಕಾಯಕವೇ ಕೈಲಾಸವೆಂದು, "ವೃತ್ತಿಶ್ಚೈತನ್ಯರೂಪಿಣಿ" ಎಂಬ ರೇಣುಕರ ಆಶ್ವಾಸನೆಯಂತೆ, ಕ್ರಿಯಾವಂತ ಬ್ರಹ್ಮನಿಷ್ಠನಾಗಿರ್ಪ ಸದೃಢ ಸ್ಥಿತಿಯನ್ನು ಕ್ರಿಯಾಗಮ ಸ್ಥಲವೆನಿಸಿರುವುದು. ಶಿವಾಗಮಗಳ ಪ್ರಮಾಣಾನುಸಾರವಾಗಿ ಶಿವಜ್ಞಾನ ಪರವಾದ ಪೂಜಾಕರ್ಮ (ಕ್ರಿಯೆ) ಗಳನ್ನು ಶಿವಾರಾಧನ ಬುದ್ಧಿಯಿಂದ ಗುರೂಪದೇಶಾನುಸಾರ, ಅಂಗತ್ರಯಂಗಳಲ್ಲಿನ ಲಿಂಗತ್ರಯಂಗಳನ್ನು ಅನನ್ಯ ಭಾವೇನ ಪೂಜಿಸುವ ವಿಧಾನ **ಅಹಂಗ್ರಹೋಪಾಸನೆಯೆನಿಸಿ**, ಕ್ರಿಯಾಗಮಸ್ಥಲವೆಂದೆನಿಸಿರುತ್ತೆ.

**ಶಿವೋ ಹಿ ಪರಮಃ ಸಾಕ್ಷಾತ್ ಪೂಜಾತಸ್ಯ ।**
**ಕ್ರಿಯೋಚ್ಯತೇ ತತ್ಪರಾ ಆಗಮಾ ಯಸ್ಮಾ ।**
**ತ್ತದುಕ್ತೋಽಯಂ ಕ್ರಿಯಾಗಮಃ ॥**

ಶಿವಾಗಮವೆಂದರೆ ಶಿವನ ಮುಖ ಕಮಲದಿಂದ ಉಪದೇಶ ರೂಪದಲ್ಲಿ ತನ್ನರ್ಧಾಂಗಿ ಶ್ರೀಗಿರಿಜೆಗೆ ಆತ್ಮೀಯವಾಗಿ ಬೋಧಿಸಿದ ಏಕೋತ್ತರ ಶತಸ್ಥಲಾತ್ಮಕ ಲಿಂಗಾಂಗ ಸಾಮರಸ್ಯದ ತತ್ವಸುಧೆಯಕ್ಕುಂ. ಜಗದಾದಿಯಲ್ಲಿ ಅಂದರೆ ವೇದಕಾಲಕ್ಕೆ ಪೂರ್ವವೇ ಶಿವನು ಶಿವೆಗೆ ಬೋಧಿಸಿದ ಘನತತ್ವವಿದು. ಇದನ್ನೇ ತದನಂತರ ರುದ್ರನು ದೇವಗುರು ಬೃಹಸ್ಪತ್ಯಾಚಾರ್ಯರಿಗೆ ಬೋಧಿಸಿರುವನು. ಈ ಶಿವಾದ್ವೈತ ಸಿದ್ಧಾಂತವನ್ನು ದ್ವಾಪರ ಯುಗಾರಂಭ ಕಾಲದಲ್ಲಿ ಆದಿ ಜಗದ್ಗುರು ಶ್ರೀರೇಣುಕಾಚಾರ್ಯರು, ಸಪ್ತರ್ಷಿ ಮಂಡಲಾಧಿಪತಿ ಕುಂಭ ಸಂಭವ ಆದಿ ಆಗಸ್ತ್ಯಮಹರ್ಷಿಗೆ ಮನಂಬುಗುವಂತೆ ಬೋಧಿಸಿ ಜಗತ್ತಿನಲ್ಲಿ ಈ ಮೋಕ್ಷಪ್ರದವಾದ ಅದ್ವಿತೀಯ ಸಿದ್ಧಾಂತವನ್ನು ಅಂದೆ ಸ್ಥಾಯಿಯಾಗಿ ಸ್ಥಾಪಿಸಿರುವರು. ಕ್ರಿಯಾಗಮ ಸ್ಥಲವೆಂದರೆ ಸನಾತನವಾದ ತಾಂತ್ರಿಕ ವೈಧಿಕ ಮಾರ್ಗಾನುಸಾರ ಪೂರ್ವೋಕ್ತವಾದ ಪರಸ್ಥಲ ಸಂಪನ್ನನಾದ ಶಿವಯೋಗೀಶ್ವರ ಪ್ರತಿಕ್ರಿಯೆಯಿಂದ ಪ್ರಬುದ್ಧನಾದ ಶಿವಯೋಗೀಶ್ವರನೇ ಪ್ರತ್ಯಕ್ಷ ಶಿವನೆನಿಸುವನು. ಶ್ರೀಗುರುವಿನ ಪಾದಪೂಜೆಯೇ ಶಿವಪೂಜೆಯಾದ್ದರಿಂದ ಕ್ರಿಯೆ ಎನಿಸಿರುವುದು.

**ಗುರುಪೂಜೈವ ಪೂಜಸ್ಯ । ಶಿವಸ್ಯ ಪರಮಾತ್ಮನಃ ॥**

ಎಂದಿದೆ ಶಿವಾಗಮ. ಈ ಕಾರಣಗಳಿಂದಾಗಿ ೨೮ ಶಿವಾಗಮ ವಿಶೇಷತಃ ಕ್ರಿಯಾಪ್ರಧಾನಗಳಾಗಿರುವುವು ಜೀವನೋಪಾಯಕ್ಕಾಗಿ ಮಾಡುವ ಜಡಕರ್ಮಗಳು ಕ್ರಿಯೆಯಾಗಲಾರವು. ಇದರಿಂದ ಕೋಟಿ ಜಡ ಕರ್ಮಗಳ ಮಾಡುತ್ತಾ ಕರ್ಮಪಾಶಕ್ಕೀಡಾಗಿ ವೃಥಾ ಬಳಲಿ ಬೆಂಡಾಗದೆ, ಷಟ್ಸ್ಥಲಾಂತರ್ಗತವಾದ ಶಿವಕ್ರಿಯೆಗಳನ್ನು ಭಕ್ತ್ಯಾ ಸದಾ ಆಚರಿಸುತ್ತಾ ಅನಂತ ಫಲವನ್ನು ಪಡೆಯುವುದು ಕ್ರಿಯಾಗಮ ಸ್ಥಲದ ಧ್ಯೇಯವೆನಿಸಿದೆ. ಶಿವನೇ ಸಾಕ್ಷಾತ್ಪರಮಾತ್ಮನೆಂದರಿತು ಶಿವವ್ರತ, ಶಿವಜ್ಞಾನ, ಶಿವಪೂಜಾ ಧ್ಯಾನಾದಿಗಳಲ್ಲಿ ನಿಷ್ಠೆಯೇ ಕ್ರಿಯಾಗಮಸ್ಥವೆನಿಸಿದೆ.

**ಪ್ರಕಾಶತೇ ಯಥಾನಾಗ್ನಿ ರರಣ್ಯಾಂ ಮಥನಂ ವಿನಾ ।**
**ಕ್ರಿಯಾಂ ವಿನಾತ ಥಾಂತಸ್ಥೋ ನ ಪ್ರಕಾಶೋ ಭವೇಚ್ಛಿವಃ ॥**

ಬನ್ನಿ ಬಿದುರಿನ ಮರಗಳ ರೆಂಬೆ ಕೊಂಬೆಗಳು ಗಾಳಿಯ ಹೊಡತಕ್ಕೆ ಬಿಡಿ ಬಿಡಿತಾಗಿ ತಗಲಿ, ಉಜ್ಜಾಟದಿಂದ ಮಥಿಸಿ ಕಾಪೇರಿ ಅ ಅರಣ್ಯದಲ್ಲಿ ದಟ್ಟವಾದ ಮರಗಳ ಒತ್ತಡದಿಂದ ಅಗ್ನಿ ಹೊರಬಿದ್ದು ದಾವಾಗ್ನಿ ಪ್ರಜ್ವಲಿಸುವಂತೆ, ಮನೋಮಂಡಲದಲ್ಲಿ ಸತತ ಶಿವಚಿಂತನೆ, ಜಪ ತಪಗಳ ವ್ರತದಿಂದಾಗಿ, ಭಕ್ತಿವಿಶೇಷದಿಂದ ಸ್ವಾನುಭೂತಿಯಲ್ಲಿ ಸ್ವಸ್ವರೂಪಾನಂದವನ್ನು ಹೊಂದುವನು.

**ಅಂಧ ಪಂಗುವದನ್ಯೋನ್ಯ ।**
**ಸಾಪೇಕ್ಷೇ ಜ್ಞಾನಕರ್ಮಣೀ ॥**

ಕ್ರಿಯೆ ಕುರುಡು ಜ್ಞಾನ ಕಾಲಿಲ್ಲದ ಹೆಳವ. ಇಬ್ಬರೂ ಒಂದೇ ಸ್ಥಳದಲ್ಲಿ ರಬೇಕಾಗುತ್ತೆ. ಸ್ವೇಚ್ಛೆಯಿಂದ ಸಂಚರಿಸಲು ಶಕ್ಯವಿಲ್ಲ. ಇಬ್ಬರೂ ಸಹಕರಿಸಿದ್ದಲ್ಲಿ, ಕುರುಡನಿಗೆ ಕಾಲಿರುವುದರಿಂದ, ಇವನ ಹೆಗಲೇರಿದ ಹೆಳವ ಕಣ್ಣುಳ್ಳವನಾದ್ದರಿಂದ, ಕುರುಡನಿಗೆ ಮಾರ್ಗದರ್ಶನ ನೀಡುವುದರಿಂದ ಇಬ್ಬರೂ ಬಯಸಿದ ಊರಿಗೆ ಹೋಗಬಹುದು. ಇದರಂತೆ ಕ್ರಿಯಾಜ್ಞಾನಗಳ ಅವಶ್ಯಕತೆ ಇರುತ್ತೆ. ಕ್ರಿಯಾರಹಿತ ಜ್ಞಾನ ಮತ್ತೂ ಜ್ಞಾನವಿಲ್ಲದ ಕ್ರಿಯೆ ಅಪ್ರಯೋಜಕವೆನಿಸಿವೆ. ಇವೆರಡೂ ಪೂರಕವೆನಿಸಿವೆ. ಆದ್ದರಿಂದ ದೇಹವಿರುವವರೆವಿಗೂ ಜ್ಞಾನಕ್ರಿಯ

ಗಳನ್ನು ಒಂದುಗೂಡಿಸಿ, ಶಿವನನ್ನು ಆರಾಧಿಸಿ ಮಹಾದೇವನ ಕೃಪೆಗೆ ಪಾತ್ರರಾಗಲು ಕ್ರಿಯಾಗಮಸ್ಥಲ ಬಂಧುರವಾದ ನಿಲ್ದಾಣದಂತೆ ಪರಿಶೋಭಿತವಾಗಿದೆ. ಶಿವಶರಣರು ಶಿವನೇ ಸಾಕ್ಷಾತ್ಪರಮಾತ್ಮಯೆಂದರಿತು ಅವನ ಪೂಜೆಯೇ ಇಷ್ಟಲಿಂಗ ಪೂಜೆಯೆಂದು ತಿಳಿದಿಹರು. ಇದೇ ಕ್ರಿಯೆಗಾಗಮಸ್ಥಲದ ನಿರೂಪಣೆ. ಶಿವಾಗಮ ವಿಧಿಯೇ ಶಿವನ ಶಾಸನವೆಂದರಿತು ಶಿವಕ್ರಿಯಾಲೋಲರಾಗಿ ಸಿದ್ಧಿಯಪ್ಪುದು ಶಿವಾಗಮ ಪ್ರಮಾಣವೆನಿಸಿದೆ. ಲಿಂಗಾಂಗಿ ಲಿಂಗಪೂಜಾರಾಧಕನಾದ ಪರಮ ವೀರಶೈವನು, ಗುರೂಪದೇಶಾನುಸಾರ ತನ್ನ ನಿಜೇಷ್ಟ ಲಿಂಗವನ್ನು ಭಕ್ತ್ಯಾ ನಿತ್ಯ ದ್ವಿಸಂಧ್ಯಾ ಕಾಲಗಳಲ್ಲಿ ನಿಷ್ಠೆಯಿಂದ ಪೂಜಿಸುವ ವಿಧಾನವೇ ಕ್ರಿಯಾಗಮಸ್ಥಲವೆನಿಸಿದೆ. ಕ್ರಿಯೆಯಿಂದ ಕೂಡಿದ ಶಿವಜ್ಞಾನಕ್ಕೆ ಶಿವನು ಸುಲಭದಲ್ಲಿ ಒಲಿದು ನಲಿಯುವನು.

ಸೌಗಂಧ್ಯಚಾರು ಕಪಿಲಾ ಸಲಿಲ ಪ್ರಪೂರ್ಣಂ ।
ಹಸ್ತೀಂದ್ರ ಕುಂಭವರ ರಾಜತ ಕುಂಭಯುಗ್ಮಂ ।
ಆನೀತ ಮಾಗ ಮರತ್ಯೈಸ್ತವ ಪೂಜನಾರ್ಥಂ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತ ॥

ವಿಪ್ರಾಸ್ತ್ರಯೀ ವಿವಿಧ ಶಾಸ್ತ್ರಕೃತಾವಗಾಹಾಃ ।
ಸ್ನಾತಾಧೃತೋದ ಕಲಶಾ ಮಣಿ ಕರ್ಣಿಕಾಯಾಂ ।
ಕಲ್ಯೇ ಭವಂತಮಭಿಷೇಚಯಿತುಂ ಪ್ರಪನ್ನಾಃ ।
ಶ್ರೀಕಂಠನಾಥ ಜಗತಾಂ ತವ ಸುಪ್ರಭಾತಮ್ ॥

---

## ಲಿಂಗಸ್ಥಲ ೧೧] ಭಾವಾಗಮ ಸ್ಥಲಂ [(ಪರಿ. ೧೬)

ಶಿವೋಹಮಿತಿ ಭಾವೋ ಹಿ ಶಿವತಾ ಪತ್ತಿ ಕಾರಣಂ ।
ನ ಜ್ಞಾನಮಾತ್ರಂ ನಾಚಾರೋ ಭಾವಯುಕ್ತಃ ಶಿವೋ ಭವೇತ್ ॥

ಜ್ಞಾನಂ ವಸ್ತು ಪರಿಚ್ಛೇದೋ ಧ್ಯಾನಂ ತದ್ಭಾವ ಕಾರಣಂ ।
ತಸ್ಮಾದ್ ಜ್ಞಾತೇ ಮಹಾದೇವೇ ಧ್ಯಾನಯುಕ್ತೋ ಭವೇತ್ಸುಧೀಃ ॥

ಅಂತರ್ಬಹಿಶ್ಚ ಸರ್ವತ್ರ ಪರಿಪೂರ್ಣಂ ಮಹೇಶ್ವರಂ ।
ಭಾವಯೇತ್ಪರಮಾನಂದ ಲಬ್ಧಯೇ ಪಂಡಿತೋತ್ತಮಃ ॥

ಅರ್ಥಹೀನಾ ಯಥಾ ವಾಣೀ ಪತಿಹೀನಾ ಯಥಾ ಸತೀ ।
ಶ್ರುತಿಹೀನಾ ಯಥಾ ಬುದ್ಧಿ ರ್ಭಾವ ಹೀನಾ ತಥಾ ಕ್ರಿಯಾ ॥

ಚಕ್ಷುರ್ಹೀನೋ ಯಥಾ ರೂಪಂ ನ ಕಿಂಚಿದ್ವೀಕ್ಷಿತುಂ ಕ್ಷಮಃ ।
ಭಾವಹೀನಸ್ತಥಾ ಯೋಗೀ ನ ಶಿವಂ ದ್ರಷ್ಟುಮೀಶ್ವರಃ ॥

(ಶ್ಲೋ. ೧೫, ೧೬, ೧೭, ೧೮, ೧೯, ೨೦)

ಭಕ್ತಿಯಿಂದೊಡಗೂಡಿದ ಸದ್ಭಾವ ಭಗವಂತನ ಕೃಪಾ ದೀಕ್ಷೆಗೆ ಅರ್ಹವೆನಿಸಿದೆ.

ಭಾವೇ ಭಾವೇ ಹೃದಯ ಭವನೇ ।
ಭಾವ ಏವಂ ಭವಂತಃ ॥

ಕ್ರಿಯಾಜ್ಞಾನಗಳಿಗಿಂತ ಭಾವ ಅತ್ಯಧಿಕವಿರುತ್ತೆ. ಸದ್ಭಾವದಿಂದ ಜನತೆಯನ್ನು ಭಾವಿಸುವುದರಿಂದ ಭಗವಂತನು ಸಂಪ್ರೀತನಾಗುವನು. ಆದ್ದರಿಂದ ಭಗವಂತನನ್ನು ಭಕ್ತ್ಯಾ ಬೇಡುತ್ತಾ—

"ಓ ದೇವಾ! ಎನ್ನ ಭಾವ ಬಂಡಾರದಲ್ಲಿ ನಿನ್ನ ಧ್ಯಾನಾಮೃತವ ತುಂಬಿ ತುಳುಕಿಸಯ್ಯಾ ದಯಾನಿಧೇ ಕೃಪಾಸಾಗರ ಭಕ್ತಮಂದಾರಾ"

ಎಂದು ಪ್ರಾರ್ಥಿಸುತ್ತಿರಬೇಕು. ಭಾವಾಗಮವೆಂದರೆ ಭಾವಸಾಹಿತ್ಯ ಭಾವಸಂಪತ್ತು. ಆ ಭಾವದಲ್ಲಿ ಭಗವಂತನ ನಿಕಟ ಸಂಪರ್ಕ ತಾದಾತ್ಮ್ಯ ರೂಪದಿಂದ ಪ್ರಕಟವಾಗುವುದು. ಯೋಗಿಯಾದರೇನು, ಜ್ಞಾನಿಯಾದರೇನು, ದಾನಿಯಾದರೇನು, ಭಾವವಿಲ್ಲದ ಕ್ರಿಯಾಜ್ಞಾನಂಗಳು ಉಪಚಾರಗಳು, ಸಮುದ್ರ ದಲೆಗಳ ನೊರೆಯಂತಕ್ಕು ನೋಡಾ, ಭಕ್ತನ ಸದ್ಭಾವಕ್ಕೆ ಬಹು ಶೀಘ್ರದಲ್ಲಿ ಭಗವಂತನು ಒಲಿಯುವನು. ಭಾವ ಯುಕ್ತವಾದ ಶಿವಪೂಜಾದಿ ಕರ್ಮಗಳು, ಪರಿಪೂರ್ಣವಾಗಿ ಶಿವಪದವೆನಿಸಿ ಶಿವರೂಪವಾಗಿಯೇ ಇರಬೇಕು. ಶಿವಾರ್ಪಿತ ಸಹಜ ಭಾವ. ಶುದ್ಧಾಂತರಂಗದಲ್ಲಿ ಹಾಲುಕ್ಕಿದಂತೆ ವಿಜೃಂಭಿತವಾಗದಿದ್ದರೆ ಬರಿ ಕ್ರಿಯೆ ಅಥವಾ ಬರಿ ಜ್ಞಾನ ಅಷ್ಟು ಫಲಕಾರಿಯಾಗದು. ಕ್ರಿಯಾಭಕ್ತಿ ಜ್ಞಾನಗಳು ಭಾವದಿಂದೊಡಗೂಡಿದ್ದರೆ ಮಾತ್ರ ಫಲಪ್ರದವೆನಿ

ಸುವುವು. ಬುದ್ಧಿಗೆಟ್ಟವನ ಮಾತಿನಂತೆ, ಪತಿಯಿಲ್ಲದ ಸತಿಯಂತೆ, ಶೃತಿಗನ್ವಯಿಸದ ಹಾಡಿನಂತೆ, ಭಾವಗತಿಯಿಲ್ಲದ ಕ್ರಿಯೆ ವ್ಯರ್ಥವಹುದು. ಭ್ರಮರ ಕೀಟನ್ಯಾಯಾನುಸಾರ, ಭ್ರಮರವ ಭಯದಿಂದ ನೆನೆದ ಕೀಟ; "ಚಿಂದಿತ್ತು ಚಿಂದಿತ್ತು ಶಿವಮಾನಾರ್" ಎಂಬ ತಮಿಳು ಶಿವಯೋಗಿಯ ನುಡಿಯಂತೆ; ತಾ ಭ್ರಮರವಾದಂತೆ ಭವಹರನ ನೆನೆದು ಭಾವಪೂರಿತನಾಗಿ, ತಾ ಭವಹರನಪ್ಪುದು ತಪ್ಪದು ನೋಡಾ, ಎನಿತು ಪೂಜಿಸಿನೋಡೇನು, ಅಡಿಗಡಿಗೆ ಪೂಜಿಸಿ ಫಲವೇನು. ಸ್ವಯಂ ಸಿದ್ಧವಾದ ಭಾವವಿಲ್ಲದೆ ಈ ಪೂಜೆಯ ಕೈಗೊಳ್ಳ ನೀಶ." "ಯದ್ಭಾವೋ ತದ್ಭವತಿ"ಇದು ಭಾವಾಗಮಸ್ಥಲದ ಮೂಲಮಂತ್ರ. ಒಂದು ಮಾತಿನಲ್ಲಿ ಹೇಳುವುದಾದರೆ ಭಾವವಿಲ್ಲದ ಭಕ್ತ ಬಿತ್ತಿಯಿಲ್ಲದ ಚಿತ್ರದಂತಹುದು.

ಲಿಂಗಸ್ಥಲ ೧೨] ಜ್ಞಾನಾಗಮಸ್ಥಲ [(ಪರಿ. ೧೬)

ಭಾವೇನ ಕಿಂ ಫಲಂ ಪುಂಸಾಂ ಕರ್ಮಣಾ ವಾ ಕಿಮಿಷ್ಯತೇ ।
ಭಾವಕರ್ಮಸಮಾಯುಕ್ತಂ ಜ್ಞಾನಮೇವ ವಿಮುಕ್ತಿದಂ ॥

ಕೇವಲಂ ಕರ್ಮಮಾತ್ರೇಣ ಜನ್ಮಕೋಟಿಶತೈರಪಿ ।
ನಾತ್ಮನಾಂ ಜಾಯತೇ ಮುಕ್ತಿರ್ಜ್ಞಾನಂ ಮುಕ್ತೇರ್ಹಿಕಾರಣಂ ॥

ಜ್ಞಾನಹೀನಂ ಸದಾ ಕರ್ಮ ಪುಂಸಾಂ ಸಂಸಾರಕಾರಣಂ ।
ತದೇವಜ್ಞಾನಸಂಯೋಗೇನ ಸಂಸಾರವಿನಿವರ್ತಕಂ ॥

ಶಿವಾತ್ಮಕಮಿದಂ ಸರ್ವಂ ಶಿವದನ್ಯನ್ನವಿದ್ಯತೇ ।
ಶಿವೋಽಹಮಿತಿ ಯಾ ಬುದ್ಧಿಸ್ತದೇವ ಜ್ಞಾನಮುತ್ತಮಂ ॥

(ಶ್ಲೋ. ೨೫, ೨೬, ೨೭, ೩೧)

ಕರ್ಮ, ಭಾವ, ಜ್ಞಾನಾದಿಗಳ ಅವಶ್ಯಕತೆ ಅತ್ಯಂತ ನಿಕಟವೆನಿಸಿವೆ. ಮಾನವ ತನ್ನ ಜೀವನದಲ್ಲಿ ಫಲಪ್ರದವಾದ ನಿಜ ಸುಖವನ್ನು ಕಾಣಲು, ಈ ತ್ರಿವೇಣಿಸಂಗಮದ ಸಂಸರ್ಗ ಸಾಧ್ಯವೆನ್ನುತ್ತೆ, ಜಗತ್ತಿನಲ್ಲಿ ಸುಖ ಇವೆರಡರಿಂದ ಕೂಡಿದೆ ನಿತ್ಯ ಸುಖ, ಅನಿತ್ಯ ಸುಖ. ಭಾರ್ಯಾ ಪುತ್ರಾದಿ ಧನಕನಕ ವಸ್ತು

ವಾಹನ ಗೃಹಾರಾಮಗಳಿಂದ ಪ್ರಾಪ್ತವಾಗುವ ಸುಖ ಮೊದಮೊದಲು ಹಿತಕರವಾಗಿ ಕಂಡುಬಂದರೂ, ಅಂತ್ಯದಲ್ಲಿ ನಮ್ಮ ಅವ್ಯವಸ್ಥೆ ವ್ಯವಹಾರಗಳಿಂದ ಇವು ನಮ್ಮನ್ನು ದುಃಖಸಾಗರದಲ್ಲಿ ಮುಳಿಗೇಳಿಸುತ್ತ ಕಷ್ಟಕಾರ್ಪಣ್ಯಗಳಿಗೆ ಗುರಿ ಮಾಡುವುವು! "ಸಂತತ ಸಂಪತ್ತು, ದುಃಖಕ್ಕೆ ಕಾರಣ"ವೆಂದು ಮಹಾತ್ಮ ಕಬೀರ್ ನುಡಿದಿದ್ದಾರೆ. ಈ ಸುಖ ಅನಿತ್ಯ ಹಾಗೂ ದುಃಖಮಯವಿರುತ್ತೆ. ಜಗತ್ತೇ ಅನಿತ್ಯವಿರುತ್ತೆ. ಜಗತ್ತಿನ ಸುಖವೂ ಅನಿತ್ಯ.

**ಕೇವಲಂ ಕರ್ಮಮಾತ್ರೇಣ । ಜನ್ಮಕೋಟಿ ಶತೈರಪಿ ।**
**ನಾತ್ಮಾನಾಂ ಜಾಯತೇ ಮುಕ್ತಿ । ಜ್ಞಾನಂ ಮುಕ್ತೇರ್ಹಿ ಕಾರಣಂ ॥**

ಎಂದು ಪರಮಾಚಾರ್ಯ ರೇಣುಕರು ಅಪ್ಪಣೆ ಕೊಡಿಸಿರುವರು.

**ತದ್ಯತೇಹ ಕರ್ಮಚಿತೋ ಲೋಕಃ ಕ್ಷೀಯತೇ ।**
**ಏವಮೇವಾ ಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ ॥**

ಎಂದಿದೆ ಶಿವಾಗಮ.

ಅಂದರೆ, ಇಹಲೋಕ ಹೇಗೆ 'ದೃಷ್ಟ ನಷ್ಟಃ' ಕಣ್ಮುಂದೆ ಕ್ಷೀಣಿಸಿ ನಷ್ಟವಾಗುತ್ತಲಿದೆಯೋ ಅದರಂತೆ, ಅನಂತ ಸ್ವರ್ಗಲೋಕಗಳೂ ಸಹ ನಶ್ವರವಿರುವುವು ಎಂದು ಕಂಡುಬಂದಿದೆ. ಮಾನವ ತನ್ನ ಜೀವಿತ ಕಾಲದಲ್ಲಿ ಶಾಶ್ವತ ಫಲದಾಯಕವಾದ ಪರವಸ್ತುವಿನ ನಿತ್ಯಾನುಭವ ನಿತ್ಯ ಸುಖವನ್ನು ನಿತ್ಯಾನುಸಂಧಾನಗಳಿಂದ ಶುದ್ಧವಾದ ತನ್ನ ಅಂತರಂಗದಲ್ಲಿ ಸುಜ್ಞಾನ, ಸದ್ಭಾವ ಸತ್ಕ್ರಿಯೆ ಹಾಗೂ ವಿಶೇಷತಃ ಭಗವದ್ಭಕ್ತಿಗಳ ಆಚರಣೆ ಮೂಲಕ ನಿತ್ಯಾನಂದ ಶಿವಾನಂದದ ಕ್ಷೀರಸಾಗರದಲ್ಲಿ ಸತತ ಈಜುತ್ತಾ "ಆನಂದಂ ಬ್ರಹ್ಮ" ಎಂಬ ಸ್ವರೂಪದಲ್ಲಿ ರಂಜಿತನಾಗಿರಬಹುದು. ಈ ಕಾರಣದಿಂದ ಗೀತಾಚಾರ್ಯ ಶ್ರೀಕೃಷ್ಣನು—

**ನ ಹಿ ಜ್ಞಾನೇನ ಸದೃಶಂ । ಪವಿತ್ರಮಿಹವಿದ್ಯತೇ ।**
**ತತ್ಸ್ವಯಂ ಯೋಗ ಸಂಸಿದ್ಧಃ । ಕಾಲೇನಾತ್ಮನಿ ವಿದಂತಿ ॥**

(ಅ. ೪, ಶ್ಲೋ. ೩೮)

ಅರ್ಜುನಾ ಜ್ಞಾನಕ್ಕೆ ಸರಿಸಮಾನವಾದುದು ಈರೇಳು ಲೋಕಂಗಳಲ್ಲೂ

ಮತ್ತೊಂದಿಲ್ಲ. ನಿಷ್ಕಾಮ ಕರ್ಮಾಚರಣೆಯಿಂದ ಕಾಲಕ್ರಮದಲ್ಲಿ ಸುಜ್ಞಾನ ತಾನಾಗಿ ಪ್ರಜ್ವಲಿಸುವುದು. ಇಂತಹ ಶಿವಜ್ಞಾನೋದಯದಿಂದ ವಿಷಮ ಸಂಸಾರದಿಂದ ಮೇಲೆದ್ದು ಶ್ರೀಗುರೂಪದೇಶದ ಪ್ರಭಾವದಿಂದ ಕ್ರಿಯಾಜ್ಞಾನಗಳ ಸ್ವರೂಪ ಮತ್ತು ಉಪಯುಕ್ತ ಅಂಶಗಳನ್ನರಿತು, ಕೊನೆಗೆ ಸಾಧಕನಾದ ಮುಮುಕ್ಷು ಜ್ಞಾನವನ್ನೇ ಅವಲಂಭಿಸಿ ಪ್ರಧಾನವಾಗಿ ಆ ದಿಶೆಯಲ್ಲಿ ಪ್ರವರ್ತಿಸುವನು. ಕುರುಡನು ತನ್ನೆದುರಿಗಿರುವ ವಸ್ತುವನ್ನು ಹೇಗೆ ನೋಡಲಾರನೋ ಅದರಂತೆ ಜ್ಞಾನಹೀನ,ಪಶು ಸಮಾನನಾದ್ದರಿಂದ, ತನ್ನ ಆತ್ಮಸ್ಥಾನವಾದ ಶಿವನನ್ನು ಅರಿಯಲು ಅಶಕ್ತನಾಗಿ ಪರಿತಪಿಸುವನು. ಸುಜ್ಞಾನ ನೇತ್ರಗಳಿಗೆ ಶಿವದರ್ಶನ ಸುಲಭವಾಗಿ ಗೋಚರಿಸುವುದು. ಅಂತರಂಗದ ಜ್ಞಾನನೇತ್ರದಿಂದ ಶಿವಯೋಗಿಗಳು ಶಿವನನ್ನು ಕಂಡು ಭವರೋಗದಿಂದ ವಿಮುಕ್ತರಾಗಿರುವರು ಹೇ ಮುನೇ! ಜ್ಞಾನವಿಲ್ಲದ ಕರ್ಮ ಸಂಸಾರಸಾಗರದಲ್ಲಿ ತಳ್ಳಿ ಸಂಕೋಲೆಗಳಿಂದ ಬಂಧಿಸಿ ಸಂತಾಪಕ್ಕೆ ಈಡುಮಾಡುವುದು. ದೀಪವಿಲ್ಲದ ಮನೆಯೊಳಗಣ ಕತ್ತಲು ನೀಗುವುದೇ? ಜಗದ ರಾತ್ರಿಯಲ್ಲಿ ಆವರಿಸಿರುವ ಮಹಾಂಧಕಾರ ಉಡುರಾಜ (ಚಂದ್ರ)ನಿಲ್ಲದೆ ತೊಲಗುವುದೇ? ಪೃಥನ ಜ್ಞಾನವಿಲ್ಲದೆ ಅಡಗುವುದೇ ಮನದೊಳಗಣ ಅಂಧಕಾರ ಅದರಂತೆ, ಜ್ಞಾನಾಗಮಪ್ರೋಕ್ತ ಸುಜ್ಞಾನ ಶಾಸ್ತ್ರ, ಶಿವಜ್ಞಾನಾಚಾರ, ಲಿಂಗಾಚಾರಾದಿ ಪಂಚಾಚಾರಗಳು ಮೋಕ್ಷಗಾಮಿ ರಾಜ ಮಾರ್ಗಗಳೆನಿಸಿವೆ, ಶಾಶ್ವತ ಅಪವರ್ಗ ಫಲವಿದು ಕಂಡಯ್ಯಾ, ಇದರಿಂದಾಗಿ ಸಚ್ಛಿಷ್ಯನು ಶ್ರೀಮಹಾಗುರೂಪದೇಶವ ಪಡೆದು, ಕ್ರಿಯಾಗಮ, ಭಾವಾಗಮ, ಜ್ಞಾನಾಗಮಗಳ ಸಾರಮೃತವನ್ನು ಪಾನಮಾಡಿ ಆ ಪರಶಿವಾದ್ವೈತವೇ ತಾನೆಂಬ ಸೋಹಂ ಭಾವದಿಂದ ಅನವರತ ಅನುಸಂಧಾನ ಮಾಡುತ್ತಾ, ಘೋರ ವಿಷ ಸಂಸಾರ ಸಂಬಂಧದಿಂದ ದೂರನಾಗಿ, ಈಶನಿಂದಾದ ಜಗತ್ತು ಶಿವಮಯವೆಂಬ ಜ್ಞಾನವೇ ಜ್ಞಾನಾಗಮವೆಂದು ಶ್ರೀ ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯಮುನಿವರ್ಯನಿಗೆ ಮನಂಬುಗುವಂತೆ ಬೋಧಿಸಿರುವರು.

**ಓಂ ಶ್ರೀಕಂಠೇಶಾಯ ನಮಃ ಪ್ರಸರತಿ ಸಕಲಾಶಾ ।**
**ಮಂಗಲಸ್ತೂರ್ಯಘೋಷಃ ।**
**ಶ್ರಿತಜನ ನಿವ ಹೋಯಂ ಮಂಗಲ ದ್ರವ್ಯ ಹಸ್ತಃ ।**
**ಪಠತಿ ಪರಮ ಭಕ್ತ್ಯಾ ಮಂಗಲಸ್ತೋತ್ರ ಜಾತಂ ।**
**ಗರಲ ನಗರ ನಾಥೋ ತಿಷ್ಠತೇ ಸುಪ್ರಭಾತಂ ॥**

ಚರಮಚರಶೇಷಂ । ಏನವೈ ಭೂತಜಾತಂ |
ಪ್ರಭವತಿ ಕಿಲಯಸ್ಮಾ ದೇವ ಸಂಜೀವತೀದಂ ।
ಪ್ರವಿಲಯ ಮಿಹಯಸ್ಮಿನ್ನೇತಿ ಮಾಂಗಲ್ಯ ಮೂರ್ತೇ ।
ಗರಲ ನಗರ ನಾಥೋತ್ತಿಷ್ಠತೇ ಸುಪ್ರಭಾತಂ ॥

## ಮಾ-ಲಿಂಗಸ್ಥಲ ೧೩] ಸಕಾಯಸ್ಥಲಂ [(ಪರಿ. ೧೬)

ಕಾಯಂ ವಿನಾ ಸಮುತ್ಥಾನಾಂ । ನ ಕ್ರಿಯಾ ನ ಚ ಭಾವನಾ ।
ನ ಜ್ಞಾನಂ ಯತ್ತತೋ ಯೋಗೀ । ಕಾಯವಾನೇವ ಸಂಚರೇತ್ ॥

ಶಿವೈಕ್ಯ ಜ್ಞಾನಯುಕ್ತಸ್ಯ ಯೋಗಿನೋಪಿ ಮಹಾತ್ಮನಃ ।
ಕಾಯಯೋಗೇನ ಸಿದ್ಧ್ಯಂತಿ ಭೋಗ ಮೋಕ್ಷಾದಯಃ ಸದಾ ॥

ನಿಷ್ಕಲೋಹಿ ಮಹಾದೇವಃ ಪರಿಪೂರ್ಣಃ ಸದಾಶಿವಃ ।
ಜಗತ್ಸೃಷ್ಟ್ಯಾದಿ ಸಂಸಿದ್ಧ್ಯೈ ಮೂರ್ತಿಮಾನೇವ ಭಾಸತೇ ॥

ಬ್ರಹ್ಮಾದ್ಯಾ ದೇವತಾಃ ಸರ್ವಾ ಮುನಯೋಪಿ ಮುಮುಕ್ಷವಃ ।
ಕಾಯವಂತೋ ಹಿ ಕುರ್ವಂತಿ ತಪಃ ಸರ್ವಾರ್ಥಸಾಧಕಂ ॥

ತಪೋ ಹಿ ಮೂಲಂ ಸರ್ವಾಸಾಂ ಸಿದ್ಧೀನಾಂ ಯಜ್ಜಗತ್ರಯೇ ।
ತಪಸ್ತತ್ಕಾಯಮೂಲಂ ಹಿ ತಸ್ಮಾತ್ಕಾಯಂ ನ ಸಂ ತ್ಯಜೇತ್ ॥

(ಶ್ಲೋ. ೩೬, ೩೭, ೪೦, ೪೧, ೪೨)

ನಿಗಮಾಗಮಗಳಲ್ಲಿ ಮಾನವದೇಹಕ್ಕೆ ಅತ್ಯಂತ ಆದ್ಯತೆಯಿರುತ್ತೆ—ದೇವತೆಗಳೂ ಸಹ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।"ಎಂಬಂತೆ ಭೂಮಿಯಲ್ಲಿ ಮನುಷ್ಯ ಜನ್ಮದಲ್ಲಿ ಹುಟ್ಟಲು ಆಶಿಸುತ್ತಾರಂತೆ ಏಕೆಂದರೆ, ವಿಶೇಷತಃ ಭಾರತ ಪುಣ್ಯ ಭೂಮಿ,ಧರ್ಮ ಕ್ಷೇತ್ರವೆಂದು ಮೂರು ಲೋಕದಲ್ಲೂ ಪ್ರಸಿದ್ಧವಿರುತ್ತೆ. ಮತ್ತೂ ಮೋಕ್ಷದ ಮಹಾಮನೆಯನ್ನು ಪ್ರವೇಶಿಸಲು ಈ ಮಾನವದೇಹ ಹೆಬ್ಬಾಗಿಲಿನಂತಿದೆಯೆಂದು ಪ್ರತೀತಿ. ಈ ಕಾರಣಗಳಿಂದ ಶ್ರುತಿಯಲ್ಲಿ—

ಶರೀರಂ ಭದ್ರಾಣಿ ಪಶ್ಯಂತು ।
ಇದಂ ಶರೀರಂ ಕ್ಷೇತ್ರಮಿತ್ಯಭಿಧೀಯತೇ ।
ಶರೀರಮಾದ್ಯಂ ಖಲು ಧರ್ಮ ಸಾಧನಂ ।
ದೇಹೇ ದೇವಾಲಯ ಪ್ರೋಕ್ತಃ ॥

ಎಂಬುದಾಗಿ ಮಾನವ ಶರೀರವನ್ನು ಪ್ರಶಂಸಿಸಲಾಗಿದೆ. ದೇವ ದಾನವ ಮಾನವರಿಗೆಲ್ಲಾ ದೇಹ ಬಹು ಮುಖ್ಯವೆನಿಸಿದೆ. ಶಿವ, ವಿಷ್ಣು, ಬ್ರಹ್ಮಾದಿಗಳು ಮಾನವ ದೇಹದಿಂದಲೇ ಭುವಿಯಲ್ಲಿ ಅವತರಿಸುತ್ತಲಿರುವರು. ಶ್ರೀರಾಮ ಲಕ್ಷ್ಮಣನಿಗೆ ಚಿತ್ರಕೂಟ ಪರ್ವತದಲ್ಲಿ ಬೋಧಿಸಿದ ರಾಮಗೀತೆಯಲ್ಲಿ "ದೈವಂ ಮಾನುಷಂ ಮನ್ಯೇ ॥" ಪರಮಾತ್ಮನು ಧರ್ಮೋದ್ಧಾರಾರ್ಥ ಜಗತ್ತಿನಲ್ಲಿ ಮನುಷ್ಯರೂಪದಲ್ಲಿ ಆಗಾಗ ಅವತರಿಸುವನೆಂದು ಅರುಹಿರುವನು. ಇತ್ಯಾದಿ ಕಾರಣಗಳಿಂದ ಶಿವಲಿಂಗ ಸಂಭವರಾದ ಆದಿ ಶ್ರೀಜಗದ್ಗುರು ರೇಣುಕಾಚಾರ್ಯರು, ಕುಂಭ ಸಂಭವ ಶ್ರೀ ಅಗಸ್ತ್ಯ ಮಹರ್ಷಿಗಳನ್ನುದ್ದೇಶಿಸಿ ಬೋಧಿಸುತ್ತಾ, ಹೇ ಮಹಾಮುನೇ! ಕಾಯವಿಲ್ಲದೆ ಕ್ರಿಯೆಯಿಲ್ಲ ಭಾವ, ಜ್ಞಾನಗಳೂ ಇಲ್ಲ. ಸರ್ವರಿಗೂ ಕಾಯಯೋಗವಿಲ್ಲದೆ ಭೋಗಮೋಕ್ಷಂಗಳನ್ನು ಪಡೆಯುವಂತಿಲ್ಲ. ಹೇ ಮುನಿಚಂದ್ರ! ಕಾಯವಿಲ್ಲದೆ ಆತ್ಮತತ್ವ ಸ್ಫುರಿಸುವುದಿಲ್ಲ. ದೇಹದಿಂದಲೇ ಮೂಜಗಂಗಳಲ್ಲಿ ಗೌರವ, ಪೂಜ್ಯತೆ. ಆದ್ದರಿಂದ ಯೋಗಿಗಳೂ ಮುನಿಗಳೂ ಸಿದ್ಧಪುರುಷರೂ ಆದಿಯಾಗಿ ಸಮಸ್ತರೂ, ಶರೀರಾತ್ಮಯೋಗದಿಂದ ಸರ್ವಾರ್ಥ ಸಾಧಕರಪ್ಪರು. ಕ್ರಿಯಾ, ಭಾವ, ಜ್ಞಾನಾಗಮಗಳ ಸಾರಸರ್ವಸ್ವದ ದಿವ್ಯ ತೇಜಸ್ಸು ಆಗಮಲಿಂಗವೆನಿಸಿದೆ, ಈ ಲಿಂಗಕ್ಕೆ ಆಶ್ರಯ ಅಂಗಲಿಂಗಗಳ ಸಂಬಂಧ ಸಹಜ ಸುಂದರ. ಶರೀರದ ಆಸರೇ ಲಿಂಗಕ್ಕೆ, ಲಿಂಗದ ನೆರವು ಅಂಗಕ್ಕೆ ಬೇಕೇ ಬೇಕು. ಇಂತು ಅಂಗಲಿಂಗವಪ್ಪಿ, ಅಂಗ ಗುಣಗಳ ತೊರೆದು, ತಾ ಲಿಂಗವಪ್ಪುವ ಶಿವಶರಣನ ದಿವ್ಯ ಕಾಯ ಸಕಾಯವೆನಿಸಿದೆ. ಈ ಕಾರಣದಿಂದ ಶಿವನು "ಮದ್ ಭಕ್ತ ಕಾಯೋ ಮಮಕಾಯಃ॥" ಯೆಂದು ಸಾರಿರುವನು. ಶ್ರೀಗುರುದರ್ಶನ ಗುರುಪೂಜೆ, ಶಿವದೀಕ್ಷಾ ಸಂಸ್ಕಾರ ಪಡೆಯುವ ಭಾಗ್ಯ, ಲಿಂಗಧಾರಣೆ, ಶಿವಪಂಚಾಕ್ಷರೀ ಮಹಾಮಂತ್ರೋಪದೇಶ ಗುರುಲಿಂಗ ಜಂಗಮರ ಪಾದೋದಕ ಪ್ರಸಾದಗಳನ್ನು ಭಕ್ತರು ಸ್ವೀಕರಿಸಿ, ಕೃತಾರ್ಥರಾಗಲು, ಕಾಯ ಅವಶ್ಯವಿರುತ್ತೆ. ಇಂತಪ್ಪ ಕಾಯ ಸಕಾಯ ಸ್ಥಲವೆನಿಸಿದೆ.

ಲಿಂಗಸ್ಥಲ ೧೪] ಅಕಾಯಸ್ಥಲಂ [(ಪರಿ. ೧೬)

**ಔಪಚಾರಿಕ ದೇಹಿತ್ವಾ ಜಗದಾತ್ಮತ್ವಭಾವನಾತ್ ।**
**ಮಾಯಯಾ ಸಂಬಂಧರಾಹಿತ್ಯಾ ದಕಾಯೋ ಹಿ ಪರಃ ಸ್ಮೃತಃ ॥**

**ಪರಸ್ಯ ದೇಹಯೋಗೇಪಿ ನ ದೇಹಾಶ್ರಯ ವಿಕ್ರಿಯಾ ।**
**ಶಿವಸ್ಯೇವ ಯತಸ್ತಸ್ಮಾದಕಾಯೋ ಯಂ ಪ್ರಕೀರ್ತಿತಃ ॥**

**ಪರಲಿಂಗೇ ವಿಲೀನಸ್ಯ ಪರಮಾನಂದ ಚಿನ್ಮಯೇ ।**
**ಕುತೋ ದೇಹೇನ ಸಂಬಧೋ ದೇಹಿವದ್ಭಾಸನಂ ಭ್ರಮಃ ॥**

**ದೇಹಾಭಿಮಾನ ಹೀನಸ್ಯ ಶಿವಭಾವೇ ಸ್ಥಿರಾತ್ಮನಃ ।**
**ಜಗದೇತಚ್ಛರೀರಂ ಸ್ಯಾದ್ದೇಹೇ ನೈಕೇನ ಕಾ ವ್ಯಥಾ ॥**

**(ಶ್ಲೋ. ೪೩, ೪೪, ೪೫, ೪೬).**

ಭೌತಿಕ ಕಾಯದ ಭ್ರಮೆಯಿಲ್ಲದ, ಈ ಕಾಯೋಪಚಾರದ ನೆನಹೂ ಸಹ ಇಲ್ಲದೆ ಇರುವ ಶಿವಶರಣ ಮಾಯೆಗೆ ದೂರವಿರುವನು. ಪಿಂಡಾಂಡ ಬ್ರಹ್ಮಾಂಡ ದಲ್ಲಿಹುದೆಂಬ **ಜಗದಾತ್ಮ ಭಾವ ಅಕಾಯಸ್ಥಲವೆನಿಸಿದೆ**. ಅಕಾಯ ಸ್ಥಲದ ಹಿರಿಮೆ ವರ್ಣನಾತೀತವೆನಿಸುವುದು. ಶಿವನ ಮಂತ್ರಮಯ ದಿವ್ಯದೇಹ ತೋರಿ ದಾಗ ಕಾಮಕ್ರೋಧಾಸೂಯ ಭಾವಗಳಿಗೆ ಸ್ಥಳವಿಲ್ಲ. ತದ್ವತ್ ಪರಮ ಶಿವಯೋಗಿಯ ದಿವ್ಯದೇಹದಲ್ಲೂ ಅಹಂಕಾರ ಮಮಕಾರಾದಿಗಳು ಇರಲು ಸಾಧ್ಯವಿಲ್ಲ. ನಿತ್ಯನಿರ್ಮಲ ಜ್ಯೋತಿರ್ಲಿಂಗಾನುಸಂಧಾನದಲ್ಲಿ, "**ಶಿಖಿಕರ್ಪೂರ ವತ್**" ಸಹಜಭಾವದಿಂದ ಆತ್ಮಾರಾಮನಾಗಿರುವ ಮಹಾತ್ಮನಿಗೆ ಕಾಯ ಸಂಬಂಧವೆಂಬದೇನು? ಕಾಯಸಂಬಂಧ ಆ ಮಹಾತ್ಮನಿಗೆಲ್ಲಿಯದು. ಅಕಾಯಸ್ಥ ಶಿವಶರಣನಿಗೆ,ದೇಹಾಶ್ರಯಸ್ಥವಿಕಾರಗಳು ಇರುವುದಿಲ್ಲ. ದೇಹಾಂತ್ಯ ದುಃಖವೂ ಸಹ ಅವನನ್ನು ಬಾಧಿಸವು. ಯಾವ ಚಿಂತೆಯೂ ಆತನನ್ನು ಬಾಧಿಸಲಾರವು. ತನ್ನ ಪರಮಾನಂದ ಚಿನ್ಮಯಸ್ವರೂಪದಲ್ಲಿ ಪರವಶನಾದ ಮಹಾತ್ಮನಿಗೆ ದೇಹವಿದ್ದೂ ಇಲ್ಲದಂತಾಗಿದೆ. ದಗ್ಧಪಟದಂತೆ ತೋರ್ಕೆಗೆ ಮಾತ್ರ ದೇಹ ಕಾಣುತ್ತೆ. ಶಿವಜ್ಞಾನ ಧ್ಯಾನಾಗ್ನಿಗಳಿಂದ ದಗ್ಧವಾದ ಶರೀರ

ದಗ್ಧಪಟದಂತೆ ಇರುತ್ತೆ. ಕಾಯ ಅಕಾಯಗಳ ಮರ್ಮವರಿಯುವುದು ಸುಲಭವಲ್ಲ.

**"ನೆನಹಿಂ, ನಿರೀಕ್ಷೆಯಿಂ ದಿನುದಿವಸಂ ।**
**ಸಮರ್ಚಿಪುದರಿಂ, ಶಿವಲಿಂಗಮನಂಗದಲ್ಲಿ ।**
**ಸುಮ್ಮನೆ ಧರಿಸಿರ್ಪುದತ್ಯಧಿಕ ।**
**ಮತ್ಯಧಿಕಂ ನಿರುತಂ ಶಿವಾಧವಾ ॥**

ಯೆಂಬಂತೆ ಇಷ್ಟಲಿಂಗದ ನಿತ್ಯ ಸಂಪರ್ಕವನ್ನುಳಿಸಿಕೊಂಡು ಪೂಜಾದಿಗಳಲ್ಲಿರುವ ಸ್ಥಿತಿ, ಸಕಾಯಸ್ಥಲವೆನಿಸಿದೆ. ಅಂತರಂಗದ ಚಿಜ್ಯೋತಿ ಚಿನ್ಮಯಸ್ವರೂಪ ಧ್ಯಾನಾನುಸಂಧಾನದಲ್ಲಿ ಮಗ್ನನಾದ ಶಿವಯೋಗಿ ಲಿಂಗಕಾಯವುಳ್ಳವನಾದ್ದರಿಂದ ಅಕಾಯನೆನಿಸಿರುವನು. ಒಂದು ಮಾತಿನಲ್ಲಿ ಹೇಳಬೇಕಾದರೆ; ಲಿಂಗವೇ ತಾನಾಗಿ ನಿಂತ ಸ್ಥಲವೇ ಅಕಾಯಸ್ಥಲವೆನಿಸಿದೆ.

## ಲಿಂಗಸ್ಥಲ ೧೫] ಪರಕಾಯಸ್ಥಲಂ [(ಪ. ೧೬)

**ಪರಬ್ರಹ್ಮ ವಪುರ್ಯಸ್ಯ ಪ್ರಬೋಧಾನಂದಭಾಸುರಂ ।**
**ಪ್ರಾಕೃತೇನ ಕಿಮೇತೇನ ಶರೀರೇಣಾಸ್ಯ ಜಾಯತೇ ॥**

**ಸಮ್ಯಗ್ ಜ್ಞಾನಾಗ್ನಿ ಸಂದಗ್ಧ ಜನ್ಮ ಬೀಜ ಕಲೇವರಃ ।**
**ಶಿವತತ್ತ್ವಾವಲಂಭೀ ಯಃ ಪರಕಾಯಃ ಸ ಉಚ್ಯತೇ ॥**

**ಸ್ವಸ್ವರೂಪಂ ಶಿವಾಕಾರಂ ಜ್ಯೋತಿಸ್ಸಾಕ್ಷಾದ್ವಿಚಿಂತಯನ್ ।**
**ದೇಹವಾನಪಿ ನಿರ್ದೇಹೋ ಜೀವನ್ಮುಕ್ತೋ ಹಿ ಸಾಧಕಃ ॥**

**ದೇಹಾಭಿಮಾನನಿರ್ಮುಕ್ತಃ ಕಲಾತೀತಪದಾಶ್ರಯಃ ।**
**ಕಥಂ ಯಾತಿ ಪರಿಚ್ಛೇದಂ ಶರೀರೇಷು ಮಹಾಬುಧಃ ॥**

**(ಶ್ಲೋ. ೫೦, ೫೧, ೫೪, ೫೭).**

ಪರಕಾಯವೆಂದರೆ ಪರಕಾಯಪ್ರವೇಶವೆಂಬಂತೆ ಬೇರೆಯವರ ದೇಹ ಸಂಬಂಧವಲ್ಲ. "ಪ್ರಕೃತೇಃ ಪರಃ"ಎಂಬಂತೆ ಪ್ರಕೃತಿ ತತ್ವಕ್ಕತೀತವಾದುದು

ಪರಕಾಯ. ಶಿವನು "ಮಮಕಾಯೋ ಮದ್ಭಕ್ತಕಾಯಃ" ಎಂದು ಪರಕಾಯವನ್ನು ಶ್ಲಾಘಿಸಿರುವನು. ಅಂದರೆ, ಶುದ್ಧ ಸ್ಫಟಿಕದಂಥಾ ಶಿವಜ್ಞಾನಾನಂದಮಯನಾಗಿ ಬೆಳಗುವ ಪರಮಾತ್ಮ ಯಾವನಿಗೆ ಶರೀರವಾಗಿ ಪ್ರಜ್ವಲಿಸುತ್ತಲಿದ್ದಾನೆಯೋ, ಆ ಪರಕಾಯದಿಂದ ಪರಿಶೋಭಿಸುವ ಶಿವಯೋಗಿಗೆ, ಪ್ರಾಕೃತ ಶರೀರದಿಂದ ಆಗಬೇಕಾದ್ದೇನಿದೆ. ಯಾವನು ಶಿವಜ್ಞಾನಾಗ್ನಿಯಿಂದ ಭವಭೀಜಾಂಕುರದ ಅವಯವಗಳನ್ನು ದಹಿಸಿ, ಶಿವಸಾರವಾದ ಶಿವತತ್ವಾವಲಂಭಿಯಾಗಿಹನೋ ಅಂತಪ್ಪ ಮಹಾಪುರುಷನು ಪರಕಾಯಸ್ಥಲದವನೆನಿಸುವನು.

ಆಪೂರ್ಯಮಾಣ ಮಚಲ ಪ್ರತಿಷ್ಠಂ ।
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ ಕಾಮಾಯಂ ಪ್ರವಿಶಂತಿ ।
ಸರ್ವೇ ಸ ಶಾನ್ತಿಮಾಪ್ನೋತಿ ನ ಕಾಮ ಕಾಮೀ ॥

(ಗೀ. ಅ. ೨ ಶ್ಲೋ. ೭೦.)

ಏನೆಂದರೆ, ಅನೇಕಾನೇಕಾ ನದನದಿಗಳ ಜಲರಾಶಿ ಭೋರ್ಗರೆದು, ಧುಮ್ಮಿಕ್ಕಿ ಮಹಾಸಾಗರದಲ್ಲಿ ಸಂಗಮವಾಗುತ್ತಿದ್ದರೂ ಸಹ, ಸಮುದ್ರ ತನ್ನ ಗಂಭೀರವಾದ ತನವನ್ನು ಉಳಿಸಿಕೊಂಡು, ಅಲ್ಲೋಲ ಕಲ್ಲೋಲವಾದ ಅಸಂಖ್ಯ ತರಂಗಗಳು ಮೆರೆದಪ್ಪದಂತೆ ಇರುವ ಪರಮ ಸ್ಥಿತಿಯಂತೆ ಜಿತೇಂದ್ರಿಯನಾದ ಮಹಾಪುರುಷನ ಪರಕಾಯ ಕ್ಷೀರಸಾಗರದಂತೆ—

ಶಾಂತೋದಾಂತಧಿ ತಿತಿಕ್ಷು ಸ್ಸಮಾಹಿತೋ ಭೂತ್ವಾ ।
ತ್ಮನ್ಯೇವಾತ್ಮನ ಪಶ್ಯತಿ ಸ ಮಾತ್ಮಾನಾಂ ಪಶ್ಯತಿ ॥

ಶಾಂತನಾಗಿದ್ದು ಪರಶಿವಬ್ರಹ್ಮಮಯ ಪರಕಾಯದೊಂದಿಗೆ ಅಖಂಡವಾಗಿ ಬೆಳಗುತ್ತಿರ್ಪನು. ಇದುವೇ ಪರಕಾಯಸ್ಥಲವೆನಿಸಿದೆ.

ಶ್ರುತಿವಿಹಿತವಚಾಂಸಿ ಪ್ರಾಹುರಾಶ್ಚರ್ಯ ವೃತ್ತೇಃ ।
ಕಿಯತಿ ನಿಖಿಲಮಂಶೇ ವಿಶ್ವಮಾಭಾತಿ ಯಸ್ಯ ।
ಸಕಲ ತನುಭೃದಂತರ್ಯಾಮಿಣೋನಂತಶಕ್ತೇಃ ।
ವರಗರಪುರನಾಥೋತ್ತಿಷ್ಠ ತೇ ಸುಪ್ರಭಾತಂ ॥

ವಿಧಿಹರಿಗಣಪತ್ಯಾದಿತ್ಯ ದೇವೇಂದ್ರಚಂದ್ರ ।
ಪ್ರಭೃತಿ ವಿವಿಧನಾಮ್ನಾ ತ್ವಾಂ ಹಿ ಭೇದಾದುಪಾಧೇಃ ।
ಜಗದನಿಶಮುಪಾಸ್ತೇ ಸಚ್ಚಿದಾನಂದರೂಪಂ ।
ವರಗರಪುರನಾಥೋತ್ತಿಷ್ಠ ತೇ ಸುಪ್ರಭಾತಂ ॥



ಲಿಂಗಸ್ಥಲ ೧೬] ಧರ್ಮಾಚಾರಸ್ಥಲಂ [(ಪರಿ. ೧೬)

ತಸ್ಯೈವ ಪರಕಾಯಸ್ಯ ಧರ್ಮಾಚಾರೋ ಯ ಇಷ್ಯತೇ ।
ಸ ಧರ್ಮಃ ಸರ್ವಲೋಕಾನಾ ಮುಪಕಾರಾಯ ಕಲ್ಪತೇ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।
ದಾನಂ, ಪೂಜಾ, ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥

ಶಿವೇನ ವಿಹಿತೋ ಯಸ್ಮಾದಾಗಮೈರ್ಧರ್ಮಸಂಗ್ರಹಃ ।
ತಸ್ಮಾತ್ತಮಾಚರನ್ ವಿದ್ವಾನ್ ತತ್ಪ್ರಸಾದಾಯ ಕಲ್ಪತೇ ॥

ಆತ್ಮವತ್ಸರ್ವಭೂತಾನಿ ಸಂಪಶ್ಯೇದ್ಯೋಗವಿತ್ತಮಃ ।
ಜಗದೇಕಾತ್ಮತಾಭಾವಾನ್ನಿಗ್ರಹಾದಿ ವಿರೋಧತಃ ॥

ಧರ್ಮಏವ ಸಮಸ್ತಾನಾಂ ಯತಃ ಸಂಸಿದ್ಧಿ ಕಾರಣಂ ।
ನಿಃಸ್ಪೃಹೋಪಿ ಮಹಾಯೋಗೀ ಧರ್ಮಮಾರ್ಗಂ ಹಿ ನ ತ್ಯಜೇತ್ ॥

ಜ್ಞಾನಾಮೃತೇನ ತೃಪ್ತೋಪಿ ಯೋಗೀ ಧರ್ಮಂ ನ ಸಂತ್ಯಜೇತ್ ।
ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥

(ಶ್ಲೋ. ೫೮, ೫೯, ೬೦, ೬೨, ೬೪, ೬೫)

ಮಾನವನ ಆತ್ಮೋದ್ಧಾರಕ್ಕೆ, ಆತ್ಮಸಾಕ್ಷಾತ್ಕಾರಕ್ಕೆ ಧರ್ಮ ಹಾಗೂ ಧರ್ಮಾಚಾರಗಳು ಬಂಧುರವಾದ ಅಸ್ತಿಭಾರವಾಗಿರುವುದರೊಂದಿಗೆ, ಸುಭದ್ರ ಬೇಲಿಯಾಗಿವೆ. ಮಾನವನ ಶಾಶ್ವತ ಅಭ್ಯುದಯಕ್ಕೆ ಧರ್ಮ ಮತ್ತೂ ಆಚಾರ ಗಳು ಸೂರ್ಯಚಂದ್ರ ನೇತ್ರಗಳಂತೆ ಪ್ರಕಾಶಮಾನವಾಗಿವೆ. ಕಾಮಿಕಾದಿ ಶಿವಾ ಗಮಗಳಲ್ಲಿ ಮತ್ತೂ ಈಶಾವಾಸ್ಯೋಪನಿಷದಾದಿ ಸಕಲ ಉಪನಿಷತ್ತುಗಳಲ್ಲೂ

ಧರ್ಮದ ಬಗೆಗೆ ಪುಂಖಾನುಪುಂಖವಾಗಿ ಪ್ರತಿಪಾದಿಸಲಾಗಿದೆ. ಧರ್ಮವೇ ಭಗವಂತನ ಮಹಾಪ್ರಾಣ. ಅಷ್ಟೇ ಅಲ್ಲ ದಯಾಮಯನಾದ ಭಗವಂತನ ಸ್ವಸ್ವರೂಪ ಧರ್ಮವೆನಿಸಿರುವುದು. ಈ ಕಾರಣದಿಂದ ಶೃತಿಮಾತೆ ಪರಶಿವ ಬ್ರಹ್ಮ "ಧರ್ಮ ಧೃಮಃ" ಧರ್ಮ ಮಹಾವೃಕ್ಷವೆಂದು ಸಾರುತ್ತಿರುವಳು. ಕಠೋಪನಿಷತ್ತಿನಲ್ಲಿ ಈ ಬಗೆಗೆ—

**ಊರ್ಧ್ವಮೂಲೋವಾಕ್ ಶಾಖ । ಏಷ್ಯೋಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್‌ಬ್ರಹ್ಮ ತಥೇವಾಮೃತಮುಚ್ಯತೆ ।**
**ತಸ್ಮಿಲ್ಲೋಕಾಃ ಶ್ರಿತಾಃ ಸರ್ವೇ । ತದುನಾತ್ಯೇತಿ ಕಶ್ಚನ ॥**
**ಏತದ್ ವೈತದ್ (ಕಠಃ)**

ಈ ಮಂತ್ರದಂತೆ ಭಗವಂತನು "ಧರ್ಮಧೃಮವಿರುವನು" "ಊರ್ಧ್ವ ಮೂಲಂ ಅವಾಕ್ ಶಾಖಃ" ಈ ಮಹಾ ಧರ್ಮವೃಕ್ಷದ ತಾಯಿಬೇರುಗಳು "ಮುಪ್ಪಾಗ ಊರ್ಧ್ವಲೋಕದೊಳಿಹವು" ಶಾಖೆಗಳು ಕೆಳಗೆ ಹಬ್ಬಿವೆ. ಇಂತಪ್ಪ ಅಖಂಡವಾದೀ ಮಹಾವೃಕ್ಷ ಆದ್ಯಂತ ನಿತ್ಯ ಸತ್ಯ ಸುಂದರವಿರುತ್ತೆ. ಕಠೋಪನಿಷತ್ತಿನಲ್ಲಿ ಉಲ್ಲೇಖಿಸಿರುವ ಅಶ್ವತ್ಥ ಮಹಾವೃಕ್ಷ ಶಾಶ್ವತವೆನಿಸಿ ಪರಶಿವಬ್ರಹ್ಮಸ್ವರೂಪವೆನಿಸಿದೆ. ಭಗವದ್ಗೀತೆಯು ಪುರಷೋತ್ತಮ ಪ್ರಾಪ್ತಿ ಯೋಗದ ೧೫ ನೇ ಅಧ್ಯಾಯದಲ್ಲಿ ಇದೇ ವಿಷಯವನ್ನು ಬೋಧಿಸುತ್ತಾ—

**ಊರ್ಧ್ವಮೂಲಮಧಶ್ಯಾಖಮಶ್ವತ್ಥಂ ।**
**ಪ್ರಾಹುರವ್ಯಯಂ ಛಂದಾಂಸಿ ಯಸ್ಯ ಪರ್ಣಾನಿ ।**
**ಯಸ್ತಂ ವೇದ ಸ ವೇದವಿತ್ ॥**

ಎಂದು ಗೀತಾಚಾರ್ಯ ಬೋಧಿಸುತ್ತಾ, ಹೇ ಅರ್ಜುನಾ !

**ಅಧ ಶ್ಚೋರ್ಧ್ವಂ ಪ್ರಸೃತಾಸ್ತಸ್ಯಶಾಖಾ ।**
**ಗುಣಪ್ರವೃದ್ಧಾ ವಿಷಯ ಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ ।**
**ಕರ್ಮಾನುಬಂಧೀನಿ ಮನುಷ್ಯಲೋಕೇ ॥**

ಅಂದರೆ ಕಠೋಪನಿಷತ್ತಿನಲ್ಲಿ ಹೇಳಿದಂತೆ ಈ ಅಪ್ರಾಕೃತ ಮಹಾವೃಕ್ಷದ ಬೇರು

ಹಾಗೂ ಶಾಖೋಪಶಾಖೆಗಳೂ "ಅಧಶ್ಚೋರ್ಧ್ವಂ ಚ ಪ್ರಸೃತಾಃ ತಸ್ಯ ಶಾಖಾಃ" ಎಂದು ಬೇರುಗಳೂ ರಂಬೆಕೊಂಬೆಗಳು ಮೇಲೂ ಕೆಳಗೂ ಮೇರೆ ಮೀರಿ ವ್ಯಾಪಕವಾಗಿ ಹರಡಿವೆ. ಊರ್ಧ್ವದಲ್ಲಿ ಮುಖ್ಯವಾಗ ಹರಡಿರುವ ಬೇರುಗಳ ವ್ಯಾಪ್ತಿಯು ಸಂಸಾರಕ್ಕೆ ಮೂಲವಾದ ಪರಬ್ರಹ್ಮ "ಬ್ರಹ್ಮಾಂಡದತ್ತತ್ತ ನಿಮ್ಮ ಶ್ರೀಮುಕುಟ" ಎಂಬಂತೆ ಅಗೋಚರ ಅಚಿಂತ್ಯ ಅಪ್ರಮೇಯವಿರುತ್ತೆ. ಅಧೋಗತಿಯಲ್ಲಿ ಕೀಳ್ಮುಖವಾದ ರೆಂಬೆಗಳು—

**ಅಧಶ್ಚ ಮೂಲಾನ್ಯನು ಸಂತತಾನಿ ।**
**ಕರ್ಮಾನು ಬಂಧೀನಿ ಮನುಷ್ಯ ಲೋಕೇ ॥**

ಮಲತ್ರಯಗಳಿಂದ ಕೂಡಿ ಕರ್ಮಾನುಸಾರ ಬಂಧಿತವಾಗಿವೆ, ಈ ಶಾಖೆಗಳು

**ಗುಣ ಪ್ರವೃದ್ಧಾ ವಿಷಯ ಪ್ರವಾಲಾಃ ॥**

ಇವು ವಿಷಯಾಭಿಲಾಷಿಗಳಾಗಿ ತ್ರಿಗುಣಾತ್ಮಕವಾಗಿರುವುದರಿಂದ, ಅನಿತ್ಯ ದುಃಖಮಯವೆನಿಸಿವೆ. ಇದರಿಂದಾಗಿ ಜ್ಞಾಣಿನು ಇವುಗಳ ಸಂಘ ಸಹವಾಸಾದಿ ಗಳಿಂದ ದೂರವಿರಬೇಕೆಂದು "ಅಸಂಘ ಶಸ್ತ್ರೇಣ ದೃಢೇನ ಛಿತ್ವಾ" ಎಂದಿದ್ದಾನೆ ಶ್ರೀಕೃಷ್ಣ. ಇದರಿಂದ ಕಂಡುಬರುವುದೇನೆಂದರೆ, ಊರ್ಧ್ವಲೋಕಂ ಗಳತ್ತ ಹರಡಿರುವ ಈ ಮಹಾ ಅಶ್ವತ್ಥ ವೃಕ್ಷದ ಬೇರುಗಳು ಬ್ರಹ್ಮಸ್ವರೂಪ ವೆಂದೂ ಸತ್ಯವೆಂದೂ; ಅಧೋಭಾಗದ ಗುಣಮಯ, ವಿಷಯಾಸಕ್ತಿಯಿಂದಿ ರುವ ಭಾಗ ಅಶಾಶ್ವತ ಮತ್ತು ದುಃಖಮಯವೆಂದು ಭಾಸವಾಗುತ್ತೆ. ಭಗವಂತ ಧರ್ಮಧೃಮನೆಂದಬಳಿಕ ಆತನ,

**ಅಣೋರಣೀಯಾನ್ । ಮಹತೋ ಮಹೀಯಾನ್ ॥**

ಎಂಬ ಅಖಂಡಾದ್ವಿತೀಯ ಪರಿಪೂರ್ಣಸ್ವರೂಪ ಕಠೋಪನಿಷತ್ತಿನಲ್ಲಿ ಪ್ರತಿಪಾದಿ ಸಿರುವಂತೆ ಅನಂತ ಸತ್ಯವೇಯಷ್ಟೇ. ಜಗತ್ತಿನ ದೃಶ್ಯಾದೃಶ್ಯವಾದವುಗಳೆಲ್ಲಾ ನಿತ್ಯಸತ್ಯವೆಂಬುದು ಕಠೋಪನಿಷತ್. **ಬ್ರಹ್ಮ ಸತ್ಯಂ ಜೀವ ಸತ್ಯಂ ಜಗತ್ ಸತ್ಯಂ** ಎಂದು ಶ್ರೀರೇಣುಕರು ಶ್ರೀ ಸಿದ್ಧಾಂತಶಿಖಾಮಣಿಯಲ್ಲಿ ಅಗಸ್ತ್ಯರಿಗೆ ಬೋಧಿಸಿರುವುದು ಕಠೋಪನಿಷತ್ತಿನ ಸಾರಾಂಶವೇ ಇರುತ್ತೆ.

ಪರಕಾಯ ಸ್ಥಲದ ಶಿವಯೋಗಿ ಧರ್ಮಾಚಾರ ಸಂಪನ್ನ, ಆತನ ನೈಜ ಧರ್ಮವೇ ಆತನ ನಿತ್ಯ ಧರ್ಮಾಚಾರ. ಆಚಾರ ಮತ್ತೂ ನೀತಿ, ಇವೆರಡೂ ಧರ್ಮವನ್ನು

ಆಶ್ರಯಿಸಿವೆ. ವೀರಮಾಹೇಶ್ವರ ಧರ್ಮಕ್ಕೆ ಕರ್ತ. ನಿತ್ಯನೈಮಿತ್ತಿಕ ಧರ್ಮಾಚಾರನೇ ಮಾಹೇಶ್ವರನ ಧವಳ ಕೀರ್ತಿ. ಎಲ್ಲಾ ಪ್ರಾಣಿಗಳಿಗೆ ಲೇಸನೇ ಬಯಸುವ ಜೀವಕಾರುಣ್ಯ, ಧರ್ಮದ ಜೀವಾಳ. ದಯಾಭಾವ ಮತ್ತು ತ್ಯಾಗ ಹಾಗೂ ಸರ್ವಭೂತಹಿತ, ಇವು ಧರ್ಮಾಚಾರನೆನಿಸಿವೆ. ಇಲ್ಲಿ ತನ್ನ ಸ್ವಧರ್ಮಾಚಾರನೆಂದರೆ, ನಿತ್ಯದ ಇಷ್ಟಲಿಂಗಾರಾಧನೆ, ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ ಮತ್ತೂ ಭೃತ್ಯಾಚಾರ ಇವೈದೂ, ಧರ್ಮಾಚಾರದ ನೆಲಗಟ್ಟೆನಿಸಿವೆ. ವಿಶ್ವಧರ್ಮವೆನಿಸಿದ ಸನಾತನ ವೀರಶೈವ, ಅರಳಿ ಕಂಪಿಸಿದ ಧರ್ಮಕುಸುಮ. ಸತತ ಧರ್ಮಾಚಾರಸಂಪನ್ನನು ಭಾವಜ್ಞನೂ ಕೃತಜ್ಞನೂ ಆಗಿರುವುದರೊಂದಿಗೆ ಕ್ರಿಯಾವಂತ ಬ್ರಹ್ಮನಿಷ್ಠಾಗರಿಷ್ಠನಾಗಿ, ವಿಹಿತ ಧರ್ಮವ ಶ್ರದ್ಧಾಭಕ್ತಿ ನಿಷ್ಠಾಭಕ್ತಿಗಳಿಂದ ಆಚರಿಸುವ ವ್ರತಧಾರಿಯಾಗಿರ್ಪನು ಯಾಕೆಂದರೆ—

**ಧರ್ಮ ಏವ ಸಮಸ್ತಾನಾಂ ಯತಃ ಸಂಸಿದ್ಧಿ ಕಾರಣಂ ।**
**ನಿಃಸ್ಪೃಹೋಽಪಿ ಮಹಾಯೋಗೀ ಧರ್ಮಮಾರ್ಗಂ ಹಿ ನ ತ್ಯಜೇತ್ ॥**
(ಸಿ.ಶಿ. ಪರಿ. ೧೬ ಶ್ಲೋ. ೬೪)

ಧರ್ಮಾಚಾರವೇ ಸಮಸ್ತ ಜನರ ಭೋಗಮೋಕ್ಷ ಪ್ರಾಪ್ತಿಗೆ ಕಾರಣವೆನಿಸಿದೆ. ಆದ್ದರಿಂದ ಶಿವಯೋಗಿಯು ತಾನೂ ಸುಕೃತ ವಿಶೇಷಣ, ಜ್ಞಾನಾಮೃತದಿಂದ ತೃಪ್ತನಾಗಿದ್ದರೂ, ನಿತ್ಯದ ಸ್ವಧರ್ಮಾಚರಣೆಯನ್ನು ಬಿಡಬಾರದೆಂದು ಶ್ರೀ ಜ|| ರೇಣುಕರು ಬೋಧಿಸಿರುವರು. ಧರ್ಮವೆಂದರೇನು. ಯಾವುದು ಧರ್ಮ? ಧರ್ಮ ಶಬ್ದ "ಧೃ" ಯೆಂಬ ಧಾತುವಿನಿಂದ ಉತ್ಪನ್ನವಾಗಿದೆ. "ಧೃ" ಎಂದರೆ, ಧರಿಸು, ಪೋಷಿಸು, ಎಂದರ್ಥ.

**ಧರತಿ ಧಾರಯತೀವಾ ಲೋಕಂ ಇತಿ ಧರ್ಮಃ ।**
**ಧ್ರಿಯತೇ ಲೋಕಃ ಅನೇನ ಇತಿ ಧರ್ಮಃ ॥**

**ಧಾರಣಾತ್ ಧರ್ಮಃ ಯತೋಽಭ್ಯುದಯನಿಃಶ್ರೇಯಸ ಸಿದ್ಧಿಃ ಸ ಧರ್ಮಃ ।**
**ಸುಖಮಿಚ್ಛಂತಿ ಸರ್ವೇಃ ತಚ್ಚ ಧರ್ಮ ಸಮುದ್ಭವಂ ॥**

**ಧರ್ಮೇಣ ಲಭ್ಯತೇ ಸರ್ವಂ ಧರ್ಮಸಾರಮಿದಂ ಜಗತ್ ।**
**ಮನುಷ್ಯಾಣಾಂ ಹಿತಂ ಧರ್ಮಂ ವರ್ತಮಾನೇ ಕಲೌ ಯುಗೇ ॥**

ಯುಗಯುಗಾಂತರಗಳಿಂದ ಧರ್ಮವು ಸರ್ವವಿಧದಿಂದಲೂ ತಾಯಿಯಂತೆ ಹಿತವೆನಿಸಿದೆ. ಇಂತಾಗಿ, ಮಾನವ, ದೇವ ದಾನವಾದಿ ಋಷಿ ಮಹರ್ಷಿಗಳಿಗೆಲ್ಲಾ ಸದಾ ಧರ್ಮವೇ ಸಾಧನ, ಧರ್ಮವೇ ಗತಿ ಎಂಬ ವಿಷಯ ಸುಪ್ರಸಿದ್ಧವಿರುತ್ತೆ.

ಶ್ರೀಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗಳನ್ನು ದ್ದೇಶಿಸಿ ಧರ್ಮದ ಬಗೆಗೆ ಬೋಧಿಸುತ್ತಾ,

**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।**
**ದಾನಂ ಪೂಜಾ ಜಪೋಧ್ಯಾನಮಿತಿ ಧರ್ಮಸ್ಯ ಸಂಗ್ರಃ ॥**

(ಸಿ. ಶಿ. ಪರಿ. ೧೬, ಶ್ಲೋ. ೫೯)

ಎಂದು ವಿಶ್ವಧರ್ಮದ ದಶಮುಖಗಳ ದಿವ್ಯಸ್ವರೂಪವನ್ನು ಕುರಿತು ಮನ ಮುಟ್ಟುವಂತೆ ಬೋಧಿಸಿರುವರು.

## ೧. ಅಹಿಂಸಾ

ಜೀವರುಗಳಿಗೆ ಕಿಂಚಿತ್ತೂ ಹಿಂಸೆಮಾಡದೆ ಇರುವ ಅಂದರೆ ಸಕಲ ಜೀವಾವಳಿಗೆ ಲೇಸನೆ ಬಯಸುವ ಹಾರೈಕೆ ಧರ್ಮವೆನಿಸಿದೆ. ಈ ಅಂಶ ವೇದದಲ್ಲಿ ಪ್ರತಿಪಾದಿಸುತ್ತಾ "ಅಹಿಂಸಾ ಪ್ರಥಮೋ ಧರ್ಮಃ" ಎಂದು ಸಾರಿರುತ್ತೆ. ಅಹಿಂಸಾವ್ರತ ಧರ್ಮದ ಅಭ್ಯುದಯಕ್ಕೆ ಅನಂತ ಜೀವಕೋಟಿಗಳ ಹಾಗೂ ಸಕಲ ಲೋಕಂಗಳ ಸರ್ವಮಂಗಳಗಳಿಗೆ ತಾಯ್ಮನೆ ಎನಿಸಿದೆ. ಅಹಿಂಸಾ ಧರ್ಮ ಶೃತಿದೇವಿಯ ಮಣಿ ಮಕುಟದಂತೆ ಪರಿಶೋಭಿತವಾಗಿದೆ. ಅನಾದಿ ಸಂಸಿದ್ಧವಾದ ಶಿವಾಗಮ ಸಿದ್ಧಾಂತ ಅದ್ವೈತ. ಅಹಿಂಸಾ ಧರ್ಮದ ಪೀಠದ ಮೇಲೆ ಸುಭದ್ರವಾಗಿ ಸ್ಥಾಪಿತವಾಗಿದೆ. ಜಗತ್ತಿನಲ್ಲಿ ಜನಕೋಟಿಯ ಮಧ್ಯೆ ಪ್ರಥಮ ಭಾರಿಗೆ ಅಹಿಂಸಾ ಧರ್ಮವನ್ನು ಸ್ಫೂರ್ತಿದಾಯಕವಾಗಿ ಬೋಧಿಸಿದವರಲ್ಲಿ ವೀರಶೈವ ಧರ್ಮಕ್ಕೆ ಆದ್ಯತೆಯಿದೆ. ದ್ವಾಪರಯುಗಾರಂಭ ಕಾಲದಲ್ಲಿ ಶಿವಲಿಂಗೋದ್ಭವ ಮಂಗಳ ಮೂರ್ತಿ ಶ್ರೀಜಗದ್ಗುರು ರೇಣುಕಾಚಾರ್ಯರು, ಸಪ್ತರ್ಷಿಮಂಡಲದಧಿಪತಿ ಶ್ರೀ ಅಗಸ್ತ್ಯಮುನಿ ಚಂದ್ರನಿಗೆ ಅಹಿಂಸಾ ತತ್ವದ ಸ್ವರೂಪವನ್ನು ವಿಶದವಾಗಿ ಬೋಧಿಸಿರುವರು. ತದನಂತರ ಜೈನರೂ, ಬೌದ್ಧರೂ ಹಾಗೂ ಬ್ರಾಹ್ಮಣರೂ ಅಹಿಂಸಾ ವ್ರತಾನುಷ್ಠಾನದ ಬಗೆಗೆ ವಿಪುಲವಾಗಿ ಪ್ರತಿಪಾದಿಸಿ ಸರ್ವರೂ ಈ ಧರ್ಮವನ್ನು ಅಕ್ಕರೆಯಿಂದ ಪರಿಪಾಲಿಸುತ್ತಾ

ಧರ್ಮಾಚಾರ ವ್ರತಶೀಲರಾಗಿರುವರು. ಋಗ್ವೇದದಲ್ಲಿ **"ಮಾ ಹಿಂ ಸ್ಯಾತ್ ಸರ್ವಭೂತಾನಿ"** ಎಂದು ನಿರೂಪಿಸಲಾಗಿದೆ.

**ಅಭಿವರ್ಧತಾಂ ಪಯಸಾಭಿ ರಾಷ್ಟ್ರೇಣ ವರ್ಧತಾಂ ||**

(ಅಥರ್ವಣ ವೇದ)

ಅಂದರೆ, ಭೂಗರ್ಭದದಿಂದ ಬೆಳೆಯುವ ಹಚ್ಚಹಸಿರು ವನಸ್ಪತಿಗಳ ಅಗ್ರ ಭಾಗದಲ್ಲಿ ಬೆಳೆಯುವ ಭತ್ತ, ಗೋಧಿ, ಜೋಳ, ಕಬ್ಬು ವಿವಿಧ ರುಚಿಕರವೂ ಶಕ್ತಿ ವರ್ಧಕವೂ ಆದ ಆಹಾರ ಪದಾರ್ಥಗಳು ಮಾನವನ ಪ್ರಮುಖ ಜೀವನಾಧಾರ ಗಳಾಗಿವೆ. ಇದರಂತೆಯೇ ಅದೇ ಬೆಳೆಗಳ ಕೆಳಗಿನ ಭಾಗ, ದಂಟು, ತೃಣ, ಪರ್ಣ ಗಳು, ಜೋಳದ ಕಡ್ಡಿ ಕಸಗಳು ಪಶುವರ್ಗಗಳಿಗೆ ಆಹಾರವಾಗಿವೆ. ಪಶುಗಳ ಹಾಲು, ಬೆಣ್ಣೆ ತುಪ್ಪಗಳನ್ನು ಮಾನವ ನಿತ್ಯ ಸೇವಿಸಿ ಪ್ರಬುದ್ಧನಾಗುತ್ತಿರು ವನು. ಅಂದಮೇಲೆ ಪ್ರಾಣಿವಧೆ ಮಾಂಸಾಹಾರ ವಿರುದ್ಧವಿರುತ್ತೆ. ಪ್ರಾಣಿ ಗಳಿಗೂ ಸಹ ಮಾನವನಂತೆ ಬಾಳಿ ಬದುಕಿ ಅಂತ್ಯದಲ್ಲಿ ಸಹಜ ಸಿದ್ಧವಾದ ಮರಣವನ್ನಪ್ಪಲು ಸ್ವಾತಂತ್ರ್ಯವಿರುವಾಗ, ಜಾನುವಾರುಗಳನ್ನು ಹಿಂಸಾತ್ಮಕ ವಾಗಿ ಕೊಲ್ಲುವುದು ಅಹಿಂಸಾ ಧರ್ಮಕ್ಕೂ ಹಾಗೂ ಧರ್ಮಾಚಾರಸ್ಥಲಕ್ಕೂ ವಿರುದ್ಧವೆನಿಸಿದೆ.

## ೨. ಸತ್ಯಂ

ಶ್ರೀ ಸಿದ್ಧಾಂತಶಿಖಾಮಣಿಯಲ್ಲಿ ಮಹಾಚಾರ್ಯರು ಅಗಸ್ತ್ಯಮಹರ್ಷಿಗೆ ಬೋಧಿಸಿದ ಷಟ್ಸ್ಥಲಾತ್ಮಕ ವಿಶ್ವಧರ್ಮದ ದಶಮುಖಗಳಲ್ಲಿ ದ್ವಿತೀಯ ಮುಖ ಸತ್ಯವೆನಿಸಿದೆ, **"ಸತ್"** ಎಂಬ ಧಾತುವಿನಿಂದ ಸತ್ಯ ಪದ ಅವತರಿಸಿದೆ. ಭೂತ, ಭವಿಷ್ಯತ್,ವರ್ತಮಾನಗಳೆಂಬ ತ್ರಿಕಾಲಗಳನ್ನು ಮೀರಿ,ಜಾಯತೇ,ಅಸ್ತಿ,ಭಾತಿ, ವರ್ಧತೆ, ಅಪಕ್ಷೀಯತೇ ವಿನಶ್ಯತಿ ಎಂಬ ಷಡ್ಭಾವ ವಿಕಾರ ರಹಿತವಾದ, **ಓಂ ಇತ್ಯೇಕಾಕ್ಷರ ಬ್ರಹ್ಮ** ಎಂಬ ವರ್ಚಸ್ಸಿನಿಂದ ದೇದೀಪ್ಯಮಾನವಾಗಿ ಸರ್ವಾಧಾರ ವಾಗಿರುವ ಪರಶಿವ ಬ್ರಹ್ಮ ಸತ್ಯವೆನಿಸಿದೆ. **"ಸತ್ಯಂ ಜ್ಞಾನ ಮನಂತಂ ಬ್ರಹ್ಮ"** ಎಂಬ ಉಪನಿಷದ್ವಾಣಿ ಮೇಲ್ಕಂಡ ಅಂಶವನ್ನು ದೃಢಪಡಿಸುತ್ತಲಿದೆ. ಛಾಂದೋಗ್ಯೋಪನಿಷತ್ತು ಸತ್ಯದ ಬಗೆಗೆ,

**ಸದೇವ ಸೌಮ್ಯೇದ ಮಗ್ರ ಅಸ್ಮೀತ್ ।**
**ಏಕಮೇವಾ ದ್ವಿತೀಯಂ ಬ್ರಹ್ಮ ॥**

ಅಂದರೆ, ಏಕವೂ ಅದ್ವಿತೀಯವೂ ಆದ ಪರಶಿವ ಬ್ರಹ್ಮ ಆದಿಗಾದಿಯಲ್ಲಿ ಒಂದೇ ತನಗೆ ತಾನೇ ಪ್ರಜ್ವಲಿಸುತ್ತಲಿತ್ತು. ಅದು ಸತತ ಶ್ರೀಕರ, ಶಿವಂಕರವೆನಿಸಿ ಸಕಲಕ್ಕೂ ಅಭಯಪ್ರದವೆನಿಸಿ, ಸಚ್ಚಿದಾನಂದ ಜ್ಞಾನಮಯವಾಗಿ ರಾರಾಜಿತ ವಾಗಿತ್ತು. ಆ ಪರತತ್ವವಾದ **ಸತ್ಯ**, ಸರ್ವಕ್ಕೂ ಆಧಾರ, ಆಶ್ರಯಭೂತವಾಗಿ, ಮುಮುಕ್ಷುಗಳಿಗೆ ಏಕೈಕ ವಿರಾಮ ಪರಂಧಾಮವಾಗಿ ಬೆಳಗುತ್ತಿತ್ತು. ಸತ್ಯ ವೆಂಬ ಪರತರ ಪರವಸ್ತು ಅಖಿಲಾಂಡ ಕೋಟಿ ಬ್ರಹ್ಮಾಂಡಗಳಿಗೆಲ್ಲಾ ನಿರಂತರ ಕಲ್ಯಾಣಾದ್ಭುತಗಾತ್ರ ಚಿತ್‌ಚಿನ್ಮಯ ಸ್ವರೂಪವೆನಿಸಿದೆ. ಇದು ಕಾರಣ ಶ್ರುತಿ ಮಾತೆ ಉಬ್ಬಿ ಉಚ್ಚಧ್ವನಿಯಿಂದ,

**ಸತ್ಯಮೇಕ ಪದಂ ಬ್ರಹ್ಮ । ಸತ್ಯೇ ಧರ್ಮಃ ಪ್ರತಿಷ್ಠಿತಃ ॥**
**ಸತ್ಯ ಮೂಲಾನಿ ಸರ್ವಾಣಿ । ಸತ್ಯಾನ್ನಾಸ್ತಿ ಪರಂ ಪದಂ ॥**

ಸತ್ಯದ ಬೃಹದ್ ಗರ್ಭದಲ್ಲಿ ದಯಾರಸ ಭರಿತವಾದ ಧರ್ಮ ಪ್ರತಿಷ್ಠಿತವಾಗಿದೆ. ಇದರಿಂದಾಗಿ ಸತ್ಯ ಹಾಗೂ ಧರ್ಮ ಇವೆರಡೂ ಅವಿನಾ ಭಾವ ಸಂಬಂಧದಿಂದ ಒಂದರಲ್ಲೊಂದು ಹಾಸುಹೊಕ್ಕಾಗಿವೆ. ಈ ಕಾರಣದಿಂದ ವೇದಮಾತೆ ಮಕ್ಕ ಳಾದ ನಮ್ಮನ್ನು ಸತ್ಯದಿಂದ ದೂರರಾಗಲು ಬಿಡದೆ, ಕರುಣೆಯಿಂದ ನಮ್ಮತ್ತ ಕೈಬೀಸಿ, **ಹೇ ಅಮೃತಸ್ಯ ಪುತ್ರಾಃ! ಸತ್ಯಂವದ ಧರ್ಮಂ ಚರ** ಎಂದು ನಮ್ಮನ್ನು ಎಚ್ಚರಿಸುತ್ತಲಿದ್ದಾಳೆ. ಸತ್ಯ ಧರ್ಮಗಳ ಸಂಬಂಧ ಶಿವಶಕ್ತಿಯರ ಸಂಬಧದಂತಾ ಸಹಜ ಸುಂದರವಿರುತ್ತೆ. ಇದರಿಂದ ಸಮಸ್ತ ದೇವ ದಾನವ ಮಾನವರುಗಳಿಗೆಲ್ಲಾ ಮತ್ತೂ ಎಂಭತ್ನಾಲ್ಕು ಲಕ್ಷ ಜೀವಕೋಟಿಗಳಿಗೆಲ್ಲಾ ಸತ್ಯವೇ ತಾಯಿ, ತಂದೆ, ಬಂಧು ಬಳಗವೆನಿಸಿ, ರಕ್ಷಕ ಪೋಷಕ ಶಕ್ತಿಯೆನಿಸಿದೆ. ವೇದಮಾತೆ,

**ಸತ್ಯಂ ಭ್ರೂಯಾತ್ ಹಿತಂ ಭ್ರೂಯಾತ್ ।**
**ನ ಭ್ರೂಯಾತ್ ಸತ್ಯಮಪ್ರಿಯಂ ॥**

ಎಂದು ಬೋಧಿಸುತ್ತಲಿದ್ದಾಳೆ. ಸತ್ಯವೇ ದೇವರು ಎಂಬ ನಂಬಿಕೆ ದೃಢವಾಗಿರ

ಬೇಕು. **"ಸತ್ಯಮೇವೋದ್ಧರಾಮ್ಯಹಂ"** ನಾನು ಯಾವಜ್ಜೀವವೂ ಸತ್ಯವನ್ನೇ ನೆರೆನಂಬಿ ದಿನ ನಿತ್ಯ ಸತ್ಯವ್ರತನಾಗಿ ಸತ್ಯವನ್ನು ಉದ್ಧರಿಸುತ್ತೇನೆ ಎಂಬ ಸಂಕಲ್ಪವುಳ್ಳವರಾಗಿ ಬಾಳಬೇಕು. ಆದ್ದರಿಂದ ಎಚ್ಚೆತ್ತ ಮಾನವ ತನ್ನ ಅನಂತ ಶ್ರೇಯಸ್ಸಿಗಾಗಿ ಆದಷ್ಟು ಅಸತ್ಯದ ಮಾರ್ಗಕ್ಕೆ ಹೋಗದೆ, ಶ್ರೀರೇಣುಕ ಗೀತೋಕ್ತಿಯಂತೆ ಧರ್ಮಾಚಾರ ಪರಾಯಣರಾಗಿ ಸತ್ಯಕ್ಕೆ ಶರಣಾಗತರಾಗಬೇಕು. **"ಸತ್ಯಂ ನ್ನಾಸ್ತಿ ಪರಂ ಪದಂ".**

## ೩ ಅಸ್ತೇಯ

ಅಸ್ತೇಯವೆಂದರೆ ಕಳ್ಳತನ ಮಾಡದೆ, ಮೋಸ ವಂಚನೆಗಳನ್ನು ಮಾಡದೆ ಸ್ವಾರ್ಥಪರತೆಯಿಂದ ಪರರ ಸ್ವತ್ತನ್ನು ಅಪಹರಿಸದೆ. ಋಜು ಸ್ವಭಾವದಿಂದ ಇರುವಿಕೆ ಎಂದರ್ಥ. ಅಸ್ತೇಯ ವಿಶ್ವಧರ್ಮದ ಮೂರನೆ ಮುಖ. ತನ್ನದಲ್ಲದ ವಸ್ತುವನ್ನು ಇತರರಿಗೆ ತಿಳಿಯದೆ ಅಪಹರಿಸುವುದು ಸ್ತೇಯವೆ (ಕಳವು) ನಿಸಿದೆ. ಕಳ್ಳತನ ಮಾಡುವುದಕ್ಕಿಂತಲೂ, ಕಳ್ಳಮನೋಭಾವ ಕ್ರೂರವಿರುತ್ತೆ. ಸ್ತೇಯಕ್ಕೆ (ಕಳವಿಗೆ) ದುರಾಶೆಯೆ ಕಾರಣ **"ಆಶಾಸಾ ಪರಮಂ ದುಃಖಂ"** ಎಂದಿದೆ ನೀತಿಶಾಸ್ತ್ರ. ಈ ಸಂದರ್ಭದಲ್ಲಿ ಈಶಾವಾಸ್ಯೋಪನಿಷತ್ತಿನ ಪ್ರಥಮ ಮಂತ್ರ ಸ್ಮರಣೀಯವಿರುತ್ತೆ.

**ಈಶಾವಾಸ್ಯಮಿದಂ ಸರ್ವಂ । ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾ । ಮಾಗೃಧಃ ಕಸ್ಯ ಸ್ವಿದ್ಧನಂ ॥**

ಅಖಿಲ ಜಗತ್ತು ಈಶ್ವರನಿಂದ ಆವರಿಸಿ, ಅಣುರೇಣುತೃಣಕಾಷ್ಠಗಳಲ್ಲೆಲ್ಲಾ ಶಿವನು ಪ್ರಸನ್ನದಿಂದಿರುವನೆಂದು ಈ ಉಪನಿಷತ್ತು ಬೋಧಿಸುತ್ತಲಿದೆ. ಚರಾಚರಾತ್ಮಕ ಸಮಸ್ತವೂ, ಭಗವಂತನ ಐಶ್ವರ್ಯವಿರುತ್ತೆ. ಇದು ಸತ್ಯವಿರುತ್ತೆ. ಹೀಗಿದ್ದರೂ ಆರರಿವುಗಳಿಂದ ಕೂಡಿದ ನಾಗರೀಕನೆಂದೆನಿಸಿದ ಮಾನವನು ಶಿವನ ಸ್ವತ್ತಾದ ಮನೆ ಮಠ ಹಣಕಾಸುಗಳ ಸ್ವಲ್ಪ ಲಭ್ಯವಾದ ಭಾಗವನ್ನು ತನ್ನದೆಂದು ಮುಚ್ಚಿಡುತ್ತಾ, ಅದು ಪರರದೆಂದು ದುರಾಸೆಯಿಂದ ಅವರ ಸ್ವತ್ತನ್ನು ಕಳ್ಳತನದಿಂದ ದುರಾಕ್ರಮಣ ಮಾಡಿ ಅಪಹರಿಸುವ ಸ್ತೇಯ ಭಾವ ಕ್ರೂರವಿರುತ್ತೆ. ಈ ಕೃತ್ಯಗಳನ್ನೆಲ್ಲಾ ರೆಪ್ಪೆಮುಚ್ಚದ ಶಿವನು ನೋಡುತ್ತಿರುವಾಗಲೇ

ಮಾನವ ಧೈರ್ಯದಿಂದ ನಿತ್ಯ ಸ್ತೇಯ ಮಾಡುತ್ತಲಿದ್ದಾನೆ. ಇದು ಭಯಂಕರ ಪಾಪ ಕಾರ್ಯವಿರುತ್ತೆ. ಈ ಉಪನಿಷತ್ತು ನಮ್ಮನ್ನು "**ಮಾ ಗೃಧ ಕಸ್ಯ ಸ್ವಿದ್ಧನಂ**" ಅನ್ಯರ ಸ್ವತ್ತಿನಲ್ಲಿ ಅಣುಮಾತ್ರವೂ ಆಶಿಸಿ ಅಪಹರಿಸಬಾರದೆಂದು ವೇದವಿಧಿ ಕಟ್ಟುನಿಟ್ಟಾಗಿ ನಮ್ಮನ್ನು ಎಚ್ಚರಿಸುತ್ತಲಿದೆ.

**ಪರಸ್ತ್ರೀಸಂಗ ನಿರ್ಮುಕ್ತ । ಪರದ್ರವ್ಯ ಪರಾಙ್ಮುಖಃ ॥**
**ಶಿವಾರ್ಥ ಕಾರ್ಯಸಂಪನ್ನಃ । ಶಿವಾಗಮ ಪರಾಯಣಃ ॥**

(ಸಿ.ಶಿ. ಪರಿ ೧೦ ಶ್ಲೋ. ೧೫)

ಪರಸ್ತ್ರೀ ಪರಧನಗಳನ್ನು ಕನಸ್ಸಿನಲ್ಲೂ ಸ್ಮರಿಸುವುದು ಪಾಪಕರ. ಋಜು ಸ್ವಭಾವವನ್ನು ಮೈಗೂಡಿಸಿಕೊಂಡಿರಬೇಕು.

**ಈಶನಿಂ ವಾಸ್ಯ ಮಿದಂ ಧರಣಿ ಸಚರಾಚರಂ ।**
**ಆಶಿಸದೆ ಪರಧನವ ಭುಂಜಿಸೀಶನಿತ್ತುದಂ ।**
**ತೇನ ತ್ಯಕ್ತೇನ ಭುಂಜೀಥಾಃ ॥**

ಅಂದರೆ, ಭಾರ್ಯಾ ಪುತ್ರ ಧನ ಕನಕ ವಸ್ತುವಾಹನಾದಿಗಳನ್ನು ದೂರವಿರಿಸಿ ಅಲಿಪ್ತನಾಗಿರಬೇಕೆಂದು ಶ್ರೀ ಶಂಕರಾಚಾರ್ಯರ ಅಭಿಮತ. ಭಗವದ್ಗೀತೆಯಲ್ಲಿ

**ಕರ್ಮ ಸನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥**

ಕರ್ಮ ಸನ್ಯಾಸಕ್ಕಿಂತಲೂ ನಿಷ್ಕಾಮ ಕರ್ಮ ಯೋಗಾಭ್ಯಾಸ ಉತ್ಕೃಷ್ಟ ವೆಂದು ಬೋಧಿಸಿರುತ್ತೆ, ವೀರಶೈವ ಧರ್ಮದ ಗುರಿ ಗೀತೋಕ್ತಿಯನ್ನೇ ಆದರಿ ಸಿದೆ. ಶಿವನನುಗ್ರಹದಿಂದ ಅವರವರಿಗೆ ಪ್ರಾಪ್ತವಾದುದ್ದನ್ನು, ಶಿವಪ್ರಸಾದ ವೆಂದು ತಿಳಿದು ತೃಪ್ತರಾಗಿರಬೇಕು.

**ಜೀವೇ ವಾರಿ ತರಂಗ ಚಂಚಲತರೇ । ಶಾಂತಿಂ ಕುತಃ ಪ್ರಾಣಿನಃ ॥**

## ೪. ಬ್ರಹ್ಮಚರ್ಯ

ಸನಾತನ ಕಾಲದಿಂದ ಹಿಂದೂ ಧರ್ಮದಲ್ಲಿ ಕಾಣುವ ಚತುರಾಶ್ರಮ ಗಳಲ್ಲಿ ಬ್ರಹ್ಮಚರ್ಯಾಶ್ರಮಧರ್ಮ ಸರ್ವೋತ್ಕೃಷ್ಟವಿರುತ್ತೆ. ಒಂದು ಕಟ್ಟಡ ಬಂಧುರವಾಗಿರಬೇಕಾದರೆ, ಅದರ ನೆಲಗಟ್ಟು ಮತ್ತು ಉಪಯೋಗಿಸಿರುವ

ವಸ್ತುಗಳ ಗುಣಮಟ್ಟಗಳನ್ನು ಬೆಂಬಲಿಸಿರುವಂತೆ, ದುರ್ಲಭವಾದೀ ಮಾನವ ದೇಹ, ತೇಜಸ್ಸಂಪನ್ನವಾಗಿ, ಸರ್ವಾಂಗ ಸುಂದರವಾಗಿ, ಆರೋಗ್ಯ ದೃಢಗಾತ್ರವಾಗಿ, ಸುದೀರ್ಘಕಾಲ ಬಾಳಿ ಬದುಕಬೇಕಾದರೆ, ಬ್ರಹ್ಮಚರ್ಯದ ಊರ್ಧ್ವರೇತಸಂಪನ್ನನ್ನಾಗಿ ಅಭಿವರ್ಧಿಸುತ್ತಲಿರಬೇಕು. ಇದರಿಂದ ಕ್ರಮೇಣ ಸುಸಂಸ್ಕೃತಿ ಏರ್ಪಡುವುದು. ಸನ್ನೀತಿ, ಸದಾಚಾರ, ಸತ್ಸಂಘ, ಸದ್ವಿದ್ಯೆ, ಆರೋಗ್ಯ ದೃಢಗಾತ್ರತೆ ಇತ್ಯಾದಿಗಳೂ ಮತ್ತು ಜಿತೇಂದ್ರಿಯನಾಗಿ, ಸ್ವಚ್ಛಂದನ ವನಿತಾ, ಶೃಂಗಾರ ರಸಗಳಿಂದ ದೂರನಾಗಿ, ವಿದ್ಯಾರ್ಜನೋದ್ಯೋಗಿಯಾಗಿ ಸಂವರ್ಧಿಸಲು ಬ್ರಹ್ಮಚರ್ಯಾಶ್ರಮ, ವಿದ್ಯಾರ್ಥಿ ವಿದ್ಯಾರ್ಥಿನಿಯರುಗಳಿಗೆ ಕೇಂದ್ರ ಸ್ಥಾನವೆನಿಸಿರುತ್ತೆ. "ಬೃಹ್" ಧಾತುವಿನಿಂದ ಬ್ರಹ್ಮಪದವೂ, "ಚರ್" ಧಾತುವಿನಿಂದ ಚರ್ಯ ಪದವೂ ಉತ್ಪನ್ನವಾಗಿ "ಬ್ರಹ್ಮಚರ್ಯ" ಶಬ್ದ ಹೊರಹೊಮ್ಮಿದೆ. ಮಾನವ ಪರಶಿವಾಭಿಮುಖವಾಗಿ ನಡೆದು, ಶೈಶವ, ಬಾಲ್ಯ, ಕೌಮಾರ, ಯುವಕ ಎಂಬ ಸುಮಾರು ೨೫ ವರ್ಷಗಳ ಕಾಲಾವಧಿಯಲ್ಲಿ ಸರ್ವ ವಿದ್ಯಾಪಾರಂಗತನಾಗಿ, ದೃಢಗಾತ್ರ ಶರೀರವುಳ್ಳ ಸರ್ವಾಂಗ ಸುಂದರನಾಗಿ, ಸಂವರ್ಧಿಸುತ್ತಿರಬೇಕು. ಈ ನಿಯಮಗಳು ಬ್ರಹ್ಮಚಾರಿಣಿಗಳಾದ ವಿದ್ಯಾರ್ಥಿನಿಗಳಿಗೂ ಅನ್ವಯಿಸುವುದಾಗಿದೆ. ಐಹಿಕಾಮುಷ್ಮಿಕ ಗುರಿಗಳನ್ನು ಸಾಧಿಸಲು ಬ್ರಹ್ಮಚರ್ಯಾಶ್ರಮ ಪ್ರಶಸ್ತವಿರುತ್ತೆ. ಬ್ರಹ್ಮಚರ್ಯದ ಕಾಲದಲ್ಲಿ ಅರ್ಜಿಸಿದ ವಿದ್ಯಾಸಂಪತ್ತು, ಸುಸಂಸ್ಕೃತ, ಸಂಸ್ಕಾರ, ಅಷ್ಟಾಂಗಯೋಗದ ವ್ಯಾಯಾಮ, ಅಸ್ಖಲಿತ ವೀರ್ಯ, ಧೀರೋದ್ಧಾರ ಭಾವ, ಶೌರ್ಯ, ಓಜಸ್ಸು, ತೇಜಸ್ಸು, ವಾಗ್ವರ್ಚಸ್ಸು, ಇತ್ಯಾಧಿ ಗಂಭೀರವಾದ ಸದ್ಗುಣಾದಿಗಳು ಮಾನವನ ಭವಿಷ್ಯತ್ಕಾಲದ ಸಂಪದ್ಯುಕ್ತವಾದ ಬಾಳನ್ನು ಮಂಗಳಕರವಾಗಿಸುವುದು ಬ್ರಹ್ಮಚಾರಿ, ಬ್ರಹ್ಮಚಾರಿಣಿಯರ ಸತತ ಅಂತಃಕರಣ ನಿಗ್ರಹದಿಂದ ಕ್ರಮೇಣ ಅವರಲ್ಲಿ ದೈವೀ ಶಕ್ತಿಭರಿತ ಓಜಶಕ್ತಿ ಆವಿರ್ಭವಿಸಿ ಸದಾ ಊರ್ಧ್ವಗತಿಯಲ್ಲಿ ಪ್ರವಹಿಸುವುದು.

**ವಿದ್ಯಾರ್ಥೀ ಚೇ ತ್ಯಜೇತ್ ಸೌಖ್ಯಂ। ಸುಖಾರ್ಥೀ ಚೇ ತ್ಯಜೇದ್ವಿದ್ಯಾ ॥**

ಸುಖದಲ್ಲಿ ಇಚ್ಛೆಯುಳ್ಳವರು ವಿದ್ಯೆಯನ್ನು ಮರೆತು ಕೈಬಿಡಬೇಕು. ವಿದ್ಯೆಯಲ್ಲಿ ಸದಾ ನಿರತರಾದವರು, ಸುಖವನ್ನು ಬಯಸಬಾರದು ಎಂಬುದನ್ನು ಗಮನದಲ್ಲಿ ಇರಿಸಿ ಬ್ರಹ್ಮಚರ್ಯದ ಕಾಲ ಅದೊಂದು ಮಹತ್ತರವಾದ ತಪಸ್ಸೆಂದು ಅರಿತು ಆಚರಿಸಬೇಕು.

ನ ಸ್ವಪ ತಪ ಇತ್ಯಾಹುಃ ಬ್ರಹ್ಮಚರ್ಯಂ ತಪೋಧನಂ ।
ಊರ್ಧ್ವರೇತಾ ಭವೇದ್ಯಸ್ತು ಸ ದೇವೋ ನ ತೂಮಾನುಷು ॥

ಕಠಿಣ ತರವಾದ ಗೆಡ್ಡೆ ಗೆಣಸು ಮೂಲಸ್ಕಂದಾದಿಗಳನ್ನು ಸೇವಿಸಿ, ಹಾಗೂ ಜಲಭಕ್ಷಣ, ವಾಯು ಭಕ್ಷಣಗಳನ್ನು ಆಚರಿಸಿದರೂ ಅದು ಪೂರ್ಣ ತಪಸ್ಸೆನಿಸು ವುದಿಲ್ಲ. ಬ್ರಹ್ಮಚಾರಿಣಿ, ಬ್ರಹ್ಮಚಾರಿ ವಟುಗಳು ನಿಷ್ಠೆಯಿಂದ ಊರ್ಧ್ವರೇತಸ್ಕ ರಾಗಿ ಆಚರಿಸುವ ವ್ರತರೂಪ ತಪಸ್ಸೇ ನಿಜ ತಪಸ್ಸೆನಿಸುವದು.

ಗುರು ವಾಕ್ಯಾಮೃತಾಸ್ವಾದಾತ್ ಪ್ರಾಪ್ತ ಬೋಧಮಹಾ ಫಲಃ।
ಷುಶ್ರೂಷುರೇವ ಸರ್ವೇಷಾಂ ಸೇವ್ಯತ್ವಾತ್ ಸೇವ್ಯ ಉಚ್ಯತೇ ॥

(ಸಿ.ಶಿ.ಪ. ೧೭, ಶ್ಲೋ. ೭೧)

ಗುರೂಪದೇಶ ವಾಕ್ಯಾಮೃತ ಸ್ವಾದನದಿಂದ ಶಿವಾದ್ವೈತ ಜ್ಞಾನರೂಪ ಮಹಾ ಫಲವನ್ನು ಸಂಪಾದಿಸಿಕೊಂಡು, ಪರಮ ಬ್ರಹ್ಮಚಾರಿ ಶಿಷ್ಯ ಸರ್ವರಿಗೂ ಸೇವ್ಯ ನೆಂದೆನಿಸಿಕೊಳ್ಳುವನು. ಶಿಷ್ಯನ ಮೇಲೆ ಗುರು ಕಟಾಕ್ಷ ಬೀಳಬೇಕಾದರೆ ಶಿಷ್ಯನು ಶ್ರೀ ಮಹಾಗುರುವಿನ—

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವ ದರ್ಶಿನಃ ॥

(ಗೀ. ಅ. ೪ ಶ್ಲೋ. ೩೪)

ವಿದ್ಯಾರ್ಜನಾದ್ಯೋಗಿಗಳಾದ ಕುವರ ಕುವರಿಯರು, ತಮ್ಮ ವಿದ್ಯಾ ವ್ಯಾಸಂಗದ ಕಾಲದಲ್ಲಿ ವಿದ್ಯಾ ಗುರುವೇ. ಶಿಕ್ಷಾ ಗುರುವೆಂದು ವಿಧೇಯರಾಗಿ ಅನುದಿನ ಗುರುಸೇವಾ ಶುಶ್ರೂಷೆಗಳನ್ನು ಮಾಡುತ್ತಾ, ಗುರು ಪ್ರಸನ್ನವದನ ನಾಗಿರುವಾಗ ತಮ್ಮ ಪಾಠ ಪದ್ಯಗಳ ಅರ್ಥವಾಗದ ಭಾಗಗಳನ್ನು ಪ್ರಶ್ನಿಸಿ, ಉತ್ತರ ಪಡೆದು ಶಿಷ್ಯರು ಅರಿವನ್ನು ಸಂಪಾದಿಸಿಕೊಳ್ಳಬೇಕು. ಶರಣಾಗತರಾದ ಯೋಗ್ಯ ಬ್ರಹ್ಮಚಾರಿ ವಟುಗಳಿಗೆ ವಿದ್ಯಾಸಿದ್ಧಿ ಶ್ರೀಗುರುವರನು, ತನ್ನ ಜ್ಞಾನ ಭಂಡಾರವನ್ನು ಶಿಷ್ಯೋದ್ಧಾರಾರ್ಥ ಸೂರೆಗೈಯುವನು. ಬ್ರಹ್ಮಚರ್ಯಾಶ್ರ ಮದ ಕಾಲದಲ್ಲಿ ಶ್ರೀರಾಮ-ಲಕ್ಷ್ಮಣರು ಶ್ರೀ ವಸಿಷ್ಠ ಗುರುವಿನಿಂದಲೂ, ಶ್ರೀಕೃಷ್ಣ ಶ್ರೀ ಸಾಂದೀಪನೀ ಗುರುಗಳಿಂದಲೂ, ಶ್ರೀಬಸವಣ್ಣ ಕೂಡಲಸಂಗ

ಮದ ಗುರುವರೇಣ್ಯ ಶ್ರೀಜಾತವೇದಿ ನಾಮಕ ಸಂಗಮೇಶ್ವರ ಶಿವಾಚಾರ್ಯರ ಶ್ರೀ ಪಾದ ಸೇವೆಯನ್ನು ಸುಮಾರು ಹತ್ತು ವರ್ಷ ಕಾಲ ಭಕ್ತಿಯಿಂದ ಸೇವೆ ಗೈದು ಸರ್ವಾಗಮಗಳ ಸಾರವನ್ನು ಮನಗಂಡು, ಆಚರಿಸಿ ಗುರೂಕ್ತಿಯಂತೆ ಸರ್ವತ್ರ ಪ್ರಚಾರಮಾಡಿ. ಕೀರ್ತಿಕಾಯದಿಂದ ಚಿರಸ್ಮರಣೀಯನಾದನು.

ಬ್ರಹ್ಮಚಾರಿ ಬ್ರಹ್ಮಚಾರಿಣಿಯರು ಸದಾ ಮಿತಾಹಾರ, ಮಿತ ನಿದ್ರೆ, ಮಿತನುಡಿ, ಮಿತ ವ್ಯಾಯಾಮಗಳಿಂದ, ಹಿತಮಿತವಾಗಿದ್ದು ಸದ್ವಿದ್ಯೆಯಲ್ಲಿ ಪಾರಂಗತರಾಗಿ, ಗುಣಾಢ್ಯರೂ ಆಗಿ ಪ್ರವರ್ಧಿಸುತ್ತಲಿರಬೇಕು ವಿದ್ಯಾರ್ಜನೋದ್ಯೋಗ ಕಾಲದಲ್ಲಿ ಬ್ರಹ್ಮಚರ್ಯ ಆಶ್ರಮದ ವಟುಗಳು ರಾಜಕೀಯ ವ್ಯವಹಾರಗಳಲ್ಲೂ, ಸ್ವಚ್ಛಂದನ, ವನಿತಾ, ತಾಂಬೂಲಾದಿ ಶೃಂಗಾರ ವಾರ್ತಾ ರಸ ಭರಿತ ಕೇಳಿಗಳಲ್ಲಿ ಭಾಗವಹಿಸದೆ ಇಂಬುಗೊಳ್ಳದೆ ಮನೋರಂಜಿತರಾಗದೆ, ಕಟ್ಟುನಿಟ್ಟಾದ ನೀತಿ ನಿಯಮಗಳಿಗೆ ಬದ್ಧರಾಗಿ ವ್ರತಶೀಲರಾಗಿರಬೇಕಾದುದು ಅತ್ಯಾವಶ್ಯಕವಿರುತ್ತೆ, ಬ್ರಹ್ಮಚಾರಿ. ಬ್ರಹ್ಮಚಾರಿಣಿಯರು ಎಚ್ಚೆತ್ತು ತಮ್ಮ ಆತ್ಮವನ್ನು ತಮ್ಮ ಆತ್ಮಜ್ಞಾನದಿಂದ ಉದ್ಧರಿಸಿಕೊಂಡು ಸತತ ಮುಂದುವರಿಯುತ್ತಲಿರಬೇಕು ನಾವು ಅಮೃತ ಪುತ್ರರೆಂಬ ಜ್ಞಾನವಿರಬೇಕು.

**ಪ್ರಜ್ಞಾನೇನ ಲಭೇದ್ಬ್ರಹ್ಮ । ಬ್ರಹ್ಮಚರ್ಯೇಣ ನಿಶ್ಚಿತಂ ॥**
**ಬ್ರಹ್ಮವೇದಃ ಬ್ರಹ್ಮಜ್ಞಾನಂ ಬ್ರಹ್ಮವೀರ್ಯಂತು ಅಮೃತಂ ॥**
(ಶಿವಾಗಮ)

## ೫. ದಯಾ

**ದಯೆ** ಎಂಬುದು ದೈವೀ ಸಂಪದ್ಭರಿತ ದಿವ್ಯಾಮೃತ ಬಿಂದು. ದಯಾರಸವೆಂಬುದು ಕ್ಷೀರಸಾಗರದಂತೆ ಆಪ್ಯಾಯನಕರವಾದ ಉತ್ತಮಾಂಶವದು. ದಶ ಮುಖಗಳಿಂದ ವಿರಾಜಿಸುವ ಧರ್ಮದ ಒಂದು ಪ್ರಮುಖ ಅಂಗ ದಯೆ. ದಯೆ ಎಂಬುದು ಕರುಣಾರಸ ಭರಿತ ಭಗವಂತನ ಕಲ್ಯಾಣಗುಣ ದಯಾ ಧರ್ಮಗಳ ನಿಕಟ ಸಂಬಂಧ ಶಿವಶಕ್ತಿಯರ ಅವಿನಾಭಾವ ಸಂಬಂಧದಂತೆ ಮಧುರಾತಿಮಧುರ. ದಯೆ ಎಂಬುದು ಅತ್ಯಂತ ಸತ್ವಭರಿತ ಸುಂದರ ಸೌಮ್ಯ ಅನರ್ಘ್ಯಾಭರಣ. ಸಕಲ ಪ್ರಾಣಿಗಳಲ್ಲಿ ಅನುಕಂಪದಿಂದ್ಯುಕ್ತವಾದ ಸದ್ಭಾವ ದಯೆ ಎನಿಸಿರುತ್ತೆ.

ಶ್ರೀಜಗದ್ಗುರು ರೇಣುಕಾಚಾರ್ಯರು ದ್ವಾಪರಯುಗಾರಂಭ ಕಾಲದಲ್ಲಿ ಅಗಸ್ತ್ಯ ಮುನಿಚಂದ್ರನನ್ನು ಉದ್ದೇಶಿಸಿ, ಬೋಧಿಸಿದ ದಶಮುಖಗಳಿಂದ ರಾರಾಜಿಸುವ ಧರ್ಮಗಳಲ್ಲಿ ದಯ ಎಂಬುದು ಮಧ್ಯ ಮಣಿ ನ್ಯಾಯಾನುಸಾರ ಪ್ರಜ್ವಲಿಸುವ ಅನರ್ಘ್ಯ ರತ್ನಾಭರಣ. ಅಖಿಲ ದೇವ ದಾನವ ಮಾನವರ ಉದ್ಧಾರರಾರ್ಥ ಹಾಗೂ ಅವರ ಶಾಂತಿ, ದಾಂತ್ರ್ಯೋದ್ಧಾರ, ಕಲ್ಯಾಣ ಆಕಾಂಕ್ಷೆಗಳ ಅಭ್ಯುದಯ ಗಳಿಗೆ, ಮೂಲಸ್ಥಂಭಾಯಮಾನ ಮಹತ್ತತ್ವವೆಂದು ಗಂಭೀರವಾಗಿ ವಿವರಿಸಿ; ದಯ ಅದೊಂದು ಅಂತರಂಗದ ಅವ್ಯಾಜ ಪ್ರೇಮಮಯ ಸ್ಫುರಣ ಶಕ್ತಿಯೆಂದು ಮನೋಹರವಾಗಿ ಬೋಧಿಸಿದರು. ಯಾವ ಧರ್ಮವಾದರೇನು ಸಕಲ ಜೀವರು ಗಳಲ್ಲಿ ದಯ,' ರಕ್ತಗತವಾಗಿ ಅಂಕುರಿಸಬೇಕು. ಜೀವರುಗಳಲ್ಲಿ ಅನುಕಂಪ ಆದರದ ಸೇವಾ ಮನೋಭಾವ ಉಕ್ಕಿ ಹರಿಯಬೇಕು. ಆತ್ಮಜ್ಞಾನಿ ಜಡಭರತ ಋಷಿ ಕೋಮಲವಾದ ಒಂದು ಜಿಂಕೆಮರಿಯನ್ನು ಆತ್ಮೀಯಭಾವದಿಂದ ಆಶ್ರಮದಲ್ಲಿ ಸಾಕುತ್ತಿದ್ದರು. ಆ ಮಹರ್ಷಿ ತಮ್ಮ ಪ್ರಾಣೋತ್ಕ್ರಮಣ ಕಾಲ ದಲ್ಲಿ ತಮ್ಮ ಜಿಂಕೆಯನ್ನು ರಕ್ಷಿಸಬೇಕೆಂಬ ಸಂಕಲ್ಪ ಬಲವಾಗಿ ಜಿಂಕೆಮರಿ ಸ್ಮರಣೆಯೊಂದಿಗೆ ದೇಹ ತ್ಯಾಗವಾದ್ದರಿಂದ ಮುಂದಿನ ಜನ್ಮ ಜಿಂಕೆ ಯಾಗಿಯೇ ಹುಟ್ಟಿದರು. ಇದು ಮೂಕ ಪ್ರಾಣಿಗಳಲ್ಲಿನ ದಯಾಭಾವವನ್ನು ಎತ್ತಿ ತೋರಿಸುತ್ತೆ. ಸರ್ವಜ್ಞರು:—

**ಕೊಲ್ಲು ಯೆಂಬ ಧರ್ಮವನ್ನು ಹೊಲೆಯಲ್ಲಿ ಹಾಕಿ ।**
**ಕೊಲ್ಲಲಾಗದು ಯೆಂಬ ಧರ್ಮವನ್ನು ನನ್ನ ಶಿರದಮೇಲಿರಲಿ ॥**

ಎಂದಿರುವರು. ಇದು ದಯಾಭಾವವೆಂದರಿಯಬೇಕು. ಜೀವದಯೆಯೇ ದಯಾ ಧರ್ಮಗಳ ಜೀವಾಳ. ಆದಿಗಾದಿಯಾದ ಪರಮ ವೀರಶೈವ ಧರ್ಮಗುರು ಶ್ರೀ ಪಂಚಾಚಾರ್ಯರು, ದ್ವಾಪರಯುಗಾರಂಭಕಾಲದಲ್ಲಿ ದಯದ ಬಗ್ಗೆ ಸರ್ವತ್ರ ಸರ್ವರಿಗೂ ಸವಿಸ್ತಾರವಾಗಿ ವಿಶ್ರುತಗೊಳಿಸಿ ತಾವೂ ಆಚರಿಸಿ ತೋರಿಸಿ ಮಾರ್ಗದರ್ಶನ ನೀಡಿರುವರು. ಮೃಗಪ್ರಾಯರಾದ ಕಾಡು ಮನುಜ ರನ್ನು ಸಂಧಿಸಿ, ತಮ್ಮ ಕಟಾಕ್ಷ ದೀಕ್ಷೆಯಿಂದ ಅವರ ಪಾಪಾದಿ ಮಹಾಪತಕ ಗಳಿಂದ ಮುಕ್ತರಾಗಿಸಿ, ದಯಾರಸಭಾವದಿಂದ ಅವರ ಉದ್ಧಾರಾರ್ಥ ಶಿವತತ್ವ ವನ್ನು ಬೋಧಿಸಿ, ತತ್ಪರಿಣಾಮವಾಗಿ ದುರುಳರನ್ನು ಪ್ರಸಿದ್ಧ ಮಹರ್ಷಿಗಳ ನ್ನಾಗಿ ಶ್ರೀ ಜ॥ ಪಂಚಾಚಾರ್ಯರುಗಳು ಅವರನ್ನು ಪರಿವರ್ತನೆಗೊಳಿಸಿರುವರು.

ಶ್ರೀಜಗದ್ಗುರು ರೇಣುಕಾಚಾರ್ಯರ ಅನುಗ್ರಹಕ್ಕೆ ಪಾತ್ರರಾದ ಮತಂಗ, ಮಾತಂಗ, ಋಷಿಗಳು ಆದಿಯಲ್ಲಿ ಕ್ರೂರ ಕಾಡು ಮನುಜರಾಗಿದ್ದರು. ಶ್ರೀರೇಣುಕರ ದಯಾನುಗ್ರಹದಿಂದ ಪ್ರಸಿದ್ಧ ಮಹರ್ಷಿಗಳಾದರು. ಜೈನ, ಬೌದ್ಧ,ಏಸುಕ್ರಿಸ್ತ ಮೊದಲಾದವರು ಜಗತ್ತಿಗೆ ದಯ, ಧರ್ಮಗಳನ್ನು ಆಚರಿಸಿ ತೋರಿಸಿ ಬೋಧಿಸಿರುವರು, ಜೈನರು ವೀರಶೈವರಂತೆ ದಯಾ ತತ್ವವನ್ನು ಅಖಂಡವಾಗಿ ಹಾಗೂ ಅವ್ಯಾಹತವಾಗಿ ಆಚರಿಸುತ್ತಾ ಜಗದಾದ್ಯಂತ ಬೋಧಿಸು ತ್ತಲಿರುವರು. ಶ್ರೀರಾಮರು ವನವಾಸ ಕಾಲದಲ್ಲಿ ವಿಹಂಗಮ ಗೃಧ್ರರಾಜ ಜಟಾಯು ಪಕ್ಷಿಗೆ ಕರುಣೆಯಿಂದ ಮೋಕ್ಷಕ್ಕೆ ಕಳುಹಿಸಿ ಆಶೀರ್ವದಿಸಿದರು. ಅಂತ್ಯಜಳಾದ ವೃದ್ಧೆ ಶಬರೀ ಭಕ್ತಿಗೆ, ಆಕೆ ಅನೇಕ ವರ್ಷ ಋಷ್ಯಾಶ್ರಮಗಳಲ್ಲಿ ಯೆಸಗಿದ ಭಕ್ತಿ ಸೇವೆಗೆ ತಲೆದೂಗಿ ಮೆಚ್ಚಿ, ಶ್ರೀರಾಮ ಶಬರಿಗೆ ದಯಾಪೂರ್ವಕ ಮೋಕ್ಷವನ್ನು ಅನುಗ್ರಹಿಸಿದರು. ಸಣ್ಣ ಅಳಿಲು, ಸೇತುಬಂಧನ ಕಾರ್ಯದಲ್ಲಿ ತಾನಾಗಿ ಭಕ್ತಿಯಿಂದ ಮಳಲನ್ನು ತಂದೊದಗಿಸಿ ಸೇವೆಗೈದದ್ದರಿಂದ ಶ್ರೀರಘು ರಾಮ ಸಂತೋಷದಿಂದ ಅಳಲಿನ ಬೆನ್ನು ತಟ್ಟಿ ಆಶೀರ್ವದಿಸಿದ ಕಾರಣ, ರಾಮನ ಮೂರು ಬೆರಳು ಮುದ್ರೆ ಅಳಿಲುಗಳ ಬೆನ್ನಿನ ಮೇಲೆ ಯಿಂದಿಗೂ ಯಿದ್ದು ಅಭಯಪ್ರದವಾಗಿ ಉಳಿದಿವೆ. ಅಂದ ಬಳಿಕ ಶ್ರೀರಾಮಾನುಗ್ರಹ, ದಯಾ ಪೂರಿತವೆನಿಸಿದೆ. ಬುದ್ಧ, ಏಸುಕ್ರಿಸ್ತ, ಬಸವಣ್ಣ, ಮಹಾತ್ಮಾ ಗಾಂಧಿ ಮೊದಲಾದ ಅನೇಕ ಮಹನೀಯರು ದಯಾನಿಧಿಗಳಾಗಿದ್ದರು.

**"ದಯವೇ ಧರ್ಮದ ಮೂಲವಯ್ಯ"**

## ೬. ಕ್ಷಮಾ

ಕ್ಷಮೆಯೆಂಬುದು ಅತ್ಯಂತ ಗಂಭೀರವಾದ ಗುಣ. ದೈವೀ ಸಂಪತ್ತಿಗೆ ಸೇರಿದ ಅಮೂಲ್ಯಾಭರಣ **"ಕ್ಷಮಾಶಕ್ತಃ"** ಕ್ಷಮೆ ಈಶ್ವರೀಯ ಶಕ್ತಿಯೆನಿಸಿದೆ. ಕ್ಷಮೆ ಶಿವನ ಪ್ರಸನ್ನತೆಯ ಪ್ರಸಾದ. ಆದ್ದರಿಂದ ತಪ್ಪಿತಸ್ಥ ತನ್ನ ತಪ್ಪನ್ನು ಒಪ್ಪಿ ಪುನಃ ಇಂಥಾ ತಪ್ಪನ್ನು ಮಾಡುವುದಿಲ್ಲವೆಂದು ಮನಃಪೂರ್ವಕ ಒಪ್ಪಿದರೆ ಆಗ ಆತನನ್ನು ಕ್ಷಮಿಸುವುದು ದೈವೀ ಗುಣವಿರುತ್ತೆ. ಮಕ್ಕಳು ತಪ್ಪು ಮಾಡಿದರೆ ಹಿರಿಯರು ಕ್ಷಮಿಸುತ್ತಾರೆ. ತಾಯಿಯಲ್ಲಿ ಈ ಗುಣ ಯೆದ್ದು

ಕಾಣುತ್ತೆ. ಭೂಮಾತೆಯಲ್ಲಿ ಕ್ಷಮಾಗುಣ ಪ್ರಸಿದ್ಧವಾಗಿ ಕಾಣುತ್ತೆ. ನಾವು ಪ್ರತಿನಿತ್ಯ ಅನಂತ ತಪ್ಪುಗಳನ್ನು ಮಾಡುತ್ತಿದ್ದರೂ, ಕ್ಷಮಾ ವಿಭೂಷಿತಳಾದ ಭೂಮಿ ತಾಯಿ ನಮ್ಮನ್ನು ಕರುಣೆಯಿಂದ ಮನ್ನಿಸಿ ಕ್ಷಮಿಸುತ್ತಿರುವಳು.

ಆ ತಾಯಿಯು ಕರುಣೆಗೆ ನಾವು ಚಿರಋಣಿಗಳು. ಆಕೆ ಮುನಿದರೆ ಸರ್ವ ನಾಶವೆಂಬುದು ತಿಳಿದ ವಿಷಯ. ತಪ್ಪಿ ನೀರಲ್ಲಿ ಬಿದ್ದವನನ್ನು ಗಂಗೆಯೂ ಸಹ ಕ್ಷಮಿಸಿ ತೇಲಿಸುವಳು. ತಪ್ಪುಮಾಡಿದಾತ ಪಶ್ಚಾತ್ತಾಪ, ಪಟ್ಟರೆ—**"ಪಶ್ಚಾತ್ತಾಪೇನ ಪರಿಶುದ್ಧ್ಯತಿ"** ಪರಿಶುದ್ಧನಾಗುವನು. ಅಪಕಾರ ಮಾಡಿದವನಿಗೆ ದಂಡಿಸುವ ಶಕ್ತಿ ತನ್ನಲ್ಲಿದ್ದರೂ, ಸಹನೆಯಿಂದ ಅವನನ್ನು ಕ್ಷಮಿಸುವುದು ದೊಡ್ಡ ಗುಣ. ತಪ್ಪುಮಾಡುವುದು ಮಾನವ ಗುಣ, ಕ್ಷಮಿಸುವುದು ಶಿವನ ಗುಣ. ಒಮ್ಮೆ ಕರುಣಾನಿಧಿ ಶ್ರೀ ಮಹಾಗುರು ರೇಣುಕ ಕೊಲ್ಲಾಪುರದ ಅರಸು ಗೋರಕ್ಷನಾಥನ ಅರಮನೆಯೊಳಗೆ ಪ್ರವೇಶಿಸಿದ ಸಮಯದಲ್ಲಿ, ಕಾಮುಖನಾದ ಗೋರಕ್ಷನಾಥ ತನ್ನ ಉಭಯ ಪಟ್ಟದರಸಿಯರಾದ **ಪಿರಿಯಲಕ್ಕಾದೇವಿಯೊಂದೆಡೆ ಕಿರಿಯಲಕ್ಕಾದೇವಿಯೊಂದೆಡೆ ಪರಿಚರಿಸಿ ಬಿಜ್ಜಣಿಗೆಯಿಂ ಮೆಲ್ಲೆಲರನಿಕ್ಕುತಿರೆ | ಸರಸಿಜಾಸನ ಲೀಲೆಯಲಿ ಮೈ ಮರೆದು | ಮಲಗಿರ್ದಾಮದಾಂಧನ ಗುರುವರೇಣ್ಯನು ಕೂಗಿ ಕರೆದನು ಭಿಕ್ಷೆ ನೀಡೆನುತೆ ||** "ರಾಣಿಯರೊಡನೆ ಕಾಮುಕನಾಗಿರ್ದ ಅರಸನ ಕೂಗಿ ಗುರು ಭಿಕ್ಷೆ ನೀಡೆಂದನು. ಭಿಕ್ಷುಕನನ್ನು ಕಂಡರಾಜನು ತನ್ನ ಸುಪ್ಪತ್ತಿಗೆ ಮೇಲೆ ಕಾಲು ನೀಡಿ ಮಲಗಿ ಹಿರಿಯ ರಾಣಿಯನ್ನು ನೋಡಿ ತನ್ನ ಪಟ್ಟದ ಕತ್ತಿಯಿಂದ || ನೀರೆ ನೀನೀ ಖಡ್ಗದಿಂ ತತ್ಕರವ ಕಡಿಯೆಂದ || ಆ ಭಿಕ್ಷುಕನ ಕರಗಳನ್ನು ಕಡಿಯೆಂದು ಕಠೋರವಾಗಿ ನುಡಿದನು. ಸಾಧ್ವಿಮಣಿ ಪತಿಯಾಜ್ಞೆ ಮೀರುವಂತಿಲ್ಲ. ಶಿವನಂತೆಸವ ಅತಿಥಿಯ ಕರಗಳ ಕಡಿಯುವಂತಿಲ್ಲವಾಗಿ ಉಭಯ ಸಂಕಟಕ್ಕೀಡಾಗಿ, ತನ್ನ ಸ್ಥಿತಿಯನ್ನು ಗುರುವಿನಲ್ಲಿ ಅರಿಕೆ ಮಾಡಿಕೊಂಡು, ಗುರುವಿನಪ್ಪಣೆಯಂತೆ, **"ಲೋಲಲೋಚನೆಯಂಜಿ ನಡುಗುತ್ತೆ | ಫಾಲನೇತ್ರನ ನೆನೆದು ಮನದೊಳು ಬಾಳನಿಕ್ಕಿದಳಹಹಾ ಗುರುವರ್ಯನ ಕರಾಂಬುಜದೆ ||** ತಕ್ಷಣ ಶ್ರೀರೇಣುಕನ ತಪೋಜ್ವಾಲೆಗೆ ಕರಗಿದ ಖಡ್ಗ ನಿಮಿಷಾರ್ಧದಲ್ಲಿ ಗೋರಕ್ಷನಾಥನತ್ತ ಹರಿದು ಖಡ್ಗವಾಗಿ ಧಾವಿಸಿ ಅರಸನ ಉದಿರದೊಳು ಪೊಗಲು ರಕ್ತವ ಕಾರುತ್ತ ಗೋಳಿಟ್ಟು ರಾಣಿ

ಯರೊಂದಿಗೆ ಬಂದು ಗುರುವಿನ ಅಡಿದಾವರೆಗಳಲ್ಲೆರಗಿ ಹೀನ ಭಾಗ್ಯನಾದ ತನ್ನ ಮಹಾಪರಾಧವನ್ನು ಕೃಪೆಯಾ ಕ್ಷಮಿಸಿ ಕಾಪಾಡಬೇಕೆಂದು ನಮ್ರಭಾವದಿಂದ ಕಣ್ಣೀರಿಟ್ಟು ರಾಣಿಯರೊಂದಿಗೆ ಪ್ರಾಣದಾನ ಭಿಕ್ಷೆಗಾಗಿ ಯಾಚಿಸಿದನು. ಶರಣಾಗತ ವತ್ಸಲನೂ,"**ಚಿಂತಾಮಣಿಃ ಪ್ರಪನ್ನಾನಾಂ**"ಎಂಬ ಕ್ಷಮಾವಿಭೂಷಣನಾದ ಶ್ರೀಗುರು ಗೋರಕ್ಷನಾಥನನ್ನು ಕೃಪೆಯಾ ಕ್ಷಮಿಸಿ ಆಶೀರ್ವದಿಸಿ ಹರಸಿದನು. "**ಕ್ಷಮಾ ಯುಕ್ತಸ್ಯ ತಪೋವರ್ಧಂತೇ**" (ಚಾಣುಕ್ಯ ಸೂತ್ರ) ಅಂದರೆ, ಕ್ಷಮಾವಿಭೂಷಿತರಾದ ಮಹಾತ್ಮರಲ್ಲಿ ಕಾಯ ಮನ ಭಾವಗಳು ಪರಿಶುದ್ಧವಾಗಿರುವ ಕಾರಣ, ಅಂಥವರಲ್ಲಿ ತಪಸ್ಸು ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತೆ.

**ಗರಲಾಶನ ಗರಪತ್ತ್ರನ ನಾಥ ।**
**ಶ್ರೀಕಂಠಭಕ್ತ ಕಲ್ಪತರೋ ।**
**ಭವಭಯ ಭಂಜನ ಭವತೋ ।**
**ಭವತಾದಿಹ ಸುಪ್ರಭಾತ ಮತಿವೇಲಂ ॥**

**ಶ್ರೀ ಪಾರ್ವತೀಶ ಕರುಣಾಪುರಿ ಪೂರ್ಣದೃಷ್ಟೇ ।**
**ಲೀಲಾ ಪ್ರಕಲ್ಪಿತಜಗತ್ ಸ್ಥಿತಿನಾಶ ಸೃಷ್ಟೇ ।**
**ಶ್ರೀಕಂಠತೇ ಪದ ಸರೋಜ ತತೀರ್ಪಿ ತೈಷಾ ।**
**ವಿಶ್ವೇಶ್ವರೇಣ ಸುವಿಭಾತನುತಿಃ ಪ್ರಸೀದ ॥**

---

## (೭) ಧಾನಂ

ದಾನವೆಂಬುದು ವಿಶ್ವಧರ್ಮದ ಏಳನೆ ಮುಖ. ಮನುಷ್ಯ ತನ್ನ ಶಕ್ತ್ಯಾನುಸಾರ ಆಗಾಗ ದಾನಧರ್ಮ ಪರೋಪಕಾರಗಳನ್ನು ಮಾಡುತ್ತಿರಬೇಕು. "**ಸತ್ಪಾತ್ರಕಂ ದಾನಮಂ**" ಎಂದಿದೆ ಶಾಸ್ತ್ರ. "ಗೋತ್ರ ನೋಡಿ ಹೆಣ್ಣು ಕೊಡು ಪಾತ್ರನೋಡಿ ದಾನ ಮಾಡು" ಎಂದು ನಮ್ಮನ್ನು ಎಚ್ಚರಿಸಿದೆ. ದಾನ ಮಾಡುವಾತ ಪೂಜ್ಯಭಾವದಿಂದ ನಮಸ್ಕಾರ ಪೂರ್ವಕ ಜಂಗಮ ಅತಿಥಿ

ಗಳಿಗೆ ನೀಡಬೇಕೆಂದು ದಾನ ಮಾಡುವಾತ ಪೂಜ್ಯಭಾವದಿಂದ ನಮಸ್ಕಾರ ಪೂರ್ವಕ ಜಂಗಮ ಅತಿಥಿಗಳಿಗೆ ನೀಡಬೇಕೆಂದು ವಿಧಿಯಿದೆ.

"ಶಿವಯೋಗಿನ ಯದ್ಧತ್ತಂ । ತದಕ್ಷಯಂ ಫಲಂ ಭವೇತ್ ॥"

ಶಿವಯೋಗಿಗಳಿಗೆ ಭಕ್ತಿಪೂರ್ವಕ ಅರ್ಪಿಸಿದ್ದು ಅಕ್ಷಯವಾಗಿ ಫಲವೀಯುತ್ತೆಂದು ಆಚಾರ್ಯ ರೇಣುಕರು ಅಪ್ಪಣೆ ಕೊಡಿಸಿರುವರು. ದೀನ ದರಿದ್ರರಿಗೆ ದಾನ ನೀಡುವುದನ್ನು ಶಿವಸ್ಮರಣೆ ಪೂರ್ವಕ ಕೊಡಬೇಕು. ಅನೇಕ ಕರ್ತವ್ಯಗಳಲ್ಲಿ ದಾನ ಮಾಡುವುದು ಮಾನವನ ಮುಖ್ಯ ಕರ್ತವ್ಯಗಳಲ್ಲಿ ದಾನಮಾಡವುದು ಮಾನವನ ಮುಖ್ಯ ಕರ್ತವ್ಯವಿರುತ್ತೆ, ದಾನಿಗೆ ದಾರಿದ್ರ್ಯವಿಲ್ಲ ಲೋಭಿಗೆ ರೋಗ ತಪ್ಪದು.

ಆ ದಾನ ದೋಷೇಣ ಭವೇ ದರಿದ್ರೋ ।
ದರಿದ್ರ ದೋಷೇಣ ಕರೋತಿ ಪಾಪಂ ।
ಪಾಪಾದವಶ್ಯಂ ನರಕಂ ಪ್ರಯಾತಿ ।
ಪುನರ್ ದರಿದ್ರೇ ಪು ನರೇವ ಪಾಪಿ ॥"

ಕೊಟ್ಟದ್ದು ತನ್ನದು ಬಚ್ಚಿಟ್ಟದ್ದು ಪರರದು ।
ಕೊಟ್ಟದ್ದು ಕೆಟ್ಟಿತೆನಬೇಡ ।
ಕಟ್ಟಿಹುದು ಬುತ್ತಿ ಮುಂದೆ ಸರ್ವಜ್ಞ ॥

ಭೂದಾನ, ಗೋದಾನ, ಸ್ವರ್ಣದಾನ, ಕನ್ಯಾದಾನ, ವಿದ್ಯಾದಾನ, ಅನ್ನದಾನ ಇವುಗಳಲ್ಲಿ—

"ನಹಿ ನಹಿ ದಾನಂ । ಅನ್ನದಾನ ಸಮಾನಂ ॥"

ಅನ್ನದಾನದಿಂದ ತೃಪ್ತಿಯೇರ್ಪಟ್ಟು ಸಾಕು ಎಂಬುವನು. ಉಳಿದ ದಾನಗಳನ್ನು ಎಷ್ಟು ಕೊಟ್ಟರೂ ಸಾಕು ಎಂಬ ಶಬ್ದ ಬರುವುದಿಲ್ಲ. ದಾನ ಮಾಡುವಾಗ ಕೊಡುವ ಧಾತನ ಕೈ ಮೇಲಿರುತ್ತೆ. ಇದರಿಂದ ದಾನಿಗೆ ಮೇಲ್ಮೆ ಏರ್ಪಡುವುದು, ಗುರು ಲಿಂಗ ಜಂಗಮರಿಗೆ ತನು ಮನ ಧನಗಳನ್ನು ಯಥಾಶಕ್ತಿ ಅರ್ಪಿಸುತ್ತ ಧನ್ಯನಾಗಬೇಕು. ದಾನ ಸೋಪಾದಿಕ, ನಿರುಪಾದಿಕ, ಸಹಜ

ವೆಂದು ಮೂರು ವಿಧ. ಫಲಾಕಾಂಕ್ಷೆಯಿಂದ ಮಾಡುವ ದಾನ ಸೋಪಾಧಿಕ ವಿರುತ್ತೆ, ಪ್ರತಿಫಲವನ್ನು ಕೋರದೆ ಸಂತೋಷದಿಂದ ಶಿವಪ್ರೀತ್ಯರ್ಥ ಮಾಡುವ ದಾನ ನಿರುಪಾಧಿಕ. ಕೊಡುವಾತ ನಾನೆಂಬದೆ, ಕೊಡುವವನು ಸ್ವೀಕರಿಸು ವವನೂ ಓ ದೇವಾ! ನೀನೇ ಆಗಿರುವೆ ಎಂಬ ಉದಾತ್ತ ಭಾವದಿಂದ ಶಿವಾರ್ಪಿತ ಭಾವದಿಂದ ಕೊಡುವ ದಾನ ಸಹಜ ದಾನವೆನಿಸಿ ಸ್ತುತ್ಯವಿರುತ್ತೆಂದು ಶ್ರೀರೇಣು ಕರು ಬೋಧಿಸಿರುವರು. ಶ್ರೀ ವಾಮನಮೂರ್ತಿಗೆ ಬಲಿ ಚಕ್ರವರ್ತಿ ಮಾಡಿದ ಸರ್ವಸ್ವ ದಾನ ಸಹಜ ದಾನವಿರುತ್ತೆ. ಇದರಂತೆ ದಾನಶೂರ ಕರ್ಣನೆಸಗಿದ ದಾನ ಸಹ ಸಹಜದಾನವಿರುತ್ತೆ. ಈ ಜಗತ್ತಿನಲ್ಲಿ ಸರ್ವವೂ ಸರ್ವೇಶ್ವರನ ಅಖಂಡ ಐಶ್ವರ್ಯವಾಗಿರುವಾಗ, ನನ್ನದು, ನಾನು ಕೊಟ್ಟೆ ಎಂಬ ಮಾತು ಗಳಿಗೆ ಅರ್ಥವಿಲ್ಲ. ಇದೆಲ್ಲಾ ಬಾಲಭಾಷೆಯಾಗುವುದು. ನಾವು ಅನನ್ಯ ಭಾವೇನ ಆತ್ಮಾರ್ಪಣ ಪೂರ್ವಕ ಭಗವಂತನಲ್ಲಿ ಶರಣಾಗತರಾಗಿ, ನಮ್ಮನ್ನು ನಾವೇ ಭಗವಂತನ ಶ್ರೀಪಾದದಲ್ಲಿ ಭಕ್ತಿಪೂರ್ವಕ ಅರ್ಪಿಸಿಕೊಂಡರೆ, ಇದು ಸರ್ವಶ್ರೇಷ್ಠ ದಾನ ವೆನಿಸುವುದು—

**ಯದ್ಯತ್ಕರ್ಮ ಕರೋಮಿ ತತ್ತದಖಿಲಂ ।**
**ಶಂಭೋ ತವಾರಾಧನಂ ॥**

ಎಂಬ ಭಾವದಿಂದ ಶಿವನಿಗೆ ಅರ್ಪಿಸುವ ದಾನ ಹೊನ್ನಾಗುವುದು.

## ೮. ಪೂಜಾ

ಶ್ರೀ ಜಗದ್ಗುರು ರೇಣುಕಾಚಾರ್ಯರು ಬೋಧಿಸಿದ ವಿಶ್ವಧರ್ಮದ ಎಂಟನೇ ಮುಖ ಪೂಜಾಯೆನಿಸಿದೆ. ಜಗತ್ತನ್ನು ತನ್ನ ಲೀಲಾರ್ಥ ಸೃಷ್ಟಿಸಿ ಕಾಪಾಡುತ್ತಿರುವ ಮಹಾದೇವನನ್ನು ಮಾನವ ತನ್ನ ಜನ್ಮೋದ್ಧಾರಾರ್ಥ, ಯಾವಜ್ಜೀವವೂ ಅಪರಾತಿಶಯ ಪ್ರೇಮಪೂರ್ವಕ ಅನನ್ಯ ಭಕ್ತಿಪೂರ್ವಕ ಭಜಿಸಿ ನಿತ್ಯ ಪೂಜಿಸುವುದು ಅವನ ಆದ್ಯ ಕರ್ತವ್ಯವಿರುತ್ತೆ. ಅರ್ಚನ, ಆರಾಧನ ಅವಿರಳ ಅಖಂಡ ಭಕ್ತಿಭಾವೇನ ಶಿವನನ್ನು ಅರ್ಥಾತ್ ತನ್ನ ಇಷ್ಟಲಿಂಗವನ್ನು ಶುದ್ಧ ಗಂಗೋಧಕದಿಂದ ಮಂತ್ರೋಚ್ಚಾರಣೆ ಪೂರ್ವಕ ಅಭಿಷೇಖಿಸಿ, ಗಂಧಾಕ್ಷತೆ ವಿವಿಧ ಪುಷ್ಪ ಫಲ ಬಿಲ್ವಪತ್ರೆ ಇತ್ಯಾದಿಗಳಿಂದ ಪೂಜೆ ಸಲ್ಲಿಸಿ,ದೂಪ,ದೀಪ ನೈವೇ

ಡ್ಯಾದಿ ಭಕ್ಷ್ಯ ಬೋಜ್ಯಾದಿಗಳನ್ನು ಅರ್ಪಿಸಿ, ಸ್ತೋತ್ರ ಸ್ತುತಿಗಳಿಂದ ಹಾಡಿ ಆನಂದಿಸಿ, ನಂತರ ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರವನ್ನು ೧೦೮ ಸಾರಿ ಜಪಿಸಿ, ನಮಸ್ಕರಿಸುವುದು ನಿತ್ಯಪೂಜೆಯೆನಿಸಿದೆ. ಸೂರ್ಯೋದಯಕ್ಕೆ ಪೂರ್ವವೇ ಎದ್ದು ಮಿಂದು ಮಡಿಯುಟ್ಟು ಶುಚಿರ್ಭೂತ ಮನಸ್ಸಿನಿಂದ ಶಿವ ಪಂಚಾಕ್ಷರೀ ಮಹಾಮಂತ್ರೋಚ್ಚಾರಣ ಪೂರ್ವಕ ಶಿವಪೂಜಾಮಂದಿರವನ್ನು ಪ್ರವೇಶಿಸಿ, ಗದ್ದಿಗೆ ಮಣೆಯ ಮೇಲೆ ಉತ್ತರ ಅಥವಾ ಪೂರ್ವಾಭಿಮುಖವಾಗಿ ಪದ್ಮಾಸನಾಸೀನನಾಗಿ ಮಂಡಿಸಿ ಶಿವಸಂಕಲ್ಪ ಸಹಿತ ಇಷ್ಟಲಿಂಗ ಪೂಜಾರಾಧನೆ ಯಲ್ಲಿ ಮಗ್ನನಾಗಬೇಕು.

**ಶ್ರೀಕರಂಚ ಪವಿತ್ರಂಚ । ಶೋಕರೋಗ ನಿವಾರಣಂ ।**
**ಶ್ರೀಕರಂ ಪುಣ್ಯಂ ಭಸ್ಮಂ ತ್ರೈಲೋಕ್ಯಪಾವನಂ ॥**

ಎಂದು ಮೊದಲು ಶ್ರೀ ವಿಭೂತಿಯನ್ನು ಪೂಜಿಸಿ ಅಂಗದಲ್ಲಿ ಶಿವಪಂಚಾಕ್ಷರೀ ಮಹಾಮಂತ್ರ ಜಪಿಸುತ್ತಾ ಧರಿಸಬೇಕು. ಶಿವಪೂಜಾ ಮತ್ತೂ ಶಿವಸ್ತೋತ್ರ ಗಳು ಒಟ್ಟಿಗೆ ಏಕಕಾಲದಲ್ಲಿ ಭಕ್ತ್ಯಾ ಆಚರಿಸಬೇಕಾದ ಪವಿತ್ರ ಕ್ರಿಯೆಗಳು ಫಲಪ್ರದವಾದವುಗಳು,

**ಪೂಜಾಕೋಟಿ ಸಮಂ ಸ್ತೋತ್ರಂ ।**
**ಸ್ತೋತ್ರಕೋಟಿ ಸಮೋ ಜಪಃ ।**
**ಜಪಕೋಟಿ ಸಮಂ ಧ್ಯಾನಂ ।**
**ಧ್ಯಾನ ಕೋಟಿ ಸಮೋಲಯಃ ॥**

ಅಂದ ಬಳಿಕ ಲಿಂಗಾಂಗಸಾಮರಸ್ಯಾನಂದಕ್ಕೆ, ಪೂಜಾ, ಜಪ, ಸ್ತೋತ್ರಗಳು ಸುಭದ್ರವಾದ ಪೀಠಿಕೆಯಾಗಿವೆ. ಶಿವಜ್ಞಾನಿಯಾಗಿದ್ದರೂ ನಿತ್ಯನೈಮಿತ್ತಿಕ ಕರ್ಮಗಳಾದ,

**ಯಜ್ಞ ದಾನ ತಪಃ ಕರ್ಮಃ ।**
**ನ ತ್ಯಾಜ್ಯಂ ಕಾರ್ಯ ಮೇವತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಃ ॥**

ಎಂಬ ಗೀತೋಕ್ತಿಯಂತೆ ಶಿವಯೋಗಿ ಶಿವಶರಣರು ನಿತ್ಯ ಈ ಪವಿತ್ರ ಕರ್ಮಗಳನ್ನು ಸಾಂಗವಾಗಿ ಭಕ್ತಿಪೂರ್ವಕ ಆಚರಿಸುತ್ತಲಿರಬೇಕು. ಶ್ರೀ ಜಗದ್ಗುರು ರೇಣುಕಾಚಾರ್ಯರೂ ಸಹ ಇದೇ ಅಂಶವನ್ನು ಎತ್ತಿ ಹಿಡಿದು,

**ತಪಃ ಕರ್ಮ ಜಪೋ ಧ್ಯಾನಂ |**
**ಜ್ಞಾನಂ ಚೇತ್ಯನುಪೂರ್ವಕಂ ||**

ಎಂದೆ ಬೋಧಿಸಿರುವರು. ಯಾಕೆಂದರೆ—

**ಯದ್ಯದಾಚರತಿ ಶ್ರೇಷ್ಠಾಃ |**
**ಸ್ತತ್ತ ದೇವೇತರೇ ಜನಾಃ ||**

ದೊಡ್ಡವರ ಆಚರಣೆಗಳನ್ನು ಮನಗಂಡ ಕಿರಿಯರೂ ಅದರಂತೆಯೇ ಆಚರಿಸಲು ಪ್ರಯತ್ನಿಸುವರು. ಈ ಕಾರಣ ಮನೆಯಲ್ಲಿ ಹಿರಿಯರು ಗುರುದೈವ ಆರಾಧಕರಾಗಿದ್ದು ಜಂಗಮ ಪೂಜೆ ನಿತ್ಯಾನ್ನ ದಾನ ಕ್ರಿಯೆಗಳನ್ನು ಯಥಾಶಕ್ತಿ ಮಾಡುತ್ತಾ ದೇವತಾರಾಧನೆ **ನಿತ್ಯ ಇಷ್ಟಲಿಂಗ ಪೂಜಾರಾಧನೆಗಳಲ್ಲಿ** ಆಸಕ್ತಿಯುಳ್ಳವರಾಗಿರಬೇಕು. ಇದು ಮಾನವನ ಆದ್ಯ ಕರ್ತವ್ಯವಿರುತ್ತೆ.

"**ಪೂಜಾಮೂಲಂ ಗುರೋಃಪಾದಂ**" ಎಂದಿದೆ ಶಿವಾಗಮ.

## ೯. ಜಪಃ

ನಿತ್ಯ ಪೂಜಾನಂತರ ಶಿವಮಂತ್ರ ಶಿವನಾಮಗಳನ್ನು ನಿರ್ಮಲ ಹೃದಯದಿಂದ ಜಪಿಸುವುದು ಜಪವ್ರತವಿರುತ್ತೆ ಜಪಯಜ್ಞ ಮೂರು ವಿಧ ವಾಚಿಕ, ಉಪಾಂಶು ಮತ್ತೂ ಮಾನಸಿಕ. ಮಾನಸಿಕ ಜಪ ಅತ್ಯಂತ ಶ್ರೇಷ್ಠ ಮತ್ತೂ ಫಲಪ್ರದವಹುದು. ಓಂಕಾರ ಏಕಾಕ್ಷರ ಅಥವಾ ಪ್ರಣವ ಸಹಿತ ಶಿವಪಂಚಾಕ್ಷರೀ ಮಹಾಮಂತ್ರ ಜಪದಿಂದ ಅನಂತ ಪಾಪಗಳು ಕ್ರಮೇಣ ಪೂರ್ಣ ನಶಿಸಿ ಶುದ್ಧಾತ್ಮರಾಗುವೆವು. "**ಜಪತೋ ನಾಸ್ತಿ ಪಾತಕಂ**" ಜಪದಿಂದ ನಮ್ಮಲ್ಲಿ ಅಣಿಮಾದಿ ಅಷ್ಟಸಿದ್ಧಿಗಳ ಅದ್ವಿತೀಯ ಶಕ್ತಿ ಉದಿಸುವುದು. ಆತ್ಮ ತೇಜಸ್ಸು ಉಜ್ವಲಗೊಳ್ಳುವುದು.

ಜಕಾರೋ ಜನ್ಮ ವಿಚ್ಛೇದಃ ।
ಪಕಾರೋ ಪಾಪನಾಶಕಃ ।
ತಸ್ಮಾಜ್ಜಪ ಇತಿ ಪ್ರೋಕ್ತೋ ।
ಜನ್ಮ ಪಾಪ ವಿನಾಶಕಃ ॥

ವಾಗೇಂದ್ರಿಯ ಕರ್ಣೇಂದ್ರಿಗಳನ್ನು ಊರ್ಧ್ವ ಭಾವದ ನಿರತಿಶಯ ಪ್ರೇಮದಿಂದ ವಿನಿಯೋಗಿಸುವುದು ಜಪ ವೆನಿಸಿರುವುದು. ನಿತ್ಯ ಶಿವಪಂಚಾಕ್ಷರೀ ಲಿಖಿತ ಜಪ ಮನೋಬುದ್ಧಿ ಪಟಲಗಳ ಮೇಲೆ ಪರಿಣಾಮಕಾರಿಯಾದ ಒಳ್ಳೆ ಸಂಸ್ಕಾರ ವನ್ನುಂಟುಮಾಡುವುದು.

ಶ್ರೀರಾಮ ತಾರಕ ಮಂತ್ರ ಜಪಃ ಹಾಗೂ ನಿತ್ಯ ಲಿಖಿತ ಜಪಗಳು ಕ್ರಮೇಣ ಮೃಣ್ಮಯ ಶರೀರವನ್ನು ಚಿನ್ಮಯಗೊಳಿಸುವ ಪ್ರಭಾವದಿಂದ ಶಕ್ತಿ ಯುತವಾಗಿ ಕ್ರಮೇಣ ಜೀವನು ಶಿವಸ್ವರೂಪಿಯಾಗುವನು. ಆದ್ದರಿಂದ ಹೇ ಮನವೇ;

ಜಪ ಜಪ ಸತತಂ । ಶ್ರೀಸಾಂಬೇ ಚಂದ್ರ ಶಿರೋಮಣೌ ।
ಸಮುದಯೋ ಭಕ್ತಿರ್ಭವ ಧ್ವಂಸಿನೀಂ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂದಯಾ ಕ್ಷಮಾ ।
ದಾನಂ ಪೂಜಾ ಜಪೋ ಧ್ಯಾನ ಮಿತಿ, ಧರ್ಮಸ್ಯ ಸಂಗ್ರಹಃ ॥

ಸರ್ವ ಧರ್ಮ ಸ್ವರೂಪಿಯಾದ ಭಗವಂತನ ದಶಮುಖಗಳಲ್ಲಿ ಧ್ಯಾನ ಒಂದು ದಿವ್ಯಮುಖವೆನಿಸಿದೆ.

## ೧೦. ಧ್ಯಾನ

ಅಂತರಂಗದಲ್ಲಿ ಕಂಡನುಭವಿಸುವ ದಿವ್ಯಶಕ್ತಿ ಧ್ಯಾನ. ಒಂದು ವಿಷಯ ವನ್ನು ಕುರಿತು ಗಾಢವಾಗಿ ಚಿತ್ತ ಸ್ಥೈರ್ಯದಿಂದ ಚಿಂತಿಸುವುದು ಅಚಲ ವಾದೀ ಚಿಂತನೆ ಧ್ಯೇಯ ವಸ್ತುವನ್ನು ಹೊಂದುವವರೆವಿಗೂ ತೈಲಧಾರಾಪೂರ್ವಕ ವಾಗಿ ಮುಂದುವರಿಯುವ ಸ್ವಭಾವವುಳ್ಳದ್ದು ಧ್ಯಾನವೆನಿಸಿದೆ. ಮನೋಬುದ್ಧಿ ಗಳು ಏಕಮುಖವಾಗಿ ಅಂದರೆ ಅಸ್ಖಲಿತವಾಗಿ ನಿಷ್ಠೆಯಿಂದ ಊರ್ಧ್ವಗಾಮಿ

ಯಾಗಿ ಧ್ಯೇಯ ಗುರಿಯನ್ನು ಸಾಧಿಸಲು ಚಿಂತನ ಮಂತನ ಮಾಡುವ ಸತ್ಕ್ರಿಯೆ ಧ್ಯಾನವೆನಿಸಿದೆ.ಧ್ಯಾನ ಇಮ್ಮುಖವೆನಿಸಿದೆ. ದಾರಾಪುತ್ರಾದಿ ಧನಕನಕ ವಸ್ತ್ರವಾಹನಾದಿಗಳ ಅರ್ಜನೆ ವಿಷಯ ಅನನ್ಯವಾಗಿ ಬಯಸಿ ಬೇಡುತ್ತಿರುವ ನಶ್ವರವೆನಿಸಿದ ವಸ್ತುಗಳ ಪ್ರಾಪ್ತಿಗಾಗಿ ಮಾಡುವ ಧ್ಯಾನ ಅಧೋಮುಖ ಧ್ಯಾನವೆನಿಸಿದೆ. ಇದು ಆರಂಭದ ಕಾಲದಲ್ಲಿ ಸುಖ ಸಂಪದ್ಭರಿತವಾಗಿ ಇರುವಂತೆ ಕಂಡರೂ, ಅಂತ್ಯದಲ್ಲಿ ದುಃಖಮಯವಾಗಿ, ನಶ್ವರವೆನಿಸಿದೆ. ಈ ಕಾರಣದಿಂದ ಅಧೋಮುಖವುಳ್ಳ ಧ್ಯಾನದಿಂದ ಮಾನವನಿಗೆ, ದುಃಖ ತಪ್ಪಿದ್ದಲ್ಲ. ಈ ಕಾರಣದಿಂದ ಅಧೋಮುಖವುಳ್ಳ ಧ್ಯಾನದಿಂದ ಮಾನವನಿಗೆ ಜೀವಿತದಲ್ಲಿ ನಿಜವಾದ ಸುಖ ಶಾಂತಿಗಳು ದುರ್ಲಭವಿರುತ್ತೆ. ಬೆಕ್ಕು ಇಲಿಯನ್ನು,ಬಾಚಿ ಹಿಡಿಯುವಾಗ ಸಿಂಹ ಆನೆಯ ಮೇಲೆ ಹೌಹಾರಿ ಅದರ ಕುಂಭಸ್ಥಲವನ್ನು ಹಿಡಿದು ತಿನ್ನಬೇಕಾದರೆ ಕ್ವಚಿತ್ ಧ್ಯಾನಮಾಡಿ ನಂತರವೇ ಕಾರ್ಯೋನ್ಮುಖವಾಗುವುವು. ಇದು ಅದೋನ್ಮುಖಧ್ಯಾನವೆನಿಸಿರುತ್ತೆ.ಮಾನವ ಊರ್ಧ್ವಗಾಮಿ,ಧ್ಯಾನಾನು ಸಂಧಾನಿ ಸನ್ಯಾಸಿ ವೇಶಧಾರಿ ಅರ್ಜುನ ಸುಭದ್ರೆಗಾಗಿ ಧ್ಯಾನಮಾಡಿದ್ದಾನೆ. ಇದು ಬಕ ಧ್ಯಾನವೆನಿಸಿದೆ. ಶಿವಧ್ಯಾನ ಹೀಗಿರಬಾರದು.

ಐದು ವರ್ಷದ ಧೃವ ಕುಮಾರ ಶ್ರೀಹರಿಯನ್ನು ಕಾಣಲು ಧ್ಯಾನಾರೂಢನಾಗಿ ಮಂಡಿಸಿದಾಗ, ಧಾರಾಕಾರವಾದ ಮಳೆ, ಮಿಂಚು, ಗುಡುಗು, ಸಿಡಿಲಿನ ಆರ್ಭಟಗಳು ಭೀಕರವಾಗಿದ್ದರೂ ಅಸಂಪ್ರಜ್ಞಾತ ಧ್ಯಾನದಲ್ಲಿದ್ದ ಕೋಮಲ ಸುಕುಮಾರನಿಗೆ ಇದಾವುದೂ ಅರಿವಾಗಲೇ ಇಲ್ಲ. ಏಕಸಂಧಿ ಗ್ರಾಹಿಯಾಗಿ ತದೇಕ ಧ್ಯಾನಪರವಶನಾದ ಧ್ರುವನ ಮನೋಬುದ್ಧೀಂದ್ರಿಯಗಳು ಶ್ರೀಹರಿಯ ಚಿನ್ಮಯರೂಪದಲ್ಲಿ ಅಂತರ್ಗತವಾಗಿದ್ದವು. ಈ ಉಗ್ರ ತಪಸ್ಸಿಗೆ ಮೆಚ್ಚಿ ಶ್ರೀ ಲಕ್ಷ್ಮೀನಾರಾಯಣನು ಶ್ರೀ ಶಂಖಚಕ್ರ ಗದಾಪಾಣಿಯಾಗಿ, ವನಮಾಲಾ ವಿಭೂಷಿತನಾಗಿ ಧ್ರುವನೆದುರಲ್ಲಿ ಪ್ರತ್ಯಕ್ಷವಾಗಿ ನಿಂತು, "ವತ್ಸಾ! ನಿನಗೇನಾಗಬೇಕು ಕೇಳು. ವರಕೊಡಲಿಕ್ಕಾಗಿ ನಿನ್ನೆಡೆಗೆ ಬಂದಿದ್ದೇನೆಂದನು. ಕೋಟಿ ಸೂರ್ಯ ಪ್ರಕಾಶದಿಂದ ಬೆಳಗುವ ಶ್ರೀಮನ್ನಾರಾಯಣನು ವರನೀಯಲು ಎದುರಲ್ಲಿ ನಿಂತಿದ್ದರೂ, ಯಾವುದನ್ನೂ ಕಾಣದ ರಾಜಕುಮಾರನು ಅಂತರ್ಮುಖಿಯಾಗಿ ತದೇಕಧ್ಯಾನದಲ್ಲಿ ಮುಳುಗಿರ್ದನು. ವೈಕುಂಠನಾಥನಿಗೆ ಆಶ್ಚರ್ಯವಾಗಿ ಇದರ ರಹಸ್ಯವನ್ನರಿತು. ಧ್ರುವ್ವನ ಹೃದಯಾಂತರ್ಗತವಾಗಿದ್ದ ತನ್ನ

ಕೋಮಲ ರೂಪವನ್ನು ಅಂತರ್ಧಾನಗೊಳಿಸಿದನು. ಹರಿಯನ್ನು ಹೃತ್ಕಮಲದಲ್ಲಿ ಕಾಣದ ಧ್ರುವ ಜಾಗ್ರತಾವಸ್ಥೆಗೆ ಹಿಂದಿರುಗಿ ಕಣ್‌ತೆರೆಯಲು, ತನ್ನ ಹೃದಯೇಶನಾದ ಶ್ರೀಹರಿ, ನೀಲಮೇಘಶ್ಯಾಮಲನಾಗಿ ಕಟಕ ಕುಂಡಲ ಕಿರೀಟಧಾರಿಯಾಗಿ ಪಿತಾಂಬರವನ್ನುಟ್ಟು ಚತುರ್ಭುಜಧಾರಿಯಾಗಿ ಎದುರುಗಡೆ ಮಂದಸ್ಮಿತ ವದನಾರವಿಂದನಾಗಿ ನಿಂತಿದ್ದ ಕೋಮಲಾಂಗನನ್ನು ಸಂದರ್ಶಿಸಿದೊಡನೆ, ಧ್ರುವ ಕುಮಾರ ಮೇಲೆದ್ದು ಬದ್ಧಾಂಜಲಿಪುಟನಾಗಿ ಹರಿಯನ್ನು ಪ್ರದಕ್ಷಿಣೆಪೂರ್ವಕ ನಮಸ್ಕರಿಸಿ ಧ್ಯಾನ ಯೋಗದಿಂದ ತಾನು ಧನ್ಯನಾದೆನೆಂದನು

**ಧ್ಯಾನಾವಸ್ಥಿತ ತದ್ಗತೇನ ಮನಸಾ ।**
**ಪಶ್ಯಂತಿ ಯಂ ಯೋಗಿನೋ ॥**

ಇಂತು ಧ್ಯಾನಾರೂಢರಾದ ಶಿವಶರಣರು, ಹೃನ್ಮಂದಿರದಲ್ಲಿ ಶಿವನನ್ನು ಧ್ಯಾನ ಯೋಗ ಬಲದಿಂದ ಸಂದರ್ಶಿಸಿ ಆನಂದಿಸುತ್ತಾರೆ. **ಧ್ಯಾನಗಮ್ಯನು ಶಿವನು** ದಾನಂ ಪೂಜಾ ಜಪೋ ಧ್ಯಾನಾದಿಗಳು ಶಿವನನ್ನು ಸುಲಭವಾಗಿ ನಮ್ಮ ಶುದ್ಧಾಂತರಂಗದಲ್ಲಿ ಕಾಣಲು ಸನ್ಮಾರ್ಗವೆನಿಸಿವೆ. ಇವು ಮೋಕ್ಷಪ್ರದವಾದ ಕಲ್ಯಾಣ ಗುಣಗಳೂ ಅಹುದು,

**ಶ್ರೇಯೋಹಿ ಜ್ಞಾನ ಮಭ್ಯಾಸ ।**
**ಜ್ಞಾನಾತ್ ಧ್ಯಾನಂ ವಿಶಿಷ್ಯತೆ ॥**

**ಧ್ಯಾನಾತ್ಕರ್ಮ ಫಲತ್ಯಾಗ ।**
**ತ್ಯಾಗಾಚ್ಛಾಂತಿರ ನಂತರಂ ॥**

"ಜ್ಞಾನಾತ್ ಧ್ಯಾನಂ ವಿಶಿಷ್ಯತೆ" ಜ್ಞಾನಕ್ಕಿಂತ ಧ್ಯಾನಯೋಗ ಅತ್ಯಂತ ಪ್ರಶಸ್ತವಿರುತ್ತೆ. ಶ್ರೀಗುರುವಿಗೆ ತನುವನ್ನೂ ಲಿಂಗಕ್ಕೆ ಮನವನ್ನೂ ಜಂಗಮಕ್ಕೆ ಧನವನ್ನು ಭಕ್ತ್ಯಾ ಅರ್ಪಿಸಿ, ತಾನು ತನ್ನದು ಎಂಬ ಅಭಿಮಾನ ದೂರನಾಗಿ, ಊರ್ಧ್ವಧ್ಯಾನಾವಸ್ಥಿತ ಸ್ಥಿತಿಯಲ್ಲಿ, ಸರ್ವದಾ ಸರ್ವ ಭಾವೇನ ನಿಶ್ಚಿಂತೈಃ ಭಗವಾನೇವ ಭಜನೀಯ; ಎಂಬಂತಿರುವುದು ಉತ್ತಮ.

ವಾಕ್ಕಾಯ ಮಾನಸ ಭವೈರಿಹ ತೀವ್ರದೋಷೈಃ ।
ನಾನಾ ವಿಧೈರ್ಮಮ ಹರಹೋ ಚರಿತಂ ಮಯಾಗಃ ।
ಸ್ವಾಮಿನ್ ವಿಭೋ ಗರಪುರೀಶ್ವರ ಪಾರ್ವತೀಶ ।
ಶ್ರೀಕಂಠನಾಥ ಜಗತಾಂ ಕೃಪಯಾ ಕ್ಷಮಸ್ವ ॥

ಸಂಸಾರ ಜಾತ ಪರಿತಾಪವಶಾನ್ನಿತಾಂತಂ ।
ಕ್ಲಾಂತಂ ವಿಭೋ ಹೃದಯ ಮೇತದ ತೀವ ಹಂತಂ ।
ಗಚ್ಛಾಮ್ಯನನ್ಯ ಶರಣಃ ಶರಣಂ ಭವಂತಂ ।
ಶ್ರೀಕಂಠ ಸಿಂಚ ಕರುಣಾಮೃತ ಧಾರಯಾಮಾಂ ॥

---

## ಲಿಂಗಸ್ಥಲ ೧೬

### ಧರ್ಮಾಚಾರ ಸ್ಥಲಂ (ಪರಿ ೧೬, ಶ್ಲೋ. ೬೪, ೬೫)

ಧರ್ಮಏವ ಸಮಸ್ತಾನಾಂ ಯತಃ ಸಂಸಿದ್ಧಿ ಕಾರಣಂ ।
ನಿಃಸ್ಪೃಹೋಪಿ ಮಹಾಯೋಗೀ ಧರ್ಮ ಮಾರ್ಗಂ ಹಿ ನತ್ಯಜೇತ್ ॥
ಜ್ಞಾನಾಮೃತೇನ ತೃಪ್ತೋಪಿಯೋಗೀ ಧರ್ಮಂ ನ ಸಂತ್ಯಜೇತ್ ।
ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥

ಧರ್ಮಾಚಾರದಿಂದ ಸಮಸ್ತ ದುಃಖಗಳೂ, ದಾರಿದ್ರ್ಯಗಳೂ ಕ್ರಮೇಣ ನಿವಾರಣೆಯಾಗುವುವು, ಧರ್ಮಾಚರಣೆಗಳಿಂದ ಶಾಂತಿ ಸೌಹಾರ್ದಗಳು ಮೇಳೈಸುವುವು. ನಿಗಮಾಗಮಗಳಲ್ಲಿ ಬೋಧಿತವಾದ ದರ್ಮಾಚರಣೆಗಳನ್ನು ಅನುಕ್ರಮವಾಗಿ ಶ್ರದ್ಧಾಭಕ್ತಿಯಿಂದ ಅನುಸರಿಸಿ ಧೀಮಂತ ಶ್ರೀಮಂತನಾಗಬೇಕು. ನಿಷ್ಕಾಮ ಧರ್ಮಾನುಷ್ಠಾನ ಪರನಾಗಿ ಶಿವಜ್ಞಾನವನ್ನು ಅಂತರಂಗದಲ್ಲಿ ವೃದ್ಧಿಗೊಳಿಸುತ್ತ ಯಾವಜ್ಜೀವವೂ ಕರ್ಮಬಂಧಕ್ಕೆ ಸಿಗದೆ ವರ್ಧಿಸುತ್ತಲಿರಬೇಕು, ಧರ್ಮವೇ ಸಮಸ್ತ ಮಾನವರ ಸಹಜ ಭೂಷಣ ಹಾಗೂ ಭೋಗ ಮೋಕ್ಷಗಳ ಪ್ರಾಪ್ತಿಗೆ ಕಾರಣವೆನಿಸಿದೆ. ಧರ್ಮಾಚಾರವೇ ಸಕಲರಿಗೂ ಸುಖಶಾಂತಿಗಳಿಗೆ

ಆಗರ, ಧರ್ಮವೇ ವಿಶ್ವಕ್ಕೆ ನಿರಂತರ ಆಧಾರ. ಆದ್ದರಿಂದ ಧರ್ಮಾಚಾರಗಳ ಆಚರಣೆ ಅನುಭವಗಳಿಗಾಗಿ ಏಳಿರಿ, ಬಾಳಿರಿ ತಾಳಿರಿ. ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಸುಖ ಸೌಖ್ಯಗಳು "ಧರ್ಮೇಣ ಲಭತೇ ಸರ್ವಂ" ಎಂದಿದೆ ವೇದಾಗಮಗಳು. ಆದ್ದರಿಂದ ಧರ್ಮಾಚಾರ, ಸ್ವಧರ್ಮಾಚರಣೆ ಅತ್ಯಾವಶ್ಯಕವಿರುತ್ತೆ

ಸ್ವಲ್ಪಮಪ್ಯಸ್ಯ ಧರ್ಮಸ್ಯ ।
ತ್ರಾಯತೇ ಮಹತೋ ಭಯಾತ್ ॥

ಎಂದಿದೆ ಗೀತೆ. ಸ್ವಧರ್ಮಾಚರಣೆಯಲ್ಲಿ ಶ್ರದ್ಧಾಭಕ್ತಿಯಿಂದ ಸ್ವಲ್ಪ ಆಚರಿಸತ್ತಾ ಬಂದಲ್ಲಿ ಜನನ ಮರಣಗಳ ಮಹಾದುಃಖದಿಂದ ಮಾನವ ಪಾರಾಗಬಲ್ಲ. ಇದು ಸತ್ಯ.

ಧರ್ಮಾಮೃತಂ ಪೀತ್ವಾ ।
ಸುಖಿನಃ ಸಂತು ಮಾನವಾಃ ॥

ಮನುಷ್ಯಾಣಾಂ ಹಿತಂ ಧರ್ಮಂ ।
ವರ್ತಮಾನೇ ಕಲೌ ಯುಗೇ ॥

ಎಂದಿದ್ದಾರೆ ಶ್ರೀಭಗವತ್ಪಾದ ರೇಣುಕಾಚಾರ್ಯರು.

ಲಿಂಗಸ್ಥಲ ೧೭] ಭಾವಾಚಾರಸ್ಥಲ [(ಪರಿ. ೧೬)

ಭಾವ ಏವಸ್ಯ ಸರ್ವೇಷಾಂ ಭಾವಾಚಾರಃ ಪ್ರಕೀರ್ತಿತಃ ।
ಭಾವೋ ಮಾನಸ ಚೇಷ್ಟಾತ್ಮಾ ಪರಿಪೂರ್ಣಃ ಶಿವಾಶ್ರಯಃ ॥

ಭಾವನಾ ವಿಹಿತಂ ಕರ್ಮ ಪಾವನಾ ದಪಿ ।
ಪಾವನಂ ತಸ್ಮಾದ್ಭಾವನಯಾ ಯುಕ್ತಂ ।
ಪರಧರ್ಮಂ ಸಮಾಚರೇತ್ ॥

ಭಾವಯೇತ್ ಸರ್ವ ಕರ್ಮಾಣಿ ನಿತ್ಯನೈಮಿತ್ತಿಕಾನಿ ಚ ।
ಶಿವಪ್ರೀತಿ ಕರಾಣ್ಯೇವ ಸಂಗರಾಹಿತ್ಯ ಸಿದ್ಧಯೇ ॥

(ಶ್ಲೋ. ೬೭, ೬೮, ೭೩)

ಯಾವ ಕೆಲಸ ಮಾಡಬೇಕಾದರೂ ಭಾವಪೂರ್ವಕ ಮಾಡುವುದು ಫಲ ಪ್ರದವಿರುತ್ತೆ. ತನುಧರ್ಮ, ಮನೋಧರ್ಮ, ಎಂದು ಎರಡು ವಿಧ. ತನುಧರ್ಮ ಬಾಹ್ಯಚಾರವಾದರೆ ಮನೋಧರ್ಮ ಆಂತರಿಕವಿರುತ್ತೆ. ಭಾವಾಚಾರ ಮನದ ಸಂತುಷ್ಟಿಯನ್ನು ಅವಲಂಭಿಸಿದೆ. ಧರ್ಮಾಚಾರದಿಂದ ಸಂತುಷ್ಟಿಯನ್ನು ಅವಲಂಭಿಸಿದೆ ಧರ್ಮಾಚಾರದಿಂದ ದೇಹಶುದ್ಧಿಯಾಗುವಂತೆ ಭಾವಾಚಾರ ದಿಂದ ಮನ ಭಾವಗಳು ಕ್ರಮೇಣ ಶುದ್ಧಿಯಾಗುವುವು. ಆದ್ದರಿಂದ ಅಂತರಂಗ ದಲ್ಲಿ ಭಾವಾಚಾರಬೇಕು. ಭಾವಿಸದಲ್ಲದೆ ಕೊಡನು ಶಿವನು? ಶಿವಭಾವನೆಯಿಂದ ಮಾಡುವ ಕರ್ಮಗಳು ಒಳ್ಳೆ ಫಲವೀಯುವುವು. ಧರ್ಮಾಚಾರ, ಭಾವಾಚಾರ ಗಳು ಜ್ಞಾನಾಚಾರಕ್ಕೆ ಎಡೆಮಾಡಿಕೊಡುವುವು. ಸರ್ವವನ್ನೂ ಶಿವರೂಪವಾಗಿ ಕಾಣುವುದು ಭಾವಾಚಾರವೆನಿಸಿದೆ ನಾವು ಒಬ್ಬರನ್ನು ಭಾವಿಸುವುದಲ್ಲಧೆ ವಿಶ್ವಾಸ ಮತ್ತೂ ಬಂಧುತ್ವಗಳನ್ನುದ್ಧರಿಸಲುಬಹುದು ಜೀವಾತ್ಮನು ಭಾವ ಪೂರ್ಣವಾಗಿ ಶಿವನಲ್ಲಿ ಪ್ರಾರ್ಥಿಸಿ, ಧ್ಯಾನದಲ್ಲಿ ಮಗ್ನನಾದರೆ,

**ಭಾವೇ ಭಾವೇ ಹೃದಯ ಭವನೇ ।**
**ಭಾವ ಯೋಯಂ ಭವಂತಃ ॥**

ದಯಾಮಯನಾದ ಭಗವಂತನು ಭಾವುಕರ "ಸ್ವ ಹೃದಯ ಪ್ರಕಾಶಃ" ಎಂಬಂತೆ ಪರಿಶುದ್ಧವಾದ ಹೃನ್ಮಂದಿರದಲ್ಲಿ ಪ್ರಸನ್ನನಾಗಿ ಅವರ ಅಭೀಷ್ಟಗಳನ್ನು ಅನುಗ್ರಹಿಸಿ ರಕ್ಷಿಸುವನು. ಸದ್ಭಾವೇಣ, ಭಾವಿಸುವಿಕೆಯಲ್ಲಿ ಅನಂತ ಕಲ್ಯಾಣ ಗಳುಂಟಾಗುವುವು.

## ಲಿಂಗಸ್ಥಲ ೧೮] ಜ್ಞಾನಾಚಾರಸ್ಥಲ [(ಪರಿ. ೧೬)

**ಪರಿಪೂರ್ಣಂ ಮಹಾಜ್ಞಾನಂ ಪರತತ್ವ ಪ್ರಕಾಶಕಂ ।**
**ಅವಲಂಭ್ಯ ಪ್ರವೃತ್ತೋಯೋ ಜ್ಞಾನಾಚಾರಃ ಸ ಉಚ್ಯತೆ ॥**

**ಜ್ಞಾನೇನ ಹೀನಃ ಪುರುಷಃ ಕರ್ಮಣಾ ಬಧ್ಯತೇ ಸದಾ ।**
**ಜ್ಞಾನಿನಃ ಕರ್ಮ ಸಂಕಲ್ಪಾ ಭವಂತಿ ಕಿಲ ನಿಷ್ಫಲಾಃ ॥**

**ಜ್ಞಾನಂ ಮುಕ್ತಿಪ್ರದಂ ಪ್ರಾಪ್ಯ ಗುರುದೃಷ್ಟಿ ಪ್ರಸಾದತಃ ।**
**ಕಃ ಕುರ್ಯಾತ್ಕರ್ಮ ಕಾರ್ಪಣ್ಯೇ ವಾಂಛಾಂ ಸಂಸಾರವರ್ಧನೇ ॥**

ಶಿವಾದ್ವೈತ ಪರಂ ಜ್ಞಾನಂ ಜ್ಞಾನಮಿತ್ಯುಚ್ಯತೇ ಬುಧೈಃ ।
ಸಿದ್ಧೇನ ವಾಪ್ಯ ಸಿದ್ಧೇನ ಫಲಂ ಜ್ಞಾನಾಂತರೇಣಕಿಂ ॥

(ಶ್ಲೋ. ೭೭, ೮೦, ೮೧, ೮೨)

ಮಾಹೇಶ್ವರನ ಶಿವಜ್ಞಾನಯುತ ನಿತ್ಯ ನೈಮಿತ್ತಿಕ ಮನೋನಿಗ್ರಹಾದಿ. ಶಿವವ್ರತ, ಶಿವಪ್ರತಾದಿ ಮಹಾಜ್ಞಾನ ವರ್ತನೆಯೇ ಜ್ಞಾನಾಚಾರವೆನಿಸಿದೆ ಆಚಾರಗಳಲ್ಲಿ ಶಿವಜ್ಞಾನಾಚಾರ ಉತ್ಕೃಷ್ಟವಿರುತ್ತೆ. ಚಿನ್ಮಯ ಚಿತ್ಪ್ರಕಾಶ ತತ್ವವನ್ನು ಅವಲಂಭಿಸಿ ಭಕ್ತ್ಯಾ ಆಚರಿಸುವ ವಿಧಾನ ಜ್ಞಾನಾಚಾರವೆಂದರಿಯಬೇಕು. ಏಕೋತ್ತರ ಶತಸ್ಥಲಗಳ ಅರ್ಥಾತ್ ಶಿವಾದ್ವೈತಸಿದ್ಧಾಂತದ ಸಾರಾಮೃತವನ್ನು ಶ್ರೀಗುರುಮುಖದಿಂದ ಶ್ರವಣಮಾಡಿ, ಶ್ರೀಗುರುವಿನ ಕರುಣಾಕಟಾಕ್ಷದಿಂದ ಮುಕ್ತಿದಾಯಕ ಮಹಾಜ್ಞಾನ ಪಡೆದು ಅದರಂತೆ ಆಚರಿಸುವುದೇ ಜ್ಞಾನಾಚಾರವೆಂದು ಅರಿಯಬೇಕು. ಭಾವಾಚಾರ ಸಂಪನ್ನನಾದ ಶಿವಶರಣನ ಜ್ಞಾನಪೂರ್ವಕವಾದ ಆಚಾರವೇ, ಸಮಸ್ತ ಮಾನವನ ಉದ್ಧಾರಾರ್ಥ ಜ್ಞಾನಾಚಾರವೆಂದು ಪ್ರಸಿದ್ಧವಿರುತ್ತೆ.

ಶುದ್ಧಾಚಾರಃ ಶುದ್ಧ ಭಾವೋ ವಿವೇಕೀ ।
ಜ್ಯೋತಿಃ ಪಶ್ಯನ್ ಸರ್ವತಃ ಶೈವಮೇಕಂ ।
ಜ್ಞಾನಧ್ವಸ್ತ ಪ್ರಾಕೃತಾತ್ಮಾ ಪ್ರಪಂಚೋ ।
ಜೀವನ್ಮುಕ್ತಶ್ಚೇಷ್ಯತೇ ದಿವ್ಯಯೋಗೀ ॥

(ಶ್ಲೋ. ೮೪)

ಅಂದರೆ, ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ ಹಾಗೂ ಭೃತ್ಯಾಚಾರಗಳ ಅಂಶಗಳನ್ನು ತನ್ನಲ್ಲಿ ಅಳವಡಿಸಿಕೊಂಡಿರುವ, ಲಿಂಗಾಂಗಿ ಜ್ಞಾನಿಯು, ಸರ್ವತ್ರ ಅದ್ವಿತೀಯ ಮಹಾತೇಜಸ್ಸನ್ನು ಸಂದರ್ಶಿಸಿ, ಶಿವಾದ್ವೈತ ಜ್ಞಾನಾಗ್ನಿಯಿಂದ, ಪ್ರಕೃತಿಜನ್ಯನಾದ ವಸ್ತುಗಳ ಸಂಪರ್ಕವನ್ನು ತ್ಯಜಿಸಿ ಜೀವನ್ಮುಕ್ತನೆನಿಸಿದ್ದರೂ, ಲೌಕೀಕರ ಮಧ್ಯೇ ಸರ್ವಸಾಮಾನ್ಯರಂತೆ ರಾಗಾದಿಗಳಿಂದ ದೂರನಾಗಿ ವ್ಯವಹರಿಸುತ್ತಲಿರ್ಪನು ಅಸ್ತು.

ಇಲ್ಲಿಗೆ ಮಾಹೇಶ್ವರ ಸ್ಥಲಾಂತರ್ಗತ ಒಂಭತ್ತು ಲಿಂಗಸ್ಥಲಗಳ ಸಾರ ಸರ್ವಸ್ವ, ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಭೋಃ ಕಲ್ಯಾಣ ಮಹಾಭಾ | ಶಿವಜ್ಞಾನ ಮಹೋದಧೇ ।**
**ಆಚಾರ್ಯ ವರ್ಯ ಸಂಪ್ರಾಪ್ತಂ । ರಕ್ಷಮಾಂ ಭವರೋಗಿಣಂ ॥**

## ಪ್ರಸಾದಿಸ್ಥಲ

## ಲಿಂಗಸ್ಥಲ ೧೯] ಕಾಯಾನುಗ್ರಹ ಸ್ಥಲ [(ಪರಿ. ೧೬)

**ಅನುಗೃಹ್ಣಾತಿ ಯಲ್ಲೋಕಾನ್ । ಸ್ವಕಾಯಂ ದರ್ಶಯನ್ನಸೌ ।**
**ತಸ್ಮಾದೇವ ಸಮಾಖ್ಯಾತಃ | ಕಾಯಾನುಗ್ರಹನಾಮಕಃ ॥**

**ಶಿವಃ ಶರೀರ ಯೋಗೇಪಿ ಯಥಾ ಸಂಗವಿವರ್ಜಿತಃ ।**
**ತಥಾ ಯೋಗೀ ಶರೀರಸ್ಥೋ । ನಿಸ್ಸಂಗೋ ವರ್ತತೇ ಸದಾ ॥**

**ಗಲಿಶಾಹಂ ಕೃತಿ ಗ್ರಂಥಿಃ । ಕ್ರಿಡಾಕಲ್ಪಿತ ವಿಗ್ರಹಃ ।**
**ಜೀವನ್ಮುಕ್ತಶ್ಚರೇ ದ್ಯೋಗೀ । ದೇಹಿವನ್ನಿರುಪಾಧಿಕಃ ॥**

ಪ್ರಸಾದಿಸ್ಥಲದ ಹಿರಿಮೆ ಶಿವನಷ್ಟೇ ಮಹತ್ವಪೂರ್ಣವಿರುತ್ತೆ. ಪ್ರಸಾದ ಸ್ಥಲಕ್ಕೆ ಪರಮ ಆಧಾರವೇ ಶಿವಾನುಗ್ರಹ, ಶರಣನ ಸರ್ವೇಂದ್ರಿಯಂಗಳೆಲ್ಲಾ ಲಿಂಗ ಭೋಗೋಪಭೋಗವಾಗಿ, ಪದಾರ್ಥಗಳೆಲ್ಲಾ ಅರ್ಪಿತಭಾವದಿಂದ ಪ್ರಸಾದ ಸ್ವರೂಪವಾಗುವುವು. ಇಂತಪ್ಪ ಪ್ರಸಾದ ರೂಪವೇ ಪರಶಿವತತ್ತ್ವ ಸ್ವರೂಪವೆಂದರಿಯಬೇಕು. ಈ ಕಾಯಕವೇ ಲಿಂಗಾರ್ಪಿತವಾದ ಬಳಿಕ, ಈ ಅರ್ಪಿತವೇ ಪ್ರಸಾದವೆನಿಸಿದೆ ಸಾಕಾರವೆಲ್ಲಾ ಜೀವಭಾವವಳಿದು ಅಂಗವೆಲ್ಲಾ ಲಿಂಗಮಯವೆನಿಸಿದೆ.

**ಯಥಾ ಕಲಾ ತಥಾ ಭಾವೋ । ಯಥಾ ಭಾವಸ್ತಥಾ ಮನಃ ॥**

ಶ್ರೀಗುರುಲಿಂಗ ಜಂಗಮರಿಗೆ ಅರ್ಪಿತವಾದುದು, ಪ್ರಸಾದ ಮತ್ತದೇ ಪರವಸ್ತುವಹುದು.

**ಲಿಂಗಾರ್ಪಿತ ಪ್ರಸಾದಂಚ । ಸುಭೋಗೀ ಲಿಂಗ ಸಂಯುತಃ ॥**

ಎಂದು ಶಿವಾಗಮಂಗಳು ಉಗ್ಗಡಿಸಿವೆ. ಅಂದರೆ, ಇಷ್ಟಲಿಂಗದ ನಿತ್ಯ ಪೂಜೋತ್ಸವ ಕಾಲದಲ್ಲಿ ಲಿಂಗಕ್ಕೆ ಭಕ್ತ್ಯಾ ಸಮರ್ಪಿಸಿದ ಶುದ್ಧ ಭಕ್ಷ್ಯಭೋಜ್ಯಾದಿ ಪದಾರ್ಥಗಳನ್ನು, ತನ್ನಿಷ್ಟಲಿಂಗದ ಪುಣ್ಯಸ್ಮರಣೆಯೊಂದಿಗೆ ಶಾಂತ ಮನಸ್ಸಿನಿಂದ ಸ್ವೀಕರಿಸುವುದು, ಬೋಗಿಸುವುದು ಲಿಂಗಪ್ರಸಾದವೆನಿಸಿದೆ. ಸಾಕಾರವಪ್ಪ ಜೀವಭಾವವಳಿದ ಅಂಗವೆಲ್ಲಾ ಲಿಂಗಮಯವೆನಿಸಿದೆ. ಜ್ಞಾನಾಚಾರ ಸಂಪನ್ನನಾದ ಶಿವಯೋಗಿಯು, ತನ್ನ ದಿವ್ಯ ಶರೀರಧಾರಿಯಾಗಿ ಕಾಣಿಸುವನಾಗಿ, ಶರಣಾಗತರಾದ ಜನರನ್ನು ಅನುಗ್ರಹಿಸುವ ಕಾರಣ, ಆ ಮಹಾತ್ಮನು ಕಾಯಾನುಗ್ರಹನೆನಿಸಿರುವನು. ಶಿವಲಿಂಗ ತನ್ನ ಲೀಲೆಯಿಂದಾಗಿ, ಜಗದೋದ್ಧಾರಾರ್ಥ ಮೂರು ತೆರನಾಗಿ ಪ್ರಕಟವಾಗಿಹುದು. **ಅನುಗ್ರಹಲಿಂಗ, ಅರ್ಪಿತಲಿಂಗ ಮತ್ತೂ ತನುಗುಣ ಲಿಂಗವೆಂಬುದಾಗಿವೆ.** ಮತ್ತೆ ಜೀವದಯಾಪರನಾದ ದೇವನು ಕೃಪೆಯಿಂ, **ಅನುಗ್ರಹಲಿಂಗದಿಂದ** ಮುತ್ತೆರನಾಗಿ ಅಂದರೆ, **ಕಾಯಾನುಗ್ರಹ, ಕರಣಾನುಗ್ರಹವೆಂಬ** ಅಭಿಧಾನಗಳಿಂದ ಸತತ ವಿರಾಜಿತನಾಗಿಹನು. ಇದರಲ್ಲಿ ಕಂಡ **ಮೊದಲನೆಯ ಲಿಂಗಸ್ಥಲವೇ ಕಾಯಾನುಗ್ರಹಸ್ಥಲ**. ಇದು, ಶ್ರೀ ಮಹಾಗುರುದೇವನ ಕರುಣಾಕಟಾಕ್ಷದಿಂದ.ಪ್ರಕೃತಿ ಗುಣವಳಿದು, ಪ್ರಸನ್ನ ಲಿಂಗಕರಣಂಗಳಾಗಿ(ಶಿವಕರಣಂಗಳ)ಅಳವಡಿಸುವುದು. ಗುರುಲಿಂಗ ಜಂಗಮರ ದಿವ್ಯ ಪ್ರಸಾದದಿಂದ ಪ್ರಸಾದಕಾಯವಾಗಿದೆ. ಪ್ರಾಕೃತ ತನುವಿನ ಎಡಕರಕಮಲದಲ್ಲಿ ಜ್ಯೋತಿರ್ಲಿಂಗವನ್ನಿಟ್ಟು ಗುರು ತನ್ನ ಅಮೃತಹಸ್ತದಿಂದ ಕರುಣಿಸಿ ಕಟಾಕ್ಷ ದೀಕ್ಷೆಯಿಂದ ಶಿಷ್ಯನನ್ನು ಮಂಗಳಾಶೀರ್ವಾದಗಳೊಂದಿಗೆ ಹರಸಲು,ಇದು ಕಾಯಲಿಂಗವಾಯಿತು. ಈ ಕಾಯವೆಂಬ ಕರ್ಪೂರವನ್ನು ಶ್ರೀಗುರು, ಜ್ಯೋತಿರ್ಲಿಂಗದೊಂದಿಗೆ ಸಂಧಿಸಲು, "ಕಾಯಾನುಗ್ರಹ ಸ್ಥಲವೆನಿಸಿ"ಪ್ರಕಾಶಿತವಾಗಿಹುದು.

**ಶಂಭೋ ಶ್ರೀಕಂಠನಾಥ ಜಗತಾಂ । ಕೃಪಯಾಕ್ಷಮಸ್ವ ।**
**ಅಂಧಂ ಮಮಾಕ್ಷಿಬಧಿರಂ ಶ್ರವಣಂ । ಮದೀಯಂ ।**
**ಶಂಭೋತ್ವದೀಯ ವಿಷಯೇ ರಸನಾಪಿಮಂದಾ ।**
**ಹೇ ಪಾರ್ವತೀಶ ತವಪಾದಸರೋಜಯುಗ್ಮಂ ।**
**ಶ್ರೀಕಂಠನಾಥ ನಿತರಾಂ ಶರಣಂ ಪ್ರಪದ್ಯೇ ॥**

**ತಪೋಭೂಮಿ ನಿರ್ಮಾಕಾಲೇ ಕುಠಾರಾದಪಿಪ್ರಾಪ್ಯಘಾತಂ ।**
**ಕಠೋರಂ ಕೃಪಾಲೋ ಪ್ರಸನ್ನಃ ।**
**ಪುರಾಭೂರ್ಯಥಾ ಭಾರ್ಗವೇ ತ್ವಂ ।**
**ತಥಾ ಮಯ್ಯೈನಾಥೇ ಪ್ರಸೀದ ಪ್ರಸೀದ ॥**

---

## ಪ್ರಸಾದಿ ಲಿಂಗಸ್ಥಲ ೧೯

## ಕಾಯಾನುಗ್ರಹಸ್ಥಲ (ಪರಿ. ೧೭ ಶ್ಲೋ. ೭, ೯)

**ಶಿವಃ ಶರೀರ ಯೋಗೇಪಿ ಯಥಾ ಸಂಗವಿವರ್ಜಿತಃ ।**
**ತಥಾಯೋಗೀ ಶರೀರಸ್ಥೋ ನಿಸ್ಸಂಗೋ ವರ್ತತೇ ಸದಾ ॥**

**ಗಲಿತಾಹಂ ಕೃತಿಗ್ರಂಥಿಃ ಕ್ರೀಡಾಕಲ್ಪಿತ ವಿಗ್ರಹಃ ।**
**ಜೀವನ್ಮುಕ್ತಶ್ಚರೇದ್ಯೋಗಿ ದೇಹಿವನ್ನಿರುಪಾಧಿಕಃ ॥**

ಶಿವನಿಗೆ ಅಂಗಸಂಬಧವಿರುವಂತೆ ಕಂಡುಬಂದರೂ ಅದರ ಸಂಗದಿಂದ ವರ್ಜಿತನಾಗಿರುವಂತೆ ಅಂದರೆ ದಿವ್ಯ ಮಂತ್ರಮಯ ದೇಹದಿಂದ ಅಬಾಧಿತವಾಗಿರುವಂತೆ ಶಿವಪ್ರಸಾದಿ ಅರ್ಥಾತ್ ಶಿವಯೋಗಿಯೂ ಸರ್ವರಂತೆ ಶರೀರಧಾರಿಯಾಗಿ ಕಂಡುಬಂದರೂ ಶಿವನಂತೆ ಶಿವಯೋಗಿ ನಿಸ್ಸಂಗನಾಗಿರ್ಪನು. ಪ್ರಸಾದಿಯು ಪರಶಿವಬ್ರಹ್ಮದಲ್ಲಿ ತಲ್ಲೀನ ಚಿತ್ತವೃತ್ತಿಯುಳ್ಳವನಾಗಿರುವ ಕಾರಣ, ಅಪ್ರಾಕೃತರಂತೆ ದೇಹಾಭಿಮಾನದಿಂದಿ ವರ್ಜಿತನಾಗಿರ್ಪನು. ಶರೀರಾಧ್ಯಾಭಿಮಾನ ರೂಪ ಗ್ರಂಥಿಗಳನ್ನು ಛೇದಿಸಿದವನೂ, ಲೀಲೆಗೋಸುಗ ಶರೀರವನ್ನು ಧರಿಸಿದವನೂ, ಪ್ರತಿಬಂಧನ ರಹಿತನೂ ಆದ ಶಿವಯೋಗಿಯು ಜೀವನ್ಮುಕ್ತನಾಗಿ ಮನುಷ್ಯನಂತೆ ಸಂಚರಿಸುತಿರ್ಪನು.

## ಪ್ರಸಾದಿ ಲಿಂಗಸ್ಥಲ ೨೦

## ಇಂದ್ರಿಯಾನುಗ್ರಹಸ್ಥಲ (ಪರಿ. ೧೭)

**ದರ್ಶನಾತ್ ಪರಕಾಯಸ್ಯ ಕರಣಾನಾಂ ವಿವೇಕತಃ ।**
**ಇಂದ್ರಿಯಾನುಗ್ರಹಃ ಪ್ರೋಕ್ತಃ ಸರ್ವೇಷಾಂ ತತ್ವವೇದಿಭಿಃ ॥**

**ಇಂದ್ರಿಯಾಣಾಂ ಬಹಿರ್ವೃತ್ತಿಃ ಪ್ರಪಂಚಸ್ಯ ಪ್ರಕಾಶಿನೀ ।**
**ಅಂತಃ ಶಿವೇ ಸಮಾವೇಶೋ ನಿಷ್ಪ್ರಪಂಚಸ್ಯ ಕಾರಣಂ ॥**

**ಮನೋಯತ್ರ ಪ್ರವರ್ತೇತ ತತ್ರ ಸರ್ವೇಂದ್ರಿಯ ಸ್ಥಿತಿಃ ।**
**ಶಿವೇ ಮನಸಿ ಸಂಲೀನೇ ಕ್ವಚೇಂದ್ರಿಯ ವಿಚಾರಣಾ ॥**

**ಸರ್ವೇಂದ್ರಿಯ ಪ್ರವೃತ್ತ್ಯಾ ಚ ಬಹಿರಂತಃ ಶಿವಂ ಯಜನ್ ।**
**ಸ್ವಚ್ಛಂಧಚಾರೀ ಸರ್ವತ್ರ ಸುಖೀ ಭವತಿ ಸಂಯಮೀ ॥**

(ಶ್ಲೋಂ. ೧೦, ೧೨, ೧೬, ೧೯)

"**ಮುಕ್ತಃ ಶಿವಸಮೋಭವೇತ್**" ಎಂಬುದು ಶೃತಿವಾಣಿ, ಶಿವಾಗಮ ವಾಣಿ. ಶಿವಸದೃಶನಾದ ಜೀವನ್ಮುಕ್ತ, ಧೈರ್ಯಯೋಗ ಸಂಪದ್ಭರಿತನಾದ್ದರಿಂದ ಆವನ ಕಟಾಕ್ಷ ದೀಕ್ಷಾಪ್ರಭಾವದಿಂದ, ಪಂಚಜ್ಞಾನೇಂದ್ರಿಯಗಳು ಸನ್ಮಾರ್ಗ ದಲ್ಲಿ ಕೊಂಡೊಯ್ಯುವ ವಿವೇಕದಿಂದಲೂ ಕೂಡಿದ್ದು, ಶ್ರೀಗುರು ದರ್ಶನ ಪ್ರಭಾವದಿಂದ ಇಂದ್ರಿಯಾನುಗ್ರಹವುಂಟಾಗುವುದರಿಂದ, ಬ್ರಹ್ಮಜ್ಞಾನಿಗಳು ಈ ಸ್ಥಿತಿಯನ್ನು ಇಂದ್ರಿಯಾಗುಗ್ರಹ ಸ್ಥಲವೆಂದು ಕರೆದಿರುವರು. ಸುಜ್ಞಾನ ವೆಂಬ ಹೊಂಬೆಳಗಿನ ಪರಂಜ್ಯೋತಿಯಲ್ಲಿ ಪಂಚೇಂದ್ರಿಯಂಗಳು ಪ್ರಸ್ಫುರಿತ ಭಾವ ದಿಂದ ಲಿಂಗೋಪಾಸನೆಯ ಆ ಸ್ವಾದನೆಯಿಂದ ತನ್ನ ಕರಣಂಗಳ ಜಡತ್ವ ವನ್ನು ದೂರೀಕರಿಸಿ, ಕಳವಳವನ್ನನುಭವಿಸದೆ ಇರುವ ಉಚ್ಚಸ್ಥಿತಿಯನ್ನು **ಇಂದ್ರಿಯಾನುಗ್ರಹ ಸ್ಥಲವೆಂದು** ಸ್ಪಷ್ಟಪಡಿಸಿರುವರು. ಕಾಯಾನುಗ್ರಹ, ಅನುಗ್ರಹಲಿಂಗದ ಪ್ರಥಮ ಕಮಲು. ಇಂದ್ರಿಯಾನುಗ್ರಹ ಅನುಗ್ರಹ ಲಿಂಗದ ದ್ವಿತೀಯ ಕಮಲೆನಿಸಿದೆ. ಪಂಚ ಜ್ಞಾನೇಂದ್ರಿಯಗಳು, ಅಂದರೆ; ನಾಸಿಕ,

ನಾಲಗೆ, ನಯನ, ತ್ವಕ್ಕು, ಮತ್ತೂ ಶ್ರವಣಾದಿಗಳು ಸಹಜವಾಗಿ ಸ್ವಾರ್ಥಪರವಾದವುಗಳು. ಸ್ವಾರ್ಥತೆಯಿಂದ ರಾಗದ್ವೇಷಾದಿ ಆಸುರೀ ಗುಣಗಳು ಪ್ರಜ್ವಲಿಸುವುವು. ವಿಷಯಾದಿಗಳಲ್ಲಿನ ಸಹವಾಸ, ಇಂದ್ರಿಯಗಳ ದುರ್ವ್ಯಾಪಾರಕ್ಕೆ ಮೂಲವಿರುತ್ತೆ. ಇಂದ್ರಿಯ ನಿಗ್ರಹ ಅತ್ಯವಶ್ಯಕವಿರುತ್ತೆ. ಇಲ್ಲವಾದರೆ ದೇಹ ಮತ್ತು ದೇಹಿ ದುಃಖಕ್ಕೀಡಾಗಬೇಕಾಗುತ್ತೆ. ಪಂಚಜ್ಞಾನೇಂದ್ರಿಯಗಳು ಸಹಜವಾಗಿ ಸತತ ಬಹಿರ್ಮುಖವಾದ ಪ್ರಾಪಂಚಿಕ ವ್ಯವಹಾರಗಳಲ್ಲಿ ಆಳವಾಗಿ ಮಗ್ನವಾಗಿರುವುದರಿಂದ, ಬಲಿಷ್ಠವಾಗಿರುವುವು. ಈ ಕಾರಣದಿಂದ ಇಂದ್ರಿಯಗಳು, ಕ್ಷಣಿಕವಾದ ವಿಷಯಾದಿಗಳಲ್ಲಿ ಆಸಕ್ತನಾದ ಜೀವಾತ್ಮನನ್ನು ದುರ್ವ್ಯಾಪಾರದತ್ತ ಸೆಳೆಯುತ್ತಿರ್ಪವು.

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।**
**ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ।**
**ಇಂದ್ರಿಯಾಣಿ ಹಯಾನಾಹುಃ ।**
**ವಿಷಯಾಂಸ್ತೇಷು ಗೋಚರಾಃ ।**
**ಅತ್ಮೇಂದ್ರಿಯ ಮನೋಯುಕ್ತಃ ।**
**ಭೋಕ್ತ್ಯೇತ್ಯಾಹು ಮನೀಷಿಣಃ ॥**

(ಕಠೋಪನಿಷತ್ತು)

ದೇಹವೆಂಬ ರಥದಲ್ಲಿ ಆತ್ಮವೆಂಬ ರಥಿಕನು (ಸ್ವಾಮಿ) ಕುಳಿತಿರುವನು ಬುದ್ಧಿಯೆಂಬ ಸಾರಥಿ, ರಥಕ್ಕೆ ಕಟ್ಟಿರುವ ಪಂಚಜ್ಞಾನೇಂದ್ರಿಯಗಳೆಂಬ ಕುದುರೆಗಳನ್ನು, ಮನಸ್ಸೆಂಬ ಲಗಾಮಿನಿಂದ ಬಿಗಿಹಿಡಿದು ವಿಷಯಾದಿಗಳೆಂಬ ಮಾರ್ಗಗಳಲ್ಲಿ ರಥವನ್ನು ಕೊಂಡೊಯ್ಯುತ್ತ ಕುದುರೆಗಳನ್ನು ಓಡಿಸುತ್ತಿರುವನು. ಕುದುರೆಗಳು ಮುನ್ನೋಟದಿಂದ ಸಾಗುತ್ತಿರಲು ಸಾರಥಿ ಕಡಿವಾಣಗಳನ್ನು ಬಿಗಿಹಿಡಿದು ಓಟವನ್ನು ತನ್ನ ಅಧೀನದಲ್ಲಿಟ್ಟಿಹನು. ಇಲ್ಲವಾದರೆ, ಬಲಿಷ್ಠವಾದ ಕುದುರೆಗಳು ಸ್ವೇಚ್ಛೆಯಾಗಿ ಓಡಿ ಹಳ್ಳದಲ್ಲಿ ರಥದೊಂದಿಗೆ ಬಿದ್ದು ಸರ್ವನಾಶಕ್ಕೆ ಕಾರಣವಾಗುವುದು. ಇದರಂತೆ ಪಂಚಜ್ಞಾನೇಂದ್ರಿಯಗಳನ್ನು ನಮ್ಮ ಸ್ವಾಧೀನದಲ್ಲಿರಿಸಿ ನಾವು ಹೇಳುವ ಹಾಗೆ ನಮ್ಮ ಸರ್ವೇಂದ್ರಿಯಗಳು ವರ್ತಿಸುವಂತಿರಬೇಕು ಇಂದ್ರಿಯಾಪೇಕ್ಷೆಗಳಿಗೆ ನಾವು ಗುಲಾಮರಾಗಬಾರದು. ಮೂರು

ಲೋಕದ ಗಂಡ ಪರಂತಪನೆನಿಸಿದ ಅರ್ಜುನ ಪಂಚೇಂದ್ರಿಯಗಳ ಆಘಾತಕ್ಕೆ ಸಿಕ್ಕಿ ತತ್ತ್ರಳಿಸಿದ-

ಚಂಚಲಂ ಹಿ ಮನಃ ಕೃಷ್ಣಾ ।
ಪ್ರಮಾಥಿ ಬಲವದ್ದೃಢಂ ।
ತಸ್ಯಾಹಂ ನಿಗ್ರಹಂ ಮನ್ಯೇ ।
ವಾಯೋರಿವ ಸು ದುಷ್ಕರಂ ।

(ಗೀ. ಅ. ೬. ಶ್ಲೋ' ೩೪)

ಶ್ರೀಕೃಷ್ಣಾ ! ಇಂದ್ರಿಯಗಳು ಮನಸ್ಸಿನಮೇಲೆ ಪ್ರಬಲವಾಗಿ ಧಾಳಿ ಎಸಗುತ್ತಲಿವೆ. ಮನಸ್ಸು ನೀರಿನ ಅಲೆಗಳಂತೆ ಸದಾ ಚಂಚಲವಾಗಿ ಚಲಿಸುತ್ತ ಇಂದ್ರಿಯಗಳ ಬೆನ್ನ ಹತ್ತಿ ಅಸ್ಥಿರವಾಗಿದೆ. ಗಾಳಿಯನ್ನಾದರೂ ಸಾಹಸದಿಂದ ಒಮ್ಮೆ ಹಿಡಿಯಬಹುದು. ಆದರೆ ಇಂದ್ರಿಯಗಳ ದುರ್ವ್ಯಾಪಾರದ ಸೆಳೆತಕ್ಕೆ ಸಿಕ್ಕಿ ಜರ್ಝರಿತವಾದ ಮನಸ್ಸನ್ನು ಹಿಡಿದು ನಿಲ್ಲಿಸುವುದು ದುಸ್ಸಾಧ್ಯವೆನಿಸಿದೆ" ಎಂದು ಪ್ರಲಾಪಿಸಿರುವನು. ಪಂಚೇಂದ್ರಿಯಂಗಳು ಸ್ವಾಭಾವಿಕವಾಗಿ ಬಾಹ್ಯ ಪ್ರಪಂಚದ ವ್ಯಾಮೋಹಕ್ಕೆ ಸಿಕ್ಕಿ ಬಹಿರ್ಮುಖವಾಗಿ ಮೀರಿದಷ್ಟು ಓಡುತ್ತಲಿರುತ್ತವೆ. ಬಾಹ್ಯಪ್ರವೃತ್ತಿಗಳುಳ್ಳವುಗಳಾದ್ದರಿಂದ, ರಾಗಾದಿ ಅನಂತ ದುಃಖಗಳಿಗೆ ನೆಲೆಯಾಗಿವೆ.

ಪಂಚಜ್ಞಾನೇಂದ್ರಿಯಗಳನ್ನು ನಶ್ವರವೂ ದುಃಖಹೇತುವೂ ಆದ ಪ್ರಪಂಚದ ಹೊರವಲಯದತ್ತ ಹೋಗಗೊಡದೆ **"ಅಭ್ಯಾಸೇ ನ ತು ಕೌಂತೇಯ"** ಎಂಬ ಶ್ರೀಕೃಷ್ಣನ ಉಪದೇಶದಂತೆ, ಸಾಧನೆಯ ಮೂಲಕ ಸರ್ವೇಂದ್ರಿಯಗಳನ್ನು ಮನಸ್ಸಿನೊಂದಿಗೆ ಅಂತರ್ಮುಖಗೊಳಿಸಿ, ತನ್ನ ಶುದ್ಧಾಂತರಂಗದಲ್ಲಿ ನೆಲೆಸಿರುವ ಪರಂಜ್ಯೋತಿಸ್ವರೂಪ ಪರಶಿವನನ್ನು ಕಾಣಲು ಏಕಾಗ್ರಚಿತ್ತದಿಂದಿರುವಿಕೆಯುಳ್ಳ ಮಹಾತ್ಮನೇ ಪರಮ ಪ್ರಸಾದಿಯೆನಿಸಿಹನು. ಇಂದ್ರಿಯಾನಿಗ್ರಹವುಳ್ಳ ಶಿವಶರಣ, ಶಿವನಲ್ಲದೆ, ಭುವಿಯಲ್ಲಿ ಬೇರೊಂದನ್ನು ಕಾಣನು. ತನ್ನೆಲ್ಲಾ ಕರಣಂಗಳನ್ನು ಶಿವನ ಚರಣಕಮಲಂಗಳಲ್ಲಿರಿಸಿ ಸ್ಥಾಪಿಸಿ ನಿರ್ಮಲ ಭಾವಭರಿತ ಪ್ರಸಾದಿಗೆ ಜರಾಮರಣಗಳಿಲ್ಲ, ಹಸಿವು, ಬಾಯಾರಿಕೆಗಳಿಲ್ಲ. ತನುವಿನಲ್ಲಿ ಅಭಿಮಾನ ಅಭಿನಿವೇಷಗಳಿಲ್ಲ. ಇಂತಪ್ಪ ಸ್ಥಿತಿಯನ್ನು ತತ್ವವೇತ್ತರು **"ಇಂದ್ರಿಯಾನುಗ್ರಹಸ್ಥಲ"**ವೆಂದಿರುವರು.

ಶರಣಾಗತವತ್ಸಲ ಪ್ರಭೋ ।
ಸಮುಪೇಕ್ಷಾ ಮಯಿ ಕಿಂ ತವೋ ಚಿತಾ ।
ಗರಲಾಶನ ಭಕ್ತಮಾಶ್ರಿತಂ ।
ಕೃಪಯಾ ಪಾಲಯ ಮಾಂ ನಿರಂತರಂ ॥

ಅವಿತುಂ ಕಲಿಮೋಹಿತಾನ್ ಗಿರೇಃ ।
ಗರಲಕ್ಷೇತ್ರಮವಾತರಃ ।
ಕಿಲಹೃದಯೋ ಸಕಲಸ್ಯ ಭಾಸತಾ ।
ಮಿಹ ವಿಶ್ವೇಶ್ವರ ತೇ ಕೃತಿಃ ಸದಾ ॥

## ಪ್ರಸಾದಿ ಲಿಂಗಸ್ಥಲ ೨೧

## ಪ್ರಾಣಾನುಗ್ರಹಸ್ಥಲ (ಪರಿ. ೧೯)

ಶಿವಸ್ಯ ಪರಕಾಯಸ್ಯ ಯತ್ತಾತ್ಪರ್ಯಾವಲೋಕನಂ ।
ಸ ಪ್ರಾಣಾನುಗ್ರಹಃ ಪ್ರೋಕ್ತಃ । ಸರ್ವೇಷಾಂ ತತ್ತ್ವದರ್ಶಿಭಿಃ ॥

ಪ್ರಾಣೋಯಸ್ಯ ಲಯಂ ಯಾತಿ ಶಿವೇ ಪರಮಕಾರಣೇ ।
ಕುತಸ್ತಸ್ಯೇಂದ್ರಿಯ ಸ್ಫೂರ್ತಿಃ ಕುತಃ ಸಂಸಾರದರ್ಶನಂ ॥

ಪ್ರಾಣ ಏವ ಮನುಷ್ಯಾಣಾಂ ದೇಹಧಾರಣ ಕಾರಣಂ ।
ತದಾಧಾರಃ ಶಿವಃ ಪ್ರೋಕ್ತಃ ಸರ್ವಕಾರಣ ಕಾರಣಂ ॥

ನಿರಾಧಾರಃ ಶಿವಃ ಸಾಕ್ಷಾತ್ ಪ್ರಾಣಸ್ತೇನ ಪ್ರತಿಷ್ಠಿತಃ ।
ತದಾಧಾರ ತನುರ್ಜ್ಞೇಯಾ ಜೀವೋ ಯೋ ನೈವ ಚೇಷ್ಟತೇ ॥

(ಶ್ಲೋ. ೨೦, ೨೧, ೨೪, ೨೫)

ಶಿವಯೋಗಿ, ಪ್ರಾಣಾಯಾಮ ನಿರೋಧದಿಂದ, ಪ್ರಾಣದಮೇಲಿನ ಪ್ರೇಮವ ತೊರೆದು, ಪ್ರಾಣವ ಕುಂಭಕದಲ್ಲಿ ನಿಲ್ಲಿಸಿ, ಈ ಯೋಗದಿಂದ ತನ್ನಂತ

ರಂಗದ ಶಿವಯೋಗದಿಂದ ಪ್ರಾಣಲಿಂಗವೇ ಪ್ರಾಣವಾಗಿ ಕಾಣುವ ಪರಮ ಸ್ಥಿತಿ, ಪ್ರಾಣಾನುಗ್ರಹವೆಂದು, ಈ ಸ್ಥಿತಿಯ ಅನುಭವವುಳ್ಳ ಶಿವಶರಣ, ಪ್ರಾಣಾನುಗ್ರಹ ಪ್ರಸಾದಿಯೆನಿಸಿರುವನು. ಯಾವ ಶಿವಯೋಗಿಯ ಪ್ರಾಣವು, ಕುಂಭಕ ಯೋಗದಿಂದ ಅಂತರ್ಯಾಮಿ ಶಿವನಲ್ಲಿ ಅಂದರೆ ಪ್ರಾಣಲಿಂಗದಲ್ಲಿ ಲಯವಾಗುವುದೋ, ಅಂತಪ್ಪ ಶಿವಯೋಗಿಗೆ ಬಾಹ್ಯೇಂದ್ರಿಯಂಗಳ ಸ್ಫೂರ್ತಿಯಿರುವುದಿಲ್ಲ ಜನನ ಮರಣಗಳ ಭೀತಿ ದರ್ಶನ ಸಹ ಇರುವುದಿಲ್ಲ. ದೇಹಧಾರಣಕ್ಕೆ ಪ್ರಾಣವೇ ಮೂಲಾಧಾರ, ಈ ಪ್ರಾಣಕ್ಕೆ ಸರ್ವ ಕಾರಣ ಕಾರಣನಾದ ಪರಶಿವನು ಆಧಾರವಾಗಿರುವನು. ಇದರಿಂದಾಗಿ ಶಿವನನ್ನು ಶ್ರುತಿದೇವಿ **"ಅಥ ಏವ ಪ್ರಾಣಃ"** ಎಂದು ಘೋಷಿಸಿರುವಳು. ಸರ್ವತಂತ್ರ ಸ್ವತಂತ್ರನಾದ ಶಿವನು ನಿರಾಧಾರವಾಗಿಹನು. ಪ್ರಾಣವಾದರೋ ಇಂತಪ್ಪ ಪರಶಿವ ತತ್ವದ ಆಧಾರವುಳ್ಳದ್ದಾಗಿ ಪ್ರತಿಷ್ಠಿತವಾಗಿದೆ. ಜೀವನು ಯಾವ ಪ್ರಾಣದ ಸಹಾಯದಿಂದ ಚಲಿಸುತ್ತಲಿಹನೋ, ಆ ಪ್ರಾಣವೇ, ಶರೀರದ ಚಲನವಲನಗಳಿಗೆ ಪ್ರೇರಕ ಶಕ್ತಿಯಾಗಿರುವುದೆಂದು ಶ್ರೀ ಜಗದ್ಗುರು ರೇಣುಕಾಚಾರ್ಯರು ಬೋಧಿಸಿ, ಇದು ಪ್ರಾಣಾನುಗ್ರಹ ಸ್ಥಲವೆಂದು ಸ್ಪಷ್ಟಪಡಿಸಿರುವರು.

---

## ಪ್ರಸಾದಿ ಲಿಂಗಸ್ಥಲ ೨೨

## ಕಾಯಾರ್ಪಣಸ್ಥಲಂ (ಪರ. ೧೭)

**ಶಿವಸ್ಯ ಪರರೂಪಸ್ಯ ಸರ್ವಾನುಗ್ರಾಹಿಣೋರ್ಚನೇ ।**
**ತ್ಯಾಗೋದೇಹಾಭಿಮಾನಸ್ಯ ಕಾಯಾರ್ಪಣ ಮುದಾಹೃತಂ ॥**

**ಯದಾಯೋಗೀ ನಿಜಂ ದೇಹಂ ಶಿವಾಯ ವಿನಿವೇದಯೇತ್ ।**
**ತದಾ ಭವತಿ ತದ್ರೂಪಂ ಶಿವರೂಪಂ ನ ಸಂಶಯಃ ॥**

**ದರ್ಶನಾತ್ ಸ್ಪರ್ಶನಾದಷ್ಫಕ್ತೇಃ ಶ್ರವಣಾದ್ಘ್ರಾಣನಾದಪಿ ।**
**ವಿಷಯೇಭ್ಯೋ ಯದುತ್ಪನ್ನಂ ಶಿವೇ ತತ್ಸುಖಮರ್ಪಯೇತ್ ॥**

**(ಶ್ಲೋ. ೩೦, ೩೧,೩೩)**

ಆದಿಗಾದಿಯಾದ ಮಹಾಲಿಂಗ ಕರುಣೆಯಿಂದ, **"ಅನುಗ್ರಹ ಲಿಂಗ, ಅರ್ಪಿತಲಿಂಗ, ಮತ್ತೂ ತನುಗುಣಲಿಂಗ"**ವೆಂದು ಮೂರು ಪ್ರಕಾರವಾಗಿ ಪ್ರಕಟವಾಯಿತು. ಮೊದಲನೇ **"ಅನುಗ್ರಹಲಿಂಗ"** ಭಕ್ತರ ಉಪಾಸನೆಗಾಗಿ ಕರುಣೆಯಿಂದ ಮತ್ತೆ ಅದರಲ್ಲಿ **"ಕಾಯಾನುಗ್ರಹ. ಇಂದ್ರಿಯಾನುಗ್ರಹ, ಪ್ರಾಣಾನುಗ್ರಹಾ"** ವೆಂಬ ಮೂರು ಕವಲುಗಳುಂಟಾದುವು. ಈ ತ್ರಿವಿಧ ಅರ್ಪಣಗಳ ವಿಷಯ ಸಂಕ್ಷಿಪ್ತವಾಗಿ ಈಗಾಗಲೇ ಹಿಂದೆ ವಿವರಿಸಲಾಗಿದೆ ಸಧ್ಯ ದ್ವಿತೀಯಲಿಂಗವಾದ **"ಅರ್ಪಿತಲಿಂಗ"**ದಲ್ಲೂ ಕಾಯಾರ್ಪಣ, ಕಾರಣಾರ್ಪಣ ಭಾವಾರ್ಪಣವೆಂದು ಮೂರು ಕವಲುಗಳಂಟು. ಶ್ರೀಗುರುವಿನ ಹಸ್ತಮಸ್ತಕ ಸಂಯೋಗ ಕಟಾಕ್ಷ ದೀಕ್ಷೆಯಿಂದ, ಶಿಷ್ಯನ ತನು ಕರ್ಣಂಗಳು ಶಿವಕರ್ಣಂಗಳಾಗಿ ಕಾಯಾನುಗ್ರಹ ಸ್ಥಲದಲ್ಲಿ ಪರಿವರ್ತನೆಗೊಂಡು ಪಾವನ ಕರಣಂಗಳಾದವು. ಅರ್ಪಿತ ಲಿಂಗದಲ್ಲಿನ ಕಾಯಾರ್ಪಣ ಸ್ಥಲದಲ್ಲಿ ಶಿವಕರಣಂಗಳನ್ನು ಶ್ರದ್ಧಾಭಕ್ತಿ ಅವದಾನ ಭಕ್ತಿಪೂರ್ವಕ, ಶಿವಾರ್ಪಿತಗೊಳಿಸಿ, ತನುವಿನ ಅಭಿಮಾನವನ್ನು ತ್ಯಜಿಸಿ, ಸರ್ವ ಅಂಗಾಂಗಗಳನ್ನು ಶಿವನಿಗೆ ತ್ಯಾಗಮನೋಭಾವದಿಂದ ಅರ್ಪಿಸುವುದು, ಕಾಯಾರ್ಪಣವೆನಿಸಿದೆ. ದೇಹ ದೇಹೇಂದ್ರಿಯಗಳು, ಅಂತಃಕರಣ ಚತುಷ್ಟಯಂಗಳೂ, ಮತ್ತೂ ಆತ್ಮ ಇವೆಲ್ಲಾ ಪರಶಿವನ ಸ್ವತ್ತುಗಳಷ್ಟೇ. ಅದಕಾರಣ, ಅಖಿಲ ತನು ಕಾರಣಗಳಿಂದೊಡಗೂಡಿದ ಶುದ್ಧ ಕಾಯವನ್ನು, ಭಕ್ತ್ಯಾ ನಮ್ರಭಾವದಿಂದ ಶಿವನ ಪಾದಾರವಿಂದಗಳಲ್ಲಿ ಅರ್ಪಿಸುವುದು ಕಾಯಾರ್ಪಣವೆನಿಸಿದೆ. ಸಮಸ್ತ ಅಂಗ ಅವಯವಗಳಿಂದ ಶಿವನನ್ನು ವಿಧಿವತ್ತಾಗಿ ಪೂಜಿಸುವುದು, ಶಿವನ ಪಂಚವಿಂಶತಿ ಲೀಲಾ ವೈಭವಗಳನ್ನು ಭಕ್ತ್ಯಾ ಶ್ರವಣಮಾಡುವುದು, ಪರಮೇಶ್ವರನ ಅಗಣಿತ ಗುಣಕಥನವನ್ನು ವರ್ಣಿಸಿ, ಶ್ರೋತೃಗಳ ಮನೋಮಂಡಲದಮೇಲೆ ಒಳ್ಳೆ ಪರಿಣಾಮಕಾರಿಯಾಗಿವಂತೆ ಪ್ರವಚನಗಳನ್ನು ಮಾಡುವುದು; ಸರಳವೂ ಸುಂದರವಾದ ರೀತಿಯಲ್ಲಿ ಆಧ್ಯಾತ್ಮಿಕ ತತ್ವವನ್ನು ಕುರಿತು ಸಾಹಿತ್ಯ ರಚನೆಯಲ್ಲಿ ಸದಾ ಮಗ್ನನಾಗಿರುವುದು, ಮತ್ತೂ ತನ್ನ ಸರ್ವಾಂಗಗಳನ್ನು ಆತ್ಮಾರ್ಪಣಪೂರ್ವಕ ಅನನ್ಯ ಭಾವೇನ ಶಿವನ ಚರಣಾರವಿಂದಗಳಲ್ಲಿ ಸಮರ್ಪಿಸುವ ವಿಧಾನಗಳು ನಿಜಕ್ಕೂ ಕಾಯಾರ್ಪಣವೆನಿಸಿದೆ.

## ಲಿಂಗಸ್ಥಲ ೨೩

## ಕರಣಾರ್ಪಣಸ್ಥಲಂ (ಪರಿ, ೧೭)

ಆಸಂಜನಂ ಸಮಸ್ತಾನಾಂ ಕರಣಾನಾಂ ಪರಾತ್ಪರೇ ।
ಶಿವೇ ಯತ್ತದಿದಂ ಪ್ರೋಕ್ತಂ ಕರಣಾರ್ಪಣಮಾಗಮೇ ॥

ಯದ್ಯತ್ಕರಣಮಾಲಂಬ್ಯ ಭುಂಕ್ತೇ ವಿಷಯಜಂ ಸುಖಂ ।
ತತ್ತಚ್ಛಿವೇ ಸಮರ್ಪ್ಯೈಷ ಕರಣಾರ್ಪಕ ಉಚ್ಯತೇ ॥

ಇಂದ್ರಿಯಾಣಾಂ ಸಮಸ್ತಾನಾಂ ಮನಃ ಪ್ರಥಮಮುಚ್ಯತೇ ।
ವಶೀಕೃತೇ ಶಿವೇ ತಸ್ಮಿನ್ ಕಿಮನ್ಯೈಸ್ತದ್ವಶಾನುಗೈಃ ॥

ಇಂದ್ರಿಯಾಣಾಂ ವಶೀಕಾರೋ ನಿವೃತ್ತಿರಿತಿಗೀಯತೇ ।
ಲಕ್ಷ್ಯೀಕೃತೇ ಶಿವೇ ತೇಷಾಂ ಕುತಃ ಸಂಸಾರಗಾಹನಂ ॥

ಆತ್ಮಜ್ಯೋತಿಷಿ ಚಿದ್ರೂಪೇ ಪ್ರಾಣವಾಯು ನಿಬೋಧಿತೇ ।
ಜುಹ್ವತ್ ಸಮಸ್ತ ವಿಷಯಾನ್ ತನ್ಮಯೋ ಭವತಿ ಧ್ರುವಂ ॥

ಇಂದ್ರಿಯಾಣಿ ಸಮಸ್ತಾನಿ ಶರೀರಂ ಭೋಗಸಾಧನಂ ।
ಶಿವಪೂಜಾಂಗಭಾವೇನ ಭಾವಯನ್ಮುಕ್ತಿಮಾಪ್ನುಯಾತ್ ॥

ಶ್ಲೋ. ೩೫, ೩೬, ೩೭, ೪೯, ೪೪, ೪೫)

ಪರಮೇಶ್ವರನಲ್ಲಿ ಅಖಿಲೇಂದ್ರಿಯಗಳ ಸಂಯೋಜನೆ ಕಾರ್ಯ ದಕ್ಷತೆಯಿಂದ, ಈಡೇರಿಸುವ ಕರ್ತೃತ್ವ, ಕರಣಾರ್ಪಣವೆಂದು ಶಿವಾಗಮಗಳಲ್ಲಿ ಪ್ರತಿಪಾದಿಸಲಾಗಿದೆ. ಪಂಚಜ್ಞಾನೇಂದ್ರಿಯಗಳ ಮೂಲಕ ಯಾವ್ಯಾವ ಪದಾರ್ಥಗಳ ವಿಷಯ ಸುಖವನ್ನು ತಾನನುಭವಿಸುವ ಮೊದಲು ಶಿವಾರ್ಪಣಮಾಡಿ ಪ್ರಸಾದರೂಪದಲ್ಲಿ ಭಕ್ತ್ಯಾ ಸೇವಿಸುವಾತ ಪ್ರಸಾದಿಯೆನಿಸುವನು. ಕರಣಗಳು ಕಾಯಕ್ಕೂ ಭೂಷಣ ವಿಷಯ ಸುಖಕ್ಕೂ ಕರಣಂಗಳೇ ಮೊದಲು. ಕನಕ ಕಾಮಿನಿ ಕಾಂಚನಗಳತ್ತ ಬೆನ್ನಟ್ಟಿ ಓಡುವ ಕರಣಂಗಳನ್ನು ನಿಮಿತ್ತ ಧರ್ಮ

ಇಷ್ಟಲಿಂಗದ ಆರಾಧನೆಯತ್ತ ಹರಿಯುವಂತೆ ಮಾಡುವುದು, ಅವಶ್ಯವಿರುತ್ತೆ-ಅನ್ಯರ ವಿಷಯಕ್ಕೆ ಹರಿವ ಕರಣಂಗಳ ನಿರೋಧಿಸಿ, ಅರ್ಪಿತ ಲಿಂಗಕ್ಕೆ ಸಮರ್ಪಿಸಿದ್ದಲ್ಲಿ ಕರಣಾರ್ಪಣವೆಂದು ಶಿವಾಗಮಗಳು ಬೋಧಿಸುತ್ತಲಿವೆ. ಪಂಚಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯಗಳಿಂದ ಪಾಪ, ಪುಣ್ಯಗಳು ಹುಟ್ಟುತ್ತಿರುವುವು. ಇದು ಕಾರಣ ಕರಣಂಗಳನ್ನು ಪರಮೇಶ್ವರನ ಶ್ರೀಪಾದಂಗಳಲ್ಲಿ ಮಿಾಸಲಾಗಿರಿಸಿ, ಶಿವಪೂಜಾಂಗಗಳೆಂದು ಭಾವಿಸಿ ಲಿಂಗಾರ್ಪಿತವಮಾಡಿದರೆ **ಕರಣಾರ್ಪಣವೆನಿಸುವುದು.**

---

## ಪ್ರಸಾದಿ-ಲಿಂಗಸ್ಥಲ ೨೪

## ಭಾವಾರ್ಪಣ ಸ್ಥಲಂ (ಪರಿ. ೧೭)

**ಶಿವೇ ನಿಶ್ಚಲ ಭಾವೇನ ಭಾವಾನಾಂ ಯತ್ಸಮರ್ಪಣಂ**
**ಭಾವಾರ್ಪಣಮಿದಂ ಪ್ರೋಕ್ತಂ ಶಿವ ಸದ್ಭಾವವೇದಿಭಿಃ ॥**

**ಭಾವ ಏವಹಿ ಜಂತೂನಾಂ ಕಾರಣಂ ಬಂಧಮೋಕ್ಷಯೋಃ ।**
**ಭಾವಶುದ್ಧೌ ಭವೇನ್ಮುಕ್ತಿರ್ವಿಪರೀತೇ ತು ಸಂಸೃತಿ ।**

**ಭೋಕ್ತಾ ಭೋಜ್ಯಂ ಪ್ರೇರಯಿತಾ ಸರ್ವಮೇತಚ್ಚರಾಚರಂ ।**
**ಭಾವಯನ್ ಶಿವರೂಪೇಣ ಶಿವೋಭವತಿ ವಸ್ತುತಃ ॥**

(ಶ್ಲೋ. ೪೬, ೪೮, ೫೦)

ಮಾನವ ಜೀವನ ಒಂದು ಸುಂದರವಾದ; ಮಹಾ ವೃಕ್ಷ. ಸುಂದರ ಸುಗಂಧ ಭಾವವೇ ಈ ವೃಕ್ಷದ ಮಘಮಘಿಪ ಕುಸುಮಗಳು. ವಿಚಲಿತವಾಗದೆ ಭಾವಪುಷ್ಪಂಗಳನ್ನು ಅಯ್ದು, ಕೊಯ್ದು, ಹಾರವಾಗಿ ಕಟ್ಟಿ, ಹರನಿಗೆ ಭಕ್ತ್ಯಾ ಸಮರ್ಪಿಸಬೇಕು. ನಿರ್ಮಲ ಮನಸ್ಸಿನಿಂದ ಮಾಡುವುದು ಭಾವಾರ್ಪಣವೆನಿಸಿದೆ. ಇಷ್ಟಲಿಂಗಾರ್ಚನೆಯಿಂದ ಅರಳಿದ ಭಾವಪುಷ್ಪ ಪ್ರಾಣಲಿಂಗಾರ್ಚನೆಯಿಂದ ಭವ್ಯವಾದ ಭಾವಪುಷ್ಪವನ್ನು ಅಭವಂಗೆ (ಶಿವಲಿಂಗಕ್ಕೆ) ಅರ್ಪಿತವಾಗಿ ಭಾವ

ಪ್ರಸಾದವಪ್ಪುದು, ಮಾನವನ ಮನಸ್ಸಿನಲ್ಲಿ ಭಾವ ಅಂತರ್ಗತವಾಗಿಹುದು, ಭಾವದಲ್ಲಿ ಎರಕಂಗೊಂಡ ವಿಷಯಗಳನ್ನು ಮನನಮಾಡುತ್ತ, ನಿಷ್ಕಾಮ ಕರ್ಮ ಯೋಗದಿಂದ ಶಿವನಿಗೆ ಸಮರ್ಪಿಸುವುದು"**ಭಾವರ್ಪಣವೆನಿಸಿದೆ**". ಇಂತಪ್ಪ ಶಿವ ಭಾವದಿಂದ ವಿಜೃಂಭಿತನಾಗಿ ಸುಖಿಸಬಲ್ಲಾತ ಪ್ರಸಾದಿಯೆನಿಸಿಹನು,ಭಾವಶುದ್ಧಿ ಯುಳ್ಳ, ಭಾವುಕ, ಶಿವರೂಪವೇ ತಾನೆಂದರಿತು, ಸ್ವಸ್ವರೂಪಾನುಸಂಧಾನದಿಂದ ಶಿವಭಾವಾನ್ವಿತನಾಗಿ ತ್ರಿಕರಣಂಗಳನ್ನೂ ತ್ರಿಲಿಂಗಗಳ ಆರಾಧನೆಯಲ್ಲಿ ಸಮರ್ಪಿ ಸುವಾತ, ಕ್ರಮೇಣ ತನ್ನ ತನು ಕರಣಂಗಳನ್ನು ಶಿವಶರಣಂಗಳಾಗಿ ಪರಿಣಮಿಸಿ ಚಿತ್ಕಳಾ ಚಿನ್ಮಯಾಂಗನೆನಿಸುವನು. 'ಶಿವೋಹಂ ಭಾವ'ಆಗ, ತನ್ನಲ್ಲಿ ಅಂಕುರಿಸಿ ಹೊರಸೊಮ್ಮುವುದು. ಶಿವಾದ್ವೈತ ಸಿದ್ಧಾಂತದ ಹೃದಯವೆನಿಸಿದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ—

> **ಭೋಕ್ತಾಭೋಜ್ಯಂ ಪ್ರೇರಯಿತಾ ।**
> **ವಸ್ತುತ್ರಯ ಮಿದಂ ಸ್ಮೃತಂ ॥**

ಎಂದು ಹೇಳಿ, ವಂದೇಯಾದ ಪರಶಿವಬ್ರಹ್ಮವು, ಭೋಕ್ತಾ, ಬೋಜ್ಯ, ಪ್ರೇರಕ ವೆಂಬ ತ್ರಿವಿಧವಾಗಿ ತನ್ನ ಸಂಕಲ್ಪ ಮಾತ್ರೇಣ ಪ್ರಕಟವಾಯಿತೆಂದು ಹೇಳಿದೆ. ಇದೇ ವಿಷಯವನ್ನು ಶ್ವೇತಾಶ್ವತರ ಉಪನಿಷತ್ತು—

> **ಭೋಕ್ತಾ ಭೋಜ್ಯಂ ಪ್ರೇರಿತಾರಂಚ ।**
> **ಮತ್ವಾ ಸರ್ವಂ ಪ್ರೋಕ್ತಂ ।**
> **ತ್ರಿವಿಧಂ ಬ್ರಹ್ಮಮೇತತ್ ॥**

ಯೆಂದು ಸ್ಪಷ್ಟಪಡಿಸಿದೆ. ಏನೆಂದರೆ, ಭೋಕ್ತೃ–ಅನುಭವಿಸುವವನು, ಭೋಜ್ಯ ಉಣಲು ಯೋಗ್ಯವಾದ ಭಕ್ಷ್ಯಭೋಜ್ಯಾದಿವಸ್ತುಗಳು ; ಪ್ರೇರಕ ಬೋಕ್ತೃ ವನ್ನು (ಜೀವಾತ್ಮನನ್ನು) ಪ್ರೇರೇಪಿಸುವ ಪರವಸ್ತು, ಆಗಿ ಈ ಮೂರೂ ಒಬ್ಬನೇ ಆದ ಪರಶಿವ ಬ್ರಹ್ಮನ ಅಂಶಗಳೆಂದು ಜಗದಾಚಾರ್ಯರು ಬೋಧಿಸಿರು ವರು. "ಇದೇ ವಿಷಯವಾಗಿ ಪುರುಷಸೂಕ್ತ ಹಾಗೂ ನಾಸಿದೀಯ ಸೂಕ್ತಗಳಲ್ಲಿ ಪ್ರತಿಪಾದಿಸಲಾಗಿದೆ. ಪುರುಷಸೂಕ್ತದ ೨ನೇ ಮಂತ್ರದಲ್ಲಿ "**ಪುರುಷ ಏ ವೇದಂ ಸರ್ವಂ**" ಎಂಬಲ್ಲಿ ಭೋಕ್ತಾ, ಭೋಜ್ಯ, ಪ್ರೇರಕ ಈ ಮೂರೂ ಶಿವಸ್ವರೂ ಪದ ಪ್ರಕಟಿತ ಚಿದಾಂಗಗಳು, ಚಿನ್ಮಯಸ್ವರೂಪವೆಂದು ಅರ್ಥವಾಗುತ್ತಲಿದೆ.

**ಕುಂದಿಲ್ಲದಮರತ್ವ ದೀಶ್ವರನು ಪುರುಷನೇ ।**
**ಪೊಂದಿತಳೆವನು । ಭೋಗ್ಯರೂಪಮಂ ಪುರುಷನೇ ॥**

ಪುರುಷಸೂಕ್ತದ ೪ ನೇ ಮಂತ್ರದಲ್ಲಿ ಈ ವಿಷಯವನ್ನು ಮತ್ತೊಷ್ಟು ವಿವರಿಸುತ್ತಾ—

**ತ್ರಿಪಾದೂರ್ಧ್ವ ಉದೈತ್ಪುರುಷಃ ।**
**ಪಾದೋಸ್ಯೇಹಾ ಭವತ್ ಪುನಃ ॥**

ಅದರೆ—

**ಪುರುಷನೋಳ್ ಮುಪ್ಪಾಗ ।**
**ಊರ್ಧ್ವ ಲೋಕದೊಳಿಹುದು ।**
**ತಿರುತಿರುಗಿ ಕಾಲಂಶ ಇಹದೊಳಗೆ ಬರುತಿಹುದು ।**
**ಧರಿಸುತ್ತೆ ಭೋಕ್ತೃ ಭೋಗ್ಯಾದಿ ರೂಪದಿಂದದು ।**
**ತರತರದ ರೂಪದಲಿ ಜಗವ ನಾಕ್ರಮಿಸಿಹುದು ॥**

'ಅಂದಬಳಿಕ ಭೋಕ್ತೃ (ಜೀವಾತ್ಮ) ಭೋಜ್ಯ (ಉಣವು ವಸ್ತುಗಳು) ಮತ್ತು ಪ್ರೇರಕನಾದ ಶಿವ (ಪುರುಷನು) ಸರ್ವವೂ,

**"ಸರ್ವಂ ಖಲ್ವಿದಂ ಬ್ರಹ್ಮ" ವಾಸುದೇವಃ ಸರ್ವಮಿತಿ** ಎಂಬ ಶೃತಿವಾಣಿಯಂತೆ ಸರ್ವವೂ ಪರಬ್ರಹ್ಮಸ್ವರೂಪವೆ ಆಗಿವೆ.

ನಾಸದೀಯ ಸೂಕ್ತದ ಪ್ರಥಮ ಮಂತ್ರದಲ್ಲಿ **ಸತ್**, ಅಸತ್‌ಗಳು ಯಿಲ್ಲಿ ದಂದು—

**ಕಿಮಾವರೀವಃ ಕುಹಕಸ್ಯ । ಶರ್ಮನ್ನಂಭಃ ॥**
**ಕಿಮಾಸೀತ್ । ಗುಹನಂ ಗಭೀರಂ ॥**

ಪರತತ್ವವನ್ನು ಆವರಿಸುವಂತಃ ಬೇರೊಂದು ವಸ್ತು ಇದ್ದೀತೆ ಯಾವ ಭೋಕ್ತೃವಿನ ಅನುಭವಕ್ಕಾಗಿ ಶರ್ಮನ್,-ಭೋಗ್ಯವಸ್ತುಗಳು ಇದ್ದಾವು. ಗಹನವೂ ಅತಿ ಆಳವೂ ಅಗಾಧವೂ ಆದ ನೀರು ಇದ್ದೀತೇ? ಸೃಷ್ಟಿಗೆ ಮೊದಲು ಏನು ಇರಲಿಲ್ಲ. ಮಾಯೆಯೂ ಸಹ ಇರಲಿಲ್ಲ ಎಂದು ಹೇಳಿ, ತದನಂತರ;

**ಸದೇವ ಸೌ ಮ್ಯೇ ದ ಮಗ್ರ ಆಸೀತ್ |**
**ಏಕಮೇವಾದ್ವಿತೀಯಂ ಬ್ರಹ್ಮ ||**

**(ಛಾಂದೋಗ್ಯ ಉಪನಿಷತ್)**

ಏನೆಂದರೆ ಮೊದಲು ಇದ್ದದ್ದು ಸತ್ ಯೆಂಬ ಪರಶಿವಬ್ರಹ್ಮ. ಸತ್ತಿನಿಂದ ಅಸತ್ ಯೆಂಬ ಮಾಯೆ. ಇದರಿಂದ ಪಂಲೋಕಂಗಳು ತದನಂತರ ಭೋಕ್ತೃ ಭೋಗ್ಯವಸ್ತುಗಳಿಂದ ಕೂಡಿದ ಪ್ರಪಂಚಗಳು ಕ್ರಮೇಣ ಹೊರಹೊಮ್ಮಿರುವುವು ಎಂದು ಹೇಳಿದೆ, **"ತತ್ಸೃಷ್ಟ್ವಾ ತದೇವಾನಂ ಪ್ರಾವಿಷತ್"** ಎಂಬ ಸ್ಮೃತಿ ವಾಣಿಯಂತೆ ಪರಶಿವ ಬ್ರಹ್ಮ ಭೋಕ್ತೃ, ಭೋಗ್ಯ, ಪ್ರೇರಕರೂಪಗಳಿಂದ ತಾನೇ ವಿಜೃಂಭಿಸಿ ಎಲ್ಲದರಲ್ಲೂ ಸರ್ವಾಂತರ್ಯಾಮಿಯಾಗಿಹನೆಂದು ಸ್ಪಷ್ಟವಿರುತ್ತೆ. ಪುರುಷಸೂಕ್ತ ನಾಸದೀಯ ಸೂಕ್ತಗಳು. ಋಗ್ವೇಧದ ದಶಮ ಮಂಡಲದಲ್ಲಿನ, ಸೂಕ್ತಗಳಲ್ಲಿ ರತ್ನಪ್ರಾಯವೆನಿಸಿವೆ! ವೀರಶೈವ ಮತದ ಉಗಮವನ್ನು ಈ ಸೂಕ್ತಗಳಲ್ಲಿ ಸೂಕ್ಷ್ಮವಾಗಿ ಕಾಣಬಹುದು. ಪರಶಿವನ ಚತುಷ್ಪಾದಗಳಲ್ಲಿ

**ಪಾದೋಸ್ಯ ವಿಶ್ವಭೂತಾನಿ |**
**ತ್ರಿಪಾದಸ್ಯಾಮೃತಂ ದಿವಿಃ ||**

ಅಂದರೆ—

**ಪುರುಷನೋಳ್ ಮುಪ್ಪಾಗ |**
**ಊರ್ಧ್ವಲೋಕದೊಳಿಹುದು |**
**ಕಾಲಂಶ ಇಳೆಯೊಳಗೆ ಬರುತಿಹುದು |**
**ಪುರುಷನ ಅಧೋಮುಖದಲ್ಲಿ ಧರೆಗೆ ಇಳಿದಿರುವ ಪಾದ ||**

**"ಅವಿದ್ಯಾಪಾದವೆನಿಸಿದೆ".** ಊರ್ಧ್ವಗತಿಯಲ್ಲಿ ನಭೋಮಂಡಲವನ್ನು ಭೇದಿಸಿ, ಅಚಿಂತ್ಯ, ಅವ್ಯಕ್ತ, ಅಪ್ರಮೇಯವೆನಿಸಿದ **"ಸುವಿದ್ಯಾಪಾದ, ಆನಂದಪಾದ ಮತ್ತು ತುರೀಯ ಪಾದಗಳು"** ಅಗಮ್ಯ ಅಗೋಚರವೆನಿಸಿವೆ. ಮುಂಡಕೋಪನಿಷತ್ತಿನಲ್ಲಿ ಭೋಕ್ತೃ ಭೋಜ್ಯ, ಪ್ರೇರಕ ಇವೆಲ್ಲಾ **"ಬ್ರಹ್ಮೈವೇದಮಿದಂ ಸರ್ವಂ"** ಇವೆಲ್ಲವೂ ಪರಶಿವಬ್ರಹ್ಮವೇ ಎಂಬ ನಿರ್ಮಲ ಭಾವನೆಯೇ **"ಭಾವಾರ್ಪಣಸ್ಥಲ ವೆನಿಸಿದೆ".**

ಮಂಗಲಂ ಪಾರ್ವತಿನಾಥ ।
ಗರಲಕ್ಷೇತ್ರ ಭೂಪತೇ ।
ನಿತ್ಯಮಂಗಲರೂಪಾಯ ।
ಶ್ರೀಕಂಠೇಶಾಯ ಮಂಗಲಂ ॥

ಮಂಗಲಂ ಸರ್ವದಾ ।
ಸರ್ವಮಂಗಲಾ ಲಿಂಗಿತಪ್ರಭೋ ।
ಲೀಲಯಾ ಕಲ್ಪಿತಾಶೇಷ ।
ವಿಶ್ವತೇ ಜಯಮಂಗಲಂ ॥



ಪ್ರಸಾದಿ-ಲಿಂಗಸ್ಥಲ ೨೫] ಶಿಷ್ಯಸ್ಥಲಂ [(ಪರಿ. ೧೭)

ಶಾಸನೀಯೋ ಭವೇದ್ಯಸ್ತು ಪರಕಾಯೇನ ಸರ್ವದಾ ।
ತತ್ಪ್ರಸಾದಾತ್ತು ಮೋಕ್ಷಾರ್ಥೀ ಸ ಶಿಷ್ಯ ಇತಿ ಕೀರ್ತಿತಃ ॥

ಭಾವೋಯಸ್ಯಸ್ಥಿರೋ ನಿತ್ಯಂ ಮನೋವಾಕ್ಕಾಯ ಕರ್ಮಭಿಃ ।
ಗುರೌ ನಿಜಗುಣೋಧಾರೇ ಸ ಶಿಷ್ಯ ಇತಿ ಗೀಯತೇ ॥

ಶಾಂತೋದಾಂತಸ್ತಪಶ್ಶೀಲಃ ಸತ್ಯವಾಕ್ ಸಮದರ್ಶನಃ ।
ಗುರೌ ಶಿವೇ ಸಮಾನಸ್ಥಃ ಸ ಶಿಷ್ಯಾಣಾಮಿಹೋತ್ತಮಃ ॥

ಸ ಲಂಘಯೇದ್ಗುರೋರಾಜ್ಞಾಂ ಜ್ಞಾನಮೇವ ಪ್ರಕಾಶಯನ್ ।
ಶಿವಾಸಕ್ತೇನ ಮನಸಾ ಸರ್ವಸಿದ್ಧಿಮವಾಪ್ನುಯಾತ್ ॥

(ಶ್ಲೋ. ೫೩, ೫೪, ೫೫, ೫೬).

ಗುರುಸ್ಥಲದಷ್ಟೇ ಪವಿತ್ರವಾದುದು ಶಿಷ್ಯಸ್ಥಲ. ಗುರು ಶಿಷ್ಯರ ಸಂಬಂಧ ಅನಾದಿ ಅವಿನಾಭಾವ ಸಂಬಂಧವುಳ್ಳದ್ದು. ಪರುಷ ಕಬ್ಬಿಣವನ್ನು ಸ್ಪರ್ಶಮಾತ್ರ ದಿಂದ ಬಂಗಾರವಾಗುವಂತೆ ಮಾಡುವುದು. ಆದರೆ ಕಬ್ಬಿಣವನ್ನು ತನ್ನಂತೆಯೇ

ಪುರುಷವನ್ನಾಗಿಸಲಾರದು. ಶ್ರೀಗುರುವಾದರೋ, ಪರಿಪಕ್ವಾಂತಃಕರಣವುಳ್ಳ ಸಚ್ಛಿಷ್ಯನನ್ನು ಕರುಣೆಯಿಂದ ತನ್ನಂತೆಯೇ ಗುರುವಾಗಿಸಬಲ್ಲನು. ಇದರಿಂದಾಗಿ ಶಿಷ್ಯಸ್ಥಲ ಮಹತ್ವವುಳ್ಳದ್ದು.

**ಚಿತ್ರಂ ವಟತರೋರ್ಮೂಲೇ । ವೃದ್ಧಾ ಶಿಷ್ಯಾಗುರೋರ್ಯುವಾ ।**
**ಗುರೋಸ್ತು ಮೌನಂ ವ್ಯಾಖ್ಯಾನಂ । ಶಿಷ್ಯಾಸ್ತು ಛಿನ್ನ ಸಂಶಯಾಃ ॥**

ಮಹಾ ವಟವೃಕ್ಷದಡಿಯಲ್ಲಿ ಉನ್ನತಾಸನದಮೇಲೆ ಪದ್ಮಾಸನಾಸೀನನಾಗಿ, ಸಮಕಾಯ ಶಿರೋಗ್ರೀವವಾಗಿ, ಅರ್ಧೋನ್ಮೀಲಿತ ನೇತ್ರಂಗಳಿಂದ ತನ್ನ ನಾಸಾಗ್ರದಲ್ಲಿಟ್ಟ ನಿಜ ದೃಷ್ಟಿಯಿಂದ ವಿರಾಜಿಸುವ ನವತರುಣ ವಯಸ್ಸಿನ **ಶ್ರೀ ದಕ್ಷಿಣಮೂರ್ತಿ;**

**"ಕರೇ ಜ್ಞಾನಮುದ್ರಾ, ಮುಖೇ ಮೌನ ಮುದ್ರಾ, ಸ್ವಯಂ ಯೋಗ ನಿದ್ರಾಂಕಿತನಾಗಿದ್ದುದನ್ನು ವೀಕ್ಷಿಸಿದ"** ಭಕ್ತವೃಂದಕ್ಕೆ ಆಶ್ಚರ್ಯ ಆಹ್ಲಾದಕರವೆನಿಸಿತು.**"ಗುರೂಣಾಂ ಗುರುಃ"**ಎಂಬ ಅದ್ವಿತೀಯ ಬಿರುದಾಂಕಿತನಾದ ಶ್ರೀ ದಕ್ಷಿಣಾಮೂರ್ತಿಯ ಮಹಾ ಸನ್ನಿಧಿ ಎದುರಿನಲ್ಲಿ **"ಚತ್ವಾರೋ ಬಾಲಃ"**ಎಂದು ಸ್ತುತ್ಯರಾದ ಜಗದಾದಿ ಜಗತ್ಪ್ರಸಿದ್ಧರಾದ, ವೃದ್ಧ ಪಿತಾಮಹರಾದ ನಾಲ್ಕು ಮಹರ್ಷಿಗಳೆಂದರೆ–ಸನಕ,ಸನಂದನ,ಸನತ್ಕುಮಾರ ಮತ್ತು ಸನತ್ಸುಜಾತಾದಿಗಳು, ಈಶ್ವರಪ್ರಣಿಧಾನತ್ವದ ಮಹತ್ತರ ವಿಷಯದಲ್ಲಿ ತಮ್ಮ ತಮ್ಮ ಭಿನ್ನಾಭಿಪ್ರಾಯಗಳನ್ನು ಶಿವನಿಂದ ಪರಿಹರಿಸಿಕೊಳ್ಳಲು ಬಂದು ಭಗವಂತನ ಸನ್ನಿಧಿ ಎದುರಿನಲ್ಲಿ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸಿ ಮೌನಮುದ್ರೆಯಿಂದ ಕರಂಗಳ ಜೋಡಿಸಿ ಮಂಡಿಸಿರ್ದರು. ಅಂತರ್ಮುಖಿಯಾಗಿ ಅಸಂಪ್ರಜ್ಞಾತ ಸಮಾಧಿಯೋಗದಲ್ಲಿ ಧ್ಯಾನಾಸಕ್ತನಾಗಿರ್ದ ಶ್ರೀ ದಕ್ಷಿಣಾಮೂರ್ತಿ, ಯಾವುದನ್ನು ಗಮನಿಸದೆ "ಸ್ವಸ್ವರೂಪೈಕ ಚಿಚ್ಛಕ್ತಿಯಿಂ ಸ್ಫುರಿಸುವ ತೇಜೋಮಯ ಪರಮಾದ್ವೈತ ಸ್ಥಿತಿಯಿಂದ ವಿಜೃಂಭ ಭಾವಗೊಂಡು ವಿರಾಜಿತನಾಗಿದ್ದನು". ಚಿತ್ರಂ! ಗುರು ಶಿಷ್ಯರ ಮೌನಮುದ್ರಾ ಸ್ಥಿತಿ ಅತಿ ಗಂಭೀರವಾಗಿದ್ದ ಕಾರಣ,

**ಗುರೋಸ್ತು ಮೌನಂ ವ್ಯಾಖ್ಯಾನಂ । ಶಿಷ್ಯಸ್ತು ಛಿನ್ನ ಸಂಶಯಾಃ ॥**

ಇಂತಹ ಮೌನದಲ್ಲಿ ವೃದ್ಧ ಶಿಷ್ಯರ ಮನೋಮಂಡಲವನ್ನು ಕಾಡಿಸುತ್ತಿದ್ದ ಎಲ್ಲಾ ಸಂದೇಹಗಳೂ ತಾವಾಗಿ ನಿವೃತ್ತಿಯಾಗಲು, ಸನಕಾದಿ ಮಹರ್ಷಿಗಳು ನವತರುಣ ಗುರುವರೇಣ್ಯ ಶ್ರೀ ದಕ್ಷಿಣಾಮೂರ್ತಿಯ ಅನಂತ ಕಲ್ಯಾಣಗುಣ ಗಳನ್ನು ಬಹುಮುಖದಿಂದ ಸ್ತುತಿಸಿ ಕೊಂಡಾಡಿದರು. ಶ್ರೀಗುರು ಸನ್ನಿಧಿಯಲ್ಲಿ ಶಿಷ್ಯಸ್ಥಲದ ಮಹಿಮೆ ಅನಿರ್ವಚನೀಯವಿರುತ್ತೆ. ಶಿಷ್ಯಸ್ಥಲದಲ್ಲಿ ಗುರು ಶುಶ್ರೂಷೆಗೆ ಆದ್ಯತೆಯಿರುತ್ತೆ,

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ | ಜ್ಞಾನಿನಸ್ತತ್ತ್ವದರ್ಶಿನಃ ॥**

(ಗೀ ಅ. ೪ ಶ್ಲೋ. ೩೪)

ಕರುಣಾಮಯರೂ ದಯಾಪರರಾದ ಸುಜ್ಞಾನಿ ಗುರುವರ್ಯರ ಇಂಗಿತ ವರಿತು ತ್ರಿಕರಣಪೂರ್ವಕ ಸುದೀರ್ಘ ಕಾಲ ಸೇವೆ ಸಲ್ಲಿಸುವ, ಸಚ್ಛಿಷ್ಯರಿಗೆ, ತತ್ತ್ವವೇತ್ತರಾದ ಗುರು, ಶಿವಜ್ಞಾನವನ್ನು ಬೋಧಿಸುವರು. ಜೀವನ್ಮುಕ್ತರಾದ ಷಟ್ಸ್ಥಲ ಬ್ರಹ್ಮಿ ಗುರುಗಳಿಂದ, ದೀಕ್ಷೆ, ಶಿಕ್ಷೆಗಳನ್ನು ವಿಧಿವತ್ತಾಗಿ ಪಡೆದಾತನೇ ಶಿಷ್ಯನೆನಿಸುವನು. ಶ್ರೀಗುರುವಿನ ಕರಣ ಪ್ರಸಾದ ಸ್ವೀಕರಿಸಿ, ಮೋಕ್ಷಮಾರ್ಗ ವನ್ನರಿತ ಬ್ರಹ್ಮಚಾರಿ ವಟುವೇ ಶಿಷ್ಯನಿರುವನು. ಗುರು ಕಟಾಕ್ಷದಿಂದ ಶಿಷ್ಯ ಕ್ರಮೇಣ ಗುರುವಾಗಬಲ್ಲನು. ಮನೋವಾಕ್ಕಾಯ ಕ್ರಿಯೆಗಳಿಂದ ನಿಚ್ಚಳ ವಾದ ಭಾವವ ತನ್ನಲ್ಲಿ ನೆಲೆಗೊಳಿಸಿದಾತನೇ ಶಿಷ್ಯನೆಂದು ಸ್ತುತಿಸಲಾಗಿದೆ.



ಪ್ರಸಾದಿ-ಲಿಂಗಸ್ಥಲ ೨೬] ಶುಶ್ರೂಷುಸ್ಥಲ [(ಪರಿ. ೧೭)

**ಬೋಧ್ಯಮಾನಃ ಸ ಗುರುಣಾ ಪರಕಾಯೇನ ಸರ್ವದಾ ।**
**ತಚ್ಛುಶ್ರೂಷಾರತಃ ಶಿಷ್ಯಃ ಶುಶ್ರೂಷು ರಿತಿ ಕೀರ್ತ್ಯತೇ ॥**

**ಶ್ರುತ್ವಾ ಶ್ರುತ್ವಾ ಗುರೋರ್ವಾಕ್ಯಂ ಶಿವಸಾಕ್ಷಾತ್ಕ್ರಿಯಾವಹಂ।**
**ಉಪಶಾಮ್ಯತಿ ಯಃ ಸ್ವಾಂತೇ ಸ ಮುಕ್ತಿಪದಮಾಪ್ನುಯಾತ್॥**

**ಸೂರ್ಯಸ್ಯೋದಯ ಮಾತ್ರೇಣ ಸೂರ್ಯಕಾಂತಃ ಪ್ರಕಾಶತೇ ।**
**ಗುರೋರಾ ಲೋಕಮಾತ್ರೇಣ ಶಿಷ್ಯೋ ಬೋಧೇನ ಭಾಸತೇ ॥**

**ಶಿವಏವ ಪರಂ ತತ್ತ್ವಂ ಚಿದಾನಂದ ಸದಾಕೃತಿಃ ।**
**ಸ ಯಥಾರ್ಥ ಸ್ತದನ್ಯಸ್ಯ ಜಗತೋ ನಾಸ್ತಿ ನಿತ್ಯತಾ ॥**

(ಶ್ಲೋ. ೬೦, ೬೧, ೬೩, ೬೭).

ನಿರಂತರ ಅವ್ಯಭಿಚಾರಿಣೀ ಭಕ್ತಿಭಾವದಿಂ ಶ್ರೀಗುರು ಸೇವಾ ನಿರತನಾದ ಶಿಷ್ಯ ಶುಶ್ರೂಷು ಯೆನಿಸಿರುವನು. ತನ್ನ ಅಂತರಂಗದಲ್ಲಿ ನೆಲಸಿ ಪ್ರಜ್ವಲಿಸುವ ಆತ್ಮನನ್ನು ಶಿವಯೋಗ ಬಲದಿಂದ ಸಾಕ್ಷಾತ್ಕರಿಸಿಕೊಂಡಿರುವ ಗುರುವಿನ ಸೇವೆಯನ್ನು ದೀರ್ಘಕಾಲ ತ್ರಿಕರಣಪೂರ್ವಕ ಸಲ್ಲಿಸಿ ಶ್ರೀಗುರು ಕೃಪೆಗೆ ಪಾತ್ರ ನಾದ ಶುಶ್ರೂಷು (ಶಿಷ್ಯ) ಮಂಗಳ ಸನ್ನಿವೇಷದಲ್ಲಿ, ಕ್ರಿಯಾವಂತ ಶ್ರೋತ್ರಿಯ ಬ್ರಹ್ಮನಿಷ್ಠಾಗರಿಷ್ಠ ಸವಿತ್ಪಾಣಿಯಾಗಿ ಪಂಡಿಸಿರುವ ಗುರುವನ್ನು ಭಕ್ತಿಭಾವ ದಿಂದ ಶಿರಸಾ ನಮಸ್ಕರಿಸಿ, ಭೋ ಗುರುವರ್ಯ! ಆತ್ಮಾನಾತ್ಮ ವಿಷಯದ ಬಗೆಗೆ, ಜೀವ ಜಗತ್ತು, ಜಗದೀಶ್ವರ, ಇವರ ಮಧ್ಯೇ ಇರುವ ನಿಕಟ ಸಂಬಂಧ ಹಾಗೂ ಲಿಂಗಾಂಗಗಳಲ್ಲಿನ ಅವಿನಾಭಾವ ಸಂಬಂಧಗಳ ವಿಷಯವನ್ನು ಕುರಿತು ಕೃಪೆಯಿಂದ ಬೋಧಿಸಬೇಕೆಂದು ಪ್ರಾರ್ಥಿಸಿ ಗುರು ಬೋಧಾಮೃತವನ್ನು ಸಾವಧಾನಚಿತ್ತದಿಂದ ಶ್ರವಣ ಮಾಡುವ ಸಚ್ಛಿಷ್ಯ, ಶುಶ್ರೂಷುವೆನಿಸಿಹನು ತಟಾಕದಲ್ಲಿನ ಕಮಲ ಸೂರ್ಯೋದಯವ ಕಂಡು ಅರಳಿ ಮಘಮಘಿಸುವಂತೆ ಶ್ರೀಗುರು ಬೋಧಾಮೃತ ಕಟಾಕ್ಷ ಲವಲೇಶಮಾತ್ರೇಣ ಶುಶ್ರೂಷು ತನ್ನಂತರಂಗದಲ್ಲಿ ತಾನೇ ಆದ, ಚಿಜ್ಯೋತಿ ಚಿನ್ಮಯಸ್ವರೂಪ ದರ್ಶನದಿಂದ ಪ್ರದೀಪ್ತನಾಗುವನು. ಇಂತು ಶ್ರೀಗುರು ಕರಕಂಜಸಂಜಾತನಾದ ಶುಶ್ರೂಷು (ಶಿಷ್ಯ) ತನ್ನೊಳಗೆ ಶಿವಾದ್ವೈತ ತತ್ವದ ರಸಾಸ್ವಾದನೆ. ಗುರು ಕರುಣೆಯಿಂದ ಸ್ಥಿರವಾಗಲು, ಜೀವನ್ಮುಕ್ತನಾಗಿ ಲೋಕಪೂಜಿತನಾಗುವನು. ಇದರಿಂದಾಗಿ ಶುಶ್ರೂಷುವಿಗೆ—

**ಗುರು ಪರಿಚರ್ಯವೇ ಸಕಲ ಜಪಂಗಳಯ್ಯಾ ।**
**ಗುರು ಪರಿಚರ್ಯವೇ ಸಕಲ ತಪಂಗಳಯ್ಯಾ ॥**

ಜ್ಞಾನ ವೈರಾಗ್ಯದಿ ತಪೋನಿಷ್ಠನಾದ ಶ್ರೀಗುರುವಿನಿಂದ ಅನುಗ್ರಹೀತನಾದ ಶುಶ್ರೂಷು ಸಮಸ್ತ ದುಃಖಗಳಿಂದ ನಿವೃತ್ತನಾಗಿ ಪರಮಾನಂದ ಪ್ರಾಪ್ತಿಗೆ ಅರ್ಹನೆನಿಸುವನು.

ಲಿಂಗಸ್ಥಲ ೨೭] [ಸೇವ್ಯಸ್ಥಲಂ ೧೭

**ಗುರುವಾಕ್ಯಾಮೃತಾಸ್ವಾದಾತ್ ಪ್ರಾಪ್ತಬೋಧ ಮಹಾಫಲಃ |**
**ಶುಶ್ರೂಷು ರೇವಸರ್ವೇಷಾಂ ಸೇವ್ಯತ್ವಾತ್ ಸೇವ್ಯ ಉಚ್ಯತೇ ||**

**ಗುರೂಪದಿಷ್ಟೇ ವಿಜ್ಞಾನೇ ಚೇತಸಿ ಸ್ಥಿರತಾಂ ಗತೇ |**
**ಸಾಕ್ಷಾತ್ಕೃತ ಶಿವಃ ಶಿಷ್ಯೋ ಗುರುವತ್ಪೂಜ್ಯತೇ ಸದಾ ||**

**ಗುರೋಃ ಕಟಾಕ್ಷ ವೇಧೇನ ಶಿವೋ ಭವತಿ ಮಾನವಃ |**
**ರಸವೇಧಾದ್ಯಥಾ ಲೋಹೋ ಹೇಮತಾಂ ಪ್ರತಿಪದ್ಯತೇ ||**

**ವಿಷಯಾಸಕ್ತ ಚಿತ್ತೋಽಪಿ ವಿಷಯಾ ಸಂಗವರ್ಜಿತಃ |**
**ಶಿವಭಾವಯುತೋಯೋಗೀ ಸೇವ್ಯಃ ಶಿವ ಇವಾಪರಃ ||**

(ಶ್ಲೋ. ೭೧, ೭೨, ೭೬, ೭೭)

ಶ್ರೀಗುರೂಪದೇಶವಾಕ್ಯವೆಂಬ ನಂಬಿ ಶಿವಾದ್ವೈತ ಜ್ಞಾನಾಮೃತವನ್ನು ಬೀರಿ, ಸ್ವಾತ್ಮದಲ್ಲಿ ಅರಿತು ಅನುಭವಿಸುವ ಶುಶ್ರೂಷು ಸರ್ವರಿಂದ ಸೇವ್ಯನಾದ್ದರಿಂದ ಸೇವ್ಯನೆನಿಸಿಹನು. ಇಂತು ಸರ್ವರಿಂದ ಸಂಪೂಜ್ಯನಾಗಿ ಸೇವ್ಯನೆನಿಸಿಕೊಳ್ಳಲು, ಗುರುಬೋಧಾಮೃತದಂತೆ, ಭಕ್ತ್ಯಾ ಆಚರಿಸಿ ಅದರಂತೆ ಮನೋವಾಕ್ಕಾಯಗಳಿಂದ ನಡೆದು ಶಿವಪ್ರೀತಿಗೆ ಪಾತ್ರನಾಗಿರಬೇಕು. **"ಗುರುವಚನದಿಂದ ಅಧಿಕ ಸುಧೆಯುಂಟೇ"**

**ಶ್ರೀಗುರು ವಚನೋಪದೇಶವ |**
**ನಾಲಿಸಿದಲಾಗಹುದು ನರರಿಗೆ ಮುಕುತಿ ||**

ಎಂಬ ಶ್ರೀ ನಿಜಗುಣಶಿವಯೋಗಿಗಳ ವಚನದಂತೆ ನಡೆಯುವ ಶರಣ ನಿಜಕ್ಕೂ ಸೇವ್ಯನೆನಿಸಿ ಸಂಪೂಜ್ಯನಹುದು. ಮಾತಾ ಪಿತೃ ಅಥಿತಿ ಅಭ್ಯಾಗತ, ಹರ ಗುರು ಆಚಾರ್ಯ ಮಹಾಚಾರ್ಯರುಗಳ ಸೇವಾನಿರತನಾಗಿ, ಹರಪೂಜೆ ಗುರುಸೇವೆ ಗುರುಸೇವಾದಿಗಳಿಂದ ಪ್ರಬುದ್ಧನಾದಾತ ಸೇವ್ಯನೆನಿಸುವನು. ಪರಿಪಕ್ವ ಸ್ಥಿತಿಯಲ್ಲಿ ಸೇವ್ಯನಾದ ಶುಶ್ರೂಷು ತಾನೆ ಗುರುಸ್ಥಾನಕ್ಕೇರಿದಾಗ ಶಿವಾನುಗ್ರಹ ಬಲದಿಂದ ಶಿಷ್ಯ ಗುರುವಾಗಿ ಗುರು ಶಿಷ್ಯನಾಗಿ ಉಭಯ ಭೇದವಳಿದು, ತನುವೆರಡು ಆತ್ಮ

ವಂದಾಗಿ ನಿರಂತರ ಸರ್ವರಿಂದ ಸೇವ್ಯರಾಗಿರ್ಪರು. ಗುರುವಿನಿಂದಾದ ಶುಶ್ರೂಷು ಅನನ್ಯ ಸೇವಾ ಮನೋಭಾವದಿಂದ ಗುರುವಾಗಿ, ದೇವದಾನವ ಮಾನವರಿಂದ ಸತತ ಸೇವ್ಯನೆನಿಸುವನು! ಶಿವೋಹಂ ಭಾವ ಬಲಿದು ಶಿಷ್ಯ ಶಿವನಂತೆ ಸಂಪೂಜ್ಯನಾಗುವನು. ತಾಮ್ರ, ಪಾದರಸದ ಸಂಸರ್ಗದಿಂದ ಹೇಗೆ ಬಂಗಾರವಾಗುವುದೋ ಅದರಂತೆ ಶುಶ್ರೂಷು, ಶ್ರೀಗುರು ಕಟಾಕ್ಷ ಲೇಶಮಾತ್ರದಿಂದ ಶಿವನಾಗುವನು ಶ್ರೀಗುರು ಅಘಟಿತ ಘಟನಾಶಕ್ತಿ ಸಾಮರ್ಥ್ಯವುಳ್ಳ ಕಾರಣ ಇಚ್ಛಾಮಾತ್ರದಲ್ಲಿ ಶಿಷ್ಯನನ್ನು ಶಿವನನ್ನಾಗಿಸಬಲ್ಲ. ಮಹಾಗುರು ಬಯಲನ್ನು ಲಿಂಗಾಕಾರವಾಗಿ ಮಾಡಿ ಪುನಃ ತನ್ನ ಸಂಕಲ್ಪದಿಂದ ಲಿಂಗವನ್ನು ಬಯಲಾಗಿಸಬಲ್ಲ ಶ್ರೀಗುರುಭಕ್ತಿ ಶಿವಭಕ್ತಿ ಸಹಜವಾಗಿ,

**ಭಕ್ತಿಃ ಕಿಂ ನ ಕರೋತ್ಯಹೋ ।**
**ವನಚರೋಽಪಿ ಭಕ್ತಾವತಂ ಸಾಯತೇ ॥**

ಸೇವ್ಯನಾಮಕ ಶಿವಯೋಗಿ ವಿಷಯಾದಿಗಳಲ್ಲಿ ಕೂಡಿ ವ್ಯವಹರಿಸುತ್ತಲಿದ್ದರೂ ಸಹ ವಿಷಯ ಸಂಬಂಧದಿಂದ ಹುಣಿಸೆಕಾಯಿ ಹಣ್ಣಾದಬಳಿಕ, ಒಳಗಿನ ಹುಣಸೆ ಹಣ್ಣು ಮೇಲಿನ ಸಿಪ್ಪೆಯ ಆವರಣದಿಂದ ಕಳಚಿ ಬೇರ್ಪಟ್ಟು ಮುಕ್ತವಾಗಿರುವಂತೆ ವಿಷಯಾದಿಗಳಿಂದ ಆವೃತನಾಗದೆ, ಅಂಟದೆ, ರಾಗದೂರನಾಗಿ ಉದಾರಿಯಾಗಿ, ಶಿವನಂತೆ ಸೇವ್ಯನೆನಿಸಿ ಸಂಪೂಜ್ಯನಪ್ಪನು. ಇಂತು ಶಿವನಲ್ಲಿ ವಿಲೀನನಾದ ಶಿವಯೋಗಿ ಸಮಸ್ತರಿಂದ ನಿರಂತರ ಸೇವ್ಯನೆನಿಸಿ ಅಭಿನಂದನೀಯನಾಗಿ ವಿರಾಜಿಸುವನು. ಪ್ರಸಾದಿಸ್ಥಲದ ೯ ಲಿಂಗಸ್ಥಲಗಳ ವಿವರಣೆ ಯಿಲ್ಲಿದೆ.



**ಓಂ ಅಗಜಾಲಿಂ ಗನಜಂ ।**
**ಶ್ರೀಕಂಠೇಶ್ವರ ರೋಮಹರ್ಷ ನಿಕುರುಂಬಂ ॥**
**ತನುತಾದಶೇಷ ಜಗತಾಮ ।**
**ಮಂದಮಾನಂದ ಸಂದೋಹಂ ॥**

ಶ್ರೀಕಂಠೇಶ್ವರ ಸುಪ್ರಭಾತ ಸ್ತೋತ್ರದ ಸಾರಾಂಶ—

ಪರಶಿವನ ನಿತ್ಯ ನಿವಾಸವು ಈ ಗರಲಪುರ. ಪರಮ ಪವಿತ್ರ ಮಾತ್ರವಲ್ಲದೇ ನಿಸರ್ಗ ಸುಂದರವೂ ಹೌದು. ಎಡಬಲದಲ್ಲಿ ಕಪಿಲಾ ಕುಂಡಿನೀ ನದಿಗಳು, ಜನರ ಮನವಂ ಮುಗ್ಧಗೊಳಿಸುವ ಜಲದ ಕಲಕಲನಾದ; ಹಕ್ಕಿಗಳ ಚಿಲಿಪಿಲಿ ನಿನಾದ, ದುಂಭಿಗಳ ಮಧುರ ಝೇಂಕಾರ; ಮುನಿತಳ ಮನ ಸೆಳೆಯುವ ರಮ್ಯ ತಪೋವನ ; ಹೆಚ್ಚೇನು? ಪರಮೇಶ್ವರನು ರಜತಾದ್ರಿಯನ್ನು ತೊರೆದು ಗಿರಿಜೆ ಯೊಡನೆ ಬಂದು ನೆಲಸಿದ ಪ್ರಿಯ ಪುಣ್ಯಧಾಮ.

ಲೋಕ ಕಂಟಕ ಕೇಶಿ ದೈತ್ಯನಂ ಸುಟ್ಟು ಅವನ ದೇಹದಿಂ ಪೊರಟ ವಿಷಮಂ ಕುಡಿದು ಶ್ರೀಕಂಠನೆಂದು ಶಿವನು ಪ್ರಸಿದ್ಧಿ ಪಡೆದ ಪುಣ್ಯಕ್ಷೇತ್ರವೇ ಇದು. ಸಗರ ಸುತರನು ದಹಿಸಿದ ದುರಿತ ನಿವೃತ್ತಿಗೆ ತಪವನೆಸಗಿದನು ಕಪಿಲ ಮುನಿ ಇಲ್ಲಿ. ಪರಶಿವನ ಪ್ರಸಾದದಿಂದವನು ಮುಕ್ತಿಯಂ ಪಡೆದ ಪಾವನ ಭೂಮಿ, ಅವನ ಪ್ರಭಾವದಿಂದ ಅಮೃತಲಹರಿಯು ತುಲಸಿಯ ಮೂಲದಿಂದು ದ್ಭವಿಸಿ, ಕಪಿಲೆ ಯಂದವನ ಹೆಸರಿನಿಂದಲೇ ಪ್ರಸಿದ್ಧಿಯಂ ಪಡೆದು ಹರಿಯು ತ್ತಿರುವ ಪವಿತ್ರ ಸ್ಥಲ ತನ್ನ ಮಡದಿಯ ಅನಂತ ದಾರವಂ ಕಿತ್ತು ಖಿನ್ನನಾದ ಕೌಂಡಿನ್ಯನಿಗೆ ಪರಮಾತ್ಮನೊಲಿದ ಮಂಗಲಸ್ಥಾನ. ಈ ವಿಮಲ ಕಪಿಲಾ ಕುಂಡಿನೀ ನದಿಗಳ ಸಂಗಮ,ಸಕಲ ರೋಗ ನಿವಾರಕ ಮೃತ್ತಿಕಾ.ಗಂಗೆಯೂ ತನ್ನ ವಾಸವಂ ಬಯಸಿದ ತೀರ್ಥ ಮಣಿಕರ್ಣಿಕಾ. ರಾವಣನ ಹಸ್ತದಿಂ ಕೆಳಬಿದ್ದು ಸ್ಥಿರವಾಗಿ ನಿಂತ ಕೈಲಾಸಗಿರಿ ಶೃಂಗ ಮುಂತಾದವುಗಳಿಂದ ಭೂಷಿತವಾದ ಈ ಭೂಕೈಲಾಸದ ಹಿರಿಮೆಯನ್ನೆಷ್ಟೆಂದು ಹೇಳೋಣ.

---

## ಪ್ರಾಣಲಿಂಗಿಸ್ಥಲ ೨೮] [ಪ್ರಾಣಲಿಂಗಿಸ್ಥಲ (ಪ. ೧೮

## ಆತ್ಮಸ್ಥಲಂ

**ಜೀವಭಾವಂ ಪರಿತ್ಯಜ್ಯ ಯದಾ ತತ್ತ್ವಂ ವಿಭಾವ್ಯತೇ ।**
**ಗುರೋಶ್ಚ ಬೋಧಯೋಗೇನ ತದಾತ್ಮಾಯಂ ಪ್ರಕೀರ್ತಿತಃ ॥**

ವಾಲಾಗ್ರ ಶತಭಾಗೇನ ಸದೃಶೋ ಹೃದಯೇ ಸ್ಥಿತಃ ।
ಅಶ್ನನ್ ಕರ್ಮಫಲಂ ಸರ್ವಮಾತ್ಮಾಸ್ಸ್ಫುರತಿ ದೀಪವತ್ ॥

ಆತ್ಮಾಪಿ ಸರ್ವಭೂತಾನಾಂ ಅಂತಃಕರಣಮಾಶ್ರಿತಃ ।
ಅಣುಭೂತೋ ಮಲಾಸಂಗಾದಾದಿಕರ್ಮ ನಿಯಂತ್ರಿತಃ ॥

ನ ಚಾಸ್ತಿ ದೇಹಸಂಬಂಧೋ ನಿರ್ದೇಹಸ್ಯ ಸ್ವಭಾವತಃ ।
ಅಜ್ಞಾನ ಕರ್ಮಯೋಗೇನ ದೇಹೀ ಭವತಿ ಭುಕ್ತಯೇ ॥

ಚೋದಿತಾಃ ಪರಮೇಶೇನ ಸ್ವಸ್ವಕರ್ಮಾನುರೂಪತಃ ।
ಸ್ವರ್ಗಂ ವಾ ನರಕಂ ವಾಪಿ ಪ್ರಾಣಿನೋ ಯಾಂತಿ ಕರ್ಮಿಣಃ ॥

ಪುನಃ ಕರ್ಮಾವಶೇಷೇಣ ಜಾಯಂತೇ ಗರ್ಭಕೋಟರಾತ್ ।
ಜಾತಾಮೃತಾಃ ಪುನರ್ಜಾತಾಃ ಪುನರ್ಮರಣಭಾಜನಾಃ ।
ಭ್ರಮಂತಿ ಘೋರ ಸಂಸಾರೇ ವಿಶ್ರಾಂತಿ ಕಥಯಾ ವಿನಾ ॥

ಜೀವತ್ವಂ ದುಃಖಸರ್ವಸ್ವಂ ತದಿದಂ ಮಲಕಲ್ಪಿತಂ ।
ನಿರಸ್ಯತೇ ಗುರೋರ್ಬೋಧಾತ್ ಜ್ಞಾನಶಕ್ತಿಃ ಪ್ರಕಾಶತೇ ॥

(ಶ್ಲೋ. ೫,೬,೭,೧೧,೧೫,೧೬,೧೭)

ಇಲ್ಲಿಯವರೆವಿಗೆ ೪೪ ಅಂಗಸ್ಥಲಗಳ ಮತ್ತು ೫೭ ಲಿಂಗಸ್ಥಲಗಳಲ್ಲಿ ೨೭ ಲಿಂಗ ಸ್ಥಲಗಳ ಸಂಕ್ಷಿಪ್ತ ವ್ಯಾಖ್ಯಾನ, ಶ್ರೀ ಪಂಚಾಚಾರ್ಯರ ದಿವ್ಯಾನುಗ್ರಹವನ್ನು ಮುಂದುಮಾಡಿಕೊಂಡು ಶ್ರೀ ಜ|| ರೇಣುಕಾಚಾರ್ಯರ ದಿವ್ಯ ಪ್ರೇರಣೆಯಂತೆ ರಚಿಸಲಾಗಿದೆ. ಇನ್ನುಳಿದ ೩೦ ಲಿಂಗಸ್ಥಲಗಳ ವಿವರಣೆಯನ್ನು ಈಶಾಜ್ಞೆ ಯಂತೆ ಪ್ರಕಾಶಗೊಳಿಸಲಾಗುವುದು, ನಾನು ಸ್ವತಃ ಪಂಡಿತನಲ್ಲದಿದ್ದರೂ, ಪಂಡಿತರತ್ನ ಶ್ರೀ ಜ|| ರೇಣುಕರು; ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀ ಶ್ವರ ಲಿಂ|| ಪರಮ ಪೂಜ್ಯ ವೀರಗಂಗಾಧರಶಿವಾಚಾರ್ಯ ಮಹೋದಯರ ಕೃಪಾಶೀರ್ವಾದ ಪ್ರಭಾವದಿಂದ, ಅನಾದಿ ಸಂಸಿದ್ಧವಾದ,

ನ ಹಿ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವ ಸಾಯುಜ್ಯದಾಯಕಂ ॥

ಎಂಬ ಹಿರಿಮೆಯುಳ್ಳ ಶಿವಾದ್ವೈತ ಸಿದ್ಧಾಂತ ಪ್ರತಿಪಾದಕ ಘನತತ್ವದ ಬಗೆಗೆ, ಯತ್ಕಿಂಚಿತ್ ಅಂದರೆ ಎಳ್ಳಿನ ಮೊನೆಯಷ್ಟು ಭಕ್ತ್ಯಾ ನಿರೂಪಿಸಲು ನನ್ನಿಂದ ಯತ್ನಿಸಲಾಯಿತು. ಅವಿಕಾರ ಪರಿಣಾಮ ಶಿವಸಿದ್ಧಾಂತವನ್ನು ಹೃದಯಂಗಮವಾಗಿ ಪೊಳಗೊಂಡ ಶಿವಾದ್ವೈತ, ಮಯೂರಾಂಡರಸನ್ಯಾಯ ದಂತೆ ಉಳಿದೆಲ್ಲಾ ಸಿದ್ಧಾಂತಗಳ (ಯೋಗಗಳ) ಸಾರ ಸರ್ವಸ್ವವನ್ನು ಗರ್ಭೀ ಕರಿಸಿಕೊಂಡಿರುವುದರೊಂದಿಗೆ, ತನ್ನದೇ ಆದ ಷಟ್ಸ್ಥಲದ ಶಿವಯೋಗದ ವೈಶಿಷ್ಟ್ಯವನ್ನು ಉಳಿಸಿ ಬೆಳೆಸಿಕೊಂಡು, ತೇಜಸ್ವಿಯಾಗಿ ವಿಶ್ವಧರ್ಮವೆಂದು ಉಗ್ಗಡಿಸಲಾಗಿದೆ. ಷಟ್ಸ್ಥಲಗಳಲ್ಲಿ ಮೊದಲನೆಯ ಭಕ್ತ, ಮಾಹೇಶ್ವರ, ಪ್ರಸಾದಿಯೆಂಬೀ ಮೂರು ಸ್ಥಲಗಳು ಕ್ರಿಯಾಪ್ರಧಾನವಾದವುಗಳು. ಪ್ರಾಣ ಲಿಂಗಿ, ಶರಣ ಮತ್ತೂ ಐಕ್ಯಸ್ಥಲಗಳು ಜ್ಞಾನಪ್ರಧಾನವಾಗಿವೆ ಎರಡೂ ಮಂದ ರಲ್ಲೊಂದು ಸಮನ್ವಯಗೊಂಡಿವೆ.

---

# ಪ್ರಾಣಲಿಂಗಿಸ್ಥಲ (೨೮) (ಪ. ೧೮)

## ಆತ್ಮಸ್ಥಲ

ಮನಸ್ಸು ಯಾವಾಗಲೂ ಪದಾರ್ಥ ಮುಖವಾಗಿ, ಪ್ರಾಪಂಚಿಕ ವಿಷಯ ಗಳತ್ತ ಹರಿಯುವುದು. ಇಂದ್ರಿಯಗಳ ಮುಖವಾಗಿ ಹೀಗೆ ಹರಿಯುವಾಗ ವಿಷಯಗಳ ವಾಸನೆಯಿಂದಾಗಿ ಮನಸ್ಸು ಕಲುಷಿತವಾಗುವುದು. ಮನಸ್ಸನ್ನು ಆಗಾಗ ಪುರುಷ ಪ್ರಯತ್ನದಿಂದ ವಿಷಯಗಳತ್ತ ಬೆನ್ನಟ್ಟದೆ, ಶಿವವಾಸನೆಯ ಕಡೆ ಆಕರ್ಷಿಸಿ ಅಂತರಂಗದ ಪರಮಾತ್ಮನ ಕಡೆಗೆ ತಿರುಗಿಸಿ ಪರಶಿವಯೋಗದಲ್ಲಿ ತನ್ಮಯವಾಗುವಂತೆ ಮಾಡುವುದು ಅವಶ್ಯವಿರುತ್ತೆ. ಆತ್ಮಸ್ಥಲದಲ್ಲಿ ಜೀವ ಭಾವವ ಜಯಿಸಿ ದೇವಭಾವವ ಅಳವಡಿಸಿ ದಿವ್ಯಮಯ ಬೋಧೆಯಿಂದ ತನ್ನ ನೈಜ ಆತ್ಮಭಾವದಲ್ಲಿ ಅಂತರ್ಮುಖನಾಗಿರುವಾತನೇ ಪ್ರಾಣಲಿಂಗಿ ಯೆನಿಸು ವನು. ಕಾಯಭಾವ ಹಾಗೂ ಜೀವಭಾವಗಳನ್ನು ಅಳಿದು, ಆತ್ಮಲಿಂಗದ ಕುರುಹನರಿವುದೇ ಪ್ರಾಣಲಿಂಗಿಯ ಧ್ಯೇಯವಿರುತ್ತೆ. ಲಿಂಗದಲ್ಲಿ ಪ್ರಾಣವ ನಿಲ್ಲಿಸಿ, ಪ್ರಾಣದಲ್ಲಿ ಲಿಂಗವ ಇರಿಸಿ ನೆನೆಯುತ್ತಿರ್ಪಾತನೇ ಪ್ರಾಣಲಿಂಗಿ.

ಪ್ರಾಣವೆಂಬುದು ಒಂದು ಶಕ್ತಿ. ಪ್ರೇರಕಚೈತನ್ಯ ಶಕ್ತಿ, ಪರಮಾತ್ಮ ನಿಂದ ಉದ್ಭವಿಸಿದೆ. ಹೆಚ್ಚೇನು ಶೃತಿಯು "ಅಥ ಏವ ಪ್ರಾಣಃ" ಅಂದರೆ, ಪ್ರಾಣ, ಆ ಮಹಾ ಪ್ರಾಣವೇ ಪರಶಿವನೆಂದು ಸ್ಪುಟಪಡಿಸಿದೆ. ಬೀಜದಲ್ಲಿ ವೃಕ್ಷ ವೃಕ್ಷದಲ್ಲಿ ಬೀಜ ಮತ್ತು *ಮಾರುತಾಂಬರ ಯೋಗವ" ಆಕಾಶದ ಒಡಲಲ್ಲಿ ಗಾಳಿ, ಗಾಳಿಯಲ್ಲಿ ಆಕಾಶ ಹಾಸುಹೊಕ್ಕಾಗಿ ವ್ಯಾಪಿಸಿರುವಂತೆ ಲಿಂಗದಲ್ಲಿ ಪ್ರಾಣ, ಪ್ರಾಣವು ಲಿಂಗವನ್ನು ಆಶ್ರಯಿಸಿರುವ ಸ್ಥಿತಿಯಲ್ಲಿ ಚೈತನ್ಯ ಮಯವಾದ ಮೂಲಶಕ್ತಿಯೇ ಪ್ರಾಣಲಿಂಗವೆಂದು ಶ್ರೀ ರೇಣುಕಾಚಾರ್ಯರು ಬೋಧಿಸಿರುವರು. ಇಂತಪ್ಪ ಪರಮ ಪರತ್ಪಾರ ಅಂತರಂಗದಲ್ಲಿ ಆತ್ಮಜ್ಯೋತಿ ಯನ್ನು ಅಂತರಂಗದ ಕಣ್ಣಿನಿಂದ ಕಂಡನುಭವಿಸಿ ಆರಾಧಿಸುವಾತ ಸುವ್ರತ ಪ್ರಾಣಲಿಂಗಿಯೆನಿಸಿಹನು. ಆತ್ಮ ದೇಹದಲ್ಲಿ ಎಲ್ಲಿದ್ದಾನೆ ಎಂಬುದನ್ನು ಬಲ್ಲವ ರಾರು? ತಾಯಿ ತನುವಿನಲ್ಲಿ ಸೂಕ್ಷ್ಮವಾದ ಮತ್ತೊಂದು ತನುವೇರ್ಪಡಲು, ಈ ತನುವಿನೊಳಗೆ ಜೀವಾತ್ಮನು ಪ್ರವೇಶಿಸಬೇಕಾದರೆ, ಆತ್ಮ ಇನ್ನೆಷ್ಟು ಸೂಕ್ಷ್ಮಾತಿಸೂಕ್ಷ್ಮನಿರಬೇಕು, ಮರಣಕಾಲದಲ್ಲಿ ಆಪ್ತ ಜನರೂ ವೈದ್ಯರೂ ನೋಡುತ್ತಿದ್ದಂತೆ, ದೇಹಪಂಜರದಿಂದ ಆತ್ಮ ಹೊರಗೆ ಹೋದದ್ದು ಯಾರಿಗೂ ಗೋಚರವಾಗದಿರಲು, ಈ ಆತ್ಮ ಅಣೋರಣೀಯನಿರಬೇಕಲ್ಲವೆ? ಇದನ್ನು ಕಂಡವರಾರು? ಆತ್ಮ-ಅಂತರಾತ್ಮ-ಪರಮಾತ್ಮ ಎಂದು, ಮೂರು ವಿಧವೆಂದು ಶಾಸ್ತ್ರಕಾರರು ವಿಧಿಸಿರುವರಾದರೂ, ಯಾರೊಬ್ಬರೂ ಆತ್ಮನ ನಿಜಸ್ವರೂಪ ವನ್ನು ಕಾಣರು ; ಈ ವಿಷಯವಾಗಿ ಲಿಂಗೋದ್ಭವ ಮಂಗಳಮೂರ್ತಿ ಶ್ರೀರೇಣುಕಾಚಾರ್ಯರು ಕುಂಭೋದ್ಭವ ಆದಿ ಅಗಸ್ತ್ಯಮಹರ್ಷಿಗಳಿಗೆ ಬೋಧಿಸುತ್ತಾ, ಹೇ ಮಹಾಮುನೇ—

ವಾಲಾಗ್ರ ಶತಭಾಗೇನ ಸದೃಶೋ ಹೃದಯೇ ಸ್ಥಿತಃ ।
ಅಶ್ನನ್ ಕರ್ಮಫಲಂ ಸರ್ವಮಾತ್ಮ ಸ್ಫುರತಿ ದೀಪವತ್ ॥
ಆತ್ಮಾಪಿ ಸರ್ವಭೂತಾನಾಂ ಅಂತಃಕರಣ ಮಾಶ್ರಿತಃ ।
ಅಣುರ್ಭೂತೋ ಮಲಾಸಂಗಾದಾದಿ ಕರ್ಮನಿಯಂತ್ರಿತಃ ॥
ಅಶರೀರೋಽಪಿ ಸರ್ವತ್ರ ವ್ಯಾಪಕೋಽಪಿ ನಿರಂಜನಃ ।
ಆತ್ಮಾಮಾಯಾ ಶರೀರಸ್ಥಃ ಪರಿಭ್ರಮತಿ ಸಂಸೃತೌ
ವಾಲಾಗ್ರ ಶತಭಾಗೇನ ॥

(ಪರಿ. ೨೮, ಶ್ಲೋ. ೬, ೭, ೮)

ಅಂದರೆ—ಸ್ತ್ರೀ ಜಡೆಯಲ್ಲಿನ ಒಂದು ಕೂದಲ ಎಳೆಯನ್ನು ಕಬ್ಬಿನ ತುಂಡನ್ನು ನೆಟ್ಟಗೆ ನಿಲ್ಲಿಸಿ, ಸೀಳುವಂತೆ ಉದ್ದವಾದ ಆ ಕೂದಲು ಎಳೆಯ ಎರಡು ತುದಿಗಳನ್ನು ಹಿಡಿದೆಳೆದು ಉದ್ದವಾಗಿ ನಿಲ್ಲಿಸಿ, ಹರಿತವಾದ ಸಣ್ಣ ಕತ್ತಿಯಿಂದ ಕಬ್ಬನ್ನು ನೆಟ್ಟಗೆ ನಿಲ್ಲಿಸಿ ಸೀಳುವಂತೆ, ಈ ಕೂದಲ ಒಂದು ಕಡೆಯ ತುದಿಯನ್ನೂ ಹಿಡಿದು, ನೂರು ಸಮಭಾಗವಾಗಿ ಶೀಳಿದಾಗ ಒಂದು ಆ ಶೀಳು ಎಷ್ಟು ಸೂಕ್ಷ್ಮವಿರಬಹುದೆಂದು ಭಾವಿಸಲು ಸಾಧ್ಯವೋ, ಅಷ್ಟು ಅತಿ ಸೂಕ್ಷ್ಮವಾಗಿ ಆತ್ಮ ಸ್ವರೂಪ ಸ್ಫುರಣಮಯ ಶಕ್ತಿಯಿಂದ ಹೃನ್ಮಂದಿರದಲ್ಲಿ, ಕೋಟಿ ಸೂರ್ಯಪ್ರಕಾಶದಿಂದ ಹೊಂಬಣ್ಣದಿಂದ ಪ್ರಜ್ವಲಿಸುತ್ತಿರ್ಪುದೆಂದು ಮಹಾಚಾರ್ಯರು ಆತ್ಮಸ್ವರೂಪವನ್ನು ಕುರಿತು ವರ್ಣಿಸಿದಾಗ, ಪುಳುಕಾಂಕಿತಭಾವದಿಂದ ಶ್ರವಣಮಾಡಿದ ಅಗಸ್ತ್ಯಮಹರ್ಷಿಗೆ ಆದ ಆನಂದಕ್ಕೆ ಪಾರವಿಲ್ಲದಂತಾಯಿತು ಅಸ್ತು.

ಜೀವಾತ್ಮ ದೇಹಸಂಬಂಧ ವುಳ್ಳಾತನಾದ್ದರಿಂದ ಕರ್ಮಫಲಂಗಳ ಭುಂಜಿಸುತ್ತ ನೊಡರಿನಂತೆ ಸರ್ವ ಶರೀರಂಗಳಲ್ಲಿ ಸ್ಫುರಿಸುತ್ತಿರ್ಪನೆಂದು ಬೋಧಿಸಿರುವರು. ಸ್ಫಟಿಕಮಣಿಯ ಹಿಂಬದಿಯಲ್ಲಿರ್ಪ ಕೆಂಪು ದಾಸವಾಳ ಹೂವಿನ ಸಂಪರ್ಕದಿಂದ, ಶುದ್ಧ ಸ್ಫಟಿಕಮಣಿ ಕೆಂಪಾಗಿ ಕಾಣುವಂತೆ ಅಹಂಕಾರಾದಿ ಅರಿಷಡ್ವರ್ಗಗಳ ಸಂಸರ್ಗ ದೋಷದಿಂದಾಗಿ ನಿರ್ಲಿಪ್ತನಾದ ಆತ್ಮನಿಗೆ ದೇಹಾಭಿಮಾನ ಪ್ರಾಪ್ತವಾಗುವುದು. ಇದರ ಫಲವಾಗಿ ಆತ್ಮ; ಮಲ ಮಾಯಾ ಶರೀರಿಯಾಗಿ ಸುತ್ತುತ್ತಿಹನು. ಈ ದುಃಖಮಯು ಸಂಸಾರದಲ್ಲಿ; ಆತ್ಮ , ಕಾಯವಲ್ಲ, ಕರಣಂಗಳಲ್ಲ, ಪ್ರಾಣವಲ್ಲ, ಅಖಂಡ ಬ್ರಹ್ಮರೂಪ ತಾನೆಂದು ತನ್ನ ಸ್ವರೂಪಜ್ಞಾನ ತನಗುಂಟಾದಾಗ, ಸ್ವಸ್ವರೂಪದಲ್ಲಿ ರಂಜಿಸಿ ಸುಖಿಯಾಗಿರ್ಪನು.



**ಅಗಜಾಲಿಂಗನಜಂ ಶ್ರೀಕಂಠೇಶ್ವರ ರೋಮಹರ್ಷ ನಿಕುರುಂಬಂ |**
**ತನುತಾಂದಶೇಷ ಜಗತಾಮಮಂದಮಾನಂದಂ ಸಂದೋಹಂ ||**

ಲೋಕಮಾತೆಯು ತಪವನೆಸಗಿದಳಿಲ್ಲಿ ಪತಿಗಾಗಿ. ಹರಿಯೊಡನೆ ಅವಳ ಕಲ್ಯಾಣವನಿಲ್ಲಿಯೇ ನಡೆಸಿದನು ಶ್ರೀಕಂಠ. ಮಾತೃವಧೆಯ ಪಾತಕ ವಿನಾಶಕೆ ತಪವನಾಚರಿಸಿದನಿಲ್ಲಿ ಭಾರ್ಗವನು. ಅವನ ಪರಶು ಘಾತವಂ ಸಹಿಸಿ ಅನುಗ್ರಹಿಸಿದನಿಲ್ಲಿ ಭಕ್ತವತ್ಸಲ. ಅಹಲ್ಯೆಯ ದೋಷವಂ ತೊಳೆಯಲು, ತಪಗೈದ ಮುನಿ

ಗೌತಮನ ಹರಸಿದನಿಲ್ಲಿ ಕರುಣಾಳು. ಮಿಾನಮಾಸದ ಮಘಾ ನಕ್ಷತ್ರದೊಳು ಗೌತಮಮುನಿಂದಾರಂಭವಾದ ರಥೋತ್ಸವದಿಂ, ಭಕ್ತರನಿಂದಿಗುಂ ಅನುಗ್ರಹಿಸು ವನಿಲ್ಲಿ ಜಗದೀಶ. ಹಿಂದೆ ಪಟ್ಟದಾನೆಯ ನೇತ್ರರೋಗಮಂ ಹರಿಸಿ ಸಲಹಿದನು ಭವವೈದ್ಯ. ಸಂಗಮದಲ್ಲಿ ಮಿಂದು ತನ್ನ ದರ್ಶನ ಪಡೆದ ಕಲಿಮುಗ್ಧರಂ ಧನ್ಯ ಗೊಳಿಸಿದನಿಲ್ಲಿ ವಿಶ್ವೇಶ. ನಿನ್ನ ಗೋಪುರದಮೇಲಿರಡು ಬಿಲ್ವವೃಕ್ಷಗಳೆರಡು ಕಂಗೊ ಳಿಸುತ್ತಿರುವುದಚ್ಚರಿಯು ದೇವಾ! ಇಹಪರಗಳೆರಡು ಸಿರಿಸಂಪದವ ನೀಡುವ ನಿನ್ನ ಮಹಿಮೆಯ ಸಾರುತಿಹವಲ್ಲವೇ ಜಗಕೆ ಆ ಶ್ರೀವೃಕ್ಷಗಳೆರಡು ಜಗದೀಶ!



## ಪ್ರಾಣಲಿಂಗಿ-ಲಿಂಗಸ್ಥಲಂ ೨೯

## ಅಂತರಾತ್ಮಸ್ಥಲ (ಪರಿ. ೧೮)

ಯದಾ ನಿರಸ್ತಂ ಜೀವತ್ವಂ ಭವೇದ್ಗುರ್ವನು ಬೋಧತಃ ।
ತದಾಂತರಾತ್ಮಭಾವೋ ಹಿ ನಿರಸ್ತಸ್ಯ ಭವೇದ್ಧ್ರುವಂ ॥

ದೇಹಸ್ಥಿತೋಪ್ಯಯಂ ಜೀವೋ ದೇಹ ಸಂಘವಿವರ್ಜಿತಃ ।
ಬೋಧಾತ್ ಪರಾತ್ಮಭಾವಿತ್ವಾದಂತರಾತ್ಮೇತಿ ಕೀರ್ತಿತಃ ॥

ಆತ್ಮಾಂತರಾಲವರ್ತಿತ್ವಾ ಜ್ಜೀವಾತ್ಮ ಪರಮಾತ್ಮನೋಃ ।
ಯೋಗಾದುಭಯ ಧರ್ಮಾಣಾಮಂತರಾತ್ಮೇತಿ ಕೀರ್ತಿತಃ ॥

ಸರ್ವೇಷಾಂ ಪ್ರೇರಕತ್ವೇನ ಶಂಭುರಂತಃ ಸ್ಥಿತಃ ಸದಾ ।
ತತ್ಪರಜ್ಞಾನಯೋಗೇನ ಯೋಗಿ ನಂದತಿ ಮುಕ್ತವತ್ ॥

(ಶ್ಲೋ. ೧೮, ೧೯, ೨೦, ೨೭).

ಅಂತರಿಕ್ಷದಲ್ಲಿನ ಸೂರ್ಯ ಚಂದ್ರರು ಕಾರ್ಮೋಡಗಳಿಂದ ಸ್ವಲ್ಪಕಾಲ ಆವರಿಸಲ್ಪಡುವಂತೆ ಅಂತಃಕರಣದಲ್ಲಿನ ಜ್ಞಾನವು ಅಜ್ಞಾನದ ವ್ಯಾಪ್ತಿಯಿಂದ ಆವರಿಸಲ್ಪಡುವುದು. ಹೃದಯದ ಈ ಕತ್ತಲೆಯನ್ನು ಶ್ರೀಗುರು ಕೃಪೆಯಿಂದ ಹೋಗಲಾಡಿಸಿ ಭವಸಂಸಾರ ಸಾಗರದ ಭಯದಿಂದ ಉದ್ಧರಿಸುವನಾದ್ದರಿಂದ

ಶಿಷ್ಯನು ಜೀವಭಾವದಿಂದ ಬಿಡುಗಡೆಯಾಗಿ, ಮಾಯಾ ವೈಖರಿಗೆ ಅತೀತನಾಗಿ ನಿಲ್ಲುವುದರಿಂದ, ಅಂತರಾತ್ಮನೆನಿಸಿರುವನು. ದೇಹದಲ್ಲಿದ್ದರೂ ಸಹ ದೇಹ ಸಂಬಂಧವಿಲ್ಲದಂತಿರುವನಾದ್ದರಿಂದ ಅಂತರಾತ್ಮನೆನ್ನುವರು. ಪರಮಾತ್ಮ ಭಾವ ಬಲಿತು ಅದರಲ್ಲಿ ಪರಿಣಾಮಿಯಾದಕಾರಣ ಅಂತರಾತ್ಮನೆಂಬುವರು. ಆತ್ಮಂಗೆ' ದೇಹದಲ್ಲಿ ದೇಹಿಯೊಬ್ಬನೆ ಯಿರುವನಾದರೂ ಅವಸ್ಥಾತ್ರಯಂಗಳಿಂದಾಗಿ, ಜೀವಾತ್ಮನನ್ನು ಆತ್ಮ, ಆಂತರಾತ್ಮ, ಪರಮಾತ್ಮನೆಂದು ಮೂರು ಬಗೆಯಿಂದ ಜ್ಞಾನಿಗಳು ವ್ಯವಹರಿಸುತ್ತಲಿರುವರು. ಹೀಗೆ ವ್ಯವಹರಿಸಿದರೂ ಸಹ, **"ಏಕಂ ಸತ್ ವಿಪ್ರಾ ಬಹುಧಾ ವದಂತಿ"** ಯೆಂದು ಶ್ರುತಿವಾಣಿ ಬೋಧಿಸುತ್ತಲಿದೆ. ದೇಹೇಂದ್ರಿಯ ವಿಷಯಾದಿಗಳಿಂದ ಹಾಲು ನೀರಿನಂತೆ ಬೆರೆತು ಬಸವಳಿದು ಬೆಂಡಾಗಿ ಬಳಲುವ ಧರ್ಮವುಳ್ಳಾತ ಜೀವಾತ್ಮನೆನಿಸಿ ಕರ್ಮಕ್ಕೆ ಬದ್ಧನಾಗಿದ್ದಾನೆ. ಸುಖ ದುಃಖಗಳಿಗೆ ಗುರಿಯಾಗದೆ-ಮಜ್ಜಿಗೆಯಲ್ಲಿ ತೇಲುವ ಬೆಣ್ಣೆ ಮುದ್ದೆ ಯಂತೆ ಅಂಟಿಯೂ ಅಂಟದಂತೆ ಯಿರುವಾತ ಆತ್ಮನೆಂದು ತಿಳಿಯಬೇಕು. ಆತ್ಮ ಪರಮಾತ್ಮರ ಮಧ್ಯೆ ಗಂಭೀರವಾಗಿ ಉಜ್ವಲ ದೀಪ್ತಿಯಿಂದ ಪ್ರಜ್ವಲಿಸುವ ಅಂತರಾಳದಲ್ಲಿರ್ಪವನಾದ್ದರಿಂದ ಅಂತರಾತ್ಮನೆನಿಸಿಹನು. ಜೀವಾತ್ಮ ಪರ ಮಾತ್ಮರ ಮಧ್ಯೇ ಉಭಯ ಧರ್ಮ ಸಂಬಂಧ ನಿರ್ಮದರಿಂದ ಆತ್ಮಂಗೆ ಅಂತ ರಾತ್ಮನೆಂಬ ಹೆಸರು ಸೂಕ್ತವಿರುವುದು. ತಾವರೆ ನೀರಿನಲ್ಲಿ ಇದ್ದರೂ ನೀರಿನ ಸೋಂಕಿಲ್ಲದಂತೆ ಯಿರುವುದು ತುಪ್ಪ ತೈಲಗಳು ನಾಲಿಗೆಗೆ ಸೋಂಕದಿರು ವಂತೆ ಅಂತರಾತ್ಮನು ದೇಹೇಂದ್ರಿಯಾದಿ ವಿಷಯಗಳಿಂದ ಬಾಧಿತನಾಗದೆ ಕಿಂಚಿತ್ತು ಅಂಟದೆ ನಿರ್ಲಿಪ್ತನಾಗಿರ್ಪನು. ಅಂತರಾತ್ಮ ಶಿವನಿಂದ ಭಿನ್ನನಲ್ಲ. ಶಿವನು ಸಮಸ್ತ ಪ್ರಾಣಿಗಳಿಗೆ ಪ್ರೇರಕಶಕ್ತಿ ಸ್ವರೂಪನಾಗಿ ಸಮಸ್ತ ಪ್ರಾಣಿ ಗಳ ಹೃದಯದಲ್ಲಿ ಅಂತರ್ಯಾಮಿಯಾಗಿರುವುದರಿಂದ, ಶಿವಯೋಗಿಯು ಸಚ್ಚಿದಾನಂದಸ್ವರೂಪಾನುಭವದ ಪರಾಕಾಷ್ಠೆಯಲ್ಲಿ ನಲಿದಾಡುವನು. ಅಂಗ ವಿದೆ. ಲಿಂಗವಿರುವಲ್ಲಿ ಕುರುಹುವಿದೆ. ಆ ಲಿಂಗದ ಕುರುಹನರಿದು ಲಿಂಗಸಂಗಿ ಯಾದವ ಪ್ರಾಣಲಿಂಗಿಯೆನಿಸಿಹನು. ಇಷ್ಟಲಿಂಗ ಭಾವಲಿಂಗಗಳಿಗೆ ಮಧ್ಯ ಗತವಾಗಿ ಹೃದಯ ಕುಹರದಲ್ಲಿ ಪ್ರಜ್ವಲಿಸುವ ಪ್ರಾಣಲಿಂಗ ಮಧ್ಯ ಮಣಿ ನ್ಯಾಯದಂತೆ ಇರುವ ಕಾರಣ, ಅಂತರಾತ್ಮವೆನಿಸಿರುವುದು. ಅಂತಃಕರಣದಲ್ಲಿ ಭಕ್ತಿಯಿಂದ ಪ್ರೇರಿತವಾಗಿ ವಿಕಸಿತವಾದ ಸದ್ಗುಣಗಳೇ ಪ್ರಾಣಲಿಂಗದ ಪೂಜಾ ದ್ರವ್ಯಗಳು. ಪ್ರಾಣಲಿಂಗಿ ಸದ್ಗುಣಗಳೆಂಬ ಪುಷ್ಪಗಳಿಂದ ಅಂತರಾತ್ಮನಾದ ಪ್ರಾಣ

ಲಿಂಗವನ್ನು ಸದಾ ಪೂಜಿಸುತ್ತಿರುವನು. ಆಚಾರಲಿಂಗ ಭಕ್ತಂಗೂ, ಗುರುಲಿಂಗ ಮಾಹೇಶ್ವರಂಗೂ, ಶಿವಲಿಂಗ ಪ್ರಸಾದಿಗೂ ಪೂಜ್ಯ ಸ್ಥಾನವಾಗಿರುವಂತೆ, ಪ್ರಾಣ ಲಿಂಗಿಗೆ ಜಂಗಮಲಿಂಗ ಪೂಜ್ಯವೆನಿಸಿರುತ್ತೆ. ಹೆಚ್ಚೇನು? ಜಂಗಮಲಿಂಗವೇ ಪ್ರಾಣಲಿಂಗಿಯ ಸಾಹಿತ್ಯ ಸೌರಭ. ಪ್ರಾಣಲಿಂಗಿ ಅಂತರ್ಮುಖಿ, ಅಂತರಾತ್ಮನ ಉಪಾಸಕನು. ಇಂತಪ್ಪ ಉಪಾಸನೆಯಿಂದ ಪ್ರಾಣಲಿಂಗಿಯು ಕ್ರಮೇಣ ಪರಮಾತ್ಮನ ಉಪಾಸನೆಗೆ ಅರ್ಹನೆನಿಸುವನು.



## ಪ್ರಾಣಲಿಂಗಿ-ಲಿಂಗಸ್ಥಲ ೩೦
## ಪರಮಾತ್ಮ ಸ್ಥಲಂ (ಪರಿ. ೧೮)

**ನಿರ್ಧೂತೇ ತತ್ತ್ವಬೋಧೇನ ಮಲೇ ಸಂಸಾರಕಾರಣೇ।**
**ಸಾಮರಸ್ಯಾತ್ ಪರಾತ್ಮಸ್ಥಃ ಪರಮಾತ್ಮಾಯ ಮುಚ್ಯತೇ ॥**

**ಸರ್ವೇಷಾಮಾತ್ಮ ಭೇದನಾಮುತ್ಕೃಷ್ಟತ್ವಾತ್ ಸ್ವತೇಜಸಾ ।**
**ಪರಮಾತ್ಮಾ ಶಿವಃ ಪ್ರೋಕ್ತಃ ಸರ್ವಗೋಽಪಿ ಪ್ರಕಾಶವಾನ್ ॥**

**ಯಸ್ಮಿನ್ ಜ್ಯೋತಿರ್ಗಣಾಃ ಸರ್ವೇ ಸ್ಫುಲಿಂಗಾ ಇವ ಪಾವಕಾತ್ ।**
**ಉತ್ಪದ್ಯ ವಿಲಯಂ ಯಾಂತಿ ತದ್ರೂಪಂ ಪರಮಾತ್ಮನಃ ॥**

**ಯಸ್ಮಿನ್ ಸಮಸ್ತ ತತ್ತ್ವಾನಿ ಕಲ್ಲೋಲಾ ಇವವಾರಿಧೌ ।**
**ಸಂಭೂಯ ಲಯಮಾಯಾಂತಿ ತದ್ರೂಪಂ ಪರಮಾತ್ಮನಃ ॥**

**ವಿಶ್ವತೋ ಭಾಸಮಾನೋಽಪಿ ವಿಶ್ವಮಾಯಾವಿಲಕ್ಷಣಃ ।**
**ಪರಮಾತ್ಮಾ ಸ್ವಯಂಜ್ಯೋತೀರೂಪೋ ಜೀವಾತ್ಮನಾಂ ಭವೇತ್ ॥**

(ಶ್ಲೋ. ೨೮, ೨೯, ೩೧, ೩೨, ೩೫)

ಪರಮಾತ್ಮಸ್ಥಲ ಪರಮೋತ್ಕೃಷ್ಟವೆನಿಸಿದೆ. ದೇಹ ಧರ್ಮಕ್ಕೆ ಅತೀತ ವಾಗಿ ಆತ್ಮ ಎನಿಸಿ, ಜೀವಗುಣಗಳಿಗೆ ದೂರವಾಗಿ ಅಂತರಾತ್ಮವೆನಿಸಿದ ಪರ

ವಸ್ತುವೇ ಪರಮಾತ್ಮನೆಂದು ನಿರಂತರ ಸ್ವಯಂಜ್ಯೋತಿಯೆಂಬ ಪ್ರಕಾಶಮಾನ ವಾಗಿರುವನು. ಶ್ರೀಗುರೂಪದೇಶದ ಪ್ರಭಾವದಿಂದ, ಆಣವಾದಿ ಮಲತ್ರಯಂಗಳ ತೊರೆದು, ಭವ ಭವಾಂತರ ಭಯವ ಸಂಪೂರ್ಣವಾಗಿ ನಿರ್ಣಾಮಗೊಳಿಸಿ ಪರಮಾತ್ಮನ ಅಭಯಪ್ರದವನ್ನಾಶ್ರಯಿಸಿ, ಅನಂದೋ ಬ್ರಹ್ಮನೆನಿಸಿದ ಅಂತರಾತ್ಮನೇ ಪರಮಾತ್ಮನೆಂದರಿಯಬೇಕು. ಸ್ವಯಂಜ್ಯೋತಿ ಪರಂಜ್ಯೋತಿ, ಜ್ಯೋತಿಷಾಂ ಜ್ಯೋತಿ ಪರಮಾತ್ಮ. ಅನಂತ ಅಖಂಡಾದ್ವಿತಿಯ ಬ್ರಹ್ಮಾಂಡ ಕೋಟಿಗಳು ಪರಮಾತ್ಮನ ಕಿರಣ ರಾಜಿಗಳೆನಿಸಿವೆ, ಇವೆಲ್ಲಾ ಪುನಃ ಅವನ ಲೀಲೆಯಿಂದಾಗಿ, ಸಮುದ್ರದಿಂದುದ್ಭವಿಸಿದ ನೊರೆ, ತೆರೆ, ಬುದ್ಬುದ ಅಲೆ, ತರಂಗಾದಿಗಳು ಸಮುದ್ರದಲ್ಲೇ ಪೂರ್ಣ ವಿರಮಿಸುವಂತೆ, ದೃಶ್ಯಾದೃಶ್ಯವಾದೀ ಅನಂತ ಬ್ರಹ್ಮಾಂಡಕೋಟಿಗಳು ಪರಮಾತ್ಮನಲ್ಲೇ ನಿಶ್ಶೇಷವಾಗಿ ಅಂತರ್ಗತ ವಾಗುವುವು. ಕಾಡ್ಗಿಚ್ಚಿನಲ್ಲಿ "ವಿಸ್ಫುಲಿಂಗಾಃ" ಅನಂತ ಕಿಡಿಗಳು ಹುಟ್ಟಿ ಮತ್ತಾಕಿಚ್ಚಿನಲ್ಲೇ ಪೂರ್ಣ ಅಡಗುವಂತೆ, ಸ್ಥಾವರ ಜಂಗಮ ಬ್ರಹ್ಮಾಂಡ ಕೋಟಿಗಳು ಉದಿಸಿ, ಬೆಳೆದು, ನಾನಾತ್ಮಕವಾಗಿ ವ್ಯಾಪಿಸಿ, "ವಿಶ್ವೋತ್ತರೋತ್ತರ ವಿಚಿತ್ರಾಯಮಾನವಾಗಿ ಪರಿಶೋಭಿಸಿ, ಅಂತ್ಯದಲ್ಲಿ ಯಾವ ಪರಮಾತ್ಮನ ಚಿದ್ಘನ ತತ್ವದಲ್ಲಿ ವಿಲೀನವಾಗುವುವೋ,

**ಯತೋ ವಾ ಇಮಾನಿ ಭೂತಾನಿ ಜಾಯಂತೇ ।**
**ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂ ವಿಶಂತಿ ।**
**ತದ್ವಿಜಿಜ್ಞಾಸ್ವ ತದ್‌ಬ್ರಹ್ಮ ॥**

ಎಂಬ ಯಜುರ್ವೇದ ಮಂತ್ರವು ಮೇಲುಕ್ತವಾದ ಘನತತ್ವವನ್ನೇ ಸಾರುತ್ತಲಿದೆ.

**ಯಥಾ ಸು ದೀಪ್ತಾತ್ ಪಾವಕಾದ್ವಿ ಸ್ಫುಲಿಂಗಾಃ ।**
**ಸಹಸ್ರಶಃ ಪ್ರಭವಂತೇ ಸ ರೂಪಾಃ ॥**
**ತಥಾಕ್ಷರಾ ದ್ವಿವಿಧಾಃ ಸೌಮ್ಯ ಭಾವಾಃ ।**
**ಪ್ರಜಾಯಂತೇ ತತ್ರ ಚೈವಾಪಿ ಯಂತಿ ॥**

ಸೂರ್ಯಮಂಡಲದಿಂದ ಸಹಸ್ರ ಸಹಸ್ರ ಕಿರಣಗಳು ಹೊರಹೊಮ್ಮಿ ಪುನಃ ಅವನಲ್ಲೇ ವಿಲೀನವಾಗುವಂತೆ ಪರಮಾತ್ಮನೆಂಬ ಅಖಂಡಾ ದ್ವಿತೀಯ ಚಿಜ್ಯೋ

ತಿರ್ಮಂಡಲದಿಂದ "ವಿಸ್ಫುಲಿಂಗಾಃ" ಅಂದರೆ, ಸೃಷ್ಟಿ ಕ್ರಿಯೆಯ ಕಿರಣಗಳು ಪರಮಾತ್ಮನೆಂಬ ಚಿದಾದಿತ್ಯಮಂಡಲದಿಂದ ಛಿಮ್ಮಿ ಸರ್ವತ್ರ ಹರಡುವಂತೆ, "ತಥಾಕ್ಷರಾತ್ ಸಂಭವತೀ ಹ ವಿಶ್ವಂ" ಅಂದರೆ, ಅಕ್ಷರಸ್ವರೂಪಿಯಾದ ಪರಮಾತ್ಮನಿಂದ ಉದಿಸಿದ ಈ ಅಖಂಡ ಜಗತ್ತು ಅಂತ್ಯದಲ್ಲಿ ನದಿಗಳು ಸಮುದ್ರದಲ್ಲಿ ಸಂಗಮವಾಗಿ ತಮ್ಮ ಪೃಥಕ್ ನಾಮರೂಪಗಳನ್ನು ಕಳೆದು ಸಮುದ್ರವೇ ಆಗುವಂತೆ, ಸಂಕಲ್ಪ ಮಾತ್ರದಿಂದ ಉದಿಸಿದ ಅಖಿಲಾಂಡಕೋಟಿ ಬ್ರಹ್ಮಾಂಡಗಳೆಲ್ಲಾ ಯಾರ ಬೃಹದ್ ಗರ್ಭದಲ್ಲಿ, ಸಾಸಿವೆ ಪ್ರಮಾಣದಲ್ಲಿ ಅಡಗಿ ಕಣ್ಮರೆಯಾಗುವುವೋ ಅಂತಹ

**ಅಣೋರಣೀಯಾನ್ | ಮಹತೋ ಮಹೀಯಾನ್ ||**

ಎಂಬ ಪರಶಿವ ಬ್ರಹ್ಮ ಪರಮಾತ್ಮನೆನಿಸಿಹನು. ಶಿವನು ತನ್ನ ಅಪ್ರತಿಹತ ದಿವ್ಯ ತೇಜಸ್ಸಿನಿಂದ ಆತ್ಮರುಗಳಲ್ಲಿ ಪರಮೋತ್ಕೃಷ್ಟನಾಗಿರುವುದರಿಂದ **ಪರಮಾತ್ಮ ಪರಶಿವನೆಂದು** ಸ್ತುತ್ಯನಿರುವನು.

**ಸ ಬ್ರಹ್ಮಾ, ಸ ಶಿವಃ, ಸ್ಸೇಂದ್ರಃ, ಸ್ಸೋಕ್ಷರಃ, ಪರಮಸ್ವರಾಟ್ ||**

ಎಂದು ಶೃತಿಯು ಮೇಲುಕ್ತವಾದ ಅಂಶವನ್ನೇ ಪ್ರತಿಪಾದಿಸುತ್ತಲಿದೆ.

**ಪುರುಷನ ಶರೀರದಿಂ ಪುಟ್ಟಿದವು ಲೋಕಗಳ್ |**
**ಶಿರಸ್ಸಿಂ ದ್ಯುಲೋಕಂ | ಶ್ರೋತ್ರದಿಂ ದಿಕ್ಕುಗಳ |**
**ಹೊರಹೊಮ್ಮಿತಂತರಿಕ್ಷ ಮುದವನ ಹೊಕ್ಕುಳಿಂ |**
**ಧರಣಿಮಂಡಲ ಪುಟ್ಟಿಹುದು ಪಾದಂಗಳಿಂ ||**

ಪರಮಾತ್ಮನ ಪವಿತ್ರ ಸ್ವರೂಪದಿಂ ಅಖಂಡ ವಿಶ್ವ ಉದ್ಭವಿಸಿದುದಾಗಿ ಪುರುಷ ಸೂಕ್ತ ಬೋಧಿಸುತ್ತಲಿದೆ. ವಿಶ್ವಮಾಯಾ ಲಕ್ಷಣನಾದ ಪರಮಾತ್ಮನು "ಏಕದಾ ಬಹುಧಾಚೈವ ಭೂತೇ ಭೂತೇ ವ್ಯವಸ್ಥಿತಃ" ಎಂಬಂತೆ

**ಇದು ಎಲ್ಲಮುಂ ಪರಮ ಪುರುಷನಾ ಮಹಿಮೆಯೇ |**
**ಇದು ಎಲ್ಲಕುಂ ಪರಮ ಪುರುಷನುರೆ ಯಧಿಕನೇ |**

**ಇದು ಎಲ್ಲಮುಂ ಪರಮನ ಚತುರ್ಥಾಂಶಂ ।**
**ಸದಮಲಮಮೃತಂ ದಿವಿಯೊಳುಳಿದ ಮುಪ್ಪಾಗಂಶಂ ॥"**

ಧರೆಯೊಳಿಳಿದ ಚತುರ್ಥಾಂಶಪಾದ ಅವಿದ್ಯಾ ಪಾದವೆನಿಸಿದೆ. ಊರ್ಧ್ವ ಲೋಕಂಗಳಲ್ಲಿ ಅಖಂಡವಾಗಿ ವಿಸ್ತರಿಸಿರುವ ಮೂರು ದಿವ್ಯಪಾದಗಳು, ಸುವಿದ್ಯಾ ಪಾದ, ಆನಂದ ಪಾದ, ತುರೀಯ ಪಾದಂಗಳೆನಿಸಿ ಸತತ ವಿರಾಜಿತವಾಗಿವೆ. ಪರಮಾತ್ಮನ ಮಹಿಮೆ ಅಪಾರ, ಅನಂತ, ಅಚಿಂತ್ಯ ಅಪ್ರಮೇಯ ವಿರುತ್ತೆ.



**ಸುಪ್ರಭಾತ :—**

ವಿಶ್ವವಂದ್ಯ ನಿನ್ನ ಆಲಯದ ಸುತ್ತುರುಳಿ ಪೊಂದುವರಿಷ್ಟವನು ನತ ಜನರು. ಗರಲಪುರನಾಥ ನಿನ್ನ ನಿಲಯದ ಗೋಪುರವ ನೋಡಿ ಹಿಗ್ಗುವರು ಜನರು. ಒಳಹೊಕ್ಕು ನಿನ್ನ ಪರಿವಾರ ಭಕ್ತರಂ ನಮಿಸಿ, ನಿನ್ನ ದರ್ಶನಕೆ ಹಾತೊರೆಯುವರೀ ಧನ್ಯರು. ನಮಿಸಿದವರ ಶೋಕವಂ ಹರಿಸಿ ಹರಸುವೆ ನೀನಿಲ್ಲಿ. ಹರ ಪಾರ್ವತೀಶ, ನಿತ್ಯ ನಿರ್ಮಲ ತೀರ್ಥ. ಸಲಿಲವ ತುಂಬಿ ರಜತ ಕುಂಭಗಳು ಗಜರಾಜ ಭುಜದಲ್ಲಿ ಸಿದ್ಧವಾಗಿಹವು ನಿನಗಾಗಿ. ಕಪಿಲೆಯಲಿ ಮಿಂದು ಮಡಿ ಯುಟ್ಟು ನಿತ್ಯ ಕರ್ಮವನೆಸಗಿ ಪೂರ್ಣ ಕಲಶವ ಪಿಡಿದು ನಿನ್ನನಭಿಷೇಕಿಸಲು ಕಾದಿಹರು ವೇದವಿತ್ತಮರು ...

---

## ಪ್ರಾಣಲಿಂಗಿ-ಲಿಂಗಸ್ಥಲಂ ೩೧
## ನಿರ್ದೇಹಾಗಮಸ್ಥಲ (ಪರಿ. ೧೮)

**ದೇಹಿನೋಽಪಿ ಪರಾತ್ಮತ್ವ ಭಾವಿನೋ ನಿರಹಂಕೃತೇಃ ।**
**ನಿರಸ್ತ ದೇಹ ಧರ್ಮಸ್ಯ ನಿರ್ದೇಹಾಗಮ ಉಚ್ಯತೆ ॥**

**ಶಿವೋಽಹಮಿತಿ ಯಸ್ಯಾಸ್ತಿ ಭಾವನಾ ಸರ್ವಗಾಮಿನೀ ।**
**ತಸ್ಯ ದೇಹೇನ ಸಂಬಂಧಃ ಕಥಂ ಸ್ಯಾದಮಿತಾತ್ಮನಃ ॥**

**ಗಲಿತೇ ಕೃತ್ರಿಮಾಹಂತ್ವೇ ಸಂಸಾರ ಭ್ರಮಕಾರಣೇ ।**
**ಪರಾಹಂತಾಂ ಪ್ರವಿಷ್ಟಸ್ಯ ಕುತೋದೇಹಃ ಕುತೋ ರತಿಃ ॥**

ಅಪರಿಚ್ಛೇದ್ಯಮಾತ್ಮಾನಂ ಚಿದಂಬರಮಿತಿ ಸ್ಮರನ್ ।
ದೇಹಯೋಗೇಪಿ ದೇಹಸ್ಥೈರ್ವಿಕಾರೈರ್ನ ವಿಲಿಪ್ಯತೇ ॥

ಅಖಂಡ ಸಂವಿದಾಕಾರ ಮದ್ವಿತೀಯಂ ಸುಖಾತ್ಮಕಂ ।
ಪರಮಾಕಾಶಮಾತ್ಮಾನಂ ಮನ್ವಾನಃ ಕುತ್ರ ಮುಹ್ಯತಿ ॥

ಭೇದಬುದ್ಧಿಃ ಸಮಸ್ತಾನಾಂ ಪರಿಚ್ಛೇದಸ್ಯ ಕಾರಣಂ ।
ಅಭೇದಬುದ್ಧೌ ಜಾತಾಯಾಂ ಪರಿಚ್ಛೇದಸ್ಯ ಕಾ ಕಥಾ ॥

(ಶ್ಲೋ. ೩೬, ೩೭, ೩೮, ೪೦, ೪೧, ೪೩)

ಅಂಗಸಂಗಿಗೆ ಲಿಂಗಸಂಗವಿಲ್ಲ – ಲಿಂಗಸಂಗಿಗೆ ಅಂಗಸಂಗವಿಲ್ಲ ನೋಡಾ ॥ ದೇಹವಿದ್ದೂ ದೇಹಾಭಿಮಾನವಿಲ್ಲದ ಭಾವ ನಿರ್ದೇಹವೆನಿಸಿದೆ— "ಸದಾಕಾಲ ಪರಮಾತ್ಮನ ಚಿಂತೆಯಲ್ಲಿ ಮುಳುಗಿರ್ದು, ನಾನು ನನ್ನದು ಎಂಬ ಅಹಂಭಾವವಿಲ್ಲದ, ದೇಹ ಧರ್ಮವನ್ನು, ಶಿವಭಾವ ತನ್ನೊಳಗೆ ಪೂರ್ಣ ಆಳವಟ್ಟ ಬಳಿಕ ದೇಹವಿದ್ದರೂ ದೇಹಧರ್ಮ ಅವನಿಗೆಲ್ಲಿಯದು. ಶರೀರಾಭಿಮಾನದಿಂದ ಸಂಸಾರವೆಂಬ ಕರಡಿಯ ಹಿಡಿತಕ್ಕೆ ಮಾನವ ಸಿಕ್ಕಿಬಿದ್ದು ನರಳುವನು. ಶರೀರ ಭಾವವೆಂಬ ಬೀಜವ ಶಿವಜ್ಞಾನಾಗ್ನಿಯಿಂದ ಪೂರ್ಣ ಹುರಿದು ದಗ್ಧಗೊಳಿಸಿದ ನಂತರ, ಸಂಸಾರಾಂಕುರ ಚಿಗುರಲು ಯಂತು ಸಾಧ್ಯ? ಶರೀರಾಹಂಭಾವ ನಷ್ಟವಾದ ಬಳಿಕ, ಅಲ್ಲಿ ಪರಾಹಂಭಾವ–ನಾನೇ ಶಿವನೆಂಬ ಭಾವ, ಖಚಿತವಾಗಿ ತಲೆದೋರಿದಾಗ ನಿರ್ದೇಹಾವಸ್ಥೆ ಸ್ಫೂರ್ತಿಗೊಳ್ಳುವುದು. ಗಂಭೀರವಾದ ಶಿವ ಚಿಂತನೆಯಲ್ಲಿ ಮುಳುಗಿರ್ಪ ಅವನ ಶುದ್ಧಾಂತರಂಗಕ್ಕೆ, ತನು ಚಿಂತನೆ ದೇಹಭಾವ ಎಲ್ಲಿಯದು?

ಓಂ, ಅಯಮಾತ್ಮ । ಬ್ರಹ್ಮ ಅತ್ಮೈ ವೇದಂ ಸರ್ವಂ ।
ಬ್ರಹ್ಮೈ ವೇದಮಿದಂ ಸರ್ವಂ ॥

ಎಂಬುದಾಗಿ ಸತತ ಮನಸ್ಸಿನಲ್ಲಿ ಅನುಸಂಧಾನ ಮಾಡುತ್ತಿರುವ ಶಿವಶರಣನಿಗೆ ದೇಹವಿದ್ದರೂ, ದೇಹಾಭಿಮಾನವಿಲ್ಲವಾಗಿ ನಿಜಕ್ಕೂ ಆತ ನಿರ್ದೇಹಿ ಹೌದು. ಶರೀರದಲ್ಲಿ ಶಿವಯೋಗಿಗೆ ಪ್ರೀತಿ, ಆಸಕ್ತಿ, ಚಿಂತನ ಮಂತನಗಳಾಗಲಿ, ಇಂದ್ರಿಯ ವಿಕಾರಗಳೇನೂ ಸರ್ವಥಾ ಇರುವುದಿಲ್ಲವಾಗಿ ನಿರ್ದೇಹಿಯೆನಿಸಿರುವನು. ಮಹಾ

ತ್ಮನಾದ ಶಿವಯೋಗಿಯು ತನ್ನನ್ನು ಅಖಂಡಾಕಾರವಾದ ಅನವಚ್ಛಿನ್ನ ಚಿದಾಕಾಶ, ಚಿಜ್ಜ್ಯೋತಿ ರೂಪದಲ್ಲಿ ಕಾಣುತ್ತಿರುವನಾದ್ದರಿಂದ, ದೇಹ ದಗ್ಧ ಪಡಿಸಿದಂತೆ, ಕಾಣುವುದರಿಂದ. ಇಂದ್ರಿಯಗಳಾಗಲಿ, ವಿಷಯಾದಿಗಳಾಗಲಿ, ಲಿಪ್ತವಾಗುವುದಿಲ್ಲ. ತನ್ನನ್ನು ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡಾ ದ್ವಿತೀಯ ಸ್ವರೂಪಿಯೆಂದು ಅನುಸಂಧಾನ ಮಾಡುತ್ತಿರುವ ಶರಣನಿಗೆ ಮೋಹ ವೆಲ್ಲಿಯದು, ದೇಹವೆಲ್ಲಿಯದು?. ಭೇದಬುದ್ಧಿ ಭಿನ್ನತೆಗೆ ಕಾರಣ.

ಅಭೇದ ಬುದ್ಧಿ ಅಂದರೆ ; **"ಸರ್ವಂ ಖಲ್ವಿದಂ ಬ್ರಹ್ಮ ।**
**ವಾಸುದೇವಃ ಸರ್ವಮಿತಿ । ಈಶಾವಾಸ್ಯಮಿದಂ ಸರ್ವಂ" ॥**

ಎಂಬ ನಿಖರತೆಯಿಂದಾಗಿ ಶಿವಯೋಗಿ ನಿರ್ದೇಹಿ ಯೆನಿಸಿರುವನು.

**ಸಮಸ್ತ ಜಗದಾತ್ಮಾಪಿ ಶಂಕರಃ ಪರಮೇಶ್ವರಃ ।**
**ಭಕ್ತಾನಾಂ ಹೃದಯಾಂಭೋಜೇ ವಿಶೇಷೇಣ ವಿರಾಜತೇ ॥**

ಹೃನ್ಮಂದಿರದಲ್ಲಿ ನೆಲಸಿ ಪ್ರಜ್ವಲಿಸುವ ಪರಮೇಶ್ವರನಲ್ಲಿ ತಲ್ಲೀನನಾದ ಶಿವಶರಣನು ಲಿಂಗಕಾಯ, ಶಿವಕಾಯವಾದನಂತರ ಆತ ನಿರ್ದೇಹಿಯೆನಿಸುವನು.

---

## ಪ್ರಾಣಃ-ಲಿಂಗಸ್ಥಲ ೩೨

## ನಿರ್ಭಾವಾಗಮಸ್ಥಲಂ (ಪರಿ. ೧೮)

**ವ್ಯತಿರೇಕಾತ್ ಸ್ವರೂಪಸ್ಯ ಭಾವಾಂತರ ನಿರಾಕೃತೇಃ ।**
**ಭಾವೋ ವಿಕಾರನಿರ್ಮುಕ್ತೋ ನಿರ್ಭಾವಾಗಮ ಉಚ್ಯತೇ ॥**

**ಅಹಂ ಬ್ರಹ್ಮೇತಿ ಭಾವಸ್ಯ ವಸ್ತುದ್ವಯ ಸಮಾಶ್ರಯಃ ।**
**ಏಕೀ ಭೂತಸ್ಯ ಚಿದ್ವ್ಯೋಮ್ನಿ ತದಭಾವೋ ವಿನಿಶ್ಚಿತಃ ॥**

**ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮಾನ ಸಾಧ್ವನಃ ।**
**ವಿಲೀನಾತ್ಮಾಮಹಾಯೋಗೀ ಕೇನ ಕಿಂ ವಾಪಿ ಭಾವಯೇತ್ ॥**

ಅವಿಶುದ್ಧೇ ವಿಶುದ್ಧೇ ವಾ ಸ್ಥಲೇ ದೀಪ್ತಿರ್ಯಥಾ ರವೇಃ ।
ಪತತ್ಯೇವಂ ಸದಾದ್ವೈತೀ ಸರ್ವತ್ರ ಸಮವೃತ್ತಿಮಾನ್ ॥
ನ ಬಿಭೇತಿ ಜರಾಮೃತ್ಯೋರ್ನ ಕ್ಷುಧಾಯಾ ವಶಂ ವ್ರಜೇತ್ ।
ಪರಿಪೂರ್ಣ ನಿಜಾನಂದ ಸಮಾಸ್ವಾದಾನ್ಮಹಾಸುಖೀ ॥

(ಶ್ಲೋ. ೪೪, ೪೫, ೪೭, ೪೮, ೪೯)

ಅಲೆಗಳಿಲ್ಲದ ಸಮುದ್ರದಂತೆ ವಾಯುವಿಲ್ಲದ ಆಕಾಶದಂತೆ, ಭಾವವಿಲ್ಲದಾತಂಗೆ ಬಯಕೆಗಳಿಲ್ಲ. ದೇಹವಿಲ್ಲದಾತಂಗೆ ಭಾವವಿಲ್ಲ. ಬಯಕೆ ಭಾವಗಳಿಲ್ಲದ ನಿರಂಜನನಿಗೆ (ಅಂಗರಹಿತಂಗೆ) ತನಗಿಂತ ಬೇರೊಂದು ವಸ್ತುವಿಲ್ಲ, ಬೇರೊಂದು ಭಾವವಿಲ್ಲ. ಭಾವ ವಿಕಾರ ವೆಂಬುದಿಲ್ಲ. ಇದರಿಂದಾಗಿ ನಿರ್ಭಾವಾಗಮಸ್ಥಿತಿಯಲ್ಲಿ ತಾನಿರಬಲ್ಲ. ನಾನು ಬೇರೆ, ಶಿವನು ಬೇರೆ, ಜಗತ್ತು ಬೇರೆ ಯೆಂಬ ಭಾವನೆಯನ್ನು ನಿರಾಕರಿಸುವುದರಿಂದಲೂ, ಇಂದ್ರಿಯ ವಿಕಾರಗಳಿಲ್ಲದ ಮನೋನಿರ್ಮಲ ಸ್ಥಿತಿಯೇ ನಿರ್ಭಾವಾಗಮವೆಂದರಿಯಬೇಕು. ನಿರ್ಭಾವದಲ್ಲಿ ನಿಬ್ಬೆರಗಾದಾತಂಗೆ "ಅಹಂಬ್ರಹ್ಮ" ವೆಂಬ ಭಾವವಿರುವುದಿಲ್ಲ. ಯಾಕೆಂದರೆ 'ಅಹಂ' ಯೆಂಬುದೊಂದು "ಬ್ರಹ್ಮ" ಯೆಂಬುದೊಂದು ವಸ್ತುದ್ವಯವೇರ್ಪಡುತ್ತೆ, ನಿರ್ಭಾವದಿಂದ ಚಿದಾಕಾಶದಲ್ಲಿ ಸಮರಸವಾದ ಬಳಿಕ ಅಹಂಬ್ರಹ್ಮವೆಂಬ ಭಾವಕ್ಕೆಡೆಯಿಲ್ಲಿಯದು. ಇಂತಪ್ಪ ಭಾವವಿಲ್ಲದ ಬಳಿಕ, ನಿರ್ಭಾವಾಗಮವೆನಿಸಿತ್ತು. ಸೂರ್ಯಪ್ರಕಾಶವು ಇಷ್ಟಾನಿಷ್ಟವಾದ ಎಲ್ಲಾ ಪದಾರ್ಥಗಳಮೇಲೂ ಏಕಪ್ರಕಾರವಾಗಿ ಹೇಗೆ ಬೀಳುತ್ತಿರುವುದೋ, ಅದರಂತೆ ಶಿವಾದ್ವೈತಸಿದ್ಧಾಂತದ ವ್ರತಧಾರಿ, ಉತ್ಕೃಷ್ಟ ಕನಿಷ್ಠವೆಂಬ ಭಾವರಹಿತನಾಗಿ ಸಮಾನ ಬುದ್ಧಿಯುಳ್ಳವನಾಗಿರ್ಪನು. ನಿರ್ಭಾವಯೋಗಿ, ಮುಪ್ಪಿಗೆ ಅಂಜುವುದಿಲ್ಲ, ಮುಪ್ಪಿಗೆ ಅಳುಕುವುದಿಲ್ಲ. ಹಸಿವಿನ ಹಂಗಿಲ್ಲ ಮತ್ತಿನ್ಯಾವ ಕೊರತೆಯಿಲ್ಲ ಈತಂಗೆ. ಭಾವಬಂಧನವಿಲ್ಲದ ನಿರ್ಭಾವಿಗೆ ಭವ ಭಯದ ಹಂಗೇಕೆ.

## ಲಿಂಗಸ್ಥಲ ೩೩

## ನಷ್ಟಾಗಮ ಸ್ಥಲಂ (ಪರಿ. ೧೮)

ಭೇದಶೂನ್ಯೇ ಮಹಾಬೋಧೇ ಜ್ಞಾತ್ರಾದಿತ್ರಯ ಹಾನಿತಃ ।
ಜ್ಞಾನಸ್ಯ ನಷ್ಟಭಾವೇನ ನಷ್ಟಾಗಮ ಇಹೋಚ್ಯತೇ ॥

ಅದ್ವೈತವಾಸನಾವಿಷ್ಟ ಚೇತಸಾಂ ಪರಯೋಗಿನಾಂ ।
ಪಶ್ಯತಾಮಂತರಾತ್ಮಾನಂ ಜ್ಞಾತೃತ್ವಂ ಕಥಮನ್ಯಥಾ ॥

ಅಕರ್ತಾಹಮನೇತ್ತಾಹ ಮದೇಹೋಹಂ ನಿರಂಜನಃ ।
ಇತಿ ಚಿಂತಯತಃ ಸಾಕ್ಷಾತ್ ಸಂವಿದೇವ ಪ್ರಕಾಶತೇ ॥

ಮಹಾ ಸತ್ತಾ ಮಹಾಸಂವಿ ದ್ವಿಶ್ವರೂಪಾ ಪ್ರಕಾಶತೇ ।
ತದ್ವಿನಾ ನಾಸ್ತಿ ವಸ್ತ್ವೇಕಂ ಭೇದಬುದ್ಧಿಂ ವಿಮುಂಚತಃ ॥

(ಶೋ. ೪೪, ೫೭-೪೯)

ಜ್ಞಾತೃಜ್ಞಾನ, ಜ್ಞೇಯಗಳೆಂಬ, ತ್ರಿಪುಟಿ ಧರ್ಮದಿಂದ ಅಲಿಪ್ತನಾಗಿ, ಭೇದಭಾವವ ನೀಗಿ ತಾನೇ ತಾನಾಗಿ ರಂಜಿತನಾದ ಮಹಾಯೋಗಿಗೆ, ಆಗಮಾಮ್ನಾಯಾದಿಗಳಿಂದ ಆಗಬೇಕಾದುದೇನಿದೆ. ವೇದಾಗಮಾದಿಗಳೆಲ್ಲ ಶಿವಶರಣನ ಪಾಲಿಗೆ ನಷ್ಟಾಗಮವೆನಿಸಿವೆ. ಎಂದರಿಯಬೇಕು. "ಸಜಾತೀಯ ವಿಜಾತೀಯ ಸ್ವಗತವಿಗತ ಭೇದರಹಿತ ಸ್ಥಿತಿ ಅಂದರೆ ಎಲ್ಲವನ್ನು ಶಿವಮಯವಾಗಿ ಸ್ವಾನುಭೂತಿಯಲ್ಲಿ ಕಂಡನುಭವಿಸಿ ಆನಂದೋ ಬ್ರಹ್ಮನೆನಿಸಿದ ಶಿವಯೋಗಿ ನಷ್ಟಾಗಮ ಸ್ಥಲ ಸಂಪನ್ನನೆನ್ನಲಾಗಿದೆ. ಭಿನ್ನಜ್ಞಾನ ನಷ್ಟವಾದ ಕಾರಣ ನಷ್ಟಾಗಮ ಸ್ಥಲವಿದು. ನಿಜಶರಣ ಸಿಂಧುವಿನೊಳಗಣ ಬಿಂದುವಿನಂತಿದ್ದಾನೆ. ಮನಸ್ಸಿಗೆ ಶಾಂತಿ ಬುದ್ಧಿಗೆ ಕ್ರಾಂತಿಯನ್ನು ಬೀರಿ, ನಷ್ಟಾಗಮಸ್ಥಲದಲ್ಲಿನ ಶಿವಯೋಗಿ ಚಿತ್ಕಳಾಯೋಗ ಭರಿತನಾಗಿ ಶಿವಾನುಭವ ಮಕರಂದದಿಂದ ತುಂಬಿ ಸಂಪ್ರೀತನಾಗಿರುತ್ತಾನೆ. ವೇಧಾದೀಕ್ಷಾ, ಕ್ರಿಯಾದೀಕ್ಷಾ ಮಂತ್ರದೀಕ್ಷಾದಿ ತ್ರಿವಿಧ ದೀಕ್ಷೆಗಳಿಂದ ಯೋಗಾಂಗ ತ್ಯಾಗಾಂಗ ಭೋಗಾಂಗಗಳೆಂಬ ತ್ರಿವಿಧ ತನುಗಳು ನಷ್ಟವಾದುದೇ ನಷ್ಟಾಗಮ. ಅದರಂತೆಯೇ ಆಣವಮಲ, ಕಾರ್ಮಿಕಮಲ, ಮಾಯಾಮಲ

ಗಳೆಂಬ ತ್ರಿವಿಧ ಮಲಗಳು ನಷ್ಟವಾದುದೇ ನಷ್ಟಾಗಮಸ್ಥಲವೆನಿಸಿದೆ. ಸ್ವಸ್ವರೂಪವು ಭೇದರಹಿತವಾದ ಶಿವಾದ್ವೈತ ಜ್ಞಾನದಿಂದ ಸಮರಸಭಾವವನ್ನು ಹೊಂದಲು, ಯಾವುದರಿಂದ ಯಾವ ವಸ್ತುವನ್ನು ತಿಳಿಯಬೇಕು, ಅದನ್ನು ತಿಳಿಯುವವನು ಯಾವನೆಂದು ಬೋಧಿಸುತ್ತದೆ. **"ನಾತಃ ಪರಂ ವೇದಿತವ್ಯಂ ಹಿ ಕಿಂಚಿತ್"** ಎಂಬ ಶೃತಿ ವಾಕ್ಯಾನುಸಾರ ಶಿವಯೋಗಿಗೆ ಜ್ಞಾತೃ ಜ್ಞಾನ ಜ್ಞೇಯಾದಿಗಳಿರುವುದಿಲ್ಲವೆಂದರಿಯಬೇಕು.

**ನುಡಿವೆಡೆಯಲ್ಲಿ ನೋಡುವೆಡೆಯಲ್ಲಿ ।**
**ರಮಿಸ್ಪೆಡೆಯಲ್ಲಿ ವಸ್ತುವಂ ಪಿಡಿವೆಡೆಯಲ್ಲಿ ।**
**ಭೋಗಿಪೆಡೆಯಲ್ಲಿ ಸುಖಂ ಬಡೆವಲ್ಲಿ ।**
**ದೇಹಮಂ ಬಿಡುವೆಡೆಯಲ್ಲಿ । ಲಿಂಗಕಳೆ ಲಿಂಗಗುಣಂ ।**
**ಘನಲಿಂಗಯೋಗಮಾದೊಡೆ ।**
**ಬಳಿಕಾ ಮಹಾತ್ಮನನದೇ ನೆನಬರ್ಪುದದಂ ಶಿವಾಥವ ।**
**ಇದುವೇ ಮಹಾ ಶಿವಶರಣನ ನಷ್ಟಾಗಮ ಸ್ಥಲ ॥**

ತಾನು ಸಕ್ಕರೆಯಾದ ಬಳಿಕ, ಸಕ್ಕರೆಯ ಸವಿಯುನರಸಲುಂಟೇ. ಸಂಪಿಗೆ ಹೂವು ತಾನಾಗಿ ಕಂಪ ನರಸಲುಂಟೇ? ಶಿವನೇ ತಾನಾದಬಳಿಕ ಅಂಗಲಿಂಗಗಳ ವಿಧಿಯು ನರಸಲುಂಟೇ? ಶಿವಾತ್ಮ ಜ್ಞಾನ ಅಂತರಂಗದಲ್ಲಿ ಉದಿಸಿ ಮಘಮಘಿಸುತ್ತಿರುವಾಗ, ಶ್ರೀಗುರುಕರುಣೆಯಿಂದ, ಆ ಮಹಾ ಸ್ವಸ್ವರೂಪ ಜ್ಞಾನವನ್ನು ಬಿಟ್ಟು ಮತ್ತಿನ್ಯಾವರೂಪವೂ ಆ ಶಿವಯೋಗಿಯ ಅಂತರಂಗದ ಕಣ್ಣಿಗೆ ಕಂಡುಬರುವುದಿಲ್ಲ. ಶ್ರೀಗುರು ಕಾರುಣ್ಯಸ್ಥಲದಲ್ಲಿ ನಡುಗಟ್ಟಿ ನಿಂತ ಶಿಷ್ಯ, ಗುರೂಪದೇಶದಿಂದ ಅನನ್ಯ ಸೇವ್ಯ ನಾಗಿ ನಾಮ ನಷ್ಟವಾಯಿತು. ರೂಪ, ನೇಮ, ಪಾಪಾದಿ ಮಹಾ ಪಾತಕಗಳು ಪೂರ್ಣ ನಷ್ಟವಾದ್ದರಿಂದ ಇಂತಪ್ಪ ಶರಣನನ್ನು ನಷ್ಟಾಗಮಸ್ಥಲದ ಯತಿ ಯೆನಿಸಿಹನು.



ಭೋ! ವಿಶ್ವವಂದ್ಯಾ ನಿನ್ನ ಆಲಯದ ಸುತ್ತುರುಳಿ ಪ್ರೊಂದುಪರಿಷ್ವವನಂ ನತಜನರು. ಗರಲಪುರನಾಥ ನಿನ್ನ ನಿಲಯದ ಗೋಪುರವ ನೋಡಿ ಹಿಗ್ಗುವರು ಜನರು ಒಳಹೊಕ್ಕು ನಿನ್ನ ಪರಿವಾರ ಭಕ್ತರಂ ನಮಿಸಿ, ನಿನ್ನ ದರ್ಶನಕೆ ಹಾತೊರೆಯುವರೀ ಧನ್ಯರು ನಮಿಸಿದವರ ಶೋಕವಂ ಹರಿಸಿ ಹರಸುವೆ ನೀನಿಲ್ಲಿ. ಹರಪಾರ್ವತೀಶ ನಿತ್ಯನಿರ್ಮಲ ತೀರ್ಥ. ಸಲಿಲವ ತುಂಬಿ ರಜತ ಕುಂಭಗಳು ಗಜರಾಜ ಭುಜದಲ್ಲಿ ಸಿದ್ಧವಾಗಿಹವು ನಿನಗಾಗಿ. ಕಪಿಲೆಯಲಿ ಮಿಂದು ಮಡಿ ಯುಟ್ಟು ನಿತ್ಯ ಕರ್ಮವನೆಸಗಿ ಪೂರ್ಣಕಲಶವ ಪಿಡಿದು ನಿನ್ನನಭಿಷೇಚಿಸಲು ಕಾದಿಹರು ವೇದ ವಿತ್ತಮರು ಶ್ರೀಕಂಠೇಶ್ವರ ಮಂಗಳವ ವಾದ್ಯವಿದು ಮೊಳಗು ಹುದು ಮಂಗಳ ಸ್ತೋತ್ರವಂ ಪಾಡುತಿಹರು. ಮಂಗಳದ್ರವ್ಯ ಭೂಷಿತ ಸುಮಂಗ ಲಿಯರು ಅನಾಥನಾಥ ಅದೋ ಅರುಣನುದಿಸಿದನು ನಿನ್ನ ಚರಣಕಾಂತಿಯ ಬಯಕೆಯಿಂ ಭಾಸ್ಕರನೆದುರು ನಿಂತಿಹನು ರಾಗ ಸುಂದರ ಪೂರ್ವ ಸಂಧ್ಯೆಯು ಸಂತಸದಿ ನರ್ತಿಸುತ್ತಿಹಳು. ಭಕ್ತಮಂಗಳಕೆ ನಡುಕಟ್ಟಿ ನಿಂತಿರುವೆ ನೀ ಶ್ರೀಕಂಠ, ಲೋಕವನುದ್ಧರಿಸಲೇಳು ಬೆಳಗಾಯಿತು ಗರಲಪುರೀಶ ಪಾರ್ವತಿನಾಥ ಶ್ರೀಕಂಠೇಶ್ವರ, ಸರ್ವಮಂಗಲಾಲಿಂಗಿತ ನಿನಗೆ ಮಂಗಲವು ಏಳಪ್ಪ ಬೆಳ ಗಾಯಿತು. ಶ್ರೀಕಂಠೇಶ್ವರ ಏಳು ಜಗವಪಾಲಿಸು ದಯೆಯಿಂ ನಿನ್ನ ಚರಣ ಕಮಲಕೆ ಸಮರ್ಪಿತವೀ ಸುಪ್ರಭಾತ ಸ್ತೋತ್ರಂ ॥ಶಿವ॥

---

## ಪ್ರಾಣಲಿಂಗಿ-ಲಿಂಗಸ್ಥಲ ೩೪

## ಆದಿಪ್ರಸಾದಿಸ್ಥಲಂ (ಪರಿ. ೧೮)

ಸರ್ವಾರ್ಥಿಷ್ಠಾತೃಕಃ ಶಂಭು ರಾದಿ ಸ್ತಸ್ಯ ಪ್ರಸಾದತಃ ।
ಆದಿ ಪ್ರಸಾದೀತ್ಯುಕ್ತೋಽಯಂ ನಿರ್ವಿಕಾರಪದೇ ಸ್ಥಿತಃ ॥

ಶಂಭೋ ರೇವ ಪ್ರಸಾದೇನ ಸಂಸಾರ ಚ್ಛೇದಕಾರಿಣಾ ।
ಮೋಹ ಗ್ರಂಥಿಂವಿನಿರ್ಭಿದ್ಯ ಮುಕ್ತಿಂಯಾಂತಿ ವಿವೇಕಿನಃ ॥

ವಿನಾ ಪ್ರಸಾದಮೀಶಸ್ಯ ಸಂಸಾರೋ ನ ನಿವರ್ತತೇ ।
ವಿನಾ ಸೂರ್ಯೋದಯಂ ಲೋಕೇ ಕುತಃ ಸ್ಯಾತ್ತಮಸೋ ಲಯಃ ॥

(ಶ್ಲೋ. ೫೬, ೫೯, ೬೦)

ಚರಾಚರಾತ್ಮಕವಾದ ಅಖಿಲ ಜಗದುತ್ಪತ್ತಿಗೆ ಕಾರಣೀಭೂತನಾದ ಸರ್ವೇಶ್ವರನೇ ಅಖಂಡ ಜಗತ್ತಿಗೆ ಆಧಾರನೆನಿಸಿಹನು. ಅಧಿಷ್ಠಾತೃವೂ ಶಿವನೇ ಆಗಿ ಎಲ್ಲಕ್ಕೂ ಮೊದಲಿಗನೆನಿಸಿರುವನು ಈ ಕಾರಣದಿಂದ ಶಬ್ಧ, ಸ್ಪರ್ಶ, ರೂಪ ರಸ, ಗಂಧಾದಿ ವಿಷಯಗಳನ್ನು ಆ ಸಂಬಂಧಪಟ್ಟ ಕರ್ಣಂಗಳಿಗೆ ಸಲ್ಲಿಸುವುದಕ್ಕೆ ಮೊದಲು,ಶಿವನಿಗೆ ಅರ್ಪಿಸಿ,ಶಿವನ ಪ್ರಸಾದರೂಪದಲ್ಲಿ ಸಲ್ಲಿಸುವುದು ಆದಿಪ್ರಸಾದ ವೆನಿಸಿದೆ. ಈ ದಿವ್ಯಪ್ರಸಾದವನ್ನು ಸಾದ ಸಂಪತ್ತಿಯಿಂದ ಶಿವಭಾವ ಸಂಪನ್ನ ಪ್ರಸಾದಿಯ ದೃಷ್ಟಿಗೆ ಎಲ್ಲವೂ ಶಿವನ ಮಯವಾಗಿ ಕಾಣುವುವು. ಸಂಸಾರದಲ್ಲಿನ ಜಂಜಾಟವನ್ನೂ ಮೋಹವನ್ನೂ ಸುಟ್ಟುಬೂದಿ ಮಾಡುವುದು ಶಿವನ ಪ್ರಸಾದ. ಶಿವಪ್ರಸಾದವಿಲ್ಲದೆ ಭವಭಾರನೀಗದು. ಸೂರ್ಯೋದಯವಾಗದೆ ಭುವನದ ಕತ್ತಲು ತೊಲಗದು.

ಪ್ರಸಾದೋಽಪಿ ಮಹೇಶಸ್ಯ ।
ದುರ್ಲಭಃ ಪರಿಕೀರ್ತ್ಯತೇ ।
ಘೋರಸಂಸಾರ ಸಂತಾಪ ।
ನಿವೃತ್ತೇರ್ಯೋಽಪ ಜಾಯತೇ ॥

ಶ್ರೀಗುರು ಪ್ರಸಾದ ಲಭಿಸಿದರೆ ಘೋರ ಸಂಸಾರ ತೊಲಗಿ ಶುದ್ಧಾತ್ಮನಾಗು ತ್ತಾನೆ. ಆದಿ ಪ್ರಸಾದಿಗೆ ಶಿವನ ಪ್ರಸಾದವಲ್ಲದೆ ಬೇರೊಂದಕ್ಕೆ ಬಾಯ್ದೆರೆಯನು ಘೋರ ಸಂಸಾರ ಬಂಧ ನಿವೃತ್ತಿಗೆ ಪರಶಿವನ ಕೃಪಾರೂಪ ಪ್ರಸಾದವೇ ಮುಖ್ಯ ವಿರುತ್ತೆ.

---

## ಲಿಂಗಸ್ಥಲ ೩೫

## ಅಂತ್ಯಪ್ರಸಾದಿಸ್ಥಲ (ಪರಿ. ೧೮)

ಲಯಃ ಸರ್ವ ಪದಾರ್ಥಾನಾಮಂತ್ಯ ಇತ್ಯುಚ್ಯತೇ ಬುಧೈಃ ।
ಪ್ರಸಾದೋನು ಭವಸ್ತಸ್ಯ ತದ್ವಾನಂತ್ಯ ಪ್ರಸಾದವಾನ್ ॥

**ಸುಷುಪ್ತಸ್ಯ ಯಥಾವಸ್ತು ನ ಕಿಂಚಿದಪಿ ಭಾಸತೇ ।**
**ತಥಾ ಮುಕ್ತಸ್ಯ ಜೀವಸ್ಯ ನ ಕಿಂಚಿದ್ವಸ್ತು ದೃಶ್ಯತೇ ॥**

**ಶಿವಾದ್ವೈತಪರಿಜ್ಞಾನ ಶಿಥಿಲಾಶೇಷವಸ್ತುನಃ ।**
**ಕೇವಲಂ ಸಂವಿದುಲ್ಲಾಸದರ್ಶಿನಃ ಕೇನ ಕಿಂ ಭವೇತ್ ॥**

(ಶ್ಲೋ. ೬೨, ೬೫, ೬೮)

ಭೂಮ್ಯಾದಿ ಶಿವಾಂತವಾದ ಸಮಸ್ತ ತತ್ವಗಳ ಲಯಕ್ಕೆ ಆಶ್ರಯನಾದ ಶಿವನು ಅಂತ್ಯನೆನಿಸಿಹನು. ಇಂತಪ್ಪ ಶಿವನ ಸಾಕ್ಷಾತ್ಕಾರವೇ ಪ್ರಸಾದವೆನಿಸಿದೆ. ಇಂತಹ ಪ್ರಸಾದವುಳ್ಳ ಆದಿಪ್ರಸಾದಿಯೇ ಅಂತ್ಯಪ್ರಸಾದಿ. ಅರ್ಥಾತ್ ಶಿವಾನುಭವ ಪ್ರಸಾದವುಳ್ಳ ಅಂತ್ಯಪ್ರಸಾದಿಯೆನಿಸಿಹನು. ಜೀವನ್ಮುಕ್ತನೇ ಅಂತ್ಯ ಪ್ರಸಾದಿ. ಇಂತಪ್ಪ ಶಿವಯೋಗಿಗೆ ಲೋಕದಲ್ಲಿ ನೋಡುವುದಾಗಲಿ, ಮಾಡುವುದಾಗಲಿ ಲೇಶಮಾತ್ರವೂ ಇರುವುದಿಲ್ಲ. ಅಂತ್ಯ ಪ್ರಸಾದಿ ಸತ್ಯ ಸುಖಸ್ಫೂರ್ತಿ, ನಿತ್ಯನಿಶ್ಚಲನಾಗಿರ್ಪನು. ಸರ್ವಧರ್ಮಗಳಿಗೆ ಆಗರವೆನಿಸಿದ ಶಿವಾದ್ವೈತಸಿದ್ಧಾಂತದ ಅನುಭವದಿಂದಾಗಿ, ಪ್ರಾಪಂಚಿಕ ವಸ್ತುಗಳನಪೇಕ್ಷಿಸದೆ, ಅಂತರ್ಮುಖಿಯಾಗಿ ಸದಾ ಆತ್ಮಾನುಸಂಧಾನದ ಸುಖಾಬ್ಧಿಯಲ್ಲಿ ತಲ್ಲೀನನಾದ ಅಂತ್ಯ ಪ್ರಸಾದಿಗೆ ಶಿವನ ವಿನಃ ಬೇರೆಯಿಂದೇನು ಫಲ. ಆಕಾಶ ಅಖಂಡವಾಗಿರ್ಪಂತೆ ಅಂತ್ಯಪ್ರಸಾದಿಯಾದ ಶಿವಯೋಗಿಯೂ ಸದಾ ಅಖಂಡಸ್ವರೂಪಿಯಾಗಿರ್ಪನು. ದೇದೀಪ್ಯಮಾನವಾದ ಶಿವಾನುಭವ ಪ್ರಸಾದವುಳ್ಳ ಮಹನೀಯನೇ ಅಂತ್ಯ ಪ್ರಸಾದಿಯೆಂದರಿಯಬೇಕು. ಲಿಂಗವಿಡಿದು ಪರಮಲಿಂಗವೇ ತಾನಾದ ಅಂತ್ಯ ಪ್ರಸಾದಿಯು ಉರಿಯುಂಡ ಕರ್ಪೂರದಂತೆ ರಂಜಿತನಾಗಿರ್ಪನು.



## ಪ್ರಾಣಲಿಂಗಿ-ಲಿಂಗಸ್ಥಲ ೩೬
## ಸೇವ್ಯಪ್ರಸಾದಿಸ್ಥಲಂ (ಪರಿ. ೧೮)

**ಸೇವ್ಯೋ ಗುರುಃ ಸ್ಮೃತೋಹ್ಯಸ್ಯ ಪ್ರಸಾದೋನುಭವೋಮತಃ ।**
**ತದೇಕಾವೇಶರೂಪೇಣ ತದ್ವಾನ್ ಸೇವ್ಯ ಪ್ರಸಾದವಾನ್ ॥**

ಸೇವ್ಯೋ ಗುರುಃ ಸಮಸ್ತಾನಾಂ ಶಿವ ಏವ ನ ಸಂಶಯಃ ।
ಪ್ರಸಾದೋಽಸ್ಯ ಪರಾನಂದ ಪ್ರಕಾಶಃ ಪರಿಕೀರ್ತ್ಯತೇ ॥

ಗುರುರೇವಪರಂ ತತ್ತ್ವಂ ಪರತತ್ತ್ವಂ ಗುರುಃ ಸ್ಮೃತಃ ।
ತದೇಕತ್ವಾನುಭಾವೇನ ನ ಕಿಂಚಿದವ ಶಿಷ್ಯತೇ ॥

ಜ್ಞಾನಾಮೃತೇನ ತೃಪ್ತಸ್ಯ ಕಿಮನ್ಯೈರ್ಭೋಜ್ಯವಸ್ತುಭಿಃ ।
ಜ್ಞಾನಮೇವ ಪರಾನಂದಂ ಪ್ರಕಾಶಯತಿ ಯಚ್ಛಿವಂ ॥

ಮುಕ್ತಿರೇವ ಪರಾತೃಪ್ತಿಃ ಪರಮಾನಂದಲಕ್ಷಣಾ ।
ನಿತ್ಯತೃಪ್ತಸ್ಯ ಮುಕ್ತಸ್ಯ ಕಿಮನ್ಯೈರ್ಭೋಗಸಾಧನೈಃ ॥

ನಕರ್ಮಬಂಧೇನ ತಪೋವಿಶೇಷೇ ನ ।
ಮಂತ್ರಯೋಗಾಭ್ಯಸನೇ ತಥೈವ ॥

ಧ್ಯಾನೇ ನ ಭೋದೇ ಚ ತಥಾತ್ಮ ತತ್ತ್ವೇ ।
ಮನಃ ಪ್ರವೃತ್ತಿಃ ಪರಯೋಗ ಭಾಜಾಂ ॥

(ಶ್ಲೋ. ೭೯, ೭೦, ೭೧, ೭೩, ೭೪, ೭೬)

ಭುವನಾಂಡಕೋಟಿಗಳಲ್ಲಿ ಶ್ರೀಗುರುದೇವನೊಬ್ಬನೇ ಸೇವ್ಯನಿರುವನು ಇಂತಪ್ಪ ಮಹಾ ಗುರುವಿನ ಅನುಭವವೇ ಸುಪ್ರಸಾದವೆಂದರಿಯಬೇಕು ಶ್ರೀಗುರು ಮತ್ತು ಗುರುವಿನನುಗ್ರಹ ಇವೆರಡೂ ಒಂದೆಂಬ ಏಕಭಾವವುಳ್ಳ ಪರಮ ಶಿಷ್ಯನೇ ಸೇವ್ಯಪ್ರಸಾದಿಯೆನಿಸಿರುವನು. ಸರ್ವರಿಗೂ ಸದಾ ಸೇವ್ಯನಾದ ಶ್ರೀಗುರುವೇ ಪರಶಿವನೆಂದರಿಯುವುದು. ಶ್ರೀಗುರುಪ್ರಸಾದವೇ ಪರಮಾನಂದ ಸ್ವರೂಪ ಪ್ರಕಾಶವೆಂದರಿಯಬೇಕು. ವಾಙ್ಮನಕ್ಕೆ ನಿಲುಕದ ಅಖಂಡಾನಂದ ಸ್ವರೂಪವಾಗಿರ್ಪ ಪರಶಿವಬ್ರಹ್ಮವು ನಾಮರೂಪಗಳಿಲ್ಲದೆ ಸ್ವಲೀಲೆಯಿಂದ, ತಾನೇ ಶ್ರೀಗುರುರೂಪವನ್ನು ಸ್ವೇಚ್ಛೆಯಿಂದ ಧರಿಸಿ ಪುನಃ ತಾನೇ ಲಿಂಗರೂಪದಲ್ಲಿ ಜಗದುದ್ಧಾರಕ್ಕಾಗಿ ತೋರಿ, ಈ ಲಿಂಗದ ದರ್ಶನ ಸ್ಪರ್ಶನಾದಿಗಳಿಂದ ಅಖಂಡ ಜಗತ್ತನ್ನು ಪಾವನಗೊಳಿಸುವ, ಪರಮೇಶ್ವರನನ್ನು ಅನನ್ಯ ಭಾವೇನ ಆರಾಧಿಸುವ ಪುಣ್ಯ ಪುರುಷ ನಿಜಕ್ಕೂ ಸೇವ್ಯಪ್ರಸಾದಿ ಯೆನಿಸಿರುವನು. ಸೇವ್ಯನಾಗಿ ಸ್ವಯವೆನಿಸಿಹನು.

**ಮಮೈವಾಂಶೋ ಜೀವಲೋಕೇ | ಜೀವಭೂತಃ ಸನಾತನಃ ||**

ಎಂಬ ಗೀತೋಕ್ತಿಯಂತೆ, ತನ್ನ ಚಿದಂಶರಾದ ಆತ್ಮರುಗಳನ್ನೇ ಜಡದೇಹ ಸಂಬಂಧಿಗಳನ್ನಾಗಿ ಮಾಡಿ, ಅವರನ್ನು ಸೇವಕರನ್ನಾಗಿಸಿ, ತಾ ಸೇವ್ಯನಾಗಿ ಅವರಿಂದ ನಿತ್ಯ ಪೂಜಾರಾಧನೆಗೊಂಡು; ಇಷ್ಟಾದರೂ ತನ್ನ ಸ್ವಸ್ವರೂಪಕ್ಕೆ ಕಿಂಚಿತ್ತೂ ಭಂಗವಿಲ್ಲದೆ ನಿತ್ಯ ನಿರತಿಶಯಾನಂದದಿಂದ ವಿರಾಜಿತನಾಗಿಹನು. ಸರ್ವರೊಳಗೂ ಆಡಿ ಎನ್ನೊಳಗಿರ್ದೂ ಗೋಚರಿಸದೆ ಇರ್ದ ಚಿಘ್ನನ ವಸ್ತು, ಕರುಣೆಯಿಂದ ಅರಿವಿಗೆ ಗೋಚರವಾಗಿ, ಕರಸ್ಥಲದ ಇಷ್ಟಲಿಂಗ ರೂಪದಲ್ಲಿ ದರ್ಶನವಿತ್ತ ಸೇವ್ಯ ಪರವಸ್ತುವನ್ನು ಭಾವೇನ ನಿತ್ಯ ಆರಾಧಿಸು ವಾತ ಸೇವ್ಯ ಪ್ರಸಾದಿಯೆನಿಸಿಹನು. ಶ್ರೀಗುರುವೇ ಪರತತ್ವ,ಪರತತ್ವವೇ ಶ್ರೀಗುರು. ಪರತತ್ವಗಳೆಂಬೆರಡರಲ್ಲಿ ಒಂದೆಂಬ ನಿಜಾನುಭಾವವುಳ್ಳಾತ ಸೇವ್ಯ ಪ್ರಸಾದಿಯೆನಿಸಿರುವನು. ಎಂದಿಗೂ ಅಳಿಯದ ಶಿವಾನಂದವನ್ನು, ವಾಙ್ ಮನಂಗಳಿಗೆ ನಿಲುಕದ ಆತ್ಮಾನಂದವನ್ನು ನಿರಂತರ ತನ್ನ ಶುದ್ಧಾಂತರಂಗದಲ್ಲಿ ಅನುಭವಿಸುವ ಸೇವ್ಯಪ್ರಸಾದಿಗೆ ಮತ್ತೊಂದರಲ್ಲಿ ಪ್ರೀತಿಯಿರದು. ಯಾಕೆಂದರೆ ಪರಮಾನಂದರೂಪ ಮುಕ್ತಿಯೇ ಪರತರ ತೃಪ್ತಿಯಹುದು. ಅಂದಬಳಿಕ ಸೇವ್ಯ ಪ್ರಸಾದಿಯು ಬೇರೆ ಭೋಗ ಸಾಧನಂಗಳ ಬಯಸನು. ಪ್ರಾಣವೇ ಲಿಂಗವಾಗಿ ಭಾವವೇ ಪ್ರಸಾದವಾಗಿ ಶಿವಲಿಂಗಾನಂದ ತೃಪ್ತಿಯನು ಪಡೆವಾತನೇ ನಿಜಕ್ಕೂ ಸೇವ್ಯ ಪ್ರಸಾದಿ. ಸೇವ್ಯಪ್ರಸಾದಿಗೆ ಅನ್ಯ ಪ್ರಸಾದವಿಲ್ಲ. ಯಾಕೆಂದರೆ ತಾನು ಪರಮಾನಂದ ಪರಿತೃಪ್ತನಾದ್ದರಿಂದ, ಪ್ರಾಣಲಿಂಗವನ್ನು ಲಿಂಗಾತ್ಮಾ ಅಥವಾ ಅಂತರಾತ್ಮ ಯೆಂದು ಕರೆಯುತ್ತಾರೆ. ಇದು ಪರಮಾತ್ಮವೂ ಹೌದು.

**ನಹಿ ಜ್ಞಾನೇನ ಸದೃಷಂ । ಪವಿತ್ರ ಮಿಹ ವಿದ್ಯತೇ ||**

ಎಂಬ ಗೀತೋಕ್ತಿಯಿದ್ದರೂ, ಕೇವಲ ಜ್ಞಾನ ವೊಂದರಿಂದಲೇ ಲಿಂಗಾಂಗ ಸಾಮರಸ್ಯ ಮೋಕ್ಷಾನಂದ ಲಭಿಸಲಾರದು. ಸುಜ್ಞಾನ, ಸದ್ಭಕ್ತಿ, ಸತ್ಕ್ರಿಯ ಗಳ ಸಂಗಮದ ಅನುಸಂಧಾನಾನುಭವಗಳು ಏಕಕಾಲದಲ್ಲಿ ಮೇಳೈಸಿದಾಗ ಅದ್ವಿತೀಯ ಮೋಕ್ಷಾನಂದ ಪ್ರಾಪ್ತಿಯುಂಟಾಗುತ್ತೆ. ಕರಸ್ಥಲದ ಲಿಂಗ ಮನ ಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗ ಸರ್ವಾಂಗಗಳಲ್ಲಿ ವೇದ್ಯವಾದ ಬಳಿಕ, ಇನ್ನು ಭಿನ್ನಭಾವಕ್ಕೆ ಯೆಡೆಯುಂಟೆ? ಅರಿವು ಶಿವಾನುಭವ ವಂದಾಗಿ

ನೆಲೆಗೊಂಡು, ಆನಂದ ತುಂದಿಲ ಹೃದಯ ಸ್ವಾಂತನಾಗಿರುವ ಶಿವಶರಣ ಸೇವ್ಯ ಪ್ರಸಾದಿಯೆನಿಸಿಹನು. ಅಸ್ತು.

ಇಲ್ಲಿಗೆ ಪ್ರಾಣಲಿಂಗಿಸ್ಥಲಾಂತರ್ಗತವಾದ ಒಂಭತ್ತು ಸ್ಥಲಗಳ ಸಂಕ್ಷಿಪ್ತ ವಿವರಣೆ ಸಮಾಪ್ತಿಗೊಂಡಿದೆ.



ಕಲ್ಯಾಣಂ ಕುರುತಾದನಂತಫಲದ ಶ್ರೀದಕ್ಷಿಣಾಸ್ಯೋ ಗುರುಃ ।
ವೇದಾಂತ ಪ್ರತಿಪಾದಿತಸ್ಯ ಮಹಿಮಾ ಸೋಮಾರ್ಧಚೂಡಾಮಣಿಃ ॥

ಯತ್ಪಾದಾಬ್ಜವಿಲೋಕನಾನ್ಮುನಿ ಗಣಾಹ್ಯಜ್ಞಾನಹೀನಾಃ ।
ಪುನರ್ವಿಜ್ಞಾನಂ ಪ್ರತಿಪದ್ಯ ನಿರ್ಮಮತರಾಸ್ವಾನಂದ ಮಾಪೇದಿರೇ॥

ಶರಣದಂ ಸುಖದಂ ಶರಣಾನ್ವಿತಂ ಶಿವ ಶಿವೇತಿ ಶಿವೇತಿ ನುತಂ ನೃಣಾಂ।
ಅಭಯದಂ ಕರುಣಾಭರಣಂ ಶಿವಂ ಭಜತರೇ ಮನುಜಾ ಗಿರಿಜಾಪತಿಂ॥

ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರೀ ।
ನಿರ್ಧೂತಾಖಿಲ ಘೋರ ಪಾಪನಿಕರೀ ಪ್ರತ್ಯಕ್ಷ ಮಾಹೇಶ್ವರೀ ॥

ಪ್ರಾಲೇಯಾಚಲವಂಶಪಾವನಕರೀ ಕಾಶೀ ಪುರಾಧೀಶ್ವರೀ ।
ಭಿಕ್ಷಾಂದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥



## ಶರಣಸ್ಥಲದ ಮಹತ್ವ

## ಶರಣಸ್ಥಲಂ (ಪರಿ. ೧೯)

ಯಾವಾತನ ದಿವ್ಯ ದೃಷ್ಟಿಗೆ ತೋರುವ, ತೋರಿಕೆಗಳೆಲ್ಲಾ ಜ್ಯೋತಿರ್ಲಿಂಗ ಮಯವಾಗಿ ಕಾಣುವುವೋ, ಅಂತಪ್ಪ ಶರಣನೇ ಚಿತ್ಸ್ವರೂಪ ಲಿಂಗದ ಅಭಿನ್ನ ಚಿಚ್ಛಕ್ತಿ.

**ಶರಣ ತಾ ಮಹಾಸತಿ । ಲಿಂಗವೇ ಪತಿ ॥**

ಈ ಸತಿ ಪತಿಗಳ ಅವಿನಾಭಾವ ಸಂಬಂಧ ಅನಾದಿ ಸಹಜ ಸುಂದರ. ಚಿನ್ನ ಚಿನ್ನದ ಬಣ್ಣದಂತೇ; ರತ್ನ ರತ್ನದ ಕಾಂತಿಯಂತೇ; ಲಿಂಗಪತಿ ಅಂಗ ಸತಿಯರ ಸಂಘ ಸಂಪರ್ಕ, ಸಂಸಿದ್ಧ ಸಂಪರ್ಕ. ಘಟ್ಟಿ ತುಪ್ಪದ ಹರಳುಗಳೊಳಗೆ ಥಳ ಥಳಿಸಿ ಹೊಳೆಯುವ ಕಾಂತಿಯಂತೆ, ಲಿಂಗ ಪತಿ ದೇವನಿಗೂ ಮಹಾ ಸತಿ ಚಿತ್ಸ್ವರೂಪಿ ಶರಣನಿಗೂ ವಿಯೋಗವೆಂಬುದಿಲ್ಲ. ಆಧ್ಯಾತ್ಮಿಕವಾಗಿ ಇವ ರೀರ್ವರೂ ನಿರಂತರವಾಗಿ, "ಶಕ್ತಿ ಸೌಂದರ್ಯ ಸಂಪರ್ಕದಿಂ ಸಂಯುಕ್ತರಾಗಿ ರಂಜಿಸಿರ್ಪರ್". ಸತತ ಲಿಂಗಾರ್ಚನಾನುಭವವೇ ಶರಣ ಧರ್ಮ. ಅದುವೇ ಶರಣನ ನಿಲುಗನ್ನಡಿ. ಪರಭಕ್ತಿ ಅತಿಯುಳ್ಳ ಶರಣ ಸತಿ, ಇಷ್ಟಲಿಂಗಾರ್ಚನ ಕಾಲದಲ್ಲಿ ಲಿಂಗತತ್ವದಲ್ಲಿ ಸಮರಸ ಮನಸ್ಕಳಾಗಿ ಅದ್ವಿತೀಯವಾದ ತನ್ನ ಸ್ವರೂಪವನ್ನು ಸಂದರ್ಶಿಸಿ ತನ್ಮಯಳಾಗಿರುತ್ತಾಳೆ. 'ನಿಳುಗನ್ನಡಿಯನ್ನು ಪರಮ ಆಸಕ್ತಿಯಿಂದ ನೋಡುತ್ತಿರುವ ಸ್ತ್ರೀ, ತನ್ನ ಚೆಲುವನ್ನು ಅಡಿಗಡಿಗೆ ಎಷ್ಟು ಕಾಲ ನೋಡಿದರೂ, ಇನ್ನು ನೋಡಬೇಕೆಂಬ ಕುತೂಹಲದಿಂದ ವಿಸ್ಮಯ ಳಾಗಿ, ಹಣೆಯ ಮೇಲಿನ ಮುಂಗುರುಳುಗಳನ್ನು ಮತ್ತೆ ಮತ್ತೆ ತೀಡಿ, ತಿದ್ದಿ, ತನ್ನ ಅಂದ ಚಂದವ ನೋಡುವುದರಲ್ಲೇ ಪರಮಾಸಕ್ತಿಯಲ್ಲಿರ್ಪಳೇ ವಿನಃ' ಮೊದಲು ಕಂಡ ಕನ್ನಡಿಯನ್ನು ಮರೆತಿರ್ಪಳು. ಇದರಂತೆ, ಕರಪೀಠವನ್ನ ಲಂಕರಿಸಿರ್ಪ ಇಷ್ಟಲಿಂಗದ ಪೂಜಾ ವೇಳೆಯಲ್ಲಿ ಶರಣ ಸತಿ, ತನ್ನಿಷ್ಟಲಿಂಗದಲ್ಲಿ, ದೇದಿಪ್ಯಮಾನವಾಗಿ ಪ್ರಜ್ವಲಿಸುವ ತನ್ನ ನಿಜ ಸ್ವಸ್ವರೂಪವನ್ನು ಸಂದರ್ಶಿಸಿ, ತದೇಕ ಸ್ವರೂಪ ಧ್ಯಾನದಲ್ಲಿ ತನ್ಮಯಳಾಗಿರುತ್ತಾಳೆ.

**ಲಿಂಗಾರ್ಚನ ಪರೌ ಹಸ್ತೌ । ಸಾ ರುದ್ರೋ ನಾತ್ರ ಸಂಶಯಃ ॥**
**ಮತ್ತೂ ಶಿವಾನಂದ ಮಹಾ ಸಿಂಧೌ । ಮಜ್ಜನಾದ್ಯೈಕ್ಯಮುಚ್ಯತೇ ॥**

ಎಂದಿದೆ ಶಿವಾಗಮ.

**ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ ।**
**ನೆನೆಹಿಂ ನಿರೀಕ್ಷೆಯಿಂದ ನುದಿವಸಂ ।**
**ಸಮರ್ಚಿಸುವುದತ್ಯಧಿಕಂ ।**
**ನೆನೆಹಿಂ ನಿರೀಕ್ಷೆಯಿಂದನುದಿವಸಂ ।**
**ಸಮರ್ಚಿಪುದರಿಂ ।**
**ಶಿವಲಿಂಗಮನಂಗದಲ್ಲಿ ।**

ಸುಮ್ಮನೆ ಧರಿಸಿರ್ಪುದತ್ಯಧಿಕಮತ್ಯಧಿಕಂ ।
ನಿರುತಂ ಶಿವಾಧವಾ ॥

ಇಂತು ಇಷ್ಟಲಿಂಗಪೂಜಾ ತತ್ಪರನಾದ ಶರಣ, (ಈಕ್ಷಣಂ) ತನ್ನ ದೃಷ್ಟಿಯನ್ನು ಅತ್ತಿತ್ತ ಹೋಗಗೊಡದೆ ಲಿಂಗಮೂರ್ತಿಯಲ್ಲಿ ನಾಟಿದ ನೋಟವುಳ್ಳವನಾಗಿ, ಇಷ್ಟಲಿಂಗವನ್ನು ತದೇಕ ಧ್ಯಾನ ಪರವಶನಾಗಿ—

ಲಿಂಗದೊಳಿಟ್ಟ ದೃಷ್ಟಿ ।
ನಿಜದೃಷ್ಟಿಯೊಳಿರ್ದ ಮನಂ ।
ಮನಸ್ಸಿನೋಳ್ ಪಿಂಗದೆ ನಿಂದ ಭಾವ ।
ಮದರೋಳ್ ನೆಲೆಗೊಂಡ ಶಿವಾತ್ಮ ಲಿಂಗವಾ ॥

ಲಿಂಗದೊಳಿರ್ದು ನಿತ್ಯ ಸುಖಿಯಾಗಿ ।
ವಿರಾಜಿಸುವಂಗೆ ಬಾಹ್ಯ ಕರ್ಮಂಗಳ ವೇತಕಯ್ಯಾ ।
ಪರಮಪ್ರಭುವೇ ಮಹದೈಪುರೀಶ್ವರಾ ॥

ಸಂಪರ್ಶಿಸಿ ಆನಂದೋ ಬ್ರಹ್ಮವಾಗಿರ್ಪನು. ಶರಣನ ಸಹಜ ಸುಂದರ ಧರ್ಮವಿದು. ಲಿಂಗಪೂಜಾನಂದಸುಖವೆಲ್ಲಾ ತನ್ನದಾಗಿ ಭೋಗಿಸುವ ಶಿವಯೋಗಿ ನಿಜಕ್ಕೂ ಶರಣನಿರುವನು. ಯಾವಜ್ಜೀವವೂ ಲಿಂಗಪೂಜಾದ್ಯೋಗಿ, ಸತತ ಲಿಂಗಾರಾಧಕ ಚಿತ್ತವೃತ್ತಿಯುಳ್ಳಾತ ಶರಣ.

ಸತೀಚಾಹಂ ಪತಿರ್ಲಿಂಗಂ । ಹೃದಿಯುಕ್ತಂ ಸ್ವಯಂಪ್ರಭುಃ ।
ಪ್ರಾಪಂಚಿಕ ಸುಖಂ ನಾಸ್ತಿ । ಶರಣಸ್ಥಲ ಮುತ್ತಮಂ ॥

ಎಂದು ಪ್ರಶಂಸಿಸಿದೆ ಶಿವಾಗಮ ಮತ್ತೂ

ಪಿವಂಚ ಲಿಂಗ ತತ್ವಂ ಅಂಗಂ । ಶರಣಸ್ಯ ಲಿಂಗಂ ಪ್ರಾಣಃ ॥

ಅಂದ ಬಳಿಕ

ಶರಣ ಮೇವ ಲಿಂಗಂ । ಲಿಂಗಮೇವ ಶರಣಃ ॥

ಎಂದು ಕಾಮಿಕಾದಿ ವಾತುಲ ಪರಿಯಂತಾವಿರುವ ೨೮ ಶಿವಾಗಮಗಳಲ್ಲಿ

ಸ್ತುತ್ಯವಿರುತ್ತೆ. "ನಿಜ ಶರಣ ಶ್ರೀಗುರು ತತ್ವದಲ್ಲಿ ಹುಟ್ಟಿ ಶಿವತತ್ವದಲ್ಲಿ ಬೆಳೆದು ಸಂವರ್ಧಿಸಿ, ಪರತತ್ವದಲ್ಲಿ ಪರವಶತೆಯಿಂದ ಮಗ್ನನಾಗಿರುವುದರಿಂದ, ಶರಣನ ಮೈ, ಮನಂಗಳು ಆನಂದಮಯ ಚಿನ್ಮಯ ಸ್ವರೂಪದಿಂದ ಝಗಝಗಿಸುವುವು."

ಭುವನಾಂಡಕೋಟಿಗಳಲ್ಲಿ ಶ್ರೀಗುರುದೇವನೊಬ್ಬನೇ ಸೇವ್ಯನಿಹನು. ಗುರುವಿನ ದಿವ್ಯಾನುಭವವೇ ಸುಪ್ರಸಾದ. ಶ್ರೀಗುರು ಮತ್ತು ಗುರು ಪ್ರಸಾದ ಇವೆರಡೂ ಚಿನ್ಮಯಸ್ವರೂಪ. ಶರಣ ಸೇವ್ಯ ಪ್ರಸಾದಿ. ಸಚ್ಚಿದಾನಂದ ನಿತ್ಯ ಪರವಸ್ತು ಸ್ವಲೀಲೆಯಿಂದ ತಾನೇ ಶ್ರೀಗುರುರೂಪವ ಧರಿಸಿ ಪುನಃ ತಾನೇ ಲಿಂಗರೂಪದಲ್ಲಿ ಜಗದುದ್ಧಾರಕ್ಕಾಗಿ ತೋರಿ, ದರ್ಶನ ಸ್ಪರ್ಶನಾದಿಗಳಿಂದ ವಿಶ್ವವನ್ನು ಪಾವನಗೊಳಿಸುವ ಪರಮೇಶ್ವರನನ್ನು ಅನನ್ಯ ಭಾವೇನ ಪೂಜಿಸಿ ಸ್ತುತಿಸಿ, ಧ್ಯಾನಿಸುವ ಪುಣ್ಯ ಪುರುಷ ಶರಣ. ಶರಣಸ್ಥಲದ ವೈಶಿಷ್ಟ್ಯವೆಂದರೆ ಸರ್ವಾಂಗಗಳ ಉದಾತ್ತೀಕರಣ, ಜ್ಞಾನ ಕ್ರಿಯೆಗಳು ಒಂದರಲ್ಲೊಂದು ಹಾಸುಹೊಕ್ಕಾಗಿವೆ. ಮಾನವ ಜೀವನದಲ್ಲಿ ಸಕಾಮ ನಿಷ್ಕಾಮ ಯೋಗಗಳು ಸಹ ಹಾಸುಹೊಕ್ಕಾಗಿವೆ. ಹಾಲು ನೀರಿನಂತೆ ಬೆರೆತಿವೆ. ನಿಷ್ಕಾಮಯೋಗಿ ನೀರಿನಲ್ಲಿ ಬೆಣ್ಣೆ ತೇಲುವಂತೆ ಸಂಸಾರದಲ್ಲಿರುವನು. ಲಿಂಗಾರ್ಚನಾನುಭವವೇ ಶರಣ ಧರ್ಮ. ಅದುವೇ ನಿಲುಗನ್ನಡಿ, ನಿಜ ಧರ್ಮ. ಭಕ್ತ್ಯಾ ರತಿಯುಳ್ಳ ಶರಣ ಸತಿ, ಲಿಂಗಾರ್ಚನೆಯಲ್ಲಿ ತನ್ನ ಸ್ವಸ್ವರೂಪವನ್ನು ನೋಡುತ್ತಾಳೆ. ಇದರಂತೆ ಇಷ್ಟಲಿಂಗಾರ್ಚನ ಕಾಲದಲ್ಲಿ ಶರಣ ಆಲಿಂಗದಲ್ಲಿ ತನ್ನ ಜ್ಯೋತಿರ್ಮಯ ಸ್ವಸ್ವರೂಪವನ್ನು ಸಂದರ್ಶಿಸಿ ಆತ್ಮಾರಾಮನಾಗಿರ್ಪನು.

---

ನಾನಾ ರತ್ನ ವಿಚಿತ್ರ ಭೂಷಣಕರೀ ಹೇಮಾಂಬರಾಡಂಬರೀ ।
ಮುಕ್ತಾಹಾರ ವಿಡಂಬಮಾನ ವಿಲಸದ್ವಕ್ಷೋಜ ಕುಂಭಾಂತರೀ॥

ಕಾಶ್ಮೀರಾಗರುವಾಸಿತಾರುಚಿಕರೀ ಕಾಶೀಪುರಾಧೀಶ್ವರೀ ।
ಭಿಕ್ಷಾಂದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರಿ ॥

ಅಯಿನಿಜ ಹುಂಕೃತಿ ಮಾತ್ರ ನಿರಾಕೃತ ।
ಧೂಮ್ರವಿಲೋಚನ ಧೂಲಿಕೃತೇ ॥

ಸಮರ ವಿಶೋಷಿತ ಶೋಣಿತ ಬೀಜ ।
ಸಮುದ್ಭವ ಶೋಣಿತ ಬೀಜಲತೇ ॥

ಮದಯುತ ಶುಂಭ ನಿಶುಂಭ ।
ಮಹಾಹವ ತರ್ಪಿತ ಭೂತಪಿಶಾಚ ರತೇ ॥

ಜಯ ಜಯ ಹೇ ಮಹಿಷಾಸುರ ಮರ್ದಿನಿ ।
ರಮ್ಯಕಪರ್ದಿನಿ ಶೈಲಸುತೇ ॥

---

## ಶರಣಸ್ಥಲದ ಲಿಂಗಸ್ಥಲ ೩೭
## ದೀಕ್ಷಾಪಾದೋದಕ ಸ್ಥಲಂ (ಪರಿ. ೧೯)

ದೀಕ್ಷಯೋಪಗತಾದ್ವೈತಂ ಯದ್‌ಜ್ಞಾನಂ ಗುರುಶಿಷ್ಯಯೋಃ ।
ಆನಂದಸ್ಯೈಕ್ಯಮೇತೇನ ದೀಕ್ಷಾ ಪಾದೋದಕಂ ಸ್ಮೃತಂ ॥

ಪರಮಾನಂದ ಏವೋಕ್ತಃ ಪಾದಶಬ್ದೇನ ನಿರ್ಮಲಃ ।
ಜ್ಞಾನಂ ಚೋದಕಶಬ್ದೇನ ಪಾದೋದಕ ಮಿತಿಸ್ಮೃತಂ ॥

ಅಥವಾ ಪಾದಶಬ್ದೇನ ಗುರುರೇವ ನಿಗದ್ಯತೇ ।
ಶಿಷ್ಯಶ್ಚೋದಕಶಬ್ದೇನ ತಯೋರೈಕ್ಯಂ ತು ದೀಕ್ಷಯಾ ॥

ಜ್ಞಾನಾಮೃತ ಮತಿಸ್ವಚ್ಛಂ ಗುರುಕಾರುಣ್ಯಸಂಭವಂ ।
ಆಸ್ವಾದ್ಯ ರಮತೇ ಯೋಗೀ ಸಂಸಾರಾಮಯವರ್ಜಿತಃ ॥

(ಶ್ಲೋ. ೬, ೭, ೮, ೧೧)

ದೀಕ್ಷಾ ಪಾದೋದಕದ ಮಹತ್ವ ಮಹಿಮಾನ್ವಿತವಾದುದು. ಅಷ್ಟಾವರಣದಲ್ಲಿ ಶ್ರೀಗುರು ಪಾದೋದಕದ ವಿಷಯವಾಗಿ ನಾವು ಈ ಹಿಂದೆ ಸಂಕ್ಷಿಪ್ತವಾಗಿ ವಿವರಿಸಿರುತ್ತೇವೆ.

**ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನತೇಜಸಃ ।**
**ಶ್ರೀಗುರು ಪಾದೋದಕಂ ಚಿತ್ರಂ ಸಂಸಾರ ಧ್ರುವ ನಾಶನಂ ॥**

**(ಶಿವಾಗಮ)**

ಬಹು ಜನ್ಮ ಪೂರ್ವಕೃತ ಘೋರ ಪಾತಕರಾಶಿ, ಶ್ರೀಗುರು ಪಾದೋದಕದ ಒಂದು ಹನಿ ಭಕ್ತ್ಯಾ ಸೇವಿಸಿದ ಮಾತ್ರಕ್ಕೆ "**ಶೋಷಣಂ**"ನಿರ್ನಾಮವಾಗಿ ಇಂಗಿ ಹೋಗುವುದು. ಪರಿಶುದ್ಧಾಂತರಂಗದಲ್ಲಿ ಶಿವಜ್ಞಾನ ತೇಜಸ್ಸು ಉಜ್ವಲವಾಗಿ ಪ್ರಜ್ವಲಿಸುವುದು. ಆಶ್ಚರ್ಯ! ಶ್ರೀಗುರು ಪಾದೋದಕ ಜೀವಾತ್ಮನನ್ನು ಅನಾದಿಕಾಲದಿಂದ ಬೆನ್ನಟ್ಟಿರುವ ಸಂಸಾರ ವಿಷವೃಕ್ಷವನ್ನು ಬೇರುಸಹಿತ ಸಂಪೂರ್ಣ ನಾಶಗೊಳಿಸುವುದು. ಇಂತು ಶುದ್ಧ ಬ್ರಹ್ಮ ಪರಾತ್ಪರನಾದ ಶರಣನು ಈಗ ದೀಕ್ಷಾ ಪಾದೋದಕದ ಸವಿಯನ್ನು ಕಾಣಲು ಅರ್ಹನೆನಿಸಿರುವನು. ದೀಕ್ಷಾ ಪಾದೋದಕ ಸ್ಥಲ; ಶ್ರೀಗುರು ಶಿಷ್ಯರ ನಿಕಟ ಸಂಬಂಧದ ಸ್ವರೂಪ ವನ್ನು ಮನಮುಟ್ಟುವಂತೆ ತೋರಿಸುತ್ತೆ. ಈ ದೀಕ್ಷೆ ಚಿತ್ಕ್ರಿಯಾ ದೀಕ್ಷೆ ಯೆನಿಸಿದೆ. ಗುರುಶಿಷ್ಯರ ದೀಕ್ಷೆ ಹೊರಗಣದು ಮಾತ್ರವಲ್ಲ. ಹೊರವೊಳಗೆ ಎರಕಗೊಂಡ ಮಹಾದೀಕ್ಷೆ ಇದು. ಅಂದರೆ ಹೊರಗೆ ಆಚಾರವಾಗಿ, ಒಳಗೆ ವಿಚಾರಪೂರಿತವಾಗಿ, ಸಾರಾಂಶದಲ್ಲಿ ಉಭಯ ಸ್ಥಿತಿಗಳು ಹಾಲು ಹಾಲಲ್ಲಿ ಬೆರೆತಂತೆ ಏಕವಾಗಿ ರಂಜಿಸುವ ಅದ್ವಿತೀಯ ಶಿವಾನುಭವವಿದು. ಗುರುಶಿಷ್ಯರ ಆತ್ಮೀಯ ಭಾವದಿಂದ ಒಂದಾಗಿ ಅನಂದಿಸುವ ಈ ಪರಮ ಜ್ಞಾನಾಮೃತ ತೀರ್ಥ, ದೀಕ್ಷಾಪಾದೋದಕವೆನಿಸಿದೆ. ಆದ್ದರಿಂದ ಘನಗಂಭೀರವಾದ ಶಿವಾದ್ವೈತ ಜ್ಞಾನದೊಡನೆ ಅನುಭಾವೈಕ್ಯವಾದ ಶ್ರೀಗುರು ಶಿಷ್ಯರ ಪರಮಾನಂದಭರಿತವಾದ ಐಕ್ಯವೇ, ದೀಕ್ಷಾ ಪಾದೋದಕ ಸ್ಥಲವೆಂದು ಪರಮಾಚಾರ್ಯ ಶ್ರೀರೇಣುಕರು ಅಗಸ್ತ್ಯಮುನಿ ಚಂದ್ರನಿಗೆ ಬೋಧಿಸಿರುವರು "ಅನಂದಂ ಬ್ರಹ್ಮೇತಿ ವಿಜಾನಾತ್"



## ಲಿಂಗಸ್ಥಲ ೩೮

## ಶಿಕ್ಷಾಪಾದೋದಕ ಸ್ಥಲಂ (ಪರಿ. ೧೯)

**ಗುರು ಶಿಷ್ಯಮಯಂ ಜ್ಞಾನಂ ಶಿಕ್ಷಾ ಮನನ ಮೀರ್ಯತೇ ।**
**ತಯೋಃ ಸಮರಸತ್ವಂ ಹಿ ಶಿಕ್ಷಾ ಪಾದೋದಕಂ ಸ್ಮೃತಂ ॥**
**ಜ್ಞಾನಚಂದ್ರಸಮುದ್ಭೂತಾಂ ಪರಮಾನಂದ ಚಂದ್ರಿಕಾಂ ।**
**ಪಶ್ಯಂತಿ ಪರಮಾಕಾಶೇ ಮುಕ್ತಿರಾತ್ರೌ ಮಹಾಧಿಯಃ ॥**

(ಶ್ಲೋ. ೧೨, ೧೪)

ಇಲ್ಲಿ ಪಾದವೆಂದರೆ ಶ್ರೀ ಮಹಾಗುರು ; ಉದಕವೆಂದರೆ ಶಿಷ್ಯನೆಂದು ಅರ್ಥೈಸಲಾಗಿದೆ. ಗುರು ಶಿಷ್ಯರ ಸ್ವರೂಪೈಕ್ಯ ಜ್ಞಾನ, ಶಿಕ್ಷಾ ಜ್ಞಾನವೆನಿಸಿದೆ. ಗುರು ಶಿಷ್ಯರ ಸಮರಸ ಜ್ಞಾನ ಮತ್ತು ಜ್ಞಾನದ ಮನನ ಹಾಗೂ ಅನುಸಂಧಾನಗಳು ಶಿಕ್ಷೆ ಎನಿಸಿದೆ. ಇಂತಪ್ಪ ಜ್ಞಾನ ಶಿಕ್ಷೆಗಳ ಸಮರಸಾನಂದ ವೈಖರಿಯೇ ಶಿಕ್ಷಾ ಪಾದೋದಕವೆನಿಸಿದೆ. ಮಹಾಜ್ಞಾನಿಗಳಾದ ಶಿವಯೋಗಿಗಳು, ಶಿಕ್ಷಾ ಪಾದೋದಕ ಪ್ರಭಾವದಿಂದ ತಮ್ಮ ಹೃದಯದಲ್ಲಿನ ದಹರಾಕಾಶದಲ್ಲಿ ಮುಕ್ತಿರೂಪ ರಾತ್ರಿಯಿಂದೊಡಗೂಡಿದ ಆ, ಪರಮ ಸ್ಥಿತಿಯಲ್ಲಿ, ಜ್ಞಾನ ಚಂದ್ರೋದಯವನ್ನು ಕಂಡು, ಅಲ್ಲಿ ಪರಮಾನಂದ ಬೆಳದಿಂಗಳಲ್ಲಿ ಹರ್ಷಿಸಿ, ಆ ದೇದೀಪ್ಯ ಕಾಂತಿಯನ್ನು ದಿವ್ಯದೃಷ್ಟಿಯಿಂದ ದಿಟ್ಟಿಸಿ, ಸತತ ವೀಕ್ಷಿಸುವರು ಆತ್ಮನೇತ್ರರು.

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಾಮಿ ।**
**ಯಸ್ಯಾಂ ಜಾಗ್ರತಿಭೂತಾನೀ ಸಾ ನಿಶಾಪಶ್ಯತೋ ಮುನೇಃ ॥**

(ಗೀ. ಅ. ೨, ಶ್ಲೋ. ೬೯).

ಲೌಕೀಕರು ಯಾವ ವಿಷಯದಲ್ಲಿ ರಾತ್ರಿಯಂತೆ ನಿದ್ರಿಸುವರೋ ಆ ವಿಷಯದಲ್ಲಿ ಶಿವಯೋಗಿಗಳು ಜಾಗೃತರಾಗಿ ತಮ್ಮ ಹೃದಯಾಕಾಶದಲ್ಲಿನ ಜ್ಞಾನಚಂದ್ರನ ಸ್ವಪ್ರಭೆಯಲ್ಲಿ ಆನಂದೋ ಬ್ರಹ್ಮವಾಗಿರ್ಪರು. ಮತ್ತು ಸಮಸ್ತ ಭೂತಗಳು

ಯಾವ ವಿಷಯಾದಿಗಳಲ್ಲಿ ಜಾಗೃತರಾಗಿರ್ಪರೋ, ಅಂತವರಲ್ಲಿ ಶಿವಯೋಗಿಗಳು ರಾತ್ರಿಯಂತೆ ಭಾವಿಸಿ ಉಪೇಕ್ಷಿತರಾಗಿರುತ್ತಾರೆ. ಒಟ್ಟಿನಲ್ಲಿ ಜ್ಞಾನಿಗಳು, ಶಿವ ಶರಣರು ಹಾಗೂ ಶಿವಯೋಗಿಗಳೂ, ತಮ್ಮ ಹೃತ್ಪುಂಡರೀಕದಲ್ಲಿ ಶಿವಜ್ಞಾನ ಚಂದ್ರನಿಂದ ಉತ್ಪನ್ನವಾದ ಪರಮಾನಂದವೆಂಬ ಹೊಂಬಣ್ಣದ ಪೂರ್ಣ ಬೆಳದಿಂಗಳನ್ನು ಎವೆಯಿಕ್ಕದ ನೋಟದಿಂದ ಅಂತರ್ಮುಖಿಗಳಾಗಿ ವೀಕ್ಷಿಸುವರು. ಇದುವೇ ಶಿಕ್ಷಾ ಪಾದೋದಕ ಸ್ಥಲವೆಂದು ಮಹಾಗುರು ವಿವರಿಸಿರುವರು.



## ಲಿಂಗಸ್ಥಲ ೩೯

## ಜ್ಞಾನ ಪಾದೋದಕ ಸ್ಥಲಂ (ಪರಿ. ೧೯)

ಸದ್ವೈಕ್ಯ ಸಂಪದಾನಂದೋ ಯೋ ಸೌ ಜ್ಞಾನ ಗುರುರ್ಮತಃ ।
ತತ್ಸಾಮರಸ್ಯಂ ಶಿಷ್ಯಸ್ಯ ಜ್ಞಾನ ಪಾದೋದಕಂ ವಿದುಃ ॥

ಅವಿದ್ಯಾರಾಹು ನಿರ್ಮುಕ್ತೋ ಜೀವಚಂದ್ರಃ ಸುನಿರ್ಮಲಃ ।
ಪ್ರಕಾಶತೇ ಪರಾಕಾಶೇ ಪರಾನಂದ ಮಹಾದ್ಯುತಿಃ ॥

ಅಜ್ಞಾನ ಮೇಘ ನಿರ್ಮುಕ್ತಃ ಪೂರ್ಣೋ ಜೀವಸುಧಾಕರಃ ।
ಆನಂದಜಲಧೇರ್ವೃದ್ಧಿ ಮನುಪಶ್ಯನ್ ವಿಭಾಸತೇ ॥

ಜ್ಞಾನ ಚಂದ್ರೋದಯೇ ಜಾತೇ ಧ್ವಸ್ತ ಮೋಹತಮೋಭರಃ ।
ಪಶ್ಯಂತಿ ಪರಮಾಂ ಕಾಷ್ಠಾಂ ಯೋಗಿನಃ ಸುಖರೂಪಿಣೀಂ ॥

ನಿತ್ಯಾನಂದೇ ನಿಜಾಕಾರೇ ನಿರ್ಮಲೇ ಪರತೇಜಸಿ ।
ವಿಲೀನ ಚೇತಸಾಂ ಪುಂಸಾಂ ಕುತೋ ವಿಶ್ವವಿಕಲ್ಪನಾ ॥

ಕುತೋ ಬ್ರಹ್ಮಾ ಕುತೋ ವಿಷ್ಣುಃ ಕುತೋ ರುದ್ರಃ ಕುತೋ ರವಿಃ ।
ಸಾಕ್ಷಾತ್ಕೃತ ಪರಾನಂದ ಜ್ಯೋತಿಷಃ ಸಾಮ್ಯ ಕಲ್ಪನೇ ॥

(ಶ್ಲೋ. ೧೯, ೨೦, ೨೧, ೨೨, ೨೩, ೨೪)

ಅರ್ಥಾತ್ ಯಾವ ಸದ್ಗುರು ಲಿಂಗಾಂಗ ಸಮರಸ, ಧ್ಯಾನಾನುಸಂಧಾನ ಸಂಪತ್ತಿನಲ್ಲಿ ಆತ್ಮಾರಾಮನಾಗಿರ್ಪನೋ, ಆತ ಚಿನ್ಮಯರೂಪಿ ಚಿದ್ಗುರು. ಇಂತಪ್ಪ ಶ್ರೀಗುರುವಿನೊಡನೆ ಯಾವ ಶಿಷ್ಯನು ಲಿಂಗಾಂಗಾನುಸಂಧಾನ ಸಂಪತ್ತಿನಿಂದ ಕೂಡಿ, ವಿಜೃಂಭ ಭಾವದಿಂದ ರಂಜಿಸಿರ್ಪ, ತದಾಕಾರದ ಸಾಮರಸ್ಯ ಯೋಗವೇ, ಜ್ಞಾನ ಪಾದೋದಕವೆನಿಸಿದೆ. ಹೆಪ್ಪುಘಟ್ಟಿದ ತುಪ್ಪಕ್ಕೂ ತಿಳಿ ತುಪ್ಪಕ್ಕೂ ಹೇಗೆ ವಸ್ತುತಃ ಭೇದವಿಲ್ಲವೋ. ಅದರಂತೆ ಚಿನ್ಮಯ ಶ್ರೀಗುರುವಿಗೂ ಚಿದಮೃತವನನುಭವಿಸುವ ಸಚ್ಛಿಷ್ಯನಿಗೂ ಭೇದವಿಲ್ಲ. ಜೀವಾತ್ಮನನ್ನು ಚಂದ್ರ ನಿಗೆ ಹೋಲಿಸಲಾಗಿದೆ. ಅಜ್ಞಾನಾಂಧಕಾರವೆಂಬ ರಾಹುವಿನಿಂದ ಮುಕ್ತನಾದ ನಿರ್ಮಲಾತ್ಮಕನು, ಪರಮಾನಂದಪ್ರಕಾಶ ರೂಪದಲ್ಲಿ ರಂಜಿತನಾಗಿ, ಜೀವಾತ್ಮ ನೆನಿಸಿದ ಚಂದ್ರನು ಪರಮೋತ್ಕೃಷ್ಟವಾದ ಹೃನ್ಮಂದಿರದಲ್ಲಿ ಬೆಳಗುತ್ತಿಹನು. ಅವಿದ್ಯೆ, ಅಜ್ಞಾನಗಳೆಂಬ ಕಾರ್ಮೋಘಗಳ ಆವರಣದಿಂದ ಮುಕ್ತನಾದ ಜೀವ ನೆಂಬ ಪೂರ್ಣಚಂದ್ರನು; ಅಲ್ಲೋಲ ಕಲ್ಲೋಲ ಅಸಂಖ್ಯಾತ ಅಲೆಗಳಿಂದ ನರ್ತಿಸುವ, ಅಡಿಗಡಿಗೆ ಉಕ್ಕೇರುವ ಸಮುದ್ರದ ನಾಟ್ಯವನ್ನು ಹರ್ಷದಿಂದ ನೋಡುತ್ತಿಹನು. ಸುಜ್ಞಾನ ಚಂದ್ರೋದಯದಿಂದ ತಮ್ಮ ಅಜ್ಞಾನವನ್ನು ನಿರ್ಮೂಲ ಮಾಡಿದ ಶಿವಯೋಗಿಗಳು, ಅಂತರಂಗದಲ್ಲಿ ಪ್ರಜ್ವಲಿಸುವ ಸ್ವಸ್ವರೂಪ ವನ್ನು ಕಂಡು ಆನಂದಿಸುವರು. ಲೋಕದಲ್ಲಿ ಕೆಲವರು ವಸ್ತುಗಳ ಸ್ವಭಾವವನ್ನರಿ ಯದೆ ವಾಂಛಿಸುತ್ತಿರುವರು. ಇಂಥವರು ಶ್ರೀಗುರುಮುಖದಿಂದ ಭಗವದ್ ತತ್ವದ ಮಹಿಮೆಯನ್ನು ಶ್ರವಣಮಾಡಿದ ಬಳಿಕ, ವಾಂಛಿಸದಿರ್ಪರೋ. ಪರಮಾನಂದ ಮಯ ಪರವಸ್ತುವ. ಸತತ ಲಿಂಗಾಂಗಸಾಮರಸ್ಯಾನಂದದ ಸುಖವನ್ನು ನಿರತಿ ಶಯಾನಂದ ಮಹಾಸಿಂಧುವಿನಂತೆ ಅಂತಃಕರಣದಲ್ಲಿ, ಕಂಡನುಭವಿಸುವ ಷಟ್ಸ್ಥಲ ಬ್ರಹ್ಮಿಗಳ, ಶಿವಯೋಗಿಗಳ ಮುಂದೆ, ಚತುರ್ಮುಖ ಬ್ರಹ್ಮನ ಸುಖ ಹಾಗು ಶ್ರೀವಿಷ್ಣುವಿನ ಸುಖಗಳು ಒಂದೊಂದು ಬಿಂದುಗಳಂತೆ ತೋರ್ಪಡುವುವು.

ಜೀವಾತ್ಮನನ್ನು ಅನಾದಿಕಾಲದಿಂದ ಸಂಚಿತ, ಆಗಾಮಿ ಪ್ರಾರಬ್ಧವೆಂಬ ಕರ್ಮಗಳೂ ಮತ್ತು ಆಣವ, ಮಾಯೀಯ ಹಾಗೂ ಕಾರ್ಮಿಕಮಲತ್ರಯಗಳು ರಕ್ತಗತ ಅಸ್ತಿಗತವಾಗಿ ಆವರಿಸಿರುವುವು. ಇವುಗಳೊಂದಿಗೆ ಕೂಡಿ ಜೀವಾತ್ಮನು ಅಂತ್ಯವಿಲ್ಲದ ಹೋರಾಟವನ್ನು ಮಾಡುತ್ತಿಹನು. ಸರ್ವತ್ರ ಮಲತ್ರಯಗಳು ಜನ್ಮ ಜನ್ಮಾಂತರಗಳಿಂದ ಜೀವಾತ್ಮನನ್ನು ಬೆನ್ನಟ್ಟಿ ಪೀಡಿಸುತ್ತಲಿವೆ. ಇವು ಅಂತ್ಯವಿಲ್ಲದ ಕರ್ಮಕಾಂಡದ ಕರಾಳ ಹೋರಾಟ.

**ದುಃಖಸ್ಯಾನಂತರಂ ಸುಖಂ ಸುಖಸ್ಯಾನಂತರಂ ದುಃಖಂ ।**

**ಚಕ್ರವತ್ಪರಿವರ್ತಂತೇ ಸುಖಾನಿಚ ದುಃಖಾನಿಚ ॥**

ಕರ್ಮಗತಿಯನ್ನು ಬಲ್ಲವರಾರು ? **ಗಹನೋ ಕರ್ಮಣಾ ಗತಿಃ ॥** ಎಂದಿದ್ದಾರೆ. ಜ್ಞಾನಿಗಳು, **ದೀಕ್ಷಾ ಪಾದೋದಕ** ಪ್ರಭಾವದಿಂದ ಸಂಚಿತ ಕರ್ಮ ಮತ್ತು **ಆಣವ**, ಮಲ ನಿರ್ನಾಮವಾಗುವುವು. **ಶಿಕ್ಷಾ ಪಾದೋದಕ** ಪ್ರಭಾವದಿಂದ ಪ್ರಾರಬ್ಧ ಕರ್ಮ ಮತ್ತು ಮಾಯಾಮಲಗಳು ನಶಿಸುವವು. **ಜ್ಞಾನ ಪಾದೋದಕ** ಸೇವನೆಯ ಮಹತ್ವದಿಂದ ಆಗಾಮಿ ಕರ್ಮಗಳು ಹಾಗೂ ಎಲ್ಲಾ ಕಾರ್ಮಿಕ ಮಲಗಳು ಧ್ವಂಸವಾಗಿ, ಜೀವಾತ್ಮನು (ಅಂಗನು) ಶುದ್ಧ ಸ್ಫಟಿಕದಂತೆ ರಾರಾಜಿಸುವನು. ಇದರಿಂದ—

**"ನಹಿ ಜ್ಞಾನೇನ ಸದೃಶ ಪವಿತ್ರಮಿಹ ವಿದ್ಯತೆ ॥**

ಎಂದು ಶ್ರೀ ಗೀತಾಚಾರ್ಯನು ಪ್ರಶಂಸಿರುವನು.

**ತತ್ಸ್ವಯಂ ಯೋಗಸಂಸಿದ್ಧಃ । ಕಾಲೇನಾತ್ಮನಿ ವಿದಂತಿ ॥**

(ಗೀ. ಅ. ೪ ಶ್ಲೋ. ೩೮)

ಆತ್ಮಜ್ಞಾನವನ್ನು ಜ್ಞಾನಿಗಳ ಸೇವೆ ಮಾಡಿ ಅವರ ಅನುಗ್ರಹದಿಂದ ಪಡೆಯಬೇಕು. ಶಿವಜ್ಞಾನವೆಂಬ ನಾವೆ (ಹಡಗು) ಎಂಥಾ ಪಾಪಿಯನ್ನಾದರೂ ಸಂಸಾರ ಸಾಗರದಿಂದ ದಾಟಿಸಿ ಮುಕ್ತಿ ಎಂಬ ದಡವನ್ನು ಸೇರಿಸುವುದು. ಶ್ರೀ ಜ॥ ರೇಣುಕಾಚಾರ್ಯರು ಜ್ಞಾನದೊಂದಿಗೆ—

**ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।**

**ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹ ಪಾತನಂ ॥**

(ಸಿ. ಶಿ. ಪರಿ. ೧೩. ಶ್ಲೋ. ೧೪)

ಜಗನ್ಮಾತಾಪಿತೃಗಳಾದ ಶ್ರೀ ಉಮಾಮಹೇಶ್ವರರ, ದಿವ್ಯ ಕೃಪಾನುಗ್ರಹಕ್ಕೆ ನಾವು ಪೂರ್ಣ ಪಾತ್ರರಾಗಬೇಕಾದರೆ, ಯಾವ ಜೀವನವೂ ಸ್ವಮತಾಚಾರ ನಿರತನಾಗಿರಬೇಕು. ಯಾಕೆಂದರೆ, ನಿತ್ಯ ನಾವು ಮಾಡುವ ಆಚಾರಗಳಿಂದ ಶಿವನು ಸಂತುಷ್ಟನಾಗುವನು. ಶಿವಜ್ಞಾನಾಮೃತ ಪಾನದಿಂದ ನಮ್ಮ ಅಂಗಾಂಗ ಗಳೆಲ್ಲಾ ಅಮೃತಮಯವಾಗುವುವು.

**ಜ್ಞಾನಾಮೃತೇನ ತೃಪ್ತಸ್ಯ ಕಿಮನ್ಯೈರ್ಭೋಜ್ಯ ವಸ್ತುಭಿಃ ।**
**ಜ್ಞಾನಮೇವ ಪರಾನಂದಂ ಪ್ರಕಾಶಾಯತಿ ಯಚ್ಛಿವಂ ॥**

(ಪರಿ. ೧೮ ಶ್ಲೋ. ೭೩)

ಶಿವಜ್ಞಾನಾಮೃತಪಾನದಿಂದುದಿಸಿದ ಅನುಭವ, ಶಿವಾನುಭವ ತನ್ನಲ್ಲಿ ತೃಪ್ತಿಯಾಗಿರಲು, ಬಗೆಬಗೆಯ ಭಕ್ಷ್ಯ ಭೋಜ್ಯಾದಿ ಪದಾರ್ಥಗಳ ಬಯಸುವನೆ ಶಿವಯೋಗಿ. ಶಿವತತ್ವವನ್ನು ಜ್ಞಾನ ಅಖಂಡವಾಗಿ ಬೆಳಗಿಸುವುದು,ಅಂದರೆ ಯಾವ ಜ್ಞಾನ ಸಚ್ಚಿದಾನಂದ ನಿತ್ಯಪರಿಪೂರ್ಣ ಪರವಸ್ತುವನ್ನು ಪ್ರಕಾಶಗೊಳಿಸುವುದೋ, ಅಂತಃ ಜ್ಞಾನಾಮೃತಪಾನದಿಂದ ತೃಪ್ತನಾದ ಶಿವಯೋಗಿ, ಶರಣನಿಗೆ, ಪ್ರಾಕೃತ ಭೋಜ್ಯವಸ್ತುಗಳಿಂದೇನು ಫಲ. ಶಿವಜ್ಞಾನಾಮೃತಪಾನದಿಂದ. ಶಿವಾನುಭವದಿಂದ ತೃಪ್ತರಾಗಿದ್ದರೂ ಸಹ ಸುಜ್ಞಾನಿಗಳು—

**ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್ ।**
**ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥**

(ಪರಿ. ೧೬ ಶ್ಲೋ. ೬೫)

ಶಿವಯೋಗಿಗಳು ಶಿವಜ್ಞಾನಾಮೃತದಿಂದ ಸಂತುಷ್ಟರಾಗಿದ್ದರೂ ಸಹ, ಸ್ವಧರ್ಮಾಚರಣೆಯನ್ನು ಕಿಂಚಿತ್ತೂ ಬಿಡದೆ, ನಿತ್ಯ ಸಂಧ್ಯಾಕಾಲಂಗಳಲ್ಲಿ ಭಕ್ತಿಯಿಂದ ಆಚರಿಸುತ್ತಲಿರಬೇಕೆಂದು ಶ್ರೀಭಗವತ್ಪಾದ ರೇಣುಕಾಚಾರ್ಯರು ಅಪ್ಪಣೆಯಿತ್ತಿರುವರು. ಯಾಕೆಂದರೆ, ಲೌಕಿಕ ಜನರು—

**ಯದ್ಯದಾಚರತಿ ಶ್ರೇಷ್ಠಾಃ ಸ್ತತ್ತ ದೇವೇತರೋ ಜನಃ ।**
**ಸಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥**

(ಗೀ. ಅ. ೩ ಶ್ಲೋ. ೨೧)

ಸಂಸಾರದಲ್ಲಿ ತೊಳಲಿ ಬಳಲುವ ಲೋಕದ ಜನರು, ಶಿವಯೋಗಿಗಳೂ ಮತ್ತೂ ಮಹಾತ್ಮರು ಯಾವ ರೀತಿ ದೈವಭಕ್ತಿಯುಳ್ಳವರಾಗಿ, ನಿತ್ಯ ಶಿವಪೂಜೆ, ಗುರುಧ್ಯಾನ, ಪ್ರಾರ್ಥನೆ, ಜಪತಪಗಳನ್ನು ಆಚರಿಸುವರೋ, ನೋಡಿ ಅದರಂತೆ ಜನರು ಸಹ ಪೂಜಾದಿಗಳನ್ನು ಅನುದಿನ ಮಾಡುವರಾದ್ದರಿಂದ, ಶಿವ ಯೋಗಿಗಳೂ, ಜ್ಞಾನಿಗಳೂ ನಿತ್ಯ ನೈಮಿತ್ತಿಕಾದಿ ಪೂಜಾವ್ರತಗಳನ್ನು ಬಿಡದೆ

ಮಾಡುತ್ತ ಧರ್ಮಾಚಾರ ಪರಾಯಣರಾಗಿರುವರೆಂದು ಶ್ರೀ ಸಿದ್ಧಾಂತಶಿಖಾಮಣಿ ಯಲ್ಲಿ ಶ್ರೀ ಶಿವಯೋಗಿಶಿವಾಚಾರ್ಯರು ಶ್ರೀರೇಣುಕರ ಬೋಧಾಮೃತ ವನ್ನುಂಡು, ಸಮಸ್ತ ಆಸ್ತಿಕವೃಂದಕ್ಕೆ ಜ್ಞಾನಾಮೃತವನ್ನು, ಜ್ಞಾನಪಾದೋ ದಕಸ್ಥಲದಲ್ಲಿ ಉಣಬಡಿಸಿರುತ್ತಾರೆ.

ಶ್ರೀ ಸಿದ್ಧಾಂತಶಿಖಾಮಣಿ ಗ್ರಂಥಕರ್ತ ಶ್ರೀ ಶಿವಯೋಗಿಶಿವಾಚಾರ್ಯರು ಪ್ರಾತಃಸ್ಮರಣೀಯರಿರುವರು. ಇವರು ಮಹಾನುಭಾವರು ಶಿವಜ್ಞಾನಸುಧಾ ಸಿಂಧುವೆಂಬ ಖ್ಯಾತಿವಂತರು. ಅಷ್ಟಾವರಣ, ಪಂಚಾಚಾರ, ಮತ್ತೂ ಷಟ್ಸ್ಥಲಾ ತ್ಮಕ, ಏಕೋತರಶತಸ್ಥಲಗಳ ದಿವ್ಯ ಹೃದಯವನ್ನು ಶಿವಲಿಂಗೋದ್ಭವ ಮಂಗಳ ಮೂರ್ತಿ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ಶ್ರೀ ಶ್ರೀ ಶ್ರೀ ರೇವಣಸಿದ್ಧದೇಶಿಕೇಂದ್ರಶಿವಾಚಾರ್ಯರ ದಿವ್ಯ ಕೃಪಾಕಟಾಕ್ಷಕ್ಕೆ ಸಾಕ್ಷಾತ್ ಪಾತ್ರರಾದ ಸುಕೃತಶಾಲಿ ಶ್ರೀ ಶಿವಯೋಗಿಶಿವಗಿಚಾರ್ಯರು.

---

**ಸೋಮ ಸೋಮ ಧಾರಿಣಂ । ಸುಕಾಮಪೂರ್ಣ ಕಾರಿಣಂ ।**
**ಧಾಮಧಾಮ ಪೂರಿಣಂ । ಕುಕಾಮಮಾನ ಹಾರಿಣಂ ।**
**ಭೀಮಭೀಮ ರೂಪಿಣಂ । ಶಿವಾಗಮ ಸ್ವರೂಪಿಣಂ ।**
**ರಾಜರಾಜ ಪೂಜಿತಂ । ಭಜಾಮಿ ರೇಣುಕಂ ಗುರುಂ ॥**

**ನಾನಾರತ್ನ ವಿಚಿತ್ರಭೂಷಣಕರೀ । ಹೇಮಾಂಭರಾಡಂಬರೀ ।**
**ಮುಕ್ತಾಹಾರ ವಿಡಂಬಮಾನ । ವಿಲಸದ್ವಕ್ಷೋಜ ಕುಂಭಾಂತರೀ ।**
**ಕಾಶ್ಮೀರಾ ಗರುವಾಸಿತಾ ರುಚಿಕರೀ । ಕಾಶೀಪುರಾಧೀಶ್ವರಿ ಬಿಕ್ಷಾಂದೇಹಿ।**
**ಕೃಪಾವಲಂಬನಕರೀ । ಮಾತಾನ ಪೂರ್ಣೇಶ್ವರೀ ॥**



## ಲಿಂಗಸ್ಥಲ ೪೦
## ಕ್ರಿಯಾನಿಷ್ಪತ್ತಿಸ್ಥಲಂ (ಪರಿ. ೧೯)

**ಜ್ಞಾನಿನೋ ಯಾನಿ ಕರ್ಮಾಣಿ ತಾನಿನೋ ಜನ್ಮ ಹೇತವಃ ।**
**ಅಗ್ನಿದಗ್ಧಾನಿ ಬೀಜಾನಿ ಯಥಾನಾಂಕುರ ಕಾರಣಂ ॥**

**ಕರ್ಮಣಾ ಕಿಂ ಕೃತೇನಾಪಿ ಜ್ಞಾನಿನೋ ನಿರಹಂಕೃತೇಃ ।**
**ವಿಕ್ರಿಯಾ ಪ್ರತಿಬಿಂಬಸ್ಥಾ ಕಿಂ ಕರೋತಿ ಹಿಮದ್ಯುತೇಃ ॥**

**ಜ್ಞಾನೀಕರ್ಮನಿರೂಢೋಽಪಿ ಲಿಪ್ಯತೇ ನ ಕ್ರಿಯಾಫಲೈಃ ।**
**ಘೃತಾದಿಸ್ವಾದುಭಾಜಿಹ್ವಾ ಭೋಕ್ತ್ರೀಚಾಪಿನ ಲಿಪ್ಯತೇ ॥**

**ಪರಿಪೂರ್ಣ ಮಹಾನಂದ ಭಾವಿನಃ ಶುದ್ಧಚೇತಸಃ ।**
**ನ ಭವೇತ್ ಕರ್ಮಕಾರ್ಪಣ್ಯಂ ನಾನಾ ಭೋಗಫಲಪ್ರದಂ ॥**

(ಶ್ಲೋ. ೨೯,೩೦,೩೧,೩೪)

ಮಳೇನೀರಿನಿಂದ ಭೂಮಿ ಹದವಾಗಿದ್ದರೂ, ನೆಲವನ್ನು ಉತ್ತಿ, ಅಗ್ನಿಯಿಂದ ದಗ್ಧವಾದ ಬೀಜವನ್ನು ಬಿತ್ತಿದರೆ, ಸುಟ್ಟ ಬೀಜ, ಅಂಕುರಿಸುವುದಿಲ್ಲ. ಅದರಿಂದ ಬೆಳೆಯಾಗುವುದಿಲ್ಲ. ಇದರಂತೆ ಈ ಜನ್ಮದಲ್ಲಿ ಶಿವಜ್ಞಾನ, ಶಿವವ್ರತ ಶಿವಪೂಜಾ, ಶಿವಮಂತ್ರ ಜಪಾನುಷ್ಠಾನಗಳಿಂದ ನಿರಂತರ ಶಿವಧ್ಯಾನಾಗ್ನಿಯಲ್ಲಿ ಪರಿಪಕ್ವನಾದ ಜೀವಾತ್ಮನಿಗೆ ಪುನರ್ಜನ್ಮವೆಲ್ಲಿಯದು? ಅಂದಬಳಿಕ ಶಿವಯೋಗಿ, ಶಿವಶರಣರಿಗೆ ಪುನರಪಿ ತಾಯಿಗರ್ಭ ಕಾರಾಗೃಹ ವಾಸವಿಲ್ಲ. ಅವರು ಮುಕ್ತ ಜೀವಿಗಳೆನಿಸಿ, ಸರ್ವತಂತ್ರ ಸ್ವತಂತ್ರರೆನಿಸಿಪ್ಪರು. ಸ್ವಸ್ವರೂಪಾನುಸಂಧಾನ ದಿಂದ ಆತ್ಮಜ್ಞಾನಿ, ಏನೆಲ್ಲಾ ಕರ್ಮಗಳನ್ನು ಆಚರಿಸಿದರೂ, ಇವೆಲ್ಲಾ ಅಂತ ರಂಗದ ಶಿವಾಗ್ನಿಯಿಂದ ದಗ್ಧವಾಗುವುದರಿಂದ, ಜೀವಾತ್ಮನು ಪುನರ್ಜನ್ಮರಹಿತ ನಾಗುವನು. ನಿತ್ಯ ಇಷ್ಟಲಿಂಗ ಪಾದೋದಕ ಹಾಗೂ ಶ್ರೀಗುರು ಜಂಗಮರ ಪಾದೋದಕ ಸೇವನೆಯಿಂದ—

**ಅವಿದ್ಯಾ ಮೂಲನಾಶಾಯ ಜನ್ಮ ಕರ್ಮ ನಿವೃತ್ತಯೇ ।**
**ಜ್ಞಾನವೈರಾಗ್ಯಸಿದ್ಧ್ಯರ್ಥಂ ಶ್ರೀಗುರು ಪಾದೋದಕಂ ಪಿಬ ॥**

ಶ್ರೀಗುರು ಪಾದೋದಕವನ್ನು ನಿತ್ಯ ಶಿವಪೂಜಾ ವೇಳೆಯಲ್ಲಿ ಭಕ್ತಿಯಿಂದ ಸೇವಿಸಿದರೆ, ಅವಿದ್ಯೆ ಅಂಧಕಾರ ಅಜ್ಞಾನಾದಿ ಅನಿಷ್ಟಗಳು ಪೂರ್ಣ ನಶಿಸಿ ಶುದ್ಧಾಂತಃಕರಣವುಳ್ಳವನಾಗುವನು ಮತ್ತು

**ಗುರು ಪಾದೋದಕಂ ಚಿತ್ರಂ । ಸಂಸಾರ ಧೃಮನಾಶನಂ ॥**

ಗುರು ಪಾದೋದಕವನ್ನು ಭಯಭಕ್ತಿಗಳಿಂದ ಸ್ವೀಕರಿಸಿದರೆ, ಆಶ್ಚರ್ಯ! ಆಶ್ಚರ್ಯ !! ಸಂಸಾರ ವಿಷ ವೃಕ್ಷ ಸುಟ್ಟು ಬೂದಿಯಾಗಿಹೋಗುವುದು. ಅಂದ

ಬಳಿಕ ಶಿವಜ್ಞಾನಿಗೆ ಪುನರಪಿ ಜನ್ಮವಿಲ್ಲ. ಗುರುಲಿಂಗ ಜಂಗಮರ ನಿತ್ಯ ಪಾದೋದಕ ಸೇವನೆಯಿಂದ, ಪರಕಾಯನಾದ ಶರಣಂಗೆ ಸಂಚಿತ, ಪ್ರಾರಬ್ಧ, ಆಗಾಮಿ, ಮೊದಲಾದ ಪೂರ್ವ ಕೃತ ಬಹು ಘೋರವಾದ ಪಾಪ ರಾಶಿಗಳು.

**ಜ್ಞಾನಾಗ್ನಿ ದಗ್ಧ ಕರ್ಮಾಣಂ । ತಮಾಹುಃ ಪಂಡಿತಂಬುಧಾಃ ॥**

ಶಿವಧ್ಯಾನಾಗ್ನಿಯಲ್ಲಿ ಬೆಂದ ಜೀವಾತ್ಮನ ಅಖಿಲ ಕರ್ಮಜಾಲವೆಲ್ಲಾ ದಗ್ಧ ಪಟವತ್ ಅಂದರೆ ಸುಟ್ಟ ಬಟ್ಟೆಯಂತೆ ಕೇವಲ ತೋರಿಕೆಗೆ ಮಾತ್ರ ವಸ್ತ್ರವಾಗಿ ಕಾಣುತ್ತೆ.

ಇದು ಬಟ್ಟೆಯೆಂದು ಮುಟ್ಟಿದೊಡನೆ ಬೂದಿಯಾಗುವುದು. ಅಂದರೆ ಶಿವಯೋಗಿ ನಮ್ಮಂತೆ ಕಾಯಕಪ್ರಿಯನಾಗಿದ್ದರೂ ದಗ್ಧಪಟದಂತೆ ಕ್ರಿಯಾ ನಿಷ್ಪತ್ತಿಯಾದ ಕಾರಣ ಇಲ್ಲಿ ಕ್ರಿಯೆ ಕಲ್ಪಿತವಲ್ಲದೆ ಸಹಜವೆನಿಸಲಾರದು. ತಟಾಕದ (ಕೊಳದ) ನೀರಿನಲ್ಲಿರುವ ಚಂದ್ರನ ಪ್ರತಿಬಿಂಬ ಮೋಡಗಳ ಚಲನೆಯಿಂದಾಗಿ ಚಲಿಸುವಂತೆ ಕಾಣುವುದೇ ವಿನಃ ಆಕಾಶದಲ್ಲಿ ಪ್ರಜ್ವಲಿಸುವ ಚಂದ್ರನಿಗೆ ಚಲನೆ ಇಲ್ಲ. ಇದುಹೇಗೋ ಹಾಗೆ ತಾನು ತನ್ನದೂ ಎಂಬ ದೇಹಾಭಿಮಾನಿಗೆ ಕರ್ಮಸಂಬಂಧವಲ್ಲದೆ, ನಿರ್ದೇಹಿಗೆ . ಅಂದರೆ ದೇಹಾಭಿಮಾನವಿಲ್ಲದ ಶಿವಯೋಗಿಗೆ ಕರ್ಮಬಂಧವಿಲ್ಲ, ಕಾಯವಿಲ್ಲದ ಬಳಿಕ ಕರ್ಮವಿಲ್ಲ ಕರ್ಮಫಲವೂ ಇಲ್ಲ. ನಾಲಗೆ ಮೇಲೆ ತುಪ್ಪದ ಲೇಪನ ವಿದ್ದರೂ ಆ ತುಪ್ಪದ ಜಿಡ್ಡು ಹೇಗೆ ನಾಲಿಗೆಗೆ ಅಂಟ್ಟಿರುವುದಿಲ್ಲವೋ, ಅದರಂತೆ, ಶಿವಯೋಗಿ ನಿತ್ಯ ಕ್ರಿಯಾದಿಗಳಲ್ಲಿ ತತ್ಪರನಾಗಿದ್ದರೂ, ಭವಚಕ್ರಕರ್ಮದ ಲೇಪನ ಆತಂಗಿಲ್ಲ. ಕಾಯದಲ್ಲಿ ಲಿಂಗ ತುಂಬಿ, ಕರಣಂಗಳಲ್ಲಿ ಲಿಂಗ ತುಂಬಿ ಲಿಂಗವಲ್ಲದೆ ಮತ್ತೊಂದನರಿಯದವನಾಗಿ, ಇಂತಪ್ಪ ಶಿವಯೋಗಿಗೆ ಕರ್ಮವುಂಟೆ? ತನು ಕರಣಂಗಳೆಲ್ಲಾ ಶಿವಲಿಂಗಕ್ಕೆ ಅರ್ಪಿತವಾಗಿ, ಕ್ರಿಯಾನಿಷ್ಪತ್ತಿಯಾಗಿರಲು, ಮರಳಿ ಈ ಶಿವಯೋಗಿಗೆ ಭವಬೀಜವುಂಟೆ ?

**ನುಡಿವೆಡೆಯಲ್ಲಿ ನಡೆವೆಡೆಯಲ್ಲಿ ನೋಡುವೆಡೆಯಲ್ಲಿ ।**
**ರಮಿಪ್ಪೆಡೆಯಲ್ಲಿ ವಸ್ತುವಂ ಪಿಡಿವೆಡೆಯಲ್ಲಿ ಸುಖಂಬಡೆವಲ್ಲಿ ।**
**ದೇಹಮಂ ಬಿಡುವೆಡೆಯಲ್ಲಿ ಲಿಂಗ ಕಳೆ ಲಂಗ ಗುಣಂ ।**
**ಘನಲಿಂಗ ಯೋಗಮಾದೊಡೆ ಬಳಿಕಾ ಮಹಾತ್ಮನನ ।**
**ದೇನೆನ ಬರ್ಪುದದಂ ಶಿವಾಥವಾ ॥**

ಸಾಮರಸ್ಯ ಜ್ಞಾನಾನುಭವ, ನಿಷ್ಪತ್ತಿಗೊಂಡ ಕ್ರಿಯಾಚರಣೆ ನವನವೋಲ್ಲಾಸ ಕರವೆನಿಸಿದೆ.

---

## ಲಿಂಗಸ್ಥಲ ೪೧

## ಭಾವನಿಷ್ಪತ್ತಿಸ್ಥಲಂ (ಪರಿ ೧೯)

ಭಾವೇನ ನಾಸ್ತಿ ಸಂಬಂಧಃ ಕೇವಲ ಜ್ಞಾನಯೋಗಿನಃ ।
ತಥಾಪಿ ಭಾವಂ ಕುರ್ವೀತ ಶಿವೇ ಸಂಸಾರಮೋಚಕೇ ॥

ಪರಿಪೂರ್ಣ ಪ್ರಬೋಧೋಪಿ ಭಾವಂ ಶಂಭೌ ನ ವರ್ಜಯೇತ್ ।
ಭಾ ವೋಹಿ ನಿಹಿತಸ್ತಸ್ಮಿನ್ ಭವಸಾಗರ ತಾರಕಃ ॥

ನಿವರ್ತ್ಯ ಜನ್ಮಜಂ ದುಃಖಂ ಭಾವಃ ಶೈವೋ ನಿವರ್ತತೇ ।
ಯಥಾ ಕಾಷ್ಠಾದಿಕಂ ದಗ್ಧ್ವಾ ಸ್ವಯಂ ಶಾಮ್ಯತಿ ಪಾವಕಃ ॥

ಪ್ರಕಾಶಿತೇ ಶಿವಾನಂದೇ ತದ್ಭಾವೈಃ ಕಿಂ ಪ್ರಯೋಜನಂ ।
ಸಾಧ್ಯೇ ಸಿದ್ಧೇ ಚಿರೇಣಾಪಿ ಸಾಧನೈಃ ಕಿಂ ಪ್ರಯೋಜನಂ ॥

ನ ಭಾವೇನ ವಿನಾ ಜ್ಞಾನಂ ನ ಭಾವೋ ಜ್ಞಾನಮಂತರಾ ।
ಮೋಕ್ಷಾಯ ಕಾರಣಂ ಪ್ರೋಕ್ತಂ ತಸ್ಮಾದುಭಯಮಾಶ್ರಯೇತ್ ॥

(ಶ್ಲೋ. ೩೫, ೩೬, ೩೭, ೩೮, ೪೦).

ಮಾನವ ಸಮಾಜ ಜೀವಿ, ಸಮಾಜದಲ್ಲಿದ್ದು ಜನರ ಸೇವೆಯಿಂದ ಅಭ್ಯುದಯ ಹೊಂದಿ, ಕೀರ್ತಿಶಾಲಿಯಾಗಬೇಕೆಂದು, ಸದ್ಭಾವಭರಿತನಾಗಿರ ಬೇಕೆಂದೂ ಆಶಿಸುತ್ತಾನೆ "ಯದ್ಭಾವೋ ತದ್ಭವತಿ" ಅವರವರ ಭಾವದಂತೆ ಅವರವರ ಇಷ್ಟಾರ್ಥಗಳು ಕೈಗೂಡುವುವು. ಒಟ್ಟಿನಲ್ಲಿ ಸನ್ನೀತಿಗೆ ಪಾತ್ರನಾದವ, ಸದ್ಭಾವಭರಿತನಾಗಬೇಕು. ಕ್ರಿಯಾನಿವೃತ್ತಿಯುಳ್ಳ ಪರಕಾಯಂಗೆ ಭಾವವಿದ್ದರೂ ಭ್ರಾಂತಿ ಇರುವುದಿಲ್ಲ. "ಭಾವೇ ಭಾವೇ ಹೃದಯ ಭವನೇ ಭಾವಯೇಯಂ ಭವಂತಃ" ನಮ್ಮ ಹೃನ್ಮಂದಿರದಲ್ಲಿ ನೆಲಸಿ ಪ್ರಜ್ವಲಿಸುವ ಪ್ರಾಣಲಿಂಗರೂಪ

ಪರಶಿವನನ್ನು ಅಡಿಗಡಿಗೆ ಭಕ್ತ್ಯಾ ಸ್ಮರಿಸಿ, ಭಾವಭರಿತನಾದಾತಂಗೆ, ಆ ಭಾವವೇ ಲಿಂಗವಾದಾತಂಗೆ, ಭಾವ ನಿಷ್ಪತ್ತಿಯಲ್ಲಿದೆ ಭಾವ ಪ್ರವೃತ್ತಿಯಲ್ಲಿಯಡು. ಆತ್ಮ ಜ್ಞಾನಿಯಾದ ಶಿವಯೋಗಿಗೆ ಭಾವದಿಂದ ಸಂಬಂಧವೇನೂ ಇರುವುದಿಲ್ಲ. ಆದರೂ ಸಹ ಶಿವಜ್ಞಾನಿ ಸಂಸಾರಮೋಚಕನಾದ ಶಿವನಲ್ಲಿ ಭಾವವನ್ನು ನಿರಂತರ ಇಟ್ಟಿರುತ್ತಾನೆ, ಇಡಬೇಕು. ಶಿವನಲ್ಲಿಟ್ಟ ದೃಢಭಾವದ ಪರಿಪೂರ್ಣ ಜ್ಞಾನೇನ ಘೋರಸಂಸಾರಸಾಗರವನ್ನು ಅನಾಯಾಸದಿಂದ ದಾಟುವನು. ಶಿವಭಾವವಿಲ್ಲ ದಾತಂಗೆ ಕರ್ಮಾನ:ಗುಣ್ಯವಾಗಿ ಸುತ್ತಿದ್ದ ಸಂಸಾರವೆಂಬ ಕರಡಿಯ ಹಿಡಿತದಿಂದ ಪಾರಾಗಲು ಸಾಧ್ಯವಿಲ್ಲ. ಇದರಿಂದಾಗಿ ಎಚ್ಚೆತ್ತ ಮಾನವ ಸದಾ ಶಿವಭಾವ ಸಂಪನ್ನನಾಗಿರಬೇಕು. ಪೂರ್ಣ ಜ್ಞಾನಿಯಾಗಿದ್ದರೂ ಶಿವನೊಂದಿಗೆ ಸಂವಾದ ಸದ್ಭಾವವನ್ನು ತ್ಯಜಿಸಲಾಗದು. ಉರಿಯುವ ಜ್ವಾಲಾಗ್ನಿ ಕಟ್ಟಿಗೆಯನ್ನು ಪೂರ್ಣ ಸುಟ್ಟನಂತರ, ಅ ಉರಿ ಕ್ರಮೇಣ ತಾನಾಗಿ ಆರಿ ಶಮನವಾಗುವುದು. ಆದರಂತೆ ಅದ್ವಿತೀಯವಾದ ಶಿವಜ್ಞಾನಾಗ್ನಿ ಶಿವಭಾವೇನ ಅನಂತ ಜನ್ಮಂಗಳ ಪರ್ವತಾಕಾರವಾದ ದುರಿತಂಗಳ ನಿಶ್ಶೇಷವಾಗಿ ದಹಿಸಿದ ಭಾವವು, ಕೊನೆಯಲ್ಲಿ ತಾನೇ ಶಿವಜ್ಯೋತಿಯಲ್ಲಡಗುವುದು. ಭಾವವು, ನಿಷ್ಪತ್ತಿಗೊಳ್ಳುವುದು. ಆರೋಗ್ಯವಂತನಿಗೆ, ವೈದ್ಯರ ಚಿಂತೆ ಹೇಗೆ ಇರುವುದಿಲ್ಲವೋ, ಅದರಂತೆ ನಿರಂತರ ಶಿವಜ್ಞಾನ ಶಿವವ್ರತ ಶಿವಧ್ಯಾನಾದಿಗಳಿಂದೊಡಗೂಡಿ ರಂಜಿತನಾದ ಶಿವಶರಣಂಗೆ ಶಿವಾನಂದ ಹೃದಯಂಗಮವಾಗಿ ಸಮನಿಸಿರಲು, ಈ ಉಚ್ಚ ಸ್ಥಿತಿಯಲ್ಲಿ ಶಿವಭಾವ ದಿಂದೇನು ಫಲ. ಜ್ಞಾನವಿಲ್ಲದ ಭಾವವಿಲ್ಲ. ಭಾವವಿಲ್ಲದ ಜ್ಞಾನವಿಲ್ಲ. ಶಿವಭಾವ ಶಿವಜ್ಞಾನಗಳೆರಡೂ ಏಕಕಾಲದಲ್ಲಿ ಮೋಕ್ಷಾನಂದಾನುಭವಕ್ಕೆ ಮೂಲವಾಗಿರು ವುದರಿಂದ, ಇವೆರಡನ್ನೂ ಬಿಡದೆ ಪರಮ ಆದರದಿಂದ ಆಚರಿಸುತ್ತಲಿರಬೇಕು.

ಭಾವಾ ಶಿವಾಬ್ಧಿ ಸಾಗರದಲ್ಲಿ ಮುಳುಗಿ, ತೇಲಿ, ಈಜುತ್ತ, ಶಿವಲಿಂಗ ಸುಖರಸಾಮೃತದಿಂದ ತುಂಬಿ, ತುಳುಕುತ್ತಿರುವ ಸನ್ನಿವೇಶ, ನಿಮಿಷಾರ್ಧದಲ್ಲಿ ಈಶಾಜ್ಞೆಯೋ ಎಂಬಂತೆ ನಿಭಾವವಾದ ಬಳಿಕ, ಅನಿರ್ವಚನೀಯವಾದೀ ಸುಖ ರಸಾಮೃತಮಹಾಸಿಂಧುವಿನ ವೈಭವವನೇನೆಂಬೆ ಈ ಚಿದ್ ಸುಧಾರಸವೇ ಭಾವ ನಿಷ್ಪತ್ತಿಸ್ಥಲವೆಂದು ತತ್ವವೇತ್ತಾರು ಮನಗಂಡಿರುವರು.

---

## ಲಿಂಗಸ್ಥಲ ೪೨

## ಜ್ಞಾನನಿಷ್ಪತ್ತಿಸ್ಥಲಂ (ಪರಿ. ೧೯)

**ಪರಿಪೂರ್ಣೇ ಮಹಾನಂದೇ ಪರಮಾಕಾಶಲಕ್ಷಣೇ ।**
**ಶಿವೇ ವಿಲೀನ ಚಿತ್ತಸ್ಯ ಕುತೋಜ್ಞಾನಾಂತರೇ ಕಥಾ ॥**

**ಜ್ಞಾತಾಚಾಹಂಜ್ಞೇಯ ಮಿದಮಿತಿ ವ್ಯವಹೃತಿಃ ಕುತಃ ।**
**ಅಭೇದ ಬ್ರಹ್ಮಸಾರಸ್ಯೇ ನಿರಸ್ತಾಖಿಲವಸ್ತುನಿ ॥**

(ಶ್ಲೋ. ೪೧, ೪೨).

ಕ್ರಿಯಾನಿಷ್ಪತ್ತಿ ಭಾವನಿಷ್ಪತ್ತಿಗಳೆರಡು ಪಾಕಗೊಂಡಂತೆ ಜ್ಞಾನವೂ ಪಾಕಗೊಂಡಿರ್ಪುದೆಂದರಿಯಬೇಕು. ಶರಣನಲ್ಲಿ ಜ್ಞಾನದ ನಡೆನುಡಿಗಳು ಕಂಡು ಬಂದರೂ ತನಗನ್ಯವಾದ ಜ್ಞೇಯವಸ್ತುವಿಲ್ಲನೆಂಬುದನ್ನು ಅರಿತಿರುವನು. ಕನಸಿನಲ್ಲಿ ಕಂಡ ವಸ್ತುಗಳ ಅರಿವು. ಅನುಭವಗಳು ಎಚ್ಚರವಾಗುತ್ತಲೇ ಮರೆಯಾಗುವಂತೆ, ಆತ್ಮಲಿಂಗದ ಚಿಜ್ಯೋತಿಪ್ರಕಾಶ ಅಂತರಂಗದಲ್ಲಿ ಸಂದರ್ಶಿಸಿದೊಡನೆ, ಜ್ಞಾನನಿಷ್ಪತ್ತಿಯಪ್ಪುದು ಕಂಡಯ್ಯ. ತೆರಹಿಲ್ಲದ ಮಿಗಿಲಿಲ್ಲದ ಪರಶಿವಾನಂದ ಪರಾಕಾಶದ ಪರಂಜ್ಯೋತಿ ರೂಪದ ಪರಶಿವನಲ್ಲಿ ಸಮರಸಗೊಂಡ ಶಿವಯೋಗಿಗೆ—

**ಸರ್ವಂ ಖಲ್ವಿದಂ ಬ್ರಹ್ಮ । ಈಶಾವಾಸ್ಯಮಿದಂ ಸರ್ವಂ ॥**

ಎಂಬ, ಬೆಳ್ಗಾಂ ಬೆಳಕಿನಲ್ಲಿ ಜ್ಞಾನನಿಷ್ಪತ್ತಿಯಪ್ಪುದು ಅಂಥ ಬಳಿಕ ಪೂರ್ಣ ಶಿವಜ್ಞಾನಿಗೆ, ಕ್ರಿಯೆಇಲ್ಲ, ಭಾವವಿಲ್ಲ, ಜ್ಞಾನವಿಲ್ಲ. ಇಂತಪ್ಪ ತ್ರಿವಿಧ ನಿಷ್ಪತ್ತಿಯಾದ ಬಳಿಕಾ, ಆ ಮಹಾನುಭಾವ ನಿಷ್ಪತ್ತಿಲಿಂಗ ಸ್ವರೂಪಿ ಯೆಂದು ಸಂಪೂಜ್ಯನಿರುವನು.

ಹಿಮವದ್‌ಶಿಖರಗಳ ಮಧ್ಯೇ ವಿರಾಜಿಸುವ ಗಂಗೋತ್ರಿ ಯಮುನೋತ್ರಿಗಳಲ್ಲಿ ಜನ್ಮ ತಾಳಿದ, ಗಂಗಾ ಯಮುನಾ ನದಿಗಳು ನಾನಾ ದಿಕ್ಕುಗಳಲ್ಲಿ ಸಹಸ್ರಾರು ಮೈಲಿಗಳು ತುಂಬಿ ಪ್ರವಹಿಸಿ, ಲಕ್ಷಗಟ್ಲೆ ಜೀವಕೋಟಿಗಳಿಗೆ ಜೀವನಾಧಾರವಾಗಿ, ವ್ಯವಸಾಯಕ್ಕೂ ಅನಂತ ಮುಖದಲ್ಲಿ ಸರ್ವತ್ರ ಉಪಯುಕ್ತವಾಗಿ ಗಂಗಾ, ಯಮುನಾ, ಸರಸ್ವತಿ ನದಿಗಳೆಂದು, ಇವು ಕೂಡುವ ಸ್ಥಳ ತ್ರಿವೇಣಿ

ಯೆಂದೂ ಪ್ರಖ್ಯಾತವಾಗಿ ಹರಿದು ಸಮುದ್ರದಲ್ಲಿ ಸಂಗಮವಾಗುತ್ತಲೇ ಎಲ್ಲಾ ನಾಮರೂಪಗಳನ್ನು ಕಳೆದುಕೊಂಡು ಸಮುದ್ರಾಕಾರವಾಗಿ, ನಿಷ್ಪತ್ತಿಯಾಗುವಂತೆ ಶಿವಯೋಗಿ ಲಿಂಗಪ್ರಕಾಶದಲ್ಲಡಗಿ, ಜ್ಞಾನನಿಷ್ಪತ್ತಿಸ್ಥಲದವನೆನಿಸುವನು ಜ್ಞಾನ ಜ್ಞೇಯ, ಜ್ಞಾತೃಗಳೆಂಬ ತ್ರಿಪುಟಿ ಧರ್ಮವಿಲ್ಲವಾಗಿ, ಶೂನ್ಯಸ್ವರೂಪವೆನಿಸಿಪ ಸ್ಥಾನವೇ ಜ್ಞಾನನಿಷ್ಪತ್ತಿಸ್ಥಲವೆಂದರಿಯಬೇಕು.

---

ಪಂಚಲಿಂಗಗಳೊಳುದ್ಭವಿಸಿದ ।
ಶಿವಾಚಾರ್ಯ ಪಂಚಕವು ಧರೆಯ ।
ಜನಕೊಲಿದು ದಯೆಯಿಂದೀ ಪ್ರಪಂಚ ಜಲಧಿಯ ।
ದಾಂಟಿಸುವ ವೀರಶೈವ ಮತವಂ ತಿಳುಪಿ ನೆಲೆಗೈದಿತು ॥

ಯುಗಯುಗದೊಳುಂ ಜಗದ್ಗುರು ।
ಶಿವಾಚಾರ್ಯರೀ ಜಗದೊಳವತರಿಸಿ ।
ಜನನಿವಹ ಉದ್ಧರಿಸಲೋಸುಗ ।
ಸಕಲ ವರ್ಣಾಶ್ರಮದವರಿಂಗವರವರಿಗಿಹ ॥

ಅಧಿಕಾರದ ಬಗೆಯಲಿ ಬಗೆಗಾಣಿಪಂತೆ ।
ಬೋಧಿಸುತಲಿಹ ರಳಿಯಿಃಹ ।
ಸೊಗವನೀಯುವ ಧರ್ಮತತ್ವಗಳ ।
ನಾನೆಂತು ಪೊಗಳುವೆಂಬಣ್ಣಿಸುವೆನೀ ।
ಪಂಚಸಿಂಹಾಸನಾಧೀಶ್ವರ ಮಹಿಮೆಯ ॥

---

## ಲಿಂಗಸ್ಥಲ ೪೩

## ಪಿಂಡಾಕಾಶಸ್ಥಲಂ (ಪರಿ ೧೯)

ಯಥಾ ಪಿಂಡಸ್ಥ ಆಕಾಶಸ್ತಥಾಽತ್ಮಾ ಪೂರ್ಣ ಉಚ್ಯತೇ ।
ಏತದರ್ಥ ವಿವೇಕೋ ಯಃ ಪಿಂಡಾಕಾಶಸ್ಥಲಂ ವಿದುಃ ॥

**ಘಟೋಪಾಧಿರ್ಯಥಾಽಽಕಾಶಃ ಪರಿಪೂರ್ಣಃ ಸ್ವರೂಪತಃ ।**
**ತಥಾ ಪಿಂಡಸ್ಥಿತೋ ಹ್ಯಾತ್ಮಾ ಪರಿಪೂರ್ಣಃ ಪ್ರಕಾಶತೇ ॥**

**ಅಂತಃಸ್ಥಿತಂ ಪರಾಕಾಶಂ ಶಿವಮದ್ವೈತಲಕ್ಷಣಂ ।**
**ಭಾವಯೇದ್ಯಃ ಸುಮನಸಾ ಪಿಂಡಾಕಾಶಃ ಸ ಉಚ್ಯತೇ ॥**

**ಪರಾಕಾಶಸ್ವರೂಪೋ ಹಿ ಪ್ರಕಾಶಃ ಪರಮೇಶ್ವರಃ ।**
**ಹೃದಾಕಾಶ ಗುಹಾಲೀನೋ ದೃಶ್ಯತೇಽಂತಃ ಶರೀರಿಣಾಂ ॥**

**ಏತಃ ಚ್ಛಿವಪುರಂ ಪ್ರೋಕ್ತಂ ಸಪ್ತಧಾತು ಸಮಾವೃತಂ ।**
**ಅತ್ರ ಹೃತ್ಪಂಕಜಂ ವೇಶ್ಮ ಸೂಕ್ಷ್ಮಾಂಬರ ಮನೋಹರಂ ॥**

**ಅಂತರಾಕಾಶ ಮಧ್ಯಸ್ಥ ಮಶೇಷೋಪಾಧಿವರ್ಜಿತಂ ।**
**ಘಟಾಕಾಶಮಿವಾಚ್ಛಿನ್ನಂ ಭಾವಯೇ ಚಿನ್ಮಯಂ ಶಿವಂ ॥**

(ಶ್ಲೋ. ೪೭, ೪೮, ೪೯, ೫೦)

ಪಿಂಡಸ್ಥಲದ ಮಹತ್ವ ಮಹಾದೇವನಷ್ಟು ಹಿರಿದು. ಅನವಚ್ಛಿನ್ನವಾದ ಆಕಾಶ, ಉಪಾಧಿ ಭೇದದಿಂದ ಪರಿಚ್ಛಿನ್ನವಾಗಿ ಕಂಡುಬಂದರೂ, ಆಕಾಶ ಅಪರಿಚ್ಛಿನ್ನವಾಗಿ ಕಂಡುಬಂದರೂ, ಆಕಾಶ ಅಪರಿಚ್ಛಿನ್ನವಿರುವುದು. ಘಟದೊಳಗಿನ ಆಕಾಶ, ಘಟಾಕಾಶವೆಂದರೆ, ಮಠದೊಳಗಿನ ಆಕಾಶ ಮಠಾಕಾಶವೆನಿಸಿದೆ. ಘಟ ಮಠಗಳು ಅಳಿದಬಳಿಕ, ಆಕಾಶವು ತನ್ನ ನಿಜಸ್ವರೂಪಕ್ಕೆ ಕಿಂಚಿತ್ತೂ ಧಕ್ಕೆ ಇಲ್ಲದ, ಅನವಚ್ಛಿನ್ನವಾಗಿಯೇ ಉಳಿಯುವುದು, ಇದರಂತೆ ಪಿಂಡ ಪರಶಿವಾಂಶವಾದ್ದರಿಂದ, ಪರಶಿವನಂತೆ ಆದಿಮಧ್ಯಾಂತವಿಲ್ಲದ ಅನವಚ್ಛಿನ್ನ ಪರವಸ್ತುವಾಗಿದ್ದರೂ, ದೇಹಾದಿ ಉಪಾದಿ ಭೇದದಿಂದ ತರತರವಾಗಿ ಕಂಡುಬಂದರೂ, ಉಪಾದರಹಿತವಾದಾಗ ಪಿಂಡ ಪರವಸ್ತುವಾಗಿ ಪರಿಪೂರ್ಣತ್ವಕ್ಕೆ ಲೋಪವಿಲ್ಲದೆ ರಾರಾಜಿಸುವುದು. ಆಕಾಶ, ಪಿಂಡದೊಳಗಿದ್ದರೂ, ಮೃಣ್ಮಯ ಪಿಂಡದೊಳಗಿದ್ದರೂ, ಭೂತಾಕಾಶದ ಅಖಂಡತೆಗೆ ಲೋಪವಿಲ್ಲ. ಇದರಂತೆ ಪಿಂಡನಾಮಕ ಪರವಸ್ತು ಅಂದರೆ ಆತ್ಮ, ಅಂಡಾಂಡ ಪಿಂಡಾಂಡಗಳಲ್ಲಿ ವ್ಯಾಪಿಸಿದ್ದರೂ, ಪರಿಚ್ಛಿನ್ನವಿಲ್ಲದ ಪರಿಪೂರ್ಣವಾಗಿರ್ಪುದೆಂಬ ಅಂಶ ಮನನೀಯವಿರುತ್ತೆ. ಈ ರಹಸ್ಯವನ್ನರಿವುದೇ ಪಿಂಡಾಕಾಶಸ್ಥಲವೆಂಬರಯ್ಯಾ. ಪರಾಕಾಶವಾಸಿಯೂ,

ಮಹಾ ಚಿದಾಕಾಶಸ್ವರೂಪನೂ, ಅದ್ವಿತೀಯನೆನಿಸಿದ ಪರಶಿವನನ್ನು, ಶುದ್ಧಾಂತ ಕರಣದಿಂದ ಯಾರು ಭಾವಿಸುವರೋ, ಅಂಥವನು ಪಿಂಡಾಕಾಶಸ್ವರೂಪನೆನಿಸು ವನು.

**ದೇಹೋ ದೇವಾಲಯಃ ಪ್ರೋಕ್ತಃ ।**
**ಜೀವೋ ದೇವಃ ಸನಾತನಃ ॥**

ಎಂಬಂತೆ, ಮಾನವ ದೇಹ ೩೬ ತತ್ವಗಳೆಂಬ ಸ್ಥಂಭಗಳಿಂದ ಭದ್ರಪಡಿಸಿದ ದೇವಾಲಯವಿದು. ಇದರಲ್ಲಿನ ಹೃತ್ಕಮಲ ಪೀಠ ಕೋಮಲಾತಿಕೋಮಲವಾಗಿ ರುವಲ್ಲಿ, ಶಿವಜ್ಞಾನರೂಪ ಪರಂಜ್ಯೋತಿ ಸದಾ ಬೆಳಗುತ್ತಿರ್ಪುದು. ಇತ್ಯಾದಿ ಕಾರಣಗಳಿಂದ ಈ ದೇಹ ದೇವಾಲಯವೆಂದು ಸ್ತುತ್ಯವಿರುವುದು,

**ಹೃದಾಕಾಶೇ ಚಿದಾದಿತ್ಯಃ ಸದಾ ಭಾಸತಿ ಭಾಸತಿ ।**
**ಉದಯಾಸ್ತ ಮಾನಂ ನಾಸ್ತಿ ಕುತಃ ಸಂಧ್ಯಾವಿಧೀಯತೇ ॥**

ಹೃದಯಾಕಾಶದಲ್ಲಿ ಚಿದಾದಿತ್ಯನು, ಸದಾ ದೇದೀಪ್ಯಮಾನವಾಗಿ ಹೊಳೆ ಯುತ್ತಿರುವ ಮಹದಂಶ ಚಿತ್ತಕ್ಕೆ ವೇದ್ಯವಿರುತ್ತೆ. ಸಪ್ತಧಾತುಗಳಿಂದ ಸುಭದ್ರ ವಾಗಿ, ಬಂಧುರವಾಗಿ ನಿರ್ಮಿತವಾದೀ ಮಾನವದೇಹ ಶಿವನ ರಾಜಧಾನಿಯೆನಿಸಿ, ಶಿವಪುರವೆಂದು ಸುಪ್ರಸಿದ್ಧವಿರುತ್ತೆ, ಸ್ಫಟಿಕದಂಥಾ ನಿರ್ಮಲವಾದ ಹೊಳೆ ನೀರಿ ನಲ್ಲಿ ನೀಲಾಕಾಶ ಪ್ರತಿಬಿಂಬಿಸುವಂತೆ, ಈ ದೇಹದ ನಿರ್ಮಲಾಂತಃಕರಣದಲ್ಲಿ ಶಿವನು ಸಚ್ಚಿದಾನಂದ ನಿತ್ಯ ನಿರತಿಶಯ ಮಂಗಳ ಸ್ವರೂಪದಿಂದ ಉಜ್ವಲವಾಗಿ ಪ್ರಜ್ವಲಿಸುತಿಹನು.

---

## ಲಿಂಗಸ್ಥಲ ೪೪
## ಬಿಂದ್ವಾಕಾಶಸ್ಥಲ (ಪರಿ. ೧೯)

ಸಾಸಿವೆಯಲ್ಲಿ ಸಾಗರವಿದೆಯೋ ಯೆನ್ನುವಂತೆ;

**ಯದ್ವದ್ಘಟಾನಾಂ ಪಟಲೋ ವಿಶಾಲೋ ।**
**ವಿಲೋಕ್ಯದಲ್ಪೇಽಖಿಲದರ್ಪಣೇವ ॥**

**ತದ್ವನ್ಮದೀಯೋ ಲಘು ಸಂಗ್ರಹೇಸ್ಮಿನ್ ।**

**ಉದ್ವೀಕ್ಷ್ಯತಾಂ ರೇಣುಕ ಶಿವಾದ್ವೈತ ಭಾಷ್ಯಸಾರಂ ॥**

ಒಂದು ಅತೀವ ಸಣ್ಣ ಕನ್ನಡಿಯಲ್ಲಿ ಗಿರಿಗಹ್ವರಗಳನ್ನು ವನವನಾಂತರಗಳನ್ನೂ, ನದ, ನದೀ, ವಾಪಿ, ಕೂಪ ತಟಾಕಗಳನ್ನು ಹೇಗೆ ನಾವು ಕಾಣುತ್ತೇವೋ ಹಾಗೆ, ಸಣ್ಣ ಬೀಜದಲ್ಲಿ ಬೃಹದಾಕಾರದ ಆಲ ಅಥವಾ ಅರಳಿ ಮಹಾವೃಕ್ಷವನ್ನು ಕಾಣುವಂತೆ, ೨, ೩, ಸಣ್ಣ ಪದಗಳುಳ್ಳ ಸೂತ್ರಗಳಲ್ಲಿ ಸಮುದ್ರದಾಳದಷ್ಟು ಅತಿ ಗಂಭೀರವಾದ, ಭಾಷ್ಯಾರ್ಥಗಳನ್ನು ಮನಗಾಣಬಹುದೋ, ಅದರಂತೆ, ಪರಾಕಾಶದ ಹೊನಲಲ್ಲಿ ಬಿಂದ್ವಾಕಾಶ ಸಾಗರದಲ್ಲಿ ಒಂದು ಹನಿ ಬೃಹದಾಕಾರದ ಪೃಥ್ವಿ, ಅಪ್, ಅಗ್ನಿ, ವಾಯು ತತ್ವಗಳು ಮಹಾಕಾಶದ ವೊಡಲಲ್ಲಿ ಹಾಗೂ ಅನಂತ ಅಂಡಾಂಡ ಬ್ರಹಾಂಡ ಕೋಟಿಗಳೂ ಸಹ ಆಕಾಶದೊಡಲಲ್ಲಿ ಒಂದು ಅಣುರೂಪದಲ್ಲಿ ಅಡಗಿವೆ. ಮಹಾಕಾಶವಾದರೋ ಸರ್ವಾಂತರ್ಯಾಮೀ ಸರ್ವಾಂತರ್ಯಾಮಿಯಾತ ಸರ್ವದೊರಳಗೂ ತುಂಬಿ, ಬಿಂದು ರೂಪದಲ್ಲಿ ವ್ಯಾಪಿಸಿ ಬಿಂದ್ವಾಕಾಶವೆನಿಸಿದೆ. ಕಣ್ಣಿಗೆ ಕಾಣುವ ಭೂತಾಕಾಶವು, ಹೃದಾಕಾಶ ಅಥವಾ ಚಿದಾಕಾಶದಲ್ಲಿ ಪರಮಾಣುವೆನಿಸಿ ಗುಂಡಗೆ ಬಿಂದುರೂಪದಲ್ಲಿ ಅತೀವ ಸಣ್ಣ ನಕ್ಷತ್ರದಂತೆ ಕಾಣುವುದರಿಂದ, ಬಿಂದ್ವಾಕಾಶವೆಂದು ಕರೆಯಲಾಗಿದೆ. ಶಿವಯೋಗಿಗಳ, ಶಿವಾತ್ಮವಿದ್ಯಾಪರಿಣತರ, ಹೃದಯದ ಚಿತ್ಪಿಂಡದೊಳಗಣ ಚಿತ್ತದಲ್ಲಿ, ಚಿದಾತ್ಮನು ಬಿದ್ವಾಕಾಶದಂತೆ ಸ್ವಸ್ವರೂಪದಿಂದ ಪ್ರಜ್ವಲಿಸುತ್ತಿಹನೆಂದು ಭಗವತ್ಪಾದ ಶ್ರೀ ಜ|| ರೇಣುಕಾಚಾರ್ಯರು ಅಗಸ್ತ್ಯ ಮುನಿಗೆ ಬೋಧಿಸಿದರು.

ಸೂಕ್ಷ್ಮವೂ ಸರ್ವವ್ಯಾಪಕವಾದ ಆಕಾಶದ ವೊಡಲಲ್ಲಿ ನಾವು ಸಂರಕ್ಷಿತರಾಗಿದ್ದರೆ ನಮ್ಮೊಡಲಿನಲ್ಲಿ ಆಕಾಶವು ವ್ಯಾಪಿಸಿರುವುದು. ಕಿವಿ, ಮೂಗು, ಬಾಯಿಯ ರಂಧ್ರಗಳಲ್ಲಿ ಆಕಾಶವಿದೆ. ಅವಕಾಶವನ್ನು ಕೊಡುವುದು ಯಾವುದೋ ಅದು ಆಕಾಶವೆನಿಸಿದೆ. ಇದರಂತೆ ವಾಯುತತ್ವ ದೇಹದಲ್ಲಿ ಹಾಗೂ ದೇಹಾಭ್ಯಂತ ಬಿಂದುರೂಪದಲ್ಲಿ ಸ್ಪಂದಿಸುತ್ತ ಸರ್ವ ಪ್ರಾಣಿಗಳಲ್ಲಿರ್ಪಂತೆ. ಸರ್ವಾಂತರ್ಯಾಮಿ ಪರಶಿವನ ಚಿದಂಶನಾದ ಆತ್ಮ ದೇವನು. ಸರ್ವ ಪ್ರಾಣಿಗಳಲ್ಲಿ ಜೀವರೂಪದಿಂದ ನೆಲಸಿ ಪರಿಮಿತಿರಹಿತನಾಗಿದ್ದಾನೆ. ಚಿದಾಕಾಶ ರೂಪದಲ್ಲಿ ಪರಿಶೋಭಿಸುತ್ತಲಿದ್ದಾನೆ.

ಯಥಾ ಸರ್ವಗತಸ್ಯ ನಿರಾಕಾರಸ್ಯ ಮಹಾವಾಯೋಶ್ಚ ತದಾತ್ಮಕಸ್ಯ|
ತ್ವತ್ವತಿತ್ವೇನ ಪ್ರಸಿದ್ಧಸ್ಯ ಸಾಕಾರಸ್ಯ ಮಹಾ ವಾಯುದೇವಸ್ಯ ||
ಚ ಅಭೇದ ಏವ ಶ್ರೂಯತೇ ಸರ್ವತ್ರ ತದ್ವತ್ ಪರಬ್ರಹ್ಮಣಃ |
ಸರ್ವಾತ್ಮಕಸ್ಯ ಸಾಕಾರ ನಿರಾಕಾರ ಭೇದವಿರೋದೋ ನಾಸ್ತ್ಯೇವ ||
(ತ್ರಿಪಾದ್ವಿಭೂತಿ ಮಹಾ ನಾರಾಯಣೋಪನಿಷತ್ತು).

ಸರ್ವ ವ್ಯಾಪಕವೂ ನಿರಾಕಾರವೂ ಆದ ವಾಯು ಸರ್ವತ್ರಪೂರ್ಣವಾಗಿ ಹರಡಿದ್ದರೂ, ವಾಯು ನಮ್ಮ ಸ್ಪರ್ಶೇಂದ್ರಿಯಕ್ಕೆ ತಗಲಿದಾಗ ವಾಯುವಿನ ಬಡಿತದಿಂದ, ಅದರ ವರ್ತುಲಾಕಾರದ ಸ್ಪರ್ಶದಿಂದ ನಮಗೆ ಅದರ ಇರುವಿಕೆ ಗೋಚರವಾಗುವುದು. ಇದರಂತೆ ಪರಾಕಾಶದ ಹೃದಯದಲ್ಲಿ ಉದ್ಭವಿಸುವ ಇಚ್ಛಾಶಕ್ತಿಯ ಪ್ರಭಾವದಿಂದ ಕ್ರಿಯಾಜ್ಞಾನ ಶಕ್ತಿಗಳ ಆವಿರ್ಭಾವದಿಂದಾಗಿ ಭೂತಾಕಾಶವು ಬಿಂದ್ವಾಕಾಶರೂಪದಲ್ಲಿ ತಲೆದೋರುವ ಸ್ಥಿತಿಯನ್ನು ಶ್ರೀಮಹಾ ಚಾರ್ಯರು ಬಿಂದ್ವಾಕಾಶಸ್ಥಲವೆಂದು ವ್ಯಾಖ್ಯಾನಿಸಿರುವರು. ಪರಮಜ್ಞಾನ ಪ್ರಕಾಶವೆನಿಸಿದ ಪರಶಿವನು, ಸರ್ವಭೂತಾಂತರಾತ್ಮನಾಗಿ ಪರಿಶೋಭಿತನಾಗಿ ಹನು ಶಿವನು.

ಸರ್ವ ಗೂಢಾಂತರಾತ್ಮ | ಭೂತೇ ಭೂತೇ ವ್ಯವಸ್ಥಿತಃ ||

ಪ್ರತಿಯೊಂದು ಭೂತದ ಹೃದಯದಲ್ಲಿ ಚೈತನ್ಯಮಯನಾಗಿ ಪ್ರಕಾಶಿತನಾಗಿಹನು. ಬಿಂದ್ವಾಕಾಶ ರೂಪದಲ್ಲಿ ಉಜ್ವಲವಾಗಿ ಪ್ರಜ್ವಲಿಸುತಿಹನು. ಬಿಂದುರೂಪ ಭೂತಾಕಾಶದ ಮಧ್ಯೇ ಪಂಚಭೂತಗಳು ಸುವ್ಯವಸ್ಥಿತವಾಗಿ ನೆಲಸಿರುವಂತೆ—

ಆತ್ಮನ ಆಕಾಶಸ್ಸಂಭೂತಃ ಆಕಾಶದ್ವಾಯುಃ ವಾಯೋರಗ್ನಿಃ |
ಅಗ್ನಾಯಾ ಆಪಃ ಆಪೋಪೃಥ್ವಿ ಪೃಥ್ವಿಯಾ ಓಷದಯಃ |
ಓಷಧಯೋರ್ ಅನ್ನಃ ಅನ್ನಾದ್‌ಪ್ರಾಣಃ ||

ಇತ್ಯಾತಿ ಭೂತಗಳು ಬಿಂದ್ವಾಕಾಶದಲ್ಲಿ ಅಂತರ್ಗತವಾಗಿರುವುವು. ಉಪನಿಷ ದ್ವಾಣಿಯಂತೆ ಹೃದಯಾಂತರಂಗದ ಆತ್ಮನೆಂಬ ಬಿಂದ್ವಾಕಾಶದಲ್ಲಿ, ಸೃಷ್ಟಿಗೆ ಮೂಲವೆನಿಸಿದ ಆದಿಶಕ್ತಿ ರಾರಾಜಿಸುತ್ತಿಹಳು. ಶಿವಶಕ್ತಿ ಸಂಪುಟದಿಂದ ಪ್ರಸ್ಫು ರಿತವಾದೀ ಪರಮಸ್ಥಿತಿ ಬಿಂದ್ವಾಕಾಶಸ್ಥಲವೆನಿಸಿದೆ.

## ಲಿಂಗಸ್ಥಲ ೪೫

## ಮಹಾಕಾಶಸ್ಥಲ (ಪರಿ. ೧೯)

ಪಿಂಡಾಂಡಸ್ಥಂ ಯಥಾಽಽಕಾಶಂ ನ ಭಿನ್ನಂ ತದ್ವದಾತ್ಮನಃ ।
ಅಭಿನ್ನಃ ಪರಮಾತ್ಮೇತಿ ಮಹಾಕಾಶಸ್ಥಲಂ ವಿಧುಃ ॥

ಯಥಾ ನ ಭಿನ್ನಮಾಕಾಶಂ ಘಟೇಷು ಚ ಮಠೇಷು ಚ ।
ತಥಾಂಡೇಷು ಚ ಪಿಂಡೇಷು ಸ್ಥಿತೋ ಹ್ಯಾತ್ಮಾ ನ ಭಿದ್ಯತೇ ॥

ಶಿವಾಖ್ಯಂ ಪರಮಂ ಬ್ರಹ್ಮ ಪರಮಾಕಾಶಲಕ್ಷಣಂ ।
ಲಿಂಗಮಿತ್ಯುಚ್ಯತೇ ಸದ್ಭಿರ್ಯದ್ವಿನಾ ನ ಜಗಸ್ಥಿತಿಃ ॥

ಪರಮಾಕಾಶಮವ್ಯಕ್ತಂ ಪ್ರಬೋಧಾನಂದಲಕ್ಷಣಂ ।
ಲಿಂಗಂ ಜ್ಯೋತಿರ್ಮಯಂ ಪ್ರಾಹುರ್ಲೀಯಂತೇ ಯತ್ರ ಯೋಗಿನಃ॥

ತರಂಗಾದಿರ್ಯಥಾಸಿಂಧೋಃ ಸ್ವರೂಪಾನ್ನಾತಿ ರಿಚ್ಯತೇ ।
ತಥಾ ಶಿವಾತ್ ಪರಾಕಾಶಾದ್ವಿಶ್ವಮೇತನ್ನ ಭಿದ್ಯತೇ ॥

ಯಥಾ ಜ್ಯೋತೀಂಷಿ ಭಾಸಂತೇ ಭೂತಾಕಾಶೇ ಪೃಥಕ್ ಪೃಥಕ್ ।
ತಥಾ ಭಾಂತಿ ಪರಾಕಾಶೇ ಬ್ರಹ್ಮಾಂಡಾನಿ ವಿಶೇಷತಃ ॥

(ಶ್ಲೋ. ೫೭,೫೮,೬೧,೬೨,೬೪,೬೬).

ಆಕಾಶಾಂಗನಾದ ಶರಣನ ಮಹತ್ವ ಆಕಾಶದಷ್ಟೇ ಎತ್ತರ ಬಿತ್ತರವೆನಿಸಿದೆ ನಭೋಮಂಡಲದಲ್ಲಿ ವಿರಾಜಿಸುವ ವ್ಯಾಪಕವಾದ ಭೂತಾಕಾಶವನ್ನು ನಾವು ನೋಡುತ್ತಲಿದ್ದೇವೆ. ಭೂತಾಕಾಶಕ್ಕೆ ತಾಯ್ಮನೆ ಮಹಾಕಾಶ. ಮಹಾಕಾಶವನ್ನು ಪರಾಕಾಶ ಅಥವಾ ಚಿದಾಕಾಶವೆಂದೂ ಕರೆಯುವರು.

ಆಕಾಶಾತ್ ಸಂಭವತೀಹ ವಿಶ್ವಂ ॥

ಎಂದು ಶ್ರುತಿವಾಣಿಯಿಂದ ಅಂದರೆ, ಅಂಡಾಂಡ ಬ್ರಹ್ಮಾಂಡ ಪಿಂಡಾಂಡಗಳ ಉತ್ಪತ್ತಿಗೆ ಸ್ಥಿತಿ ಲಯಗಳಿಗೆ ಪರಾಕಾಶ ಮೂಲಸ್ಥಲವೆನಿಸಿದೆ. ಈ ಸ್ಥಲವನ್ನು ಬಯಲು, ನಿರ್ಬಯಲು, ಶೂನ್ಯಸ್ಥಲವೆಂದೂ ಶಿವಾದ್ವೈತ ಸಿದ್ಧಾಂತದಲ್ಲಿ ಕರೆಯಲಾಗಿದೆ.

**ಮೂಲಂ ಯಃ ಪ್ರಾದುರಾಸೀತ್ ॥**

ಶ್ರೀಮದ್ಭಾಗವತ ಪ್ರೋಕ್ತ ಶ್ರೀ ಗಜೇಂದ್ರಮೋಕ್ಷವೆಂಬ ಮಂಗಳ ಘಟ್ಟದಲ್ಲಿ ಭೀಕರವಾದ ಮೊಸಳೆ ಹೊಳೆಯಲ್ಲಿ ನೀರು ಕುಡಿಯುತ್ತಲಿದ್ದ ಗಜೇಂದ್ರನ ಕಾಲನ್ನು ಕಚ್ಚಿ ಹಿಡಿದು ಸೆಳೆಯುತ್ತಿರುವಾಗ. ಬೇರೆ ಆನೆಗಳೂ ಮತ್ತು ಯಾರೂ ತನ್ನ ಸಹಾಯಕ್ಕೆ ಬಾರದಿರುವುದನ್ನೂ ಕಂಡ ಗಜೇಂದ್ರನು, ಭಗವಂತನೊಬ್ಬನೇ ತನ್ನ ರಕ್ಷಕನೆಂದು ದೃಢಭಾವದಿಂದ ನಂಬಿ, ದುಃಖಿತನಾದ ಗಜೇಂದ್ರ, ಸೊಂಡಿಲದ ಹಸ್ತವನ್ನು ಆಕಾಶದತ್ತ ಎತ್ತಿ ಕಣ್ಣ ಕಂಬನಿಗಳಿಂದ ಆಪದ್ಬಾಂಧವ ಅನಾಥರಕ್ಷಕನಾದ ಭಗವಂತನನ್ನು ಸ್ತುತಿಸುತ್ತಾ—

**ನಕ್ರಾ ಕ್ರಾಂತೀ ಕರೀಂದ್ರೇ ಮುಕುಳಿತ ನಯನೇ ।**
**ಮೂಲಮೂಲೇತಿ ಖಿನ್ನೇ ನಾಹಂ ನಾಹ, ನಚಾಹಂ ।**
**ನಚಾಭವತುಮಾಃ ತಾದೃಶೀ ಮಾದೃಶೇಷನ್ ।**
**ಮೂಲಂ ಯಃ ಪ್ರಾದುರಾಸೀತ್....॥**

ಪರಮಾತತ್ವ ಪರಾಕಾಶ ಮಹಾಕಾಶಸ್ವರೂಪಿ, ಪರಶಿವ ಬ್ರಹ್ಮನನ್ನು ಪ್ರಾರ್ಥಿಸಿ ಪ್ರಾಣರಕ್ಷಣೆಗಾಗಿ ಶರಣಾಗತಿ ಭಾವದಿಂದ ಸ್ತುತಿಸಿದ, ಮಹದಂಶವನ್ನು ಶ್ರೀ ಶುಕಬ್ರಹ್ಮ (ಶುಕಾಚಾರ್ಯರು) ಶ್ರೀಮದ್ಭಾಗವತ ಪುರಾಣದಲ್ಲಿ ಪರೀಕ್ಷತ್ ಮಹಾರಾಜನಿಗೆ ಬೋಧಿಸಿರುವರು. ನಾಮಾತೀತ, ರೂಪಾತೀತ, ಗುಣಾತೀತ ಪರಂಜ್ಯೋತಿ ಚಿನ್ಮಯಸ್ವರೂಪಿ, ಭಗವಂತನ ಮಹಾಕಾಶಸ್ವರೂಪವಿರುತ್ತೆ. ಸರ್ವಾಂತರ್ಯಾಮಿ, ಸರ್ವವ್ಯಾಪಿ ಶಿವನು, ಸರ್ವವನ್ನು ಗರ್ಭಿಕರಿಸಿಕೊಂಡಿತು. **"ವ ಅದೃಶ್ಯ, ಅನಂತ, ದಿವ್ಯ ನಿರಾಕಾರ ರೂಪ, ಮಹಾಕಾಶಸ್ಥಲ ಸ್ಥಲ"**ವೆನಿಸಿದೆ.

ಬ್ರಹ್ಮಾಂಡದಲ್ಲಿನ ಮಹಾಕಾಶವೇ ಪಿಂಡಾಂಡದಲ್ಲೂ ಇದೆ. ಎಂದು ಮಠದೊಳಗಿನ ಆಕಾಶವನ್ನು ಮಹಾಶವನ್ನು ಮಠಾಕಾಶ ವೆಂದರೆ, ಘಟ (ಬಿಂದಿಗೆ) ದೊಳಗಿನ ಆಕಾಶವನ್ನು ಘಟಾಕಾಶವೆನ್ನುವರು. ಆಕಾಶಕ್ಕೆ ಉಪಾದಿ ಭೇದದಿಂದ ಬೇರೆ ಬೇರೆ ಹೆಸರುಗಳಿದ್ದರೂ, ಉಪಾದಿಗಳು ನಾಶವಾದ ನಂತರ ಆಕಾಶ ಮಹಾಕಾಶವಾಗಿಯೇ ಅನವಚ್ಛಿನ್ನವಾಗಿ ಬೆಳಗುವುದು ಮಹಾ

ಕಾಶದ ಇಂತಹ ಸ್ವಸ್ವರೂಪವನ್ನು ಅರಿಯುವುದು ಮಹಾಕಾಶಸ್ಥಲ ಎನಿಸಿದೆ. ಮಹಾಕಾಶವೇ ಮಹಾಲಿಂಗವೆಂದು ಶ್ರೀಗುರು ರೇಣುಕರು ಅಪ್ಪಣೆ ಕೊಡಿಸಿರುವರು.

**ಆಲಯಂ ಸರ್ವಭೂತಾನಾಂ ಲಯಾತ್ಮಕಂ ಲಿಂಗಮುಚ್ಯತೆ ।**

**ಲಿಂಗಮೇವ ಪರಂಜ್ಯೋತಿರ್ಭವತಿ ಬ್ರಹ್ಮ ಕೇವಲಂ ॥**

**ಲಿಂಗಂ ಸದ್ರೂಪತಂ ಲಕ್ಷ್ಯತೇ ವಿಶ್ವಸಿದ್ಧಯೇ ।**

**ಅಪರಿಚ್ಛಿನ್ನಮವ್ಯಕ್ತಂಲಿಂಗಂ ಬ್ರಹ್ಮ ಸನಾತನಂ ॥**

**ಉಪಾಸನಾರ್ಥಮಂ ತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ॥**

ಎಂಬ ವೇದೋಪನಿಷತ್ ಹಾಗೂ ಕಾಮಿಕಾದಿ ವಾತೂಲಾಂತರ್ಗತ ೨೮ ಶಿವಾಗಮಗಳಲ್ಲೂ ಮಹಾಲಿಂಗವೇ ಮಹಾಕಾಶವೆಂದು ನಿಶ್ಚಯಿಸಲಾಗಿದೆ. ಅಖಂಡ ಚೈತನ್ಯ ಪರಿಪೂರ್ಣ ಅರಿವು ಮತ್ತು ಅಖಂಡಾನಂದಸ್ವರೂಪಿ, ಚಿದ್ ಬೆಳಗು ಅನವಚ್ಛಿನ್ನವಾಗಿ ಒಂದುಗೂಡಿರುವ ಸಂಗಮಸ್ಥಾನ ಘನಲಿಂಗವೆನಿಸಿದೆ. ಆ ಅನೋಘವಾದ ಸ್ಥಿತಿಯನ್ನು ಮನದುಂಬಿ ಸ್ತುತಿಸುತ್ತಾ, ಭರ್ತೃಹರಿ ತನ್ನ ಶತಕತ್ರಯದ ಆರಂಭದಲ್ಲಿ—

**ದಿಕ್ಕಾಲಾದ್ಯನವಚ್ಛಿನ್ನಾನಂತ ಚಿನ್ಮಾತ್ರಮೂರ್ತಯೆ ।**

**ಸ್ವಾನುಭೂತ್ಯೇಕಮಾನಾಯ ನಮಃ ಶಾಂತಾಯ ತೇಜಸೇ ॥**

ಅಂದರೆ ದಿಕ್ಕಾಲಾದಿಗಳನ್ನು ಗರ್ಭೀಕರಿಸಿಕೊಂಡು, ಸಚ್ಚಿದಾನಂದ ನಿತ್ಯ ಪರಿಪೂರ್ಣ ಅಖಂಡಾ ದ್ವಿತೀಯ ಮಹಾಕಾಶ, ಪರಾಕಾಶಸ್ವರೂಪಿ ಪರಶಿವತತ್ತ್ವ, ಶಿವಯೋಗಿಗಳ ಸ್ವಾನುಭೂತಿಯಲ್ಲಿ ಮಿಂಚಿನಂತೆ ಕಾಮನಬಿಲ್ಲಿನಂತೆ ಕ್ಷಣಾರ್ಧ ತೋರಿ ಶಾಂತಿದಾಯಕವಾಗುವುದು ಎಂದು ವರ್ಣಿಸಿದ್ದಾನೆ. ಪುರುಷ ಸೂಕ್ತದಲ್ಲಿ **"ನಾಭ್ಯಾ ಆಸೀದಂತರಿಕ್ಷಂ"** ಅಂದರೆ ಮಹಾಕಾಶಮಯ ಜ್ಯೋತಿರ್ಲಿಂಗದ ನಿರಾಡ್ರೂಪದ ನಾಭಿ ಕಮಲದಿಂದ **"ಹೊರಹೊಮ್ಮಿತಂತರಿಕ್ಷಂ ಪರಮನ ಹೊಕ್ಕಳಿಂ"** ಅಂದರೆ ಪರಶಿವನ ನಾಭಿಯಿಂದ ಭೂತಾಕಾಶ ಆವಿರ್ಭವಿಸಿರಬೇಕಾದರೆ ಪರಮಾತ್ಮನ ಭುಜ, ಕಂಠ, ಶಿರಸ್ಸು, ಜಟಾಭಾರ ಅಲ್ಲಿಂದತ್ತ ಎಷ್ಟು ಉನ್ನತದಲ್ಲಿ ಊರ್ಧ್ವಮುಖವಾಗಿ ಹಮ್ಮಿರುವ ಅಂಶ ಚತುರ್ಮುಖ ಬ್ರಹ್ಮನಿಗೆ ಅವೇದ್ಯವೆಂದಬಳಿಕ, ಅದು ಅಚಿಂತ್ಯ ಅಗೋಚರವೇ ಆಯಿತು.

# ಲಿಂಗಸ್ಥಲ ೪೩

## ಕ್ರಿಯಾಪ್ರಕಾಶಸ್ಥಲಂ (ಪರಿ. ೧೯)

**ಶಿವಸ್ಯ ಪರಿಪೂರ್ಣಸ್ಯ ಪರಾಕಾಶಸ್ವರೂಪಿಣಃ ।**
**ಆತ್ಮತ್ವೇನಾಽನುಸಂಧಾನಾತ್ ಕ್ರಿಯಾದ್ಯೋತನವಾನ್ ಯಮಿ॥**

**ನಿಷ್ಕಲಂಕ ಚಿದಾನಂದಗಗನೋಪಮ ರೂಪಿಣಃ ।**
**ಶಿವಸ್ಯ ಪರಿಪೂರ್ಣಸ್ಯ ವೃತ್ತಿಶ್ಚೈತನ್ಯರೂಪಿಣೀಂ ॥**

**ಸರ್ವೇಂದ್ರಿಯಾಣಾಂ ವ್ಯಾಪಾರೇ ವಿದ್ಯಮಾನೇಪಿ ಸಂಯಮಿ।**
**ಪ್ರತ್ಯಙ್ಮುಖೇನ ಮನಸಾ ಶಿವಂ ಪಶ್ಯನ್ ಪ್ರಮೋದತೇ ॥**

(ಶ್ಲೋ. ೩೮,೩೯,೭೨,)

**"ಮಂಗಳಂ ಮಂಗಳಾನಾಂ"** ಎಂಬಂತೆ, ಮಂಗಳಗಳಿಗೆಲ್ಲಾ ಸರ್ವ ಮಂಗಳಸ್ವರೂಪಿ ಜಗನ್ಮಂಗಳಮೂರ್ತಿ,ನಿತ್ಯಪರಿಪೂರ್ಣ ಪರಶಿವನ, ದಿವ್ಯ ಸಾನ್ನಿಧ್ಯವನ್ನು ಶಿವಯೋಗಿ ತನ್ನ ಚಿತ್ತಸ್ಥೈರ್ಯದಿಂದ ಅಂತರಂಗದಲ್ಲಿ ಮನಗಂಡು ಸರ್ವ ಕಾಲಾ ಸರ್ವಾವಸ್ಥೆಗಳಲ್ಲೂ ಶಿವನ ಅನುಸಂಧಾನ ಕ್ರಿಯಾಯೋಗದಿಂದ ಪ್ರಪುಲ್ಲಿತನಾಗಿ, ಆತ್ಮಾರಾಮನಾಗಿ, ರಮಿಸುವ ಕ್ರಿಯೆ, ಕ್ರಿಯಾ ಪ್ರಕಾಶನ ಸ್ಥಲವೆನಿಸಿದೆ. ಈ ವಿಧದ ವೀರ್ಯವತ್ತರವಾದ ದಿವ್ಯಾನುಸಂಧಾನದಿಂದ ಶರಣನು ಕ್ರಮೇಣ ಬಲಿತ ಶಿವಭಾವದಿಂದ ತಾನೇ ಶಿವಸ್ವರೂಪಿಯೆಂದರಿತು, ರಮಿಸುವನು. ನಿಷ್ಕಲಂಕನೂ, ಸಚ್ಚಿದಾನಂದಮಯನೂ, ಚಿದಾಕಾಶಸ್ವರೂಪನೂ ಆಗಿ ಪರಿಶೋಭಿಸುವ ಶಿವನಸ್ವವೃತ್ತಿಯು, ದೇದೀಪ್ಯಮಯ ಜ್ಞಾನ ಸ್ವರೂಪವಾಗಿರುವುದು. ಅಂದರೆ, ಕ್ರಿಯಾವಿಶಿಷ್ಟ ಜ್ಞಾನಸ್ವರೂಪದಿಂದ ಪರಿಶೋಭಿತವಾಗಿಹುದೆಂದು ಭಾವವು ನಿರಾಕಾರ ನಿಷ್ಕಲಂಕ, ಅನಂತ ಹಾಗೂ ನಿತ್ಯವೆನಿಸಿದ ಪರಶಿವನಅಖಂಡ ತೇಜಸ್ಸಿನಲ್ಲಿ, ತನ್ನ ಚಿತ್ತವೃತ್ತಿಗಳನ್ನು ವಿಲೀನಗೊಳಿಸಿದ ಶಿವಯೋಗಿಯ ಶಕ್ತಿ ಚೈತನ್ಯ; ಶಿವನ ಚಿಚ್ಛೈತನ್ಯಶಕ್ತಿಯಂತೆಯೇ, ಜ್ಞಾನವಿಶಿಷ್ಟ ಕ್ರಿಯಾಸ್ವರೂಪವಾಗಿರುವುದೆಂದು ಅರಿಯಬೇಕು. **"ವೃತ್ತಿಶ್ಚೈತನ್ಯರೂಪಿಣೀಂ"** ಅಂದರೆ, ಕ್ರಿಯಾಜ್ಞಾನಸಮ ಸಮುಚ್ಚಯ ಪ್ರಜ್ಞಾನಾನಂದ ಘನತತ್ವಸ್ವರೂಪಿ ಪರಶಿವನ ಚೈತನ್ಯವೇ ತನ್ನ ವೃತ್ತಿಚೈತನ್ಯವೆಂದರಿತು,

ಕ್ರಿಯಾವಂತ ಶ್ರೋತ್ರೀಯ ಬ್ರಹ್ಮನಿಷ್ಠನಾಗಿ ಜಾಗೃತಭಾವವುಳ್ಳ ವೃತ್ತಿಯೆಂದರ್ಥ. ಕಾಯಕವೇ ಕೈಲಾಸವೆಂಬ ಅರ್ಥ ಇಲ್ಲಿ ಧ್ವನಿಸುತ್ತೆ. ಶರಣನ ಸತ್ಕ್ರಿಯೆಯೇ ಶಕ್ತಿ, ಇಂತಪ್ಪ ಶಕ್ತಿ ಅಂಶವೇ, ಮಹಾಸತಿಯೆಂದರಿಯಬೇಕು. ನಿರತಿಶಯಾನಂದ ತೇಜೋರೂಪವೇ ಲಿಂಗವೆನಿಸಿದೆ. ಲಿಂಗಪತಿ ಅಂಗತಾ ಮಹಾಸತಿಯರ ಸಮರಸ ಮಧುರ ಚಿತ್ತ ವೃತ್ತಿಯೇ ಕ್ರಿಯಾಪ್ರಕಾಶನ ಸ್ಥಲವೆನಿಸಿದೆ. ಶಿವಾಭಿಮುಖನಾಗಿ ರಂಜಿತನಾದ ಪರಮ ಶಿವಯೋಗಿಯ ಪಂಚೇಂದ್ರಿಯಗಳ ವಿಶಿಷ್ಟ ವ್ಯಾಪಾರ ತತ್ಸಂಬಂಧವಾದ ಚಿತ್ತವೃತ್ತಿಗಳನ್ನು ಸುತ್ತಲೂ ಹಬ್ಬಿ ಕೊಂಡಿದ್ದರೂ ಶರಣನು ಕಳಂಕರಹಿತನಾಗಿ, ಅಲಿಪ್ತ ಮನಸ್ಸಿನಿಂದ ಅಂತರ್ಮುಖನಾಗಿ ಶಿವಸಾಕ್ಷಾತ್ಕಾರದ, ಸುಖಾನುಭಾವದಿಂದ ಆನಂದಸಂದೋಹಭರಿತನಾಗಿರ್ಪ ಪರಮ ಚೈತನ್ಯವೇ ಕ್ರಿಯಾಪ್ರಕಾಶನ ಸ್ಥಲವೆನಿಸಿದೆ.



## ಲಿಂಗಸ್ಥಲ ೪೭
## ಭಾವಪ್ರಕಾಶಸ್ಥಲಂ (ಪರಿ. ೧೯)

**ತರಂಗಾದ್ಯಾ ಯಥಾ ಸಿಂಧೋರ್ನ ಭಿದ್ಯಂತೇ ತಥಾತ್ಮನಃ ।**
**ಭಾವಾ ಬುದ್ಧ್ಯಾದಯಃ ಸರ್ವೇ ಯತ್ತದ್ಭಾವಪ್ರಕಾಶನಂ ॥**

**ಶಿವ ಏವ ಜಗತ್ಸರ್ವಂ ಶಿವ ಏವಾಹಮಿತ್ಯಪಿ ।**
**ಭಾವಯನ್ ಪರಮೋ ಯೋಗೀ ಭವದೋಷೈರ್ನಬಾಧ್ಯತೇ ॥**

**ಶಿವಭಾವೇ ಸ್ಥಿರೇಜಾತೇ ನಿರ್ಲೇಪಸ್ಯ ಮಹಾತ್ಮನಃ ।**
**ಯೋ ಯೋ ಭಾವಾಃ ಸಮುತ್ಪನ್ನಾ ಸ್ತೇ ತೇ ಶಿವಮಯಾಃ ಸ್ಮೃತಾಃ ॥**

**ರಾಗದ್ವೇಷಾದಯೋ ಭಾವಾಃ ಸಂಸಾರಕ್ಲೇಶಕಾರಣಂ ।**
**ತೇಷಾಮು ಪರಮೋ ಯತ್ರ ತತ್ರ ಭಾವಃ ಶಿವಾತ್ಮಕಃ ॥**

(ಶ್ಲೋ. ೭೪,೭೫,೭೬,೭೯).

ಶಿವಯೋಗಿಯ ನಿತ್ಯನೈಮಿತ್ತಿಕಾದಿ ಸತ್ಕರ್ಮಗಳೆಲ್ಲಾ ಶಿವಭಾವದಿಂದ ವಿಜೃಂಭಿತವಾಗಿರಲು, ಆತನ ಭಾವ ಬುಧ್ಯಾದಿಗಳು ಸರ್ವದಾ ಶಿವನನ್ನು

ಆಶ್ರಯಿಸಿ, ಶಿವಂಕರದ ಶಿವಾಕಾರ ವೃತ್ತಿಗಳಿಂದ, ಪರಮ ಚೈತನ್ಯಮಯವೆನಿಸಿರುವುವು. ಸಮುದ್ರ ಮತ್ತು ಅದರ ಅಲೆಗಳೂ ಹೇಗೆ ಅಭಿನ್ನವೆನಿಸಿರುವುವೋ ಅದರಂತೆ ಬುದ್ಧಿ ಭಾವ ಇತ್ಯಾದಿಗಳು ಆತ್ಮನ ಅಂಶವೆನಿಸಿವೆ.

ಸ್ಥಾವರ ಜಂಗಮಾತ್ಮಕವಾದೀ ಅಖಂಡ ವಿಶ್ವ, ವಿಶ್ವಪತಿ ವಿಶ್ವೇಶ್ವರನಿಂದ ಸಂಕಲ್ಪಮಾತ್ರೇಣ ಸೃಷ್ಟಿತವಾಗಿ, ಪರಮಾತ್ಮನ ವಿರಾಡ್ರೂಪವೆನಿಸಿದೆ. ಶ್ರುತಿ ದೇವಿ ಈ ಅಂಶವನ್ನು ಪ್ರತಿಪಾದಿಸುತ್ತಾ—

**ಶಿವ ಏವ ಜಗತ್ಸರ್ವಂ ಶಿವಾ ದನ್ಯನ್ನ ವಿದ್ಯತೇ ।**
**ರೇ ರೇ । ಶಿವಮಯಂ ಜಗತ್ಸರ್ವಂ ॥**

ಅಣುರೇಣು ತೃಣಕಾಷ್ಠವೆಲ್ಲಾ ಪರಮಾತ್ಮನ ಸ್ವರೂಪವೇ ಆಗಿರುವುದು. "**ಬ್ರಹ್ಮೈವೇದಮಿದಂ ಸರ್ವಂ !**" ಎಂದಿದೆ ಶಿವಾಗಮ "**ಆತ್ಮೈವೇದಂ ಸರ್ವಂ**" ಎಂದು ಉಪನಿಷತ್ತು ಸಾರುತ್ತಲಿವೆ. ಶಿವಶರಣಂಗೆ ಸೃಷ್ಟಿಯೆಲ್ಲಾ ಶಿವಸ್ವರೂಪ, ತನ್ನಿರವೆಲ್ಲಾ ಶಿವಸ್ವರೂಪ. ಹೆಚ್ಚೇನು ತಾನೂ ಶಿವಸ್ವರೂಪವೆಂಬ ಭಾವದಿಂದ ಸದಾ ಸದ್ಭಾವ ಗರ್ಭಿತನಾಗಿ ಆನಂದಿಸುತ್ತಿರ್ಪನಾದ್ದರಿಂದ, ಶಿವಶರಣಂಗೆ ಭವದೋಷವೆಲ್ಲಿಯದು.

**ಪ್ರಾಪಂಚಿಕ ಸುಖಂ ನಾಸ್ತಿ । ಶರಣಸ್ಥಲಮುತ್ತಮಂ ॥**

ಎಂದು ಶಿವಾಗಮಗಳು ಉಗ್ಗಡಿಸುತ್ತಲಿವೆ ಅಂದ ಬಳಿಕ ಸಂಸಾರ ಕಾರಣೀಭೂತವಾದ, ರಾಗದ್ವೇಷಾದಿಗಳು ಶಿವಯೋಗಿಯನ್ನು ಸ್ಪರ್ಶಿಸಲಾರವು. ಸಹಸ್ರ ಕಿರಣಗಳಿಂದ ಪ್ರಜ್ವಲಿಸುವ ದಿನಮಣಿಯನ್ನು ನಿಶಾದೇವಿ, ತನ್ನ ಸೆರಗಿನಿಂದ ಪೂರ್ಣ ಮುಚ್ಚಲು ಸಾಧ್ಯವೇ? ಅದರಂತೆ ಶಿವಯೋಗಿಯ ಶಿವಸದೃಶನಾದ ಆತ್ಮಪ್ರಕಾಶವನ್ನು ಅವಿದ್ಯೆ, ಅಜ್ಞಾನಗಳು, ಪೂರ್ಣ ಆಕರ್ಶಿಸಲಾರವು.

**ಯಾದೃಶೀ ಭಾವನಾ । ಯತ್ರ ಸಿದ್ಧಿರ್ಭವತಿ ತಾದೃಶೀ ॥**

ಅಚ್ಚಳಿಯದ ಶಿವಭಾವವುಳ್ಳ ಶಿವಶರಣಂಗೆ ಆವಭಾವಗಳು ಮೈದೋರಿದರೂ, ಅವೆಲ್ಲಾ ಅಚ್ಚ ಶಿವಮಯ ಭಾವಂಗಳಾದ್ದರಿಂದ, ಭಾವಪ್ರಕಾಶಸ್ಥಲವೆಂದು ಮಹಾಚಾರ್ಯರು ಅಪ್ಪಣೆಕೊಡಿಸಿದ್ದಾರೆ.

ಕ್ಲೇಶಮೂಲಶೋಷಣಂ । ಪ್ರಕಾಶಮಾನ ಭಾಷಣಂ ।
ಕಾಂಚಿವಿಷ್ಣುಪೋಷಣಂ । ಪರಿಸ್ಫುರದ್ವಿಭೀಷಣಂ ।
ಕಾಲಕಾಲ ತೋಷಣಂ । ವಿಶಾಲವೇಷ ಭೂಷಣಂ ।
ರಾಜರಾಜ ಪೂಜಿತಂ । ಭಜಾಮಿ ರೇಣುಕಂ ಗುರುಂ ॥

ಯೋಗಾನಂದಕರೀ ರಿಪುಕ್ಷಯಕರೀ । ಧರ್ಮೈಕನಿಷ್ಠಾಕರೀ ॥
ಚಂದ್ರಾರ್ಕಾನಲಭಾಸಮಾನ ಲಹರೀ । ತ್ರೈಲೋಕ್ಯರಕ್ಷಾಕರೀ ॥
ಸರ್ವೈಶ್ವರ್ಯಕರೀ ತಪಃ ಫಲಕರೀ । ಕಾಶೀಪುರಾಧೀಶ್ವರೀ ॥
ಭಿಕ್ಷಾಂದೇಹಿ ಕೃಪಾವಲಂಬನಕರೀ । ಮಾತಾನ್ನಪೂರ್ಣೇಶ್ವರೀ ॥

---

ಲಿಂಗಸ್ಥಲ ೪೪

ಜ್ಞಾನಪ್ರಕಾಶಸ್ಥಲಂ (ಪರಿ ೧೯)

ಮುಕ್ತಸ್ಯ ಜ್ಞಾನ ಸಂಬಂಧೋ ಜ್ಞೇಯಾಭಾವಂ ಸ್ವಭಾವತಃ ।
ಉಪಾಧಿ ಸಹಿತಂ ಜ್ಞಾನಂ ಸ ಭೇದ ಮತಿವರ್ತತೇ ॥

ಜ್ಞಾನಸ್ಯ ವಿಷಯೋ ತತ್ವೇ ಶಿವಾಖ್ಯೇ ಚಿತ್ಸುಖಾತ್ಮನಿ ।
ಆತ್ಮೈಕತ್ವಾನುಸಂಧಾನಂ ಜ್ಞಾನಮಿತ್ಯುಚ್ಯತೇ ಬುಧೈಃ ॥

ಬ್ರಹ್ಮಜ್ಞಾನೇ ಸಮುತ್ಪನ್ನೇ ನಿಶ್ಶೋಪಾಧಿವಿವರ್ಜಿತೇ ।
ಸರ್ವಂ ಸಂವಿನ್ಮಯಂ ಭಾತಿ ತದನ್ಯನ್ನೈವ ದೃಶ್ಯತೇ ॥

(ಶ್ಲೋ. ೮೧,೮೩,೮೪).

ಜ್ಞಾನಪ್ರಕಾಶಸ್ಥಲ ಉನ್ನತೋನ್ನತವಾದ ಮಹಾಸ್ಥಲ. ಶರಣನು ಉಚ್ಚಾಶ್ರಯಸ್ಥಿತಿಯಲ್ಲಿ ಕಂಡನುಭವಿಸುವ ಆತ್ಮೀಯ ಚಿದಾಕಾಶಸ್ಥಲವಿದು. ಶರಣನು ನಿಜಕ್ಕೂ ಚಿನ್ಮಯ, ಚಿದ್ರೂಪಿ, ಚಿತ್ಪ್ರಕಾಶ, ಚಿದಾತ್ಮ ಸ್ವರೂಪಿ. ಸಚ್ಚಿದಾನಂದಮಯ ಲಿಂಗದೇಹಿ ಶಿವಶರಣ.

ಓಂ ಪೀಠಂ ಯಸ್ಯ ಧರಿತ್ರಿ । ಜಲಧರ ಕಲಶಂ ।
ಲಿಂಗಮಾಕಾಶಮೂರ್ತಿಂ । ನಕ್ಷತ್ರಂ ಪುಷ್ಪಮಾಲ್ಯಂ ॥

ಗ್ರಹಗಣ ಕುಸುಮಂ । ನೇತ್ರಂಚಂದ್ರಾರ್ಕ ವಹ್ನಿಂ ।
ಕುಕ್ಷಿ ಸಪ್ತಸಮುದ್ರಂ । ಭುಜಗಿರಿ ಶಿಖರಂ ॥

ಸಪ್ತಪಾತಾಳ ಪಾದಂ । ವೇದಂ ವಕ್ತ್ರಂ ಶಾಸ್ತ್ರಂ ಷಡಾಂಗಂ ।
ದಶದಿಶ ವಸನಂ । ದಿವ್ಯಲಿಂಗಂ ನಮಾಮಿ ॥

ಲಿಂಗಾಕಾರದ ಸ್ವರೂಪ ಚಿದಾಕಾಶಸ್ವರೂಪವೆಂದು, ವೇದಾಗಮಗಳು ಘೋಷಿಸುತ್ತಲಿವೆ. ಇಂತಪ್ಪ ಪರಮಾತ್ಮನ ವಿರಾಡ್ರೂಪದಲ್ಲಿ ಭೂತಾಕಾಶ, ಪುರುಷ ಸೂಕ್ತದಂತೆ "ನಾಭ್ಯಾ ಆಶೀದಂತರಿಕ್ಷಂ" ಪರಮಾತ್ಮನ ನಾಭೀಕಮಲದಿಂದ "ಹೊರಹೊಮ್ಮಿತಂತರಿಕ್ಷಂ । ಪರಮನ ಹೊಕ್ಕುಳಿಂ ॥" ಹೊಕ್ಕುಳಿಂದ ಭೂತಾಕಾಶ ಉದಯಿಸಿತು. ಅಂದಮೇಲೆ, ಜ್ಞಾನಸ್ವಪ್ರಕಾಶವೆನಿಸಿದ ಶಿರಸ್ಸು ಇನ್ನೆಷ್ಟು ಎತ್ತರದಲ್ಲಿ ಹಬ್ಬಿ ಊರ್ಧ್ವಗಾಮಿಯಾಗಿರುವುದೋ ಬಲ್ಲವರಾರು; ಜಗತ್ಸೃಷ್ಟಿಕರ್ತ ಚತುರ್ಮುಖ ಬ್ರಹ್ಮ, ಶಿವನ ಮುಡಿಯನ್ನು ಕಾಣಲು ಬಯಸಿ, ಅಂತರಿಕ್ಷದಲ್ಲಿ ಊರ್ಧ್ವ ಗಾಮಿಯಾಗಿ, ಹಂಸಪಕ್ಷಿ ರೂಪದಲ್ಲಿ—

ತವೈಶ್ವರ್ಯಂ ಯತ್ನಾದ್ । ಯದುಪರಿ, ವಿರಿಂಚಿರ್ಹರಿ ರಧಃ ।
ಪರಿಚ್ಛೇತ್ತುಂ ಯಾತಾ ವನಲ ಮನಲ ಸ್ಕಂಧವಪುಷಃ ॥

ತತೋ ಭಕ್ತಿಶ್ರದ್ಧಾ ಭರ ಗುರು । ಗೃಣದ್ಭ್ಯಾಂಗಿರಿಶಯತ್ ।
ಸ್ವಯಂ ತಸ್ತೇ ತಾಭ್ಯಾಂ । ತವ ಕಿಮನು ವೃತ್ತಿ ರ್ನ ಫಲತಿ ॥

(ಶಿವಮಹಿಮ್ನಾಸ್ತೋತ್ರ)

ತನ್ನ ಶಕ್ತಿಮೀರಿ ಅಂತರಿಕ್ಷಗಾಮಿಯಾಗಿ ಮೇಲೆ ಮೇಲೆ, ಬಹಳ ಮೇಲೇರಿ ಹಾರಿಹೋದರೂ ಶಿವನ ಜಟಾಭಾರ ಕಾಣಲಿಲ್ಲ. ಅಲ್ಲಿಂದ ಮೇಲೆ ಹಾರಲು ಅಶಕ್ತನಾಗಿ, ಚತುರ್ಮುಖ ಬ್ರಹ್ಮನು ತಲೆಯೆತ್ತಿ ನೋಡಿದಾಗ, ಅಂತರಿಕ್ಷ ಅಲ್ಲಿಂದತ್ತ ಇನ್ನೂ ಮೂರರಷ್ಟು ಘನಗಂಭೀರವಾಗಿ ಬಹು ಎತ್ತರದಲ್ಲಿ ಬೆಳೆದು ಊರ್ಧ್ವಗಾಮಿಯಾಗಿರುವುದನ್ನು, ತನ್ನ ಜ್ಞಾನಸ್ವಪ್ರಕಾಶದಿಂದ ಕಂಡು,

**ಅತದ್ವ್ಯಾವೃತ್ತ್ಯಾಯಂ । ಚಕಿತ ಮಭಿದತ್ತೇ ಶ್ರುತಿರಪಿ ॥**

ಚತುರ್ವೇದಗಳಿಗೂ, ಚತುರ್ಮುಖ ಬ್ರಹ್ಮನಿಗೂ ಕಾಣಿಸದೆ ಇರುವ ಶಿವನ ಶಿರಸ್ಸಿನ ಜ್ಞಾನಾಕಾಶವು ಯಂಥವರಿಗೂ ಸಹೇದಾಶ್ಚರ್ಯವೆನಿಸಿದೆ. ವಾಙ್ಮನಸ್ಸುಗಳಿಗೆ ಅತೀತವೆನಿಸಿದೆ. ಈ ಅಂಶ ಶ್ರುತಿಗೂ ಆಶ್ಚರ್ಯವಿರುತ್ತೆ ಭೂತಾಕಾಶಕ್ಕೆ ತಾಯ್ಮನೆ ಪರಾಕಾಶ. **"ಆಕಾಶಾತ್ಸಂಭವತೀಹ ವಿಶ್ವಂ"** ಅಂದರೆ ಪರಾಕಾಶದಿಂದ,

**ಪರಬ್ರಹ್ಮಣಃ ಸಕಾಶಾತ್ ಪ್ರಕೃತಿಃ ।**
**ಆಕಾಶಾದ್ವಾಯುಃ ವಾಯೋರಗ್ನಿಃ ।**
**ಅಗ್ನೇರಾಪಃ ಅದ್ಭ್ಯಃ ಪೃಥಿವೀ ।**
**ಪೃಥಿವ್ಯಾ ಓಷಧಯಃ ಓಷಧಿಭ್ಯೋಽನ್ನಂ ।**
**ಅನ್ನಾದ್ರೇತಃ ರೇತಸಃ ಪುರುಷಃ ।**
**ಸವಾ ಏಷ ಪುರುಷೋಽಯಿ ಅನ್ನರಸಮಯಃ ॥**

ಆತ್ಮತತ್ವದಿಂದ ಕ್ರಮವಾಗಿ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವೀತತ್ವಗಳು ಆವಿರ್ಭವಿಸಿ, ಜ್ಞಾನಪ್ರಕಾಶದ ಚಿಜ್ಯೋತಿಯಲ್ಲಿ ಬೆಳಗುತ್ತಲಿರುವುವು. ಜ್ಞಾನಪ್ರಕಾಶಸ್ಥಲ ಸರ್ವತ್ರ ಹಾಸುಹೊಕ್ಕಾಗಿದ್ದರೂ ಅದು **"ಪ್ರಕೃತೇ ಪರಃ"** ಪ್ರಕೃತಿ ತತ್ತ್ವಕ್ಕೆ ಅತೀತವೆನಿಸಿದೆ. **"ತದ್ದೂರೇ ತದ್ವಂತಿಕೆ"** ಜ್ಞಾನಪ್ರಕಾಶಸ್ಥಲ ದೂರಕ್ಕೆ ಅತಿದೂರ, ಹತ್ತಿರಕ್ಕೆ ಅತ್ಯಂತ ಹತ್ತಿರ. **"ತ್ವಮೇವಾಹಂ, ತದೇವಾಹಂ"** ಎಂಬಷ್ಟು ನಿಕಟಸಂಬಂಧದಿಂದ ಶಿವೋಹಂ ಭಾವದಿಂ ಪ್ರಜ್ವಲಿತವೆನಿಸಿದೆ. ಇದು ಸರ್ವೋಪನಿಷತ್ತುಗಳ ಸಾರ. ಅಂಗಾಂಗಗಳೆಲ್ಲವೂ ಜ್ಞಾನಪ್ರಕಾಶದಿಂದ ಪ್ರಚೋದಿತವಾಗಿವೆ. **"ಪಿಂಡಾಂಡ ಬ್ರಹ್ಮಾಂಡಯೋರೈಕ್ಯಂ"** ಎಂಬ ಶಿವಾಗಮೋಕ್ತಿಯಂತೆ, ದೃಶ್ಯಾದೃಶ್ಯಪ್ರಪಂಚವೆಲ್ಲಾ ಜ್ಞಾನಪ್ರಕಾಶಸ್ಥಲದಲ್ಲಿ ಗರ್ಭೀಕೃತವಾಗಿದೆ. ಕೇನೋಪನಿಷತ್ತು ಈ ಅಂಶವನ್ನು ಹೊರಸೂಸುತ್ತಾ—

**ಕೇನೇಷಿತಂ ಪತತಿ ಪ್ರೇಷಿತಂ ಮನಃ ।**
**ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ ।**
**ಕೇನೇಷಿತಾಂ ವಾಚಮಿ ಮಾಂ ವದಂತಿ ॥**

**ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ।**
**ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯದ್ ॥**

**ವಾಚೋಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ।**
**ಚಕ್ಷುಷ ಶ್ಚಕ್ಷುರತಿ ಮುಚ್ಯಧೀರಾಃ ಪ್ರೇತ್ಯಾಸ್ಮಾಲ್ಲೋಕಾದ-**
**ಮೃತಾಭವಂತಿ ॥**

ಅಂದರೆ ಯಾರ ಇಚ್ಛೆಯಿಂದ ಮನವು ವಿಷಯಾದಿಗಳಲ್ಲಿ ತೂರುವುದೋ, ಯಾರ ಪ್ರೇರಣೆಯಿಂದ ಮೊದಲುಸಿರು ಚಲಿಸುವುದೋ, ಯಾರ ಇಚ್ಛೆಯಿಂದ ಜನರು ಮಾತನಾಡುವರೋ, ಯಾರ ಸ್ವಶಕ್ತಿ, ಸ್ವಚೈತನ್ಯದಿಂ, ಕಿವಿ, ಕಣ್ಣು, ಮೂಗುಗಳನ್ನು ನಿಯಮಿಸುವ, ದೈವವದು **"ಸ್ವಶಕ್ತಿ ಪ್ರಜಯೋಸ್ಯ ವಿಶ್ವಂ"** ಪರಶಿವನ ಅದೃಶ್ಯ ದಿವ್ಯಶಕ್ತಿ ವಿಶ್ವರೂಪದಲ್ಲಿ ಪ್ರಕಾಶಿತವಾಗಿದೆ ಎಂದು ಶಿವಸೂತ್ರ ಘೋಷಿಸುತ್ತಲಿದೆ. ಪರಮಾತ್ಮನ ಇಚ್ಛೆಯಿಲ್ಲದೆ **"ತೇ ನೈವ ತೃಣ ಮಪಿ ನ ಚಲತಿ"** ಒಂದು ಮರದೆಲೆ, ಒಂದು ತೃಣ ಭಗವಂತನಿಗೆ ಅರಿಯದೆ ಚಲಿಸುವಂತಿಲ್ಲ.

**"ಪರಾಸ್ಯ ಶಕ್ತಿ ರ್ವಿವಿಧೈವ ।**
**ಶ್ರೂಯತೇ, ಜ್ಞಾನ ಬಲ ಕ್ರಿಯಾಚ ॥**

**"ಬಹುಸ್ಯಾಂ ಪ್ರಜಾಯೇಯ"** ಇತ್ಯಾದಿ ಶ್ರುತಿವಾಕ್ಯ ಪ್ರಮಾಣಾನುಸಾರ, ದೈವೀ ಪ್ರೇರಣೆಯಿಂದ **"ಹೊರಸೂಸಿದ ಶಕ್ತಿ"** ಅದು ಕಿವಿಯ ಒಳಕಿವಿಯು; ಅದು ಮನದ ಮೊಳಮನವು ; ಅದು ವಾಕ್ಕಿನ ಮೊಳವಾಕ್ಕು; ಅದು ಜೀವದೊಳಗಣ ಜೀವ; ಅದು ಕಣ್ಣಿನ ಒಳಗಣ್ಣು ಇಂತು ಪರಶಿವನ ಚಿಚ್ಚೈತನ್ಯ ಪರತತ್ವ ಅಣುರೇಣು ತೃಣ ಕಾಷ್ಟದಲಿ ವ್ಯಾಪಿಸಿ ಅರಿವು ಆನಂದ ಮಯ ಪ್ರಕಾಶ ಅಂದರೆ ಜ್ಞಾನಪ್ರಕಾಶದಿಂದ ಪರಿಶೋಭಿತವಾಗಿದೆ.

ಜ್ಞಾನ, ಜ್ಞಾತೃ (ಪರಿಜ್ಞಾತ) ಜ್ಞೇಯವೆಂದು ತ್ರಿಪುಟೀ ಲಕ್ಷಣ ಗಳಿಂದ ಕೂಡಿದೆ. ಜ್ಞಾನವೆಂದರೆ ಅರಿವು ಜ್ಞಾತೃವೆಂದರೆ ಅರಿಯುವವನು. ಜ್ಞೇಯವೆಂದರೆ ಅರಿಯುವ ಪರವಸ್ತು. ಜ್ಞಾನಪ್ರಕಾಶಸ್ಥಲ, ತ್ರಿಪುಟಿ ಧರ್ಮ

ವನ್ನು ಹೊಂದಿದ್ದರೂ, ತತ್ವತಃ ಸರ್ವಕ್ಕೂ ಅತೀತವೆನಿಸಿ ಅಸಂಗ, ಅಕಳಂಕ ಅಚಿಂತ್ಯ, ಅವ್ಯಕ್ತವಾಗಿ ತಾನೇ ತಾನಾಗಿ ರಾರಾಜಿತವಾಗಿದೆ. ಶಿವಾದ್ವೈತ ರೂಪನೆನಿಸಿ, ಸರ್ವ ವಿಧ ಉಪಾದಿಭೇದಗಳನ್ನು ನೀಗಿದ ಸಮರಸರೂಪಿ ಶರಣಂಗೆ ಜ್ಞಾತೃ, ಜ್ಞಾನ, ಜ್ಞೇಯಂಗಳು, ಪರಿಪೂರ್ಣ ಬ್ರಹ್ಮವೇ ತಾನೆಂಬ ನಿಲವು ಶರಣನದು. ತಾನೇ ಅರಿವಾಗಿ ಅರಿವುದಿನ್ನೇನು. ಅರಿವಿಂಗೆ ಅರಿವು ವಿಷಯ ವಪ್ಪುದೇ? ಕನ್ನಡಿ ತನ್ನನ್ನೇ ತಾನು ಕಂಡುದುಂಟೇ, ಕಣ್ಣು ತನ್ನನ್ನೇ ತಾನು ಕಂಡುದುಂಟೆ? ಜ್ಞಾನ ಪ್ರಕಾಶವಾಗಿ ಬೆಳಗಬಹುದಲ್ಲದೆ ಅವರಲ್ಲಿ ಅನ್ಯಥಾ ಕಾಣಲು ಸಾಧ್ಯವಿಲ್ಲ.

ಅಂಗ, ಲಿಂಗ, ಉಭಯ ವಸ್ತುಗಳ ಜ್ಞಾನವನ್ನು ಸಂಗ ಸಮರಸಗೊಳಿಪುದೇ ಜ್ಞಾನಪ್ರಕಾಶಸ್ಥಲವೆಂದು ಮಹಾಚಾರ್ಯರು ಬೋಧಿಸಿರುವರು.

ಇಲ್ಲಿಗೆ ಶರಣಸ್ಥಲಾಂತರ್ಗತ ಹನ್ನೆರಡು ಲಿಂಗಸ್ಥಲಗಳ ಸಂಕ್ಷಿಪ್ತ ವಿವರಣೆ ಶ್ರೀ ಮಹಾಗುರು ಪ್ರೇರಣೆಯಂತೆ ನಿರೂಪಿಸಲಾಗಿದೆ.



ಸೋಮ ಸೋಮಧಾರಿಣಂ ಸುಶಾಮಪೂರ್ಣಕಾರಿಣಂ ।
ಧಾಮಧಾಮಪೂರಿಣಂ ಕುಕಾಮಮಾನಹಾರಿಣಂ ॥

ಭೀಮಭೀಮರೂಪಿಣಂ ಶಿವಾಗಮಸ್ವರೂಪಿಣಂ ।
ರಾಜರಾಜ ಪೂಜಿತಂ ಭಜಾಮಿ ರೇಣುಕಂ ಗುರುಂ ॥

ಭದ್ರಾಂಕುರಾಯ ಭಜತಾಮ ಭಯಂಕರಾಯ ।
ಮೋಹಾಂಧಕಾರರವಯೇ ಕವಯೇ ಮನೂನಾಂ ॥

ಕೈವಲ್ಯಕಲ್ಪತರವೇ ಗುರವೇ ಗುರೂಣಾಂ ।
ಶ್ರೀರೇಣುಕಾಯ ಗಣಪಾಯ ನಮೋಸ್ತು ತುಭ್ಯಂ ॥

ಭೋ ಕಲ್ಯಾಣಮಹಾಭಾಗ ಶಿವಜ್ಞಾನ ಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷಮಾಂ ಭವರೋಗಿಣಂ ॥

# ಶ್ರೀ ರೇಣುಕಗೀತೆ

ಗೀತೆ ಯೆಂದರೆ ಶ್ರೀಮದ್ಭಗವದ್ಗೀತೆಯೆಂದು ಲೋಕ ಪ್ರಸಿದ್ಧವಿರುತ್ತೆ. ಇದು ದ್ವಾಪರಯುಗಾಂತ್ಯದಲ್ಲಿ ಕುರುಕ್ಷೇತ್ರದ ಘೋರ ರಣರಂಗದ ಮಧ್ಯೇ ಜರುಗಿದ ಶ್ರೀಕೃಷ್ಣಾರ್ಜುನರ ಸಂವಾದ. ಕ್ಷತ್ರಿಯನಾದ ಅರ್ಜುನನು ಸ್ವಧರ್ಮಾಚರಣೆಯಿಂದ ವಿಮುಖನಾಗಲು, ಶ್ರೀಕೃಷ್ಣ ಅರ್ಜುನನನ್ನು ಎಚ್ಚರಿಸುತ್ತಾ—

**ಸ್ವಧರ್ಮೇ ನಿಧನಂ ಶ್ರೇಯಃ ।**
**ಪರಧರ್ಮೋ ಭಯಾವಹಃ ॥**

ಎಂದು ಹೃದಯಂಗಮವಾಗಿ ರಣರಂಗದ ಕಲುಷಿತ ವಾತಾವರಣದಲ್ಲಿ, ಕಲುಷಿತ ಮನಸ್ಕನಾದ ಅರ್ಜುನನನ್ನು ವೀರ ಕ್ಷತ್ರಿಯ ಧರ್ಮದಲ್ಲಿ ನಿಷ್ಠಾವಂತನನ್ನಾಗಿಸಲು, ಬೋಧಿಸಿದ ವೇದಾಂತಗರ್ಭಿತ, ತತ್ವಶಾಸ್ತ್ರ ಶ್ರೀಮದ್ಭಗವದ್ಗೀತೆ. ಶಿವಗೀತೆ, ಭಗವದ್ಗೀತೆಗೆ ತಾಯ್ಮನೆ, ಶ್ರೀರಾಮಚಂದ್ರನಿಗೆ, ಶಿವನು ಕರುಣೆಯಿಂದ ಬೋಧಿಸಿದ ವಿಶ್ವಧರ್ಮ ಶಿವಗೀತೆ. ಶಿವಗೀತೆಯ ಸಹಸ್ರಾಂಶಗಳಲ್ಲಿ ಕೆಲವು ಅಂಶಗಳನ್ನು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಪ್ರತಿಪಾದಿಸಿಹನು. ಶಿವಗೀತೆಯ ಸಾರ ಸರ್ವಸ್ವ ಶಿವಾದ್ವೈತಸಿದ್ಧಾಂತ. ಶಿವಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ, ಶಿವೋಕ್ತ ಕಾಮಿಕಾದಿ ವಾತೂಲ ಪರ್ಯಂತವಿರುವ ಇಪ್ಪತ್ತೆಂಟು ಶಿವಾಗಮಗಳಲ್ಲಿ, ಆತ್ಮಸಾಕ್ಷಾತ್ಕಾರ ಮತ್ತೂ ಸಾಯುಜ್ಯ ಮೋಕ್ಷಾರ್ಥ ಪ್ರತಿಪಾದಿಸಿರುವ, ಏಕೋತ್ತರ ಶತಸ್ಥಲ ಸಿದ್ಧಾಂತವೆನಿಸಿದೆ. ಇದು ಸರ್ವ ಧರ್ಮಸಹಿಷ್ಣುತಾ ಭಾವಯುತವಾಗಿರುವುದರೊಂದಿಗೆ, ಆದಿಗಾದಿಯಾದ ವಿಶ್ವಧರ್ಮದ ತಿರುಳನ್ನು ಹೃದಯಂಗಮವಾಗಿ ಪ್ರತಿಪಾದಿಸಿ ಜೀವನು ಬದುಕಿರುವಾಗಲೇ ಶಿವನಾಗಲು, ಅಂಗನು ಲಿಂಗರೂಪಿಯಾಗಲು ಮಾರ್ಗದರ್ಶನ ನೀಡಿರುವುದರಿಂದ ಇದು ರಾಜವಿದ್ಯಾ, ರಾಜಗುಹ್ಯ ಶಾಸ್ತ್ರವೆಂದು ಪ್ರತೀತಿ. ಶಿವಾಗಮೋಕ್ತವಾದೀ ಷಟ್ಸ್ಥಲಸಿದ್ಧಾಂತವನ್ನು ಶಿವನು ಶ್ರೀ ಗಿರಿಜೆಗೆ ಆತ್ಮೀಯವಾಗಿ ಬೋಧಿಸಿ, ಪ್ರಶಂಸಿಸಿರುವನು; ಶ್ರೀ ವೇದವ್ಯಾಸಾಚಾರ್ಯರು ಏಕೋತ್ತರ ಶತಸ್ಥಲದ ಮಹತ್ವವನ್ನು ತಮ್ಮ ಶ್ರೀ ಆದಿಗುರು ಶ್ರೀ ಹಿಮವತ್ಕೇದಾರ ಪರಮ ವೈರಾಗ್ಯಸಿಂಹಾಸನಾಧೀಶ್ವರ ಶ್ರೀಜಗದಾದಿ ಜ|| ಶ್ರೀ ಘಂಟಾಕರ್ಣಶಿವಾಚಾರ್ಯರಿಂದ ವಿಶ್ರುತವಾಗಿ ಅರಿತು, ನಿತ್ಯಾನುಸಂಧಾನದಿಂದ ಸಂತೃಪ್ತರಾಗಿ—

**ಷಟ್‌ಸ್ಥಲ ಜ್ಞಾನಮಾನೇವ ಪರಮೋತ್ಕೃಷ್ಟಃ ।**
**ಉಕ್ತಂಚ ಶಂಕರ ಸಂಹಿತಾಯಾಂ ॥**

ಷಟ್‌ಸ್ಥಲಜ್ಞಾನಿ ಸರ್ವೋತ್ಕೃಷ್ಟನಿರುವನು ಎಂದು ಹೃದಯಾರ ಘೋಷಿಸಿರುವರು. ವೇದೋಕ್ತ ದ್ವೈತ, ವಿಶಿಷ್ಟಾದ್ವೈತ, ಅದ್ವೈತ, ಶೈವ-ವೀರಶೈವ ಸಿದ್ಧಾಂತಗಳ ಸಾರ ಸರ್ವಸ್ವ, ಶಿವೋಕ್ತ ಶಿವಾದ್ವೈತ.

**ಮದದ್ವೈತಪರಂ ಶಾಸ್ತ್ರಂ । ವೇದವೇದಾಂತಸಮ್ಮತಂ ।**
**ಸ್ಥಾಪಯಿಷ್ಯಸಿ ಭೂಲೋಕೇ । ಸರ್ವೇಷಾಂ ಹಿತಕಾರಕಂ॥**

ಎಂದು ಶ್ರೀಮತ್ಕೈಲಾಸದಲ್ಲಿ ಶಿವನು, ಶ್ರೀಮಜ್ಜಗದ್ಗುರು ರೇಣುಕಾಚಾರ್ಯರಿಗೆ ಅರಹುತ್ತಾ; ಅದ್ವೈತ ಶಾಸ್ತ್ರನೆಂದು ದ್ವಾಪರಯುಗಾರಂಭಕಾಲದಲ್ಲಿ ಅರುಹಿರುವನು. ಇದು ಷಟ್ಸ್ಥಲಸಿದ್ಧಾಂತವನ್ನು ಗರ್ಭೀಕರಿಸಿಕೊಂಡಿರುವುದರಿಂದ ಈ ಅದ್ವೈತ ವಿಶೇಷಾದ್ವೈತವೆಂದೂ, ಮಹಾ ಪಾಶುಪತ ಮತವೆಂದೂ, ಶಕ್ತಿವಿಶಿಷ್ಟಾದ್ವೈತಮತವೆಂದು, ಹಾಗೂ ಶಿವೋಕ್ತ ಶಿವಾದ್ವೈತಮತವೆಂದು ನಿಗಮಾಗಮಗಳಲ್ಲಿ ಸವಿಸ್ತಾರವಾಗಿ ಪ್ರತಿಪಾದಿಸಲಾಗಿದೆ. ಇತ್ಯಾದಿ ಅಂಶಗಳನ್ನು ಶಿವನು ಶ್ರೀ ಗಿರಿಜೆ, ಷಣ್ಮುಖ, ಶ್ರೀ ಜ॥ ರೇಣುಕಾಚಾರ್ಯರಿಗೆ ಸ್ವಾತ್ಮಪ್ರೀತಿಪುರಸ್ಸರ ಭಾವದಿಂದ ಬೋಧಿಸಿ, ಈ ಅದ್ವಿತೀಯ ಸಿದ್ಧಾಂತವನ್ನು ಪ್ರಶಂಸಿಸಿರುವನು.

ರಣರಂಗದಲ್ಲಿ ಹಿತೋಪದೇಶವನ್ನು ಶ್ರೀಕೃಷ್ಣನಿಂದ ಶ್ರವಣಮಾಡಿದ ಧನಂಜಯನೆನಿಸಿದ ಅರ್ಜುನನು ಚೇತರಿಸಿಕೊಂಡು; ಸಂತುಷ್ಟಭಾವದಿಂದ ಶ್ರೀಕೃಷ್ಣಸ್ವಾಮಿಯನ್ನು ಭಕ್ತ್ಯಾ ವಂದಿಸಿ ಹರ್ಷಿತನಾಗಿ—

**ನಷ್ಟೋ ಮೋಹಃ ಸ್ಮೃತಿಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥**

(ಗೀ. ಅ. ೧೮, ಶ್ಲೋ. ೭೩)

ಅಂದರೆ ಸ್ವಾಮಿನ್, ನಿಮ್ಮ ಉಪದೇಶಾಮೃತ ದಿವ್ಯ ಪ್ರಸಾದದಿಂದಾಗಿ, ನನ್ನ ಚಿತ್ತವನ್ನು ಆಕ್ರಮಿಸಿಕೊಂಡಿದ್ದ ಮೋಹಾದಿ ಭ್ರಾಂತಿಗಳೆಲ್ಲಾ ನಶಿಸಿ ಕಣ್ಮರೆಯಾಗಿರುವ ಕಾರಣ, ಸ್ಥಿಮಿತವಾದ ಮನೋಬುದ್ಧಿಗಳಿಂದ ಕೂಡಿದ್ದೇನೆ

ಅಚ್ಯುತ. **"ಕರಿಷ್ಯೇ ವಚನಂ ತವ"** ನಿನ್ನ ಉಪದೇಶದಂತೆ ಶತ್ರುಗಳ ಮೇಲೆ ಯುದ್ಧಮಾಡಿ ನಿನ್ನ ವಚನವನ್ನು ಪಾಲಿಸುತ್ತೇನೆಂದು, ಸಮರಕ್ಕಾಗಿ ಹುರಿದುಂಬಿತನಾದನು. ಶ್ರೀಕೃಷ್ಣನ ಗೀತೋಪದೇಶದ ಧ್ಯೇಯ ಇಷ್ಟೇ. ಇದರಂತಲ್ಲದೆ ತಪಸಿದ್ಧಮನೋರಥರಾದ ಶ್ರೀ ಅಗಸ್ತ್ಯ ಮಹರ್ಷಿಗಳು, ಮಲಯಾಚಲ ಪುಣ್ಯ ಪ್ರದೇಶದ ರಮಣೀಯ ಭದ್ರಾತೀರ ವಿರಾಜಮಾನ ತಮ್ಮ ಪ್ರಶಾಂತ ಪರ್ಣಶಾಲೆಯಲ್ಲಿ ತಮ್ಮ ಧರ್ಮಪತ್ನಿ ವಿದುಷಿ ಶ್ರೀಮತಿ ಲೋಪಾಮುದ್ರಾದೇವಿಯಿಂದೊಡಗೂಡಿ ಮಂಡಿಸಿ ಪ್ರಾಂಜಲ ಮನಸ್ಸಿನಿಂದ ಶ್ರೀ ಆದಿ ಜ|| ರೇಣುಕಾಚಾರ್ಯರ ಶ್ರೀಮುಖದಿಂದ ಬೋಧಿತವಾದ ಶಿವಜ್ಞಾನೋಪದೇಶವನ್ನು ಭಕ್ತ್ಯಾ ಶ್ರವಣ ಮಾಡಿದ ನಂತರ, ಮಹಾಚಾರ್ಯರನ್ನು ಅನನ್ಯಭಾವೇನ ನಮಸ್ಕರಿಸಿ—

**ಅವತೀರ್ಣಮಿದಂ ಶಾಸ್ತ್ರ ಮನವದ್ಯಂ ತ್ವದಾನನಾತ್ ।**
**ಶ್ರುತ್ವಾ ಮೇ ಮೋದತೆ ಚಿತ್ತಂ ಜ್ಯೋತಿಃ ಪಶ್ಯಚ್ಛಿವಾಭಿದಂ ॥**

(ಸಿ.ಶಿ. ಪರಿ. ೨೦, ಶ್ಲೋ. ೬೬)

**ಭೋ ! ಭೋ! ಗುರೂಣಾಂ ಶ್ರೀಗುರುವೇ !!** ನನ್ನನ್ನು ಉದ್ಧರಿಸಲಿಕ್ಕಾಗಿಯೇ ನಿಮ್ಮ ಶ್ರೀಮುಖದಿಂದ ಕೃಪಯಾ ಅವತರಿಸಿದ ಗುಹ್ಯಾತಿಗುಹ್ಯ ಶ್ರೀ ಷಟ್ಸ್ಥಲಸಿದ್ಧಾಂತ ಶಾಸ್ತ್ರಶ್ರವಣ ನನ್ನ ಪೂರ್ವಾರ್ಜಿತ ಎಲ್ಲಾ ದುರಿತಗಳನ್ನು ಪೂರ್ಣ ಧ್ವಂಸಗೊಳಿಸಿ, ನನ್ನನ್ನು ಶುದ್ಧ ಬ್ರಹ್ಮಪರಾತ್ಪರವಸ್ತುವಿನಂತೆ ಮಾಡಿದೆ. ರಾಜವಿದ್ಯಾ ರಾಜಗುಹ್ಯವೆನಿಸಿದ ಈ ಅದ್ವಿತೀಯವೂ ದಿವ್ಯವೂ ಆದ ಮಹಾಶಾಸ್ತ್ರವನ್ನು ಶ್ರವಣಮಾಡಿದ ಫಲವಾಗಿ ನನ್ನ ಶುದ್ಧಾಂತಃಕರಣದಲ್ಲಿ **"ಜ್ಯೋತಿಃ ಪಶ್ಯಚ್ಛಿವಾಭಿಧಂ"** ನನ್ನ ಸ್ವಸ್ವರೂಪದ ದಿವ್ಯ ಶಿವಜ್ಯೋತಿ ಬೆಳಗುತ್ತಿರುವುದನ್ನು ಕಂಡು ಸಂತುಷ್ಟನಾಗಿದ್ದೇನೆ. ಗುರುದೇವಾ **ದೀಪಂ "ಜ್ಯೋತಿ ಪರಂಜ್ಯೋತಿ ಜ್ಯೋತಿಷಾಂ ಜ್ಯೋತಿ"**ಯಾದ ನಿನ್ನ ಅನುಗ್ರಹದ ಫಲವಾಗಿ ತೇಜಸ್ಸಂಪನ್ನವಾದ ನನ್ನ **ಆತ್ಮಜ್ಯೋತಿಯನ್ನು ಆತ್ಮಶ್ರೀಯ ಸೌಭಾಗ್ಯವನ್ನು ಕಂಡು ಧನ್ಯನಾದೆ. ನಮಸ್ತೇ ನಮೋ ನಮಃ** ಎಂದು ಎದ್ದು ಅಗಸ್ತ್ಯ ಲೋಪಾಮುದ್ರೆಯರು ಅನನ್ಯ ಭಕ್ತಿಭಾವದಿಂದ ಮಹಾಗುರುವಿನಲ್ಲಿ ಶರಣಾದರು. ದ್ವಾಪರಯುಗಾಂತ್ಯಕಾಲದ ಶ್ರೀಕೃಷ್ಣಾ ಅರ್ಜುನರ ಸಂವಾದಕ್ಕೂ, ಮತ್ತದೇಯುಗದ ಆರಂಭ ಕಾಲ, ಅಂದರೆ, ತ್ರೇತಾಯುಗಾಂತ್ಯ

ದ್ವಾಪರಯುಗಾರಂಭದ ಪೂರ್ವಕಾಲದಲ್ಲಿ ಶ್ರೀ ಅಗಸ್ತ್ಯಮಹರ್ಷಿಗಳ ಪ್ರಶಾಂತ ಋಷ್ಯಾಶ್ರಮದಲ್ಲಿ ಜರುಗಿದ್ದ ಶ್ರೀರೇಣುಕಾಗಸ್ತ್ಯಸಂವಾದ ಮಂಗಳ ಘಟ್ಟಕ್ಕೂ; ಅಜಗಜಾಂತರಗಳಷ್ಟು ಅಂತರವಿದೆ.

**ಶಿವ ಭೋ ! ಶಿವ ಶಿವ ಮಹಾದೇವ ಶಂಭೋ !!**

---

## ಲಿಂಗಸ್ಥಲ ೪೯

## ಐಕ್ಯಸ್ಥಲದಲ್ಲಿನ ಸ್ವೀಕೃತ ಪ್ರಸಾದಿ ಸ್ಥಲಂ (ಪರಿ. ೨೦)

**ಮಾತೃಮೇಯ ಪ್ರಮಾಣಾದಿ ವ್ಯವಹಾರ ವಿಹಾರಿಣೀಂ ।**
**ಸಂವಿತ್ಸಾಕ್ಷಾತ್ಕೃತಿಂ ಲಬ್ಧ್ವಾ ಯೋಗೀ ಸ್ವಾತ್ಮನಿ ತಿಷ್ಠತಿ ॥**
**ಚಿದಾತ್ಮನಿ ಶಿವೇನ್ಯಸ್ತಂ ಜಗದೇತಚ್ಚರಾಚರಂ ।**
**ದೃಶ್ಯತೇ ತನ್ಮಯಂ ಸರ್ವಮಗ್ನೌ ಕಾಷ್ಠಾಧಿಕಂ ಯಥಾ॥**
**ಜ್ಯೋತಿರ್ಲಿಂಗೇ ಚಿದಾಕಾರೇ ಜ್ವಲತ್ಯಂತರ್ನಿರಂತರಂ ।**
**ವಿಲೀನಂ ನಿಖಿಲಂ ತತ್ತ್ವಂ ಪಶ್ಯನ್ ಯೋಗೀ ನ ಲಿಪ್ಯತೇ ॥**
**ಅಂತರ್ಮುಖೇನ ಮನಸಾ ಸ್ವಾತ್ಮಜ್ಯೋತಿಷಿ ಚಿನ್ಮಯೇ ।**
**ಸರ್ವಾನಪ್ಯರ್ಥ ವಿಷಯಾನ್ ಜುಹ್ವದ್ಯೋಗೀ ಪ್ರಮೋದತೇ ॥**

(ಶ್ಲೋ. ೫,೭,೯,೧೦,)

ಐಕ್ಯಸ್ಥಲದಲ್ಲಿ ಒಂಭತ್ತು ಲಿಂಗಸ್ಥಲಗಳು ಪ್ರಣವಮಯ ನಿರಾಕಾರ ಪರಶಿವಬ್ರಹ್ಮದ ಸ್ವರೂಪ ಸಾಕ್ಷಾತ್ಕಾರದ, ದಿವ್ಯಾನುಭವವನ್ನು ನಮ್ಮ ಅಂತರಂಗಕ್ಕೆ ವೇದ್ಯಗೊಳಿಸುವಂತಿವೆ.

**ಸರ್ವ ವೇದಾಗಮೋಪನಿಷದೋಗಾವೋ ದೋಗ್ಧಾ ।**
**ಶ್ರೀಜಗದ್ಗುರು ರೇಣುಕೇಂದ್ರಃ ಅಗಸ್ತ್ಯೋ ವತ್ಸಃ ।**
**ಸುಧೀರ್ಭೋಕ್ತಾ ದುಗ್ಧಂ ಶ್ರೀರೇಣುಕಗೀತಾಮೃತಂ ಮಹತ್ ॥**

ಹಸುವಿನ ಕೆಚ್ಚಲಿನಲ್ಲಿ ಹಾಲಿದೆ ಎಂದು ಕೈಹಾಕಿದರೆ ಹಸು ಒದೆಯುತ್ತೆ. ಕರುವನ್ನು ಉಣಲು ಬಿಡದೆ ತೊರೆಯುವಂತಿಲ್ಲ. ನಾಲ್ಕು ಮೊಲೆಗಳಲ್ಲಿ ತುಂಬಿರುವ ಕ್ಷೀರವನ್ನು ಕರೆಯಲು ಗೊಲ್ಲನೊಬ್ಬ ಬೇಕು. ಇಲ್ಲಿ ನಿಗಮಾಗಮಗಳೇ

ಹಸುಗಳು. ಅಗಸ್ತ್ಯನೆಂಬ ಕರುವನ್ನು ಮುಂದಿಡಲು, ಶ್ರೀ ಜಗದ್ಗುರು ರೇಣುಕರು, ಶಿವಜ್ಞಾನವೆಂಬ ಹಾಲನ್ನು ಕರೆಯಲು, ಧೀಮಂತರೂ ಸುಜ್ಞಾನಿಗಳು, ಶ್ರೀರೇಣುಕಗೀತಾಮೃತವನ್ನು ಪಾನಮಾಡಿ ಅಮರರಾದರು.

ಇಂತು ಶ್ರೀ ಸಿದ್ಧಾಂತಶಿಖಾಮಣಿಯ ಘನ ತತ್ವಾರ್ಥ ಗರ್ಭಿತ ಶ್ಲೋಕಗಳ ತಾತ್ಪರ್ಯವನ್ನು ಮನಸ್ಸಿನಲ್ಲಿ ಧರಿಸಿ, ಬುದ್ಧಿಯಲ್ಲಿ ಚಿಂತಿಸಿ, ಪವಿತ್ರ ಭಾವದಿಂದ ಆಪ್ಯಾಯನಕರವಾಗಿ ಸಾಯುಜ್ಯ ಮೋಕ್ಷಾರ್ಥ ರಚಿಸಬೇಕಾದರೆ, ತೈಲಧಾರೆಯಂಥಾ ಶಿವಾನುಗ್ರಹ ಹಾಗೂ ಮಹಾಚಾರ್ಯರ ದಿವ್ಯ ಕೃಪಾನುಗ್ರಹ ಬೇಕು. **"ಓದು ಮೊಕ್ಕಾಲು, ಅನುಭವ ಮುಕ್ಕಾಲು".**

**ಯಶ್ಕೃಪಾಲೇಶಮಾತ್ರೇಣ ವಾಂಛಿತಂ ಲಭತೇ ಪುಮಾನ್ |**
**ತಂ ವಂದೇ ಗಿರಿಜಾನಾಥಂ ಪರಬ್ರಹ್ಮ ಶಿವಾಭಿದಂ ||**

---

## ಲಿಂಗಸ್ಥಲ ೪೯

## ಸ್ವೀಕೃತ ಪ್ರಸಾದಿಸ್ಥಲಂ (ಪರಿ. ೨೦)

ಸ್ವೀಕೃತ ಪ್ರಸಾದಿಸ್ಥಲದ ಶಿವಯೋಗಿಯು, ಪ್ರಮಾತೃ ಪ್ರಮಾಣ, ಪ್ರಮೇಯಾದಿ ವ್ಯವಹಾರಗಳನ್ನು ಲಯಗೊಳಿಸುವ, ಪರಶಿವಬ್ರಹ್ಮದ ಸಾಕ್ಷಾತ್ಕಾರವನ್ನು ಹೊಂದಿ, ಅಂತರಂಗದಲ್ಲಿ, ಸ್ವಸ್ವರೂಪಾನುಸಂಧಾನದಿಂದ ವಿಜೃಂಭಿತನಾಗಿರ್ಪನು. ಸ್ವಾತ್ಮಾನಂದದ ವಿವೇಕ ಪ್ರಕಾಶದಲ್ಲಿ ತಲ್ಲೀನನಾಗಿ, ಅಂತಪ್ಪ ಸಮರಸ ಭಾವೈಕ್ಯತೆಯ ಪ್ರಸಾದ ಪರಿಗ್ರಾಹಕನಾಗಿ ಸ್ವೀಕೃತ ಪ್ರಸಾದಿ ಎನಿಸಿಹನು. ಐಕ್ಯಸ್ಥಲದ ಒಂಭತ್ತು ಕೇಂದ್ರೀಕೃತವಾದ ಲಿಂಗಸ್ಥಲಗಳು ಅಪ್ರಮೇಯವೆನಿಸಿವೆ. ಲಿಂಗಾಂಗಗಳ ಅವಿನಾಭಾವ ಸಂಬಂಧ, ಸಮರಸ, ಸ್ವಾನುಭವ ಅರ್ಥವತ್ತಾಗಿ ಮನಸ್ಸಿಗೆ ಆಪ್ಯಾಯನಕರವೆನೆಸಿ, ಸ್ಫೂರ್ತಿದಾಯಕವಾಗಿದೆ. ಭೇದಭಾವವಳಿದು. ಅದ್ವೈತಭಾವದಲಿ ಬೆರೆದು, ಮಹಾಜ್ಞಾನ ಪ್ರಕಾಶದೊಳಗೆ ಮಂದ್ರವಾಗಿ ಸ್ವೀಕೃತ ಪ್ರಸಾದಿ ಎಂದು ಸ್ತುತ್ಯನಿಹನು ಲಿಂಗಾಂಗಗಳ ಅರಿವು ಅನುಭವ ಅಮೃತಮಯವೆನೆಸಿದೆ. **ಅರಿವು ಮೊಗ್ಗಾದರೆ, ಅನುಭವ ಅರಳಿದ ಏಳು ಸುತ್ತಿನ ಮಲ್ಲಿಗೆ ಹೂ.** ಅಂಗಲಿಂಗಗಳ ನೈಜ ಸಂಬಂಧ, ಜಲತರಂಗಗಳ ಸ್ವರೂಪ ಸಂಬಂಧದಂತೆ ಹಾಸುಹೊಕ್ಕಾಗಿ ಪ್ರಜ್ವಲಿಸು

ತ್ತಿಹವು. ಕಿಚ್ಚಿನೊಳಗೆ ಬಚ್ಚಿಟ್ಟ ಕಟ್ಟಿಗೆಯ ಕೋಲು, ಕೆಂಡಕಾರವಾದಂತೆ, ಚಿಚ್ಛಕ್ತಿವಿಶಿಷ್ಟ ಶಿವನೊಳಗೆ ಸ್ಥಾಪಿತವಾದ ಚರಾಚರ ಜಗವೆಲ್ಲಾ ತನ್ಮಯವಾಗಿ ತೋರುವುದು. ಯಾಕೆಂದರೆ ಎಲ್ಲೆಲ್ಲೂ ಸರ್ವದಾ ಸರ್ವವ್ಯಾಪಿಯಾದ ಸರ್ವೇಶ್ವರನು.

**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ತಂ ಯೇನ ಚರಾಚರಂ ।**
**ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇನಮಃ ॥**

ಅಂದರೆ ಒಳ ಹೊರಗೂ ಸರ್ವಕಾಲ ಸರ್ವಾವಸ್ಥೆಗಳಲ್ಲೂ ದೃಶ್ಯಾದೃಶ್ಯ ಜಗತ್ತೆಲ್ಲಾ ಶಿವಮಯವಾಗಿ ಪ್ರಜ್ವಲಿಸುತ್ತಿರಲು, ಈ ಜಗತ್ತು ಪರಶಿವನಿಂದ ಭಿನ್ನವಾಗಿ ತೋರದು. ಹೃನ್ಮಂದಿರದಲ್ಲಿ ದೇದಿಪ್ಯವಾಗಿ ಬೆಳಗುವ ಚಿದಾಕಾರ ಚಿನ್ಮಯ ಜ್ಯೋತಿರ್ಲಿಂಗದಲ್ಲಿ ; ಬೃಹದಾಕಾರದ ಆಲದ ವೃಕ್ಷ, ಒಂದು ಬೀಜ ದಲ್ಲಿ ಅಡಗಿರುವಂತೆ, ಪರಂಜ್ಯೋತಿರ್ಲಿಂಗದಲ್ಲಿ; ಅಂಡಾಂಡ ಪಿಂಡಾಂಡ ಬ್ರಹ್ಮಾಂಡ ಕೋಟಿಗಳು, ಪರಮಾಣುರೂಪದಲ್ಲಿ ಸಂಗ್ರಹಿತವಾಗಿ,

**ವಿಲೀನಂ ನಿಖಿಲಂ ತತ್ವಂ । ಪಶ್ಯನ್ ಯೋಗೀ ನ ಲಿಪ್ಯತೇ ॥**

ಅಂದರೆ ಸೂಕ್ಷ್ಮಾತಿಸೂಕ್ಷ್ಮವಾಗಿ ಪರಮಾತ್ಮನಲ್ಲಿ ಅಡಗಿರುವ ಈ ಜಗತ್ತನ್ನು ಶಿವಯೋಗಿ ತನ್ನ ಅಂತರಂಗದ ಕಣ್ಣಿನಿಂದ ಕಂಡು ಮೋಹಿತ ನಾಗದೆ, **"ನ ಲಿಪ್ಯತೇ"** ಪ್ರಕೃತಿ ತತ್ವದ ಸೋಂಕಿಲ್ಲದೆ, **"ಅಲಕ್‌ನಿರಂಜನ್ ಶ್ರೀಗುರುಮಲ್ಲೇಶ"** ಎಂಬಂತೆ ಶಿವಯೋಗಿಗೆ ಶಿವಸ್ವರೂಪಕ್ಕೆ ಅನ್ಯವಾದ ಬೇರೆ ಯಾವುದೂ ಅವನ ಕಣ್ಮನಂಗಳಿಗೆ ಕಾಣದು. ಚಿದಾತ್ಮನಾದ ಐಕ್ಯಂಗೆ ಶಿವನ ಸಾಕ್ಷಾತ್ಕಾರವಾಗಲು, ಈ ಜಗತ್ ಬೇರೆಯಾಗಿ ತೋರದು. ನೆಲ,ಜಲ, ಅನಲ,ಅನಿಲ,ಮುಗಿಲು ಇತ್ಯಾದಿ ಪಂಚಭೂತಗಳೂ ಬೇರೆ ಬೇರೆಯಾಗಿ ತೋರವು. ಅದ್ವಿತೀಯವೂ, ಅಪ್ರಮೇಯವೂ, ಅನಂತವೂ, ನಿತ್ಯವೂ; ಆದ ಪರಶಿವ ತತ್ವದ ವಿನಃಶಿವಯೋಗಿ ಮತ್ತೇನನ್ನೂ ಕಾಣನು. ತನ್ನ ಆತ್ಮಸ್ವರೂಪವಾಗಿಯೇ ಸರ್ವತ್ರ ಕಂಡು—

**"ಆತ್ಮೈ ವೇದಂ ಸರ್ವಂ॥ ಮತ್ತೂ ಬ್ರಹ್ಮೈ ವೇದಮಿದಂ ಸರ್ವಂ।"**

ಎಂಬ ಶೃತಿವಾಕ್ಯದಂತೆ ಬ್ರಹ್ಮಾನಂದದಲ್ಲಿ ತಲ್ಲೀನನಾಗಿರ್ಪನು, ಶಿವಶರಣ. ಶಿವಯೋಗದ ಪರಮೋಚ್ಛ ಸ್ಥಿತಿಯಲ್ಲಿ ಮಾನವ ಪ್ರಜ್ಞೆ ಕ್ರಮೇಣ ದೈವೀ

ಪ್ರಜ್ಞೆಯಾಗಿ ಪರಿವರ್ತಿಸಿ ಪರಮ ಶಾಂತಿಯಿಂದ ಅಂತರ್ಮುಖನಾಗಿ, **ಶಿವನ ಅನಂತತ್ವ ನಿತ್ಯತ್ವಗಳ ಸ್ವರೂಪವರಿತು** ದೈವೀ ಕಟಾಕ್ಷದಿಂದ ಶಕ್ತಿಯುತನಾಗಿ ಸಂವರ್ಧಿಸುತ್ತಲಿರ್ಪನು. ಇಂತಪ್ಪ ಉಚ್ಛ್ರಾಯ ಸ್ಥಿತಿಯಲ್ಲಿ ತನ್ನ ಅಮೃತತ್ವದ ಆತ್ಮಶ್ರೀಯನ್ನು ಕಂಡು ಶಿವಾನಂದಲಹರಿಯಲ್ಲಿ ಮುಳುಗಿ ದೇಹದ ಮರಣವನ್ನು ಉಪೇಕ್ಷಾಭಾವದಿಂದ ವೀಕ್ಷಿಸುವನು. ಅಂದರೆ, ಸಾವಿಗೆ ಅಂಜದೆ ಅಳುಕದೆ ಧೀರೋದ್ಧಾರಭಾವದಿಂದಿರ್ಪನು. ತನ್ನ ಆತ್ಮವೇ ಸಮಸ್ತ ಜೀವಕೋಟಿಗಳಲ್ಲೂ ಪ್ರತಿಬಿಂಬಿಸಿ ವ್ಯಾಪಿಸಿ ಅನಂತತ್ವದಿಂದ ರಾರಾಜಿಸುತ್ತಿರುವುದನ್ನು ಅನುಭವ ಜ್ಞಾನದಿಂದ ಮನಗಾಣುವನು. ಇದು ಊಹಾಪೋಹವಲ್ಲ ನಿತ್ಯತ್ವದ ನೈಜ ಸ್ಥಿತಿ ಸತ್ಯ ಸುಂದರ ವಿಷಯವಿದು. ಇದನ್ನು ಕಂಡು ಸ್ವಾನುಭೂತಿಯಲ್ಲಿ ಕಂಡು ಅನುಭವಿಸಬೇಕು.

**ಯೋ ಮಾಂ ವೇದ ಸ ಸರ್ವಾನ್ ದೇವಾನ್ ವೇದಂ ।**

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂಚ ಮಯಿ ಪಶ್ಯತಿ ॥**

ಎಂಬ ಉಪನಿಷದ್ವಾಣಿ ಮೇಲುಕ್ತವಾದ ವಿಷಯುಗಳಿಗೆ ಪೋಷಕವೆನಿಸಿದೆ.

ಮಹೋನ್ನತವಾದೀ ಬ್ರಾಹ್ಮೀ ಸ್ಥಿತಿಯಲ್ಲಿ—

**ಸರ್ವಂ ಖಲ್ವಿದಂ ಬ್ರಹ್ಮ । ಶಿವಮಯಂ ಜಗತ್ ॥**

**ಶಿವಏವ ಜಗತ್ಸರ್ವಂ । ಶಿವಾದನ್ಯನ್ನವಿದ್ಯತೇ ॥**

ಅಂದರೆ, ಸರ್ವವೂ ಶಿವಮಯವೇ, ಶಿವನ ವಿನಃ ಮತ್ತೊಂದಿಲ್ಲ ಎಂಬ ಏಕೈಕ ಸಿದ್ಧಾಂತ, ಸ್ವೀಕೃತ ಪ್ರಸಾದಿ ಸ್ಥಲದ ಶಿವಯೋಗಿಯ ನಿರ್ಣಯ.

ಸಾರಾಂಶವೇನೆಂದರೆ :—ಐಕ್ಯಸ್ಥಲದ ಶಿವಶರಣನು ಅಂತರ್ಮುಖಿಯಾಗಿ ಶುದ್ಧಾಂತಃಕರಣದಿಂದ ಚಿನ್ಮಯಾತ್ಮಕ ಸ್ವಾತ್ಮಜ್ಯೋತಿಯಲ್ಲಿ ; ಭೌತಿಕ ಪಡಿ ಪದಾರ್ಥಂಗಳನ್ನು ಸಂಪೂರ್ಣವಾಗಿ ಶಿವನಿಗೆ ಸಮರ್ಪಿಸಿ; ಈ ಕ್ರಿಯೆ ಶಿವಪ್ರಸಾದ ರೂಪ ನಿತ್ಯಾನಂದದಲ್ಲಿ .ಸದಾ ವಿಹರಿಸುವಂಥಾ ಪರಮ ಉಚ್ಛ್ರಾಯ ಸ್ಥಿತಿ, **"ಸ್ವೀಕೃತ ಪ್ರಸಾದಿ ಸ್ಥಲವೆಂದು"**ಅಗಸ್ತ್ಯಮುನಿಚಂದ್ರನಿಗೆ, ಗುರುವಿನ ಗುರು ಶ್ರೀ ಮಹಾಗುರು ರೇಣುಕಾಚಾರ್ಯರು ಮನಂಬುಗುವಂತೆ ಬೋಧಿಸಿರುವರು.

ಪ್ರಾತಃ ಸ್ಮರಾಮಿ ಭವಭೀತಿಹರಂ ಸುರೇಶಂ ।
ಗಂಗಾಧರಂ ವೃಷಭವಾಹನ ಮಂಬಿಕೇಶಂ ॥

ಖಟ್ವಾಂಗ ಶೂಲ ವರದಾಭಯ ಹಸ್ತಮೀಶಂ ।
ಸಂಸಾರ ರೋಗಹರಮೌಷಧ ಮದ್ವಿತೀಯಂ ॥

ಕಲ್ಯಾಣಾನಾಂ ನಿಧಾನಂ ಕಲಿಮಲಮಥನಂ ।
ಪಾವನಂ ಪಾವನಾನಾಂ ಪಾಥೇಯ ಯನ್ಮುಮುಕ್ಷೋಃ ॥

ಸಪದಿಪರಪದಃ ಪ್ರಾಪ್ತಯೇ ಪ್ರಸ್ಥಿತಸ್ಯ ।
ವಿಶ್ರಾಮಸ್ಥಾನಮೇಕಂ ಕವಿವರ ವಚಸಾಂ ಜೀವನಂ ॥

ಸಜ್ಜನಾನಾಂ, ಬೀಜಂ ಧರ್ಮದ್ರುಮಸ್ಯ ।
ಪ್ರಭವತು ಭವತಾಂ ಭೂತಯೇ ಶಿವನಾಮ ॥

---

## ಲಿಂಗಸ್ಥಲ ೫೦

## ಶಿಷ್ಟೌದನಸ್ಥಲಂ ಪ. (೨೦)

ಪ್ರಕಾಶತೇ ಯಯಾ ಸರ್ವೇಷಾಂ ಮಾಯಯಾ ಸೈವೌದನಾಕೃತಿಃ ।
ಲೀಯತೇ ಯತ್ರ ಚಿಲ್ಲಿಂಗೇ ಶಿಷ್ಟಂ ತತ್ಪರಿಕೀರ್ತಿತಂ ॥

ಜಗತ್ಯಸ್ಮಿನ್ ಪರಿಗ್ರಸ್ತೇ ಮಾಯಾಪಾಶ ವಿಜೃಂಭಿತೇ ।
ಸ್ವಾತ್ಮಜ್ಯೋತಿಷಿ ಬೋಧೇನ ತದೇಕಮವ ಶಿಷ್ಯತೇ ॥

ಅಖಂಡ ಸಚ್ಚಿದಾನಂದ ಪರಬ್ರಹ್ಮಸ್ವರೂಪಿಣಃ ।
ಜೀವನ್ಮುಕ್ತಸ್ಯ ಧೀರಸ್ಯ ಮಾಯಾ ಕೈಂಕರ್ಯವಾದಿನೀ ॥

ವಿಶ್ವಸಂಮೋಹಿನೀ ಮಾಯಾ ಬಹುಶಕ್ತಿರ್ನಿರಂಕುಶಾ ।
ಶಿವೈಕತ್ವಮುಪೇತಸ್ಯನ ಪುರಃ ಸ್ಥಾತು ಮೀಹತೇ ॥

ಜ್ಯೋತಿರ್ಲಿಂಗೇ ಚಿದಾಕಾರೇ ನಿಮಗ್ನೇನ ಮಹಾತ್ಮನಾ ।
ಭುಜ್ಯಮಾನಾ ಯಥಾಯೋಗಂ ನಶ್ಯಂತಿ ವಿಷಯಾಃ ಸ್ವತಃ ॥

**ಶಬ್ದಾದಯೋಽಪಿ ವಿಷಯಾ ಭುಜ್ಯಮಾನಾಸ್ತದಿಂದ್ರಿಯೈಃ |**
**ಆತ್ಮನ್ಯೇವ ವಿಲೀಯಂತೇ ಸರಿತಃ ಸಾಗರೇ ಯಥಾ ||**

(ಶ್ಲೋ. ೧೨,೧೩,೧೪,೧೫,೧೬,೧೭)

ಶಿವಶಕ್ತಿಯರ ಅವಿನಾಭಾವ ಸಹಜ ಸಂಬಂಧ, ಅನಾದಿ ಸಂಸಿದ್ಧವಾದುದು. ಹಾಲಿನಲ್ಲಿ ತುಪ್ಪವಿರುವಂತೆ, ಪ್ರಕಾಶಿತ ಜ್ಯೋತಿರ್ಮಧ್ಯೇ ಚಲನಾತ್ಮಕ ಚೈತನ್ಯವಡಗಿರುವಂತೆ, ಸಸಿಯೊಳಗಣ ರಸದಂತೆ ಶಿವನಲ್ಲಿ ಶಕ್ತಿ ಸಹಜ ಸುಂದರವಾಗಿ ಅಂದರೆ ಘಟ್ಟಿ ತುಪ್ಪದಲ್ಲಿ ನಕ್ಷತ್ರಗಳು ಮಿಣುಗುವಂಥಾ ತುಪ್ಪದ ಕಣಗಳು ಮಿಣುಗುತ್ತಾ ತುಪ್ಪದಾಕಾರದಿಂದ ಥಳಥಳಿಸುವಂತೆ, ಶಿವಸ್ವರೂಪದಲ್ಲಿ ಶಿವೇ, ಚಿಚ್ಛಕ್ತಿ ಚಿನ್ಮಯಸ್ವರೂಪದಿಂದ ಅಂದರೆ, ಅಮರನಾಥ ಕವಿ ಹೇಳುವಂತೆ–

**"ಅದು ಬೊಮ್ಮಂ | ನೆರೆಗಟ್ಟಗೊಂಡ |**
**ತಿಳಿನೈಯ್ಯೋಳ್ | ಶಕ್ತಿಸೌಂದರ್ಯಸಂಪರ್ಕದಿಂ ರಂಜಿಸಿರೆ ||"**

ತಿಳಿ ತುಪ್ಪ ಗಟ್ಟಿಗೊಂಡಂತೆ ಶಕ್ತಿಸೌಂದರ್ಯ ಸಂಪರ್ಕದಿಂದ ಪರಶಿವಬ್ರಹ್ಮ ರಂಜಿತನಾಗಿಹನು

ಪರಬ್ರಹ್ಮದಲ್ಲಿ ಶಿವಸಂಪುಟದಿಂದ ರಂಜಿಸುವ ಶಕ್ತಿ, ಅವಿನಾಭಾವ ಸಂಬಂಧದಿಂದ ನಿತ್ಯವೆನಿಸಿಹುದು. ಮೇಲುಕ್ತವಾದ ಶೃತಿವಾಣಿಯನ್ನು ಪರ್ಯಾಲೋಚಿಸಿದರೆ, ಪರಶಿವಬ್ರಹ್ಮದಲ್ಲಿ ಶಕ್ತ್ಯಂಶವು ಸ್ವಭಾವಸಿದ್ಧವಾದ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯುತವಾಗಿ ನಾನಾತ್ಮಕವಾಗಿಪ್ರವರ್ಧಿಸುತ್ತಲಿರುವ ಅಂಶ ಭಾಸವಾಗುತ್ತೆ. ವೀರಶೈವ ಸಿದ್ಧಾಂತದಲ್ಲಿ ಶಕ್ತಿಯನ್ನು "ಮಾಯಾ"ಎಂದು ಸಂಬೋಧಿಸಲಾಗಿದೆ.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಃ ||**

ಮಾಯಾ ಎಂದರೆ, ಆದಿಶಕ್ತಿ, ಪರಾಶಕ್ತಿ ಎಂಬರ್ಥ. ಪರಮಾತ್ಮನು; ಎಲ್ಲವನ್ನೂ ಚೈತನ್ಯಾತ್ಮಕವಾಗಿ ಪ್ರಕಾಶಿಸುವ ಸ್ಫುರಣಮಯ **ವಿಮರ್ಶಾ ಶಕ್ತಿಯುತನಾಗಿಹನು.** ಅನಾದಿ ಸಂಸಿದ್ಧವಾದ ಪ್ರಜ್ಞಾಮಯ ಚಿಚ್ಛಕ್ತಿಯು ಪರಶಿವಬ್ರಹ್ಮದಿಂದ ಅನಂತ ಶಕ್ತ್ಯಾತ್ಮಕವಾಗಿ ಪ್ರಕಟವಾಯಿತು. ಶ್ರೀಮದಾಚಾರ್ಯ ರೇಣುಕರು ಅಗಸ್ತ್ಯಮಹರ್ಷಿಗೆ ಈ ರಹಸ್ಯವನ್ನು ಬೋಧಿಸುತ್ತಾ.

**ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ |**
**ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ||**

ಜಗತ್ತಿನ ಎಲ್ಲಾ ವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯು ಚಂದ್ರನಲ್ಲಿ ಸ್ಥಿರವಾಗಿರುವಂತೆ, ಸಮಸ್ತ ಚರಾಚರಾತ್ಮಕ ವಾದೀ ಜಗತ್ತಿನ ಸ್ಥಾವರ ಜಂಗಮಾತ್ಮಕ ವಸ್ತುಗಳನ್ನೆಲ್ಲಾ ಪ್ರಕಾಶಗೊಳಿಸುತ್ತಿರುವ ಶಿವನ ವಿಮರ್ಶಶಕ್ತಿ, ಪ್ರಕಾಶಸ್ವರೂಪನಾದ ಪರಬ್ರಹ್ಮದಲ್ಲಿ ಸಹಜ ಸುಂದರವಾಗಿ ಬೆಳಗುತ್ತಲಿರುವ ಶಿವಾನುಭವದ ಓದನವೇ ಶಿಷ್ಟೌದನ ಸ್ಥಲವೆನಿಸಿದೆ.

"**ತಸ್ಯ ಭಾಸಾ, ಸರ್ವಮಿದಂ ವಿಭಾತಿ ॥**" ಎಂಬ ಕಠೋಪನಿಷತ್ತಿನ ಪ್ರಮಾಣಾನುಸಾರವಾಗಿ, ಅಖಿಲ ಬ್ರಹ್ಮಾಂಡಕೋಟಿಗಳು, ಯಾವ ಪರಾತ್ಪರ ವಸ್ತುವಿನ ದೇದೀಪ್ಯಮಾನಾಖಂಡ ಪ್ರಕಾಶದಿಂದ ಪ್ರಕಾಶಿಸುತ್ತಲಿವೆಯೋ, ಮತ್ತೆ ಯಾವ ಪರಬ್ರಹ್ಮದ ಆನಂದದಿಂದ ಆನಂದಿಸುತ್ತಲಿವೆಯೋ ಅಂತಪ್ಪ ಪರಮಾತ್ಮನು, ಜಗತ್ಸೃಷ್ಟಿಗೆ ಉನ್ಮುಖನಾಗುತ್ತಲೇ, ತನ್ನಂಶವೇ ಆದ ಚಿಚ್ಛಕ್ತಿವಿಶಿಷ್ಟನಾಗಿ ಸೃಷ್ಟಿ ಕಾರ್ಯದಲ್ಲಿ ತೊಡಗುವನು.

**ನ ಶಿವೇನ ವಿನಾಶಕ್ತಿ ನ ಶಕ್ತಿರಹಿತಃ ಶಿವಃ ।**
**ಪುಷ್ಪಗಂಧ ವದನ್ಯೋನ್ಯಂ ಮಾರುತಾಂಬರ ಯೋರಿವ ॥**

ಅರ್ಧನಾರೀಶ್ವರನಾದ ಶಿವನನ್ನು ಬಿಟ್ಟು ಶಕ್ತಿ ಇಲ್ಲ. ಶಕ್ತಿಯನ್ನು ಬಿಟ್ಟು ಶಿವನಿಲ್ಲ. ಪುಷ್ಪ ಅದರ ಗಂಧ ಹೇಗೆ ಎರಡೂ ಒಂದಾಗಿವೆಯೋ ಮತ್ತೂ ವಾಯ್ವಾಕಾಶಗಳು ಒಂದರಲ್ಲಿನ್ನೊಂದು ಹೆಣೆದಿವೆಯೋ ಆದರಂತೆ ಶಿವಶಕ್ತಿಗಳ ಅನ್ಯೋನ್ಯಭಾವ ಅದ್ವಿತೀಯವೆನಿಸಿದೆ.

**ಜಗತ್ಯಸ್ಮಿನ್ ಪರಿಗ್ರಸ್ತೇ ।**
**ಮಾಯಾಪಾಶ ವಿಜೃಂಭಿತೇ ॥**

ಸತ್ವ, ರಜ, ತಮೋಗುಣಗಳಿಗೆ ಆಶ್ರಯವಾದ ಶುದ್ಧ ಅಶುದ್ಧ ಮಿಶ್ರ ಮಾರ್ಗಂಗಳಲ್ಲಿ ವರ್ತಿಸುವ ಸಮಸ್ತವನ್ನೂ ಆವರಿಸಿ ಬೆಳಗುವ ಶಕ್ತಿ "ಮಾಯೆ" ಎನಿಸಿಹುದು. ಪ್ರಕಾಶಿತವಾದ ಮಾಯೆ ಸರ್ವರಲ್ಲೂ ಒಂದೇ ಆಗಿ ಜ್ವಲಿಸುತ್ತಿರುವುದರಿಂದ, ಶಕ್ತಿ ಓದನ ಸ್ವರೂಪವುಳ್ಳದ್ದಾಗಿಹುದು. ಒಂದಾದುದರಿಂದ ಓದನವಾಗಿಹುದು. ಶಕ್ತಿ ಓದನಸ್ವರೂಪದಿಂದಾಗಿ, ಚಿಚ್ಛಕ್ತಿ ವಿಶಿಷ್ಟ ಮಹಾಲಿಂಗ ಸ್ವರೂಪದಲ್ಲಿ ಮಾಯೆ ತಲ್ಲೀನವಾಗಿಹುದುದು. ಪರಶಿವ ಬ್ರಹ್ಮದಲ್ಲಿ ಮಾಯೆ ಚಿದ್ರೂಪದಿಂದ ರಾರಾಜಿಸುವ ಕಾರಣ ಶಿಷ್ಟೌದನವೆನಿಸಿದೆ. ಚಿನ್ನಾದ, ಚಿತ್ಕಳೆ,

ಚಿದ್ಬಿಂದು ಮತ್ತು ಚಿಚ್ಛಕ್ತಿಗಳ ಸಮರಸ ಸಂಯೋಗದಿಂದ **"ಮಹಾಲಿಂಗ"** ತಾನೇ ತಾನಾಗಿ ರೂಪಗೊಂಡು ಆವಿರ್ಭವಿಸಿತು. ಶ್ರೀಶೃಂಗೇರಿ ಜ|| ಆದಿ ಶಂಕರಾಚಾರ್ಯರು ಹೇಳುವ ಮಾಯೆ ಇದಲ್ಲ.

**ಲಿಂಗಂ ಚಿದಾತ್ಮಕಂ ಬ್ರಹ್ಮ ।**
**ತಚ್ಛಕ್ತಿಃ ಪ್ರಾಣ ರೂಪಿಣೀಂ ॥**

ಎಂದಿವೆ ಶಿವಾಗಮ. ಶಿವಾದ್ವೈತ ಸಿದ್ಧಾಂತದ ಪ್ರಕಾರ ಶಕ್ತಿ ಲಿಂಗರೂಪಿ ಪರಶಿವನ ಪ್ರಾಣವೆನಿಸಿದೆ. ಆಂದ ಬಳಿಕ, ಮಾಯಾ, ಪರಶಿವನ ಸ್ಫುರಣ ಮಯ ವಿಮರ್ಶಾಶಕ್ತಿಯೆಂದಾಯಿತು.

**ಸ್ವಸ್ವರೂಪೈಕ ಚಿಚ್ಛಕ್ತಿಯಿಂ ।**
**ಸ್ಫುರಿಸುತಿರ್ದುದದ್ವೈತ ಪರಮಾತ್ಮ ತತ್ವಂ ॥**

ಶಿವಶಕ್ತಿ ಪರಶಿವನ ಸಾಕ್ಷಾತ್ ಸ್ವಸ್ವರೂಪವೆನಿಸಿರುವುದು. ಶಿವನಂತೆ ಶಕ್ತಿ ಸಚ್ಚಿದಾನಂದಮಯವೆನಿಸಿದೆ. ಶಿವನಲ್ಲಿ ಮಾಯೆ ಚಿನ್ಮಯ ಚಿದ್ರೂಪದಿಂದ ಅಂತರ್ಯಾಮಿಯಾಗಿ ವಿರಾಜಿಸುವ ಕಾರಣ ಶಿವೋಽಹಮೆನಿಸಿದೆ.



## ಲಿಂಗಸ್ಥಲ ೫೧

## ಚರಾಚರಲಯಸ್ಥಲಂ (ಪರಿ. ೨೦)

**ಲಿಂಗೈಕ್ಯೇ ತು ಸಮಾಪನ್ನೇ ಚರಾಚರ ಜಗಲ್ಲಯೇ ।**
**ನಿರ್ದೇಹೀ ಚ ಭವೇದ್ಯೋಗೀ ಚರಾಚರ ವಿನಾಶಕಃ ॥**

**ಯಥಾ ಮೇಘಾಃ ಸಮುದ್ಭೂತಾ ವಿಲೀಯಂತೇ ನಭಸ್ಥಲೇ ।**
**ತಥಾತ್ಮನಿ ವಿಲೀಯಂತೇ ವಿಷಯಾಃ ಸ್ವಾನುಭಾವಿನಃ ॥**

**ಜಾಗ್ರತ್ಸ್ವಪ್ನ ಸುಷುಪ್ತಿಭ್ಯಃ ಪರಾವಸ್ಥಾಮುಪೇಯುಷಃ ।**
**ಕಿಂ ವಾ ಪ್ರಮಾಣಂ ಕಿಂ ಜ್ಞೇಯಂ ಕಿಂ ಜ್ಞಾನಸ್ಯ ಸಾಧನಂ ॥**

**ತುರ್ಯಾತೀತಪದಂ ಯತ್ತದ್ದೂರಂ ವಾಙ್ಮನಸಾಧ್ವನಃ ।**
**ಅನುಪ್ರವಿಷ್ಯ ತದ್ಯೋಗೀನ ಭೂಯೋ ವಿಶ್ವಮೀಕ್ಷತೇ ॥**

**ನಾನ್ಯತ್ಪಶ್ಯತಿ ಯೋಗೀಂದ್ರೋ ನಾನ್ಯ ಜ್ಜಾನಾತಿ ಕಿಂಚನ ।**
**ನಾನ್ಯಚ್ಛೃಣೋತಿ ಸಂದೃಷ್ಟೇ ಚಿದಾನಂದಮಯೇ ಶಿವೇ ॥**

(ಶ್ಲೋ. ೧೯, ೨೦, ೨೧, ೨೨, ೨೩).

ಲಿಂಗೈಕ್ಯನಾದ ಶರಣನ ಸ್ಥಿತಿ ಶಿಖಿ ಕರ್ಪೂರಯೋಗವತ್ ವರ್ಣನಾತೀತವಿರುತ್ತೆ. ಶಿವಸಾಕ್ಷಾತ್ಕಾರದ ಸ್ವಾನುಭವದಲ್ಲಿ ರಂಜಿಸುವ ಶಿವಯೋಗಿ ನಿಜಕ್ಕೂ ನಿರ್ದೇಹಿಯೆನಿಸಿಹನು ಈತಂಗೆ ಹಸಿವು, ಬಾಯಾರಿಕೆ, ಶೋಕ, ಮೋಹಗಳಿಲ್ಲ.

**ಷಡೂರ್ಮಿ ಯಸ್ಯ ಷಡ್ವರ್ಗೋ ನಾಸ್ತಿ ಚಾಷ್ಟವಿಧಾರ್ಚನಂ ।**
**ನಿರ್ಭಾವಂ ನಿಜಲಿಂಗೈಕ್ಯಂ ಶಿಖಿಕರ್ಪೂರ ಯೋಗವತ್ ॥**

(ಶಿವಾಗಮ)

ಇಂತಪ್ಪ ಶಿವಯೋಗಿಗೆ ಜನನ ಮರಣಂಗಳೂ ಇಲ್ಲ. ಕಾಮಕ್ರೋಧಾದಿ, ಅರಿಷಡ್ವರ್ಗಗಳೂ ಇಲ್ಲ. ಶಿವಯೋಗಿ ಭಾವವಿರಹಿತನಾದಕಾರಣ ಅಷ್ಟವಿಧಾರ್ಚನೆ ಈತಂಗಿಲ್ಲ. ಈ ಮಹನೀಯನು ಸದಾ ಅಂತರ್ಮುಖಿಯಾಗಿ, ಇಷ್ಟಲಿಂಗ ಧ್ಯಾನಾನುಸಂಗಿಯಾಗಿ, ಜ್ಯೋತಿರ್ಲಿಂಗಮಯನೆನಿಸಿಹನು. ಐಕ್ಯಸ್ಥಲದ ಭಕ್ತ ನಿವೃತ್ತಿಕಳೋಪೇತನಾಗಿ ಆಚಾರಸಂಪನ್ನ, ಮಾಹೇಶ್ವರ. ಪ್ರತಿಷ್ಠಾಕಳೋಪೇತನಾಗಿ, ಪರಿಪ್ಲುತವಾದ ವಿಚಾರಸಂಪನ್ನ. ಐಕ್ಯಸ್ಥಲದ ಪ್ರಸಾದಿ ವಿದ್ಯಾಕಳಾಯುಕ್ತನಾಗಿ, ವಿದ್ಯಾ, ಅವಿದ್ಯಾ; ನಿತ್ಯಾ, ಅನಿತ್ಯಗಳ ಸ್ಥಿತಿಗತಿಗಳನ್ನು ಅರಿತು ವಿಚಾರಭರಿತನಾಗಿ, ದುಃಖಮಯ ವಿಷಯಗಳಿಂದ ದೂರವಿದ್ದು, ಸದ್ಗುಣಗಳಿಗೆ ತೌರಾದ ಶಾಂತಿಧಾಮದಲ್ಲಿ ವಿದ್ಯಾಸಂಪನ್ನನಾಗಿ ನಿರ್ಮಲಮನಸ್ಕನಾಗಿ ಸದಾ ಪ್ರಸನ್ನಭಾವದಿಂದ ಪೂರ್ಣಚಂದ್ರನ ವದನಾರವಿಂದದಿಂದಿರ್ಪನು. ಐಕ್ಯಸ್ಥಲದ ಪ್ರಾಣಲಿಂಗಿ ಶಾಂತಿಕಳಾಯುಕ್ತನಾಗಿ ಶಮದಮಾದಿ ಸಾಧನ ಚತುಷ್ಟಯಸಂಪನ್ನನೆನಿಸಿ, ಮುಮುಕ್ಷುವೆನಿಸಿಹನು. ಭಕ್ತ, ಮಾಹೇಶ್ವರ ಪ್ರಸಾದಿ ಈ ಮೂರರೂ ಪ್ರಾಣಲಿಂಗಿಗೆ ಕ್ರಿಯಾಪ್ರಧಾನವೆನಿಸಿವೆ. ಪ್ರಾಣಲಿಂಗಿ, ಶರಣ, ಐಕ್ಯ ಈ ಮೂರರೂ ಸ್ಥಲಗಳು ಜ್ಞಾನಪ್ರಧಾನವೆನಿಸಿವೆ. ಐಕ್ಯಸ್ಥಲದ ಶರಣಸ್ಥಲದಲ್ಲಿ, ಕರಸ್ಥಲದ ಮನೋಹರಲಿಂಗ, ಮನಸ್ಥಲಕ್ಕೆ ವೇದ್ಯವಾಗಿ,

ಮನಸ್ಥಲದ ಲಿಂಗ ಸರ್ವಾಂಗಗಳಲ್ಲಿ ವೇದ್ಯವಾದ ಬಳಿಕ, ಇನ್ನು ಭೇದ ಭಾವಕ್ಕೆ ತೆರವುಂಟೇ ? ನಿಜಲಿಂಗಾನುಸಂಧಾನದಿಂದ ಲಿಂಗಮುಖದಲ್ಲಿ ಬೆರೆತು ಸಮರಸವಾದ ಬಳಿಕ ಎರಡೆಂಬುದಿಲ್ಲ. ಐಕ್ಯಸ್ಥಲದ, ಐಕ್ಯನು ಲಿಂಗ ಸಮರಸ ಸಂಯೋಗದಿಂದ, ಅಂಗವಳಿದು ಅಖಂಡ ಚೈತನ್ಯಮಯ ಘನಲಿಂಗ ತಾನಾದ ಬಳಿಕ ಚರಾಚರನೆಂಬ ಸರ್ವನ್ನಳಿದು, ತಾನೇ ತಾನಾಗಿ ಜ್ಯೋತಿಯಾಗಿ ಬೆಳಗುತ್ತಿರುವಾಗ, ಬೋಗಿಸಿದುದೆಲ್ಲಾ ಲಿಂಗ ಭೋಗವಾಗಿ ನಿಜಲಿಂಗೈಕ್ಯವೆನಿಸಿಹನು. ಇಂತಪ್ಪ ಐಕ್ಯಸ್ಥಲದ ಪ್ರಾಣಲಿಂಗಿ ಶಾಂತಿಕಳಾಯುಕ್ತನಾಗಿ ಶಿವ ಯೋಗದಲ್ಲಿ ಮಗ್ನನಾಗಿರ್ಪನು. ಶರಣ ಶಾಂತ್ಯತೀತ ಕಳಾಭರಿತನಾಗಿರ್ಪನು. ಐಕ್ಯನು ಶಾಂತ್ಯತೀತೋತ್ತರ ಕಳಾಸ್ವರೂಪಿಯಾಗಿಹನು. ಈ ಎರಡೂ, ಅನಿರ್ವಚನೀಯ ಅಪ್ರಮೇಯವೆನಿಸಿವೆ. ಇಂತು ಅಂಗವಳಿದು ತನು ಕರಣಂಗಳು ಶ್ರೀಮಹಾಗುರುವಿನ ಶಕ್ತಿ ಪಾತದಿಂದ ಶಿವಕರಣಂಗಳಾಗಿ ಪರಿವರ್ತನೆ ಯಾದಬಳಿಕ, ಶಿವಯೋಗಿ ಲಿಂಗವೇತಾನಾಗಿ, ಸರ್ವಾಂಗ ಲಿಂಗವಾಗಿ, ಲಿಂಗ ಭೋಗೋಪಭೋಗಿಯಾಗಿ, ಚರಾಚರಾತ್ಮಕವಾದೀ ಭಿನ್ನ ಜಗತ್ತು ಶಿವಶರಣನಿಗೆ ಕಾಣಿಸದು. ಆ ಮಹಾತ್ಮನ ದೃಷ್ಟಿಯಲ್ಲಿ ಸಮಸ್ತವೂ **"ಸತ್ಯಂ ಜ್ಞಾನ ಮನಂತಂ ಬ್ರಹ್ಮ"** ಎಂಬ ಉಪನಿಷದ್ವಾಣಿಯಂತೆ ಕಂಡನುಭವಿಸಿ, ಸ್ವಸ್ವರೂಪದಲ್ಲಿ, ಅಖಂಡ ಕೋಟಿ ಬ್ರಹ್ಮಾಂಡಗಳನ್ನು, ನಿರ್ದೇಹಿಯಾದ ಶಿವಯೋಗಿಯು, ಕೇವಲ ಪರಮಾಣು ರೂಪದಲ್ಲಿ ಕಾಣುವನು. ಭಕ್ತ ಮಾಹೇಶ ಪ್ರಸಾದಿ ಕ್ರಿಯಾಪ್ರಧಾನಸ್ಥಲಗಳು ನಿತ್ಯಾನಿತ್ಯ ವಸ್ತುವಿವೇಕ, ಶಮದಮಾದಿ ಸಾಧನ ಸಂಪತ್ತು ಮತ್ತು ಮುಮುಕ್ಷತ್ವ, ಮೊದಲ ಮೂರು ಸ್ಥಲದವರಿಗೆ ಅನ್ವಯ ವಾದರೆ, ಪ್ರಾಣಲಿಂಗಿ ಶರಣ ಮತ್ತು ಐಕ್ಯಸ್ಥಲದವರಿಗೆ, ಧ್ಯಾನ, ಧಾರಣ ಸಮಾಧಿ ಮೊದಲಾದವು, ಜ್ಞಾನಪ್ರಧಾನ ಯೋಗವೆನಿಸಿರುವುವು, ಇತ್ಯಾದಿ ಕಾರಣಗಳಿಂದ ಶಿವನಲ್ಲಿ ಸಾಮರಸ್ಯ ಹೊಂದಿದ ಶಿವಯೋಗಿಯಲ್ಲಿ ಚರಾಚರ ಪ್ರಪಂಚ ಲಯವು ಪ್ರಾಪ್ತವಾಗಲು, **"ಚರಾಚರ ಲಯವೆನಿಸುವುದು."**

ಅಂತರಿಕ್ಷದಲ್ಲಿ ಮೇಘಗಳು ಆಗಾಗ ತೋರಿ ಮತ್ತಲ್ಲಿಯೇ ಅಡಗುವಂತೆ ಮಹಾಶಿವಯೋಗಿಯ ಪವಿತ್ರವಾದ ಅಂತಃಕರಣದಲ್ಲಿ ಆಗಾಗ ತೋರುವ ವಿಷಯಸುಖಗಳು, ವಿಷಯ ಫಲವೀಯದೇ, ಸಾಗರದಲ್ಲಿ ನದಿಗಳು ನಿಶ್ಚೇಷ್ಟಿತ ವಾಗಿ ವಿಲೀನವಾಗುವಂತೆ, ಕಣ್ಮರೆಯಾಗುವುವು.

ಚರಾಚರಾತ್ಮಕವಾದೀ ಅಖಂಡ ಜಗತ್ತು ಎಲ್ಲಿ ಆವಿರ್ಭವಿಸಿ ಅಂತ್ಯದಲ್ಲಿ ಎಲ್ಲಿ ತಿಷ್ಠತಿ, ವಿರಮಿಸುತ್ತದೆಯೋ, ನಾನಾವಿಧ ವಿಚಿತ್ರ ಗತಿಯಲ್ಲಿ ತೋರುವ ಈ ಪ್ರಪಂಚದ ಸಮಸ್ತ ಪಂಚಭೂತಗಳು ಪುನಃ ಎಲ್ಲ ವಿಲೀನವಾಗುವುವೋ ; ಪಾಂಚಭೌತಿಕವಾದೀ ಚರಾಚರವಾದ ವಿಶ್ವ ಅಡಗುವ ಸ್ಥಲವೇ ಚರಾಚರ ಲಯ ಸ್ಥಲವೆನಿಸಿದೆ. ಅಂತಪ್ಪ ಮೂಲತತ್ತ್ವ, ಸತ್, ಅಸತ್, ಸದಸತ್ ಎಂಬ ಲಕ್ಷಣ ಗಳಿಂದ ದೂರವಿದ್ದು, ಯಾವ ವಿಧವಾದ ವಿಕಾರವೂ ಇಲ್ಲದ, ಕೇವಲ ಚೈತನ್ಯ ಮಯದಿಂದ "ಚೈತನ್ಯಂ ಬ್ರಹ್ಮ" ಎಂದು ವಿಶ್ರುತವಾದ ಪರಮಪುರುಷನನ್ನು ಭಕ್ತ್ಯಾ ನಮಸ್ಕರಿಸೋಣ.

ನಿಸ್ತರಂಗಸಮುದ್ರೇ ತರಂಗೋತ್ಪತ್ತ್ಯೈಃ ।
ಪ್ರಾಕ್‌ಲಹರೀವ ಸ್ವಾತ್ಮನಿ ಈಶಚ್ಚಲನ ಮುತ್ಪದ್ಯತೇ ॥

ಅಂದರೆ, ಸಮುದ್ರದ ಮೇಲ್‌ಭಾಗ ಒಮ್ಮೊಮ್ಮೆ ತರಂಗಗಳಿಲ್ಲದೆ ಶಾಂತವಾಗಿ ನಿದ್ರಿಸುತ್ತಲಿದೆಯೋ ಎನ್ನುವಂತಿದ್ದು, ಒಮ್ಮಿಂದೊಮ್ಮೆಲೇ ಸಾಗರದ ಮೇಲ್ಮೈ ಸುಗು ಚಲನೆಗೊಳಗಾಗುವುದು. ಅಲ್ಲಿಂದತ್ತ ಅಲೆಗಳುಂಟಾಗಿ, ಜಲಾಶಯದ ಚಲನವಲನಗಳಿಂದ ಅಲೆಗಳು ಮೂಡಿ, ಉಬ್ಬಿ, ಉಕ್ಕೇರಿ, ಹೌ ಹಾರಿ ರಭಸ ದಿಂದ ದಡವ ಬಡಿದು, ಹಿಮ್ಮೆಟ್ಟಿ ಮತ್ತೆ ಹಿಂದಿನ ಹೊಸಹೊಸ ಅಲೆಗಳ ತಾಡನ ದಿಂದ, ಆಳೆತ್ತರ ಹಾರಿ ಭೋರೆಂದು ಘರ್ಜಿಸುತ್ತಾ ಸಹಸ್ರಾಂಶ ಅಲೆಗಳು ಪ್ರತಿ ಕ್ಷಣ ಧುಮ್ಮಿಕುವ ರಭಸಕ್ಕೆ. ನೊರೆ ತೆರೆ, ಬುದ್ಬುದಗಳು ತಾಂಡವವಾಡುತ್ತಾ ಮತ್ತೆ ಈ ಸಮಸ್ತ ವೈಖರಿ ಎಲ್ಲಿಂದ ದೃಗ್ಗೋಚರವಾದವೋ,ಆ ಸಾಗರದ ಮಹಾ ಜಲಾಶಯದಲ್ಲೇ ವಿಲೀನವಾಗುತ್ತಿರುವುದನ್ನು ನಾವು ಪ್ರತ್ಯಕ್ಷವಾಗಿ ನೋಡು ತ್ತಿರುವೆವು. ಇದರಂತೆ ಚರಾಚರ ಜಗತ್ತು ಪರಶಿವತತ್ತ್ವ ಸೃಷ್ಟಿಗುನ್ಮುಖವಾಗುತ್ತಲೆ ಈಶೇಚ್ಛೆಯಂತೆ ತೋರಿ ಬೆಳಗಿ, ಪರಮೇಶ್ವರನ ಬೃಹದ್‌ಗರ್ಭದಲ್ಲಿ ತಲ್ಲೀನ ವಾಗುವ ಸ್ಥಿತಿ ಚರಾಚರಲಯಸ್ಥಲವೆನಿಸಿರುತ್ತೆ.

ಶಿವೇ ನೈಕ್ಯಂ ಸಮಾಪನ್ನಂ ।
ಶ್ಚಿದಾನಂದ ಸ್ವರೂಪಿಣಾಂ ।
ನ ಪಶ್ಯತಿ ಜಗಜ್ಜಾಲಂ ।
ಮಾಯಾಕಲ್ಪಿತ ವೈಭವಂ ॥

**ಶಿವತತ್ತ್ವಾತ್ಸಮುತ್ಪನ್ನಂ । ಜಗದಸ್ಮಾನ್ನ ಭಿದ್ಯತೆ ॥**

ಶಿವತತ್ತ್ವದಿಂದ ಉದ್ಭವಿಸಿದ ಶಕ್ತಿ ಭಕ್ತಿಗಳು ಒಂದು ಜ್ಞಾನಕ್ರಿಯಾ ಸಮ ಸಮುಚ್ಚಯ ಸಿದ್ಧಾಂತವನ್ನು ಸಾಧಿಸಿವರ್ಲೆ, ಮತ್ತೊಂದು ಮೋಕ್ಷಕಾಂತಾ ಮಣಿಯನ್ನು ತನ್ನ ಅಂತಃಪುರದ ಸೇವಕಳನ್ನಾಗಿರಿಸಿಕೊಂಡು,

**ಮೋಕ್ಷಸಾಧನ ಸಾಮಗ್ರ್ಯಾಂ ।**
**ಭಕ್ತಿರೇವ ಗರೀಯಸೀ ಸ್ವಸ್ವರೂಪಾನು ಸಂಧಾನಂ ।**
**ಭಕ್ತಿರಿತ್ಯಭಿಧೀಯತೇ ॥**

ಎಂಬಂತೆ, ಪರಾಭಕ್ತಿ.

**ಸ್ವಸ್ವರೂಪೈಕ ಚಿಚ್ಛಕ್ತಿಯಿಂ ।**
**ಸ್ಫುರಿಸುತಿರ್ದುದದ್ವೈತ ಪರಮಾತ್ಮ ತತ್ವಂ ॥**

**ಏ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ ।**
**ನಿರ್ಧೂತ ಮಲಸಂಸ್ಪರ್ಶಾ ಸ್ತೇ ಸ್ಮೃತಾಃ ಶಿವಯೋಗಿನಃ ॥**
(ಸಿದ್ಧಾಂತಶಿಖಾಮಣಿ)

ಆತ್ಮದರ್ಶಿಯಾದ ಶಿವಯೋಗಿ ಸಮಸ್ತ ಪ್ರಪಂಚವನ್ನು ಶಿವಾಕಾರವಾಗಿ ನೋಡುವನಾದ್ದರಿಂದ ಚರಾಚರವೆಲ್ಲಾ ಅವನಿಗೆ ಶಿವಮಯವಾದ್ದರಿಂದ ಆ ಸ್ಥಿತಿ, ಚರಾಚರಲಯವೆನಿಸಿದೆ.

ಯಾವುದು ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯಾ ಸ್ಥಾನಗಳಾಚೆ, ಅಚಿಂತ್ಯ, ಅಗೋಚರ, ಅವ್ಯಕ್ತ, ಅನಿರ್ವಚನೀಯವೆನಿಸಿದ ತುರ್ಯಾತೀತ ಸ್ಥಾನವೋ, ಅದು ಕೇವಲ ಕೈವಲ್ಯಸ್ವರೂಪವಾದ್ದರಿಂದ, ಸ್ತುತಿ ಧ್ಯಾನಾದಿಗಳಿಗೆ ಎಟುಕದ ಅತೀತವಾದ್ದರಿಂದ, ಆ ಸ್ಥಾನದಲ್ಲಿ ಶಿವಯೋಗಿ ತನ್ನ ಆತ್ಮಶ್ರೀಯ ದೇದೀಪ್ಯ ಪರಂಜ್ಯೋತಿಯಲ್ಲಿ ಮುಳುಗಿರ್ಪನಾದ್ದರಿಂದ, ಚರಾಚರ ಜಗತ್ತು ಅವನಿಗೆ ಕಾಣಿಸುವುದಿಲ್ಲ.

ಇಂತಪ್ಪ ಪರಮೋತ್ಕೃಷ್ಟವಾದ ಸ್ಥಿತಿಯನ್ನು ಶ್ರೀಮದಾಚಾರ್ಯ ರೇಣುಕರು ಚರಾಚರಲಯಸ್ಥಲವೆಂದು ಬೋಧಿಸಿರುವರು.

ಶ್ರೀಮದುಜ್ಜಯಿನಿ ಸದ್ಧರ್ಮಸಿಂಹಾಸನ, ಯಜುರ್ವೇದದ ಉತ್ತರ ಭಾಗದಲ್ಲಿ ಪ್ರತಿಪಾದಿತವಾದ ಸಂಹಿತೆಗಳ ಮತ್ತು ಸೂಕ್ತಗಳ ತತ್ವಕ್ಕೆ ಅನ್ವಯಿಸಿದ ಮಹಾ ಜಗದ್ಗುರು ಪೀಠವೆನಿಸಿದೆ. ಚತುರ್ವೇದಗಳಲ್ಲಿ ಕೃಷ್ಣ ಯಜುರ್ವೇದ ಶುಕ್ಲ ಯಜುರ್ವೇದಗಳ ಉತ್ತರ ಭಾಗಗಳಲ್ಲಿ ಪರಮ ವೀರಶೈವ ಸಿದ್ಧಾಂತಕ್ಕೆ ಒಳಪಟ್ಟ ಪ್ರಮುಖ ವಿಷಯಗಳನ್ನು ಸಂಹಿತೆಯಲ್ಲಿ ಅಲ್ಲಲ್ಲಿ ಕಾಣಬಹುದಾಗಿದೆ. ಯಜುರ್ವೇದ ತೈತ್ತಿರೀಯ—

**ಯಾ ತೇ ರುದ್ರ ಶಿವಾ ತನೂರ ಘೋರಾ ಪಾಪ ಕಾಶಿನೀ ।**
**ತಯಾ ನ ಸ್ತನುವಾ ಶಂತಮಯಾ ಗಿರಿಶಂತಾಭಿಚಾಕಾಶೀ ಹಿ ॥**

ಎಂಬ ಮಂತ್ರ ಅರ್ಥಗರ್ಭಿತವಾಗಿದೆ. ಯಜುರ್ವೇದದ ಈ ಮಂತ್ರ ಲಿಂಗ ಧಾರಣ ಪೂಜಾದಿ ವಿಷಯವನ್ನೇ ಬೋಧಿಸುತ್ತಲಿದೆ. ಯಜುರ್ವೇದಾಂತರ್ಗತ ವೀರ ಲೈಂಗ್ಯೋಪನಿಷತ್ತಿನಲ್ಲಿ ಶ್ರೀ ಪಂಚಾಚಾರ್ಯರ ಲಿಂಗೋದ್ಭವ ಮಂಗಳ ವಿಷಯ ಸ್ಫುಟವಾಗಿ ನಿರೂಪಿಸಲಾಗಿದೆ. ಆದ್ದರಿಂದ ಶಿವಾದ್ವೈತ ವಿದ್ವಾಂಸರು ಕೃಪೆಯಿಂದ ಇಂತಪ್ಪ ವಿಷಯಗಳನ್ನು ಹೊರಗೆಡಹಿ ಜನತೆಗೆ ಬೋಧಿಸಬೇಕಾಗಿರುತ್ತೆ.



ಓಂಕಾರ ಪಂಜರ ಶುಕೀಂ । ಉಪನಿಷದು ದ್ಯಾನ ಕೇಳಿ ಕಲಿ ಕಂಠೀಂ ।
ಆಗಮವಿಪಿನಮಯೂರೀಂ । ಆರ್ಯಾಂ ಅಂತರ್ಭಾವಯೇ ಗೌರೀಂ ॥

ಅದ್ವಾತೀತ ಪದೇ ಅಲಂಕೃತ ಶಿವೇ । ಅರ್ಥಾಂತರಾರ್ಥೇ ಪರೇ ।
ಅತ್ಯರ್ಥೇ ಅಮಲಾಶಯೇ ಅತಿದಯೇ । ಅರ್ಧೇಂದು ಭೂಷೋಜ್ವಲೇ ॥
ಅಧ್ಯಕ್ಷೇ ಅಮರಾಂಗನಾ ಪರಿವೃತೇ ಅಧ್ಯಾತ್ಮ ವಿದ್ಯಾ ಮಯೇ ।
ಅವ್ಯಕ್ತೇ ಅಚಲಾದಿ ರಾಜ ತನಯೇ ವಂದೇ ಅಖಿಲಾಂಡೇಶ್ವರೀ ॥
ಅದ್ಯೇ ಆಗಮ ಸಂಪ್ರದಾಯ ನಿಪುಣೇ । ಆಚಾರ್ಯವರ್ಯಾರ್ಚಿತೇ ।
ಆಧಾರಾದಿ ಸರೋಜ ಪೀಠ ನಿಲಯೇ । ಆಲೋಲ ನೀಲಾಲಕೇ ॥
ಅತಾಮ್ರಾಧರ ಚಾರುಮಂದಹಸಿತೇ । ಆ ಪೀನವಕ್ಷೋ ರುಹೇ ।
ಬ್ರಹ್ಮಾಚ್ಯುತ ಶಂಕರಾರ್ಚಿತ ಪದೇ । ವಂದೇ ಅಖಿಲಾಂಡೇಶ್ವರೀ ॥

## ಲಿಂಗಸ್ಥಲ ೫೨

## ಭಾಂಡಸ್ಥಲಂ (ಪರಿ. ೨೦)

ಆ ಬ್ರಹ್ಮಾಂಡ ಶತಕೋಟೀನಾಂ ಸರ್ಗಸ್ಥಿತಿಲಯಾನ್ ಪ್ರತಿ ।
ಸ್ಥಾನಭೂತೋ ವಿಮರ್ಶೋ ಯಸ್ತದ್ಭಾಂಡಸ್ಥಲಮುಚ್ಯತೇ ॥

ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವೋದ್ಭಾಸನಕಾರಿಣೀ ।
ಸಾಕ್ಷಿಣೀ ಸರ್ವ ತತ್ತ್ವಾನಾಂ ಸಮಿಂಧೇ ಸರ್ವತೋಮುಖೀ ॥

ವಿಶ್ವಂ ಯತ್ರ ಲಯಂ ಯಾತಿ ವಿಭಾತ್ಯಾತ್ಮಾ ಚಿದಾಕೃತಿಃ ।
ಸದಾನಂದಮಯಃ ಸಾಕ್ಷಾತ್ ಸಾ ವಿಮರ್ಶಮಯೀ ಕಲಾ ॥

ಪರಾಹಂತಾ ಸಮಾವೇಶ ಪರಿಪೂರ್ಣ ವಿಮರ್ಶವಾನ್ ।
ಸರ್ವಜ್ಞಃ ಸರ್ವಗಃ ಸಾಕ್ಷೀ ಸರ್ವಕರ್ತಾ ಮಹೇಶ್ವರಃ ॥

ವಿಮರ್ಶ ಭಾಂಡ ವಿನ್ಯಸ್ತ ವಿಶ್ವತತ್ತ್ವ ವಿಜೃಂಭಣಃ ।
ಅನನ್ಯ ಮುಖಸಂಪ್ರೇಕ್ಷೀ ಮುಕ್ತಃ ಸ್ವಾತ್ಮನಿ ತಿಷ್ಠತಿ ॥

ಭಾಂಡ ಯೆಂದರೆ ಕಾಳು ಕಡಿ, ಧಾನ್ಯಗಳನ್ನು ತುಂಬಿಡುವ ಗುಡಾಣ-ಆಹಾರ ಪದಾರ್ಥಗಳನ್ನು ಶೇಖರಿಸುವ ಉಗ್ರಾಣ ಅಥವಾ ಕಣಜ ಭಾಂಡವೆನ್ನಲಾಗಿದೆ. ಪಿಂಡಾಂಡ ಬ್ರಹ್ಮಾಂಡಗಳನ್ನು ಗರ್ಭೀಕರಿಸಿಕೊಂಡಿರುವ ಮಹತ್ತರವಾದ ಅದೃಶ್ಯ ಶಕ್ತಿ ನಿಜಕ್ಕೂ ಭಾಂಡವೆನಿಸಿದೆ.

ಸ್ಥಾಣೌ ಸರ್ವಾಶ್ರಯೇನಂತೇ ಸಚ್ಚಿದಾನಂದರೂಪಿಣೀ ।
ಯಸ್ಮಿನ್ ಬ್ರಹ್ಮಣಿ ಲೀಯೇತ ಪ್ರಪಂಚಸ್ತತ್ಸಲಂ ಸ್ಮೃತಂ ॥

ಸ್ಥಾವರಜಂಗಮಾತ್ಮಕವಾದೀ ಬ್ರಹ್ಮಾಂಡದ ಉದಯಕ್ಕೆ ಅಭ್ಯುದಯಕ್ಕೆ ಹಾಗೂ ಲಯಾದಿಗಳಿಗೆ, ಮೂಲಸ್ಥಂಭಾಯಮಾನವಾದ, ಆದಿಶಕ್ತಿ ಭಾಂಡವೆನಿಸಿರುವಳು.

ಸರ್ವೇಷಾಂ ಸ್ಥಾನಭೂತತ್ವಾ ಲ್ಲಯಭೂತತ್ವತಸ್ತಥಾ ।
ತತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೇ ॥

ಶಿವಾದ್ವೈತಮಂಜರಿಯಲ್ಲಿ ಶ್ರೀ ಸ್ವಪ್ರಭಾನಂದಶಿವಾಚಾರ್ಯರು ಯಾವ ಸ್ವಯಂಪ್ರತಿಷ್ಠಿತವಾದ ಮಹಾತತ್ವವು ಆದಿಗಾದಿಯೆನಿಸಿ ಅಖಂಡಶಕ್ತಿಯುತವಾಗಿ, ಚರಾಚರವಾದೀ ಜಗತ್ತಿಗೆ ತಾಯ್ಮನೆಯಂತೆ ಆಧಾರಸ್ಥಂಭವಾಗಿದೆಯೋ ಆ ದೇವಿ ತನ್ನಲ್ಲಿ ಅಖಿಲವನ್ನೂ ಗರ್ಭೀಕರಿಸಿಕೊಂಡು ಸಂರಕ್ಷಿಸುತ್ತಲಿರುವಳು. ಇಂತಪ್ಪ ಶ್ರೀ ಭುವನೇಶ್ವರಿ, ರುದ್ರಾಣಿ, ಮೃಡಾಣಿ, ಅಖಿಲಾಂಡೇಶ್ವರಿಯೇ ಭಾಂಡಸ್ಥಲವೆನಿಸಿರುವಳು. ಮುಮ್ಮೂರ್ತಿಗಳಿಗೂ ತ್ರಿಶಕ್ತಿ ಸ್ವರೂಣಿಯರಿಗೂ ಪರಮ ಮೂಲಸ್ಥಾನವೆನಿಸಿದ ಪ್ರಕೃತಿ ದೇವಿಯನ್ನು ಭಕ್ತ್ಯಾ ವಂದಿಸುತ್ತಾ—

**ಪ್ರಣಮ್ಯ ಶಿರಸಾ ದೇವೀಂ ಪ್ರಕೃತಿಂ ನಿತ್ಯಂ ।**
**ಪರಮಾತ್ಮಸ್ವರೂಪಿಣೀಂ ॥**

ಎಂದು ಸ್ತುತ್ಯರಿರುವಳು. ಶ್ರೀ ಶಿವಯೋಗಿಶಿವಾಚಾರ್ಯರು—

**ಯಾ ಮಾಹುಃ ಸರ್ವಲೋಕಾನಾಂ ಪ್ರಕೃತೀಂಶಾಸ್ತ್ರಪಾರಗಾಃ ।**
**ತಾಂ ಧರ್ಮಚಾರಿಣೀಂ ಶಂಭೋಃ ಪ್ರಣಮಾಮಿ ಪರಾಂ ॥**

ಎಂದು ನಮಿಸಿರುವರು.

ಇಂತಪ್ಪ ಮಹಿಮಾನ್ವಿತಳಾದ ಜಗಜ್ಜನನಿಯು ಚಿಘ್ನನ ತತ್ವಭಾಂಡಸ್ಥಲವೆನಿಸಿದೆ.

ದೇವಿಮಹಾತ್ಮ್ಯದಲ್ಲಿ ಒಂದು ಪ್ರಸಂಗ ವರ್ಣಿಸಲಾಗಿದೆ—

ಆದಿಗಾದಿಯಲ್ಲಿ ಪರಾಶಕ್ತಿ ತಾನೊಬ್ಬಳೇ ಯವ್ವನದ ಸೌಂದರ್ಯಾತಿಶಯಗಳಿಂದ ರಂಜಿತಳಾಗಿದ್ದಳು. ಬಹು ಕಾಲ ಇಂತಿದ್ದು, ಬಳಿಕ "**ಏಕಾಕಿ ನ ರಮತೇ ಸ ದ್ವಿತೀಯ ಮೈಚ್ಛತ್**" ಕ್ರಿಡಾಪಟುವಾಗಿ ಇನ್ನೊಬ್ಬಾತನ್ನನ್ನು ಇಚ್ಛಿಸಿದಳು. "**ಕ್ರೀಡಾರ್ಥಂ ವಿಶ್ವಭವನ ನಿರ್ಮಾಣೇ**" ಅನಂತ ಕೋಟಿ ಬ್ರಹ್ಮಾಂಡಗಳನ್ನು "**ಇಚ್ಛಾಮಾತ್ರ ಪ್ರಭೋಃ ಸೃಷ್ಟಿಃ**" ಸಂಕಲ್ಪ ಮಾತ್ರೇಣ ಸೃಷ್ಟಿಸಬೇಕೆಂದು ಇಚ್ಛಿಸಿ, ಪ್ರಥಮತಃ ಪುರುಷನೊಬ್ಬನನ್ನು ಸೃಷ್ಟಿಸಿದಳು. ದೇವೀ ಪ್ರಭಾವದಿಂದ ಸ್ವಲ್ಪ ಸಮಯದಲ್ಲೇ ಆತ ಯವ್ವನದಿಂದ ರಾರಾಜಿಸಿ, ತನ್ನ ಎದುರಿನಲ್ಲಿ ಕಂಡ ಮಾತೆಯನ್ನು ಭಕ್ತ್ಯಾ ವಂದಿಸಿ, "ಅಮ್ಮಾ ನನ್ನನ್ನು ಸೃಷ್ಟಿಸಿದೆಯಲ್ಲಾ ಯಾಕೆ ಎಂದನು." ದೇವಿ ಸ್ವಲ್ಪ ಮೌನವಾಗಿದ್ದು ತದನಂತರ, ಹೇ ಮಹಾತ್ಮಾ! ನೀನು ಈಗ ನನ್ನನ್ನು ಮದುವೆಯಾಗಬೇಕೆಂದು

ನುಡಿದು ಮಂದಸ್ಮಿತ ಭಾವದಿಂದ ಅವನತ್ತ ನೋಡಿದಳು. ಧೀಮಂತನಾದ ಮಹಾಪುರುಷ ಧರ್ಮಧ್ವಜನೆನಿಸಿದ ಶಿವನು ಕಂಪಿತನಾಗಿ, ಗದ್ಗದಸ್ವರದಿಂದ ನನ್ನ ಸೃಷ್ಟಿಸಿದ ಜನನಿ ನೀನು. ನಿನ್ನನ್ನು ನಾನು ಹೇಗೆ ತಾನೆ ಮದುವೆ ಯಾಗಲಿ. ಅಮ್ಮ ನೀನಾದ್ದರಿಂದ ನಿನ್ನ ಮಗ ನಾನು ಎಂದು ನಮಸ್ಕರಿಸಲು, ಕುಪಿತಳಾದ ದೇವಿ ಆತನನ್ನು ತನ್ನ ಉರಿಗಣ್ಣಿನಿಂದ ಸಿಟ್ಟಿಸಿ ಸುಟ್ಟು ಬೂದಿ ಮಾಡಿದಳು. ಆಶ್ಚರ್ಯವಿದು. ಎರಡನೆ ಸಾರಿ ಬೇರೊಬ್ಬನನ್ನು ಸೃಷ್ಟಿಸಲು, ಆತನೂ ಸಹ "ತಾಯಿ" ನನ್ನನ್ನು ಸೃಷ್ಟಿಮಾಡಿದ ಕಾರಣವೇನೆಂದು ಕೇಳಿದನು", ದೇವಿ ನನ್ನನ್ನು ಲಗ್ನವಾಗೆಂದಳು. ಇವನು ವಿಷ್ಣು ಯುಕ್ತಿಗಾರ. ಇಲ್ಲವೆಂದರೆ ಪ್ರಥಮ ಪುರುಷನನ್ನು ಸುಟ್ಟಂತೆ ಸುಡುವಳೆಂದು ಭಾವಿಸಿ; ಅಮ್ಮಾ! ನಿನ್ನನ್ನು ಲಗ್ನವಾಗುತ್ತೇನೆ. ಆದರೆ ಮೊದಲಿನ ಪುರುಷನಿಗೆ ಪ್ರಾಣದಾನ ಮಾಡೆಂದನು. ಲಗ್ನವಾಗುವ ಆಸೆಯಿಂದ ಶಿವನಿಗೆ ಪ್ರಾಣದಾನ ಮಾಡಿದಳು. ಆಗ ವಿಷ್ಣು ತಾಯಿ ಇನ್ನೊಬ್ಬ ಪುರುಷನನ್ನು ಸೃಷ್ಟಿಸೆಂದನು. ಹಾಗೇ ಸಂಕಲ್ಪ ಮಾತ್ರೇಣ, ಮೂರನೆಯವನನ್ನು ಸೃಷ್ಟಿಸಲು, ಈತನೇ ಚತುರ್ಮುಖ ಬ್ರಹ್ಮ ನೆನಿಸಿದನು. ವಿಷ್ಣುವಿಗೆ ಸಂತೋಷವಾಯಿತು. ದೇವಿ ವಿಷ್ಣುವನ್ನುದ್ದೇಶಿಸಿ ಈಗ ಲಗ್ನವಾಗೆಂದಳು ಆಗ ವಿಷ್ಣು, ಲಗ್ನವಾಗುತ್ತೇನೆ. ನೀನು ನಮ್ಮನ್ನು ಸೃಷ್ಟಿ ಸಿದ ತಾಯಿ ಆದ್ದರಿಂದ ಸಂಕೋಚವಾಗಿದೆ. ಮಾತಾ! ನಿನ್ನೀ ರೂಪವನ್ನು ಹೋಗಲಾಡಿಸು, ತ್ರಿಶಕ್ತಿರೂಪಿಣಿಯಾದರೆ ನಾವು ಲಗ್ನವಾಗುವುವೆಂದನು. ವಿಷ್ಣುವಿನ ಇಚ್ಛೆಯಂತೆ ಅಖಿಲಾಂಡೇಶ್ವರಿ ತಕ್ಷಣ ಪಾರ್ವತಿ, ಲಕ್ಷ್ಮಿ, ಸರಸ್ವತಿ ರೂಪಗಳನ್ನ "**ಇಚ್ಛಾಮಾತ್ರ ಪ್ರಭೋಃ ಸೃಷ್ಟಿ**" ಎಂಬಂತೆ ತ್ರಿಶಕ್ತಿ ಸ್ವರೂಪಿಣಿಯಾಗಲು, ಶಿವನು ಪಾರ್ವತಿಯನ್ನೂ, ವಿಷ್ಣು ಲಕ್ಷ್ಮಿಯನ್ನು, ಬ್ರಹ್ಮ ಸರಸ್ವತಿಯನ್ನು ವಿವಾಹಿತರಾದರೆಂದು ದೇವೀ ಮಹಾತ್ಮ್ಯದಲ್ಲಿ ಪ್ರೋಕ್ತವಾಗಿದೆ.

ಈ ಆದಿಶಕ್ತಿ, ಮಹಾಶಕ್ತಿ ಗರ್ಭಸಂಭವಿಯೆಂಬ "**ಯಾಮಾಹುಃ ಸರ್ವಲೋಕಾನಾಂ**" ಅನಂತಕೋಟಿ ಬ್ರಹ್ಮಾಂಡಗಳು ಸೃಷ್ಟಿಯಾಗಿ ಅಂತ್ಯ ದಲ್ಲಿ ಅಲ್ಲೇ ಅಡಗುವುದರಿಂದ ಮಹಾಶಕ್ತಿ ಭಾಂಡಸ್ಥಲಸ್ವರೂಪಿಣಿ ಎಂದು ಪ್ರಸಿದ್ಧಿ ಯಿರುವಳು. ವಿಚಾರಮಾಡಲಾಗಿ ಪಿಂಡಾಂಡ ಬ್ರಹ್ಮಾಂಡಗಳು ಭಾಂಡವೆನಿಸಿವೆ. ಈ ಉಭಯ ಭಾಂಡಗಳು, ಶತಕೋಟಿ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಆಶ್ರಯ ವಾಗಿವೆ. ಈ ಕಾರಣದಿಂದ ಶೃತಿ,

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ |
ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾಚ ||

ಎಂದು ಉಗ್ಗಡಿಸಿದೆ. ಸ್ಫುರಣಮಯ, ವಿಮರ್ಶನಶಕ್ತಿಯೇ ಭಾಂಡವೆನಿಸಿದೆ. ಪರಶಿವನ ಪರಾಹಂತಾಮಯ ವಿಮರ್ಶಶಕ್ತಿಯೇ ವಿಶ್ವಾಧಾರವಿರುತ್ತೆ. ಐಕ್ಯಸ್ಥಲದ ಶಿವಯೋಗಿ ವಿಶ್ವರೂಪಿ ತಾನೆಂದು ಭಾವಿಸುವನು, ವಿಮರ್ಶಾತ್ಮಕಶಕ್ತಿ ತಾನು, ವಿಶ್ವನಾಥ ಸಹ ತನ್ನ ಸ್ವರೂಪನಿರುವನೆಂದು ನಂಬಿಹನು. ಮೇಲುಕ್ತವಾದ ಅಂಶಗಳಿಂದ ಕಂಡುಬರುವುದೇನೆಂದರೆ, ಸ್ಫುರಣಮಯ ವಿಮರ್ಶಶಕ್ತಿಯು ಭಾಂಡಸ್ಥಲವೆನಿಸಿದೆ. ವಿಶ್ವದ ಮೂವತ್ತಾರು ತತ್ವಗಳೇ ಆ ಭಾಂಡವ ತುಂಬಿರುವ ಪಡಿ ಪದಾರ್ಥಂಗಳೆಂದು ತಿಳಿಯಬೇಕು. ಕೋಟ್ಯಾಂತರ ಕಿರಣಗಳು ಸೂರ್ಯಬಿಂಬದಲ್ಲಿ ಅಡಗುವಂತೆ; ವಿಶಾಲ ಹೆಮ್ಮರ ಸಣ್ಣ ಬೀಜದಲ್ಲಿ ಸೂಕ್ಷ್ಮಾಂಶದಿಂದ ಅಡಗಿರುವಂತೆ, ಶಿವನ ವಿಮರ್ಶಾಶಕ್ತಿಯು ಅದ್ವಿತೀಯ ಪ್ರಭಾವದಿಂದ, ಭಾಂಡದಲ್ಲಿ ಧಾನ್ಯಗಳು ಅಡಗಿರುವಂತೆ, ಐಕ್ಯಸ್ಥಲದ ಪರಮ ಐಕ್ಯನು ಸಕಲ ತತ್ವಂಗಳನ್ನು ತನ್ನೊಳಗೆ ಲೀಲಾಜಾಲವಾಗಿ ಗರ್ಭೀಕರಿಸಿಕೊಂಡಿರ್ಪನು. ಭೂಗರ್ಭ, ಸಮುದ್ರ ಗರ್ಭ ನಭೋಮಂಡಲದ ಗರ್ಭ ಈ ಮೂರು ಬೃಹದ್ ಭಾಂಡಗಳಲ್ಲಿ ಅಮೂಲ್ಯವಾದ ಅನಂತಾನಂತ ವಸ್ತುಗಳು ನಿಕ್ಷೇಪವಾಗಿವೆ ಇವುಗಳಲ್ಲಿನ ಬಹುಭಾಗ ವಿಜ್ಞಾನಿಗಳಿಗೆ ಗೋಚರವಾಗಿಲ್ಲ. ಅಂದಬಳಿಕ ಅಪ್ರಾಕೃತ ತತ್ವದ ಅವ್ಯಕ್ತ ಶಕ್ತಿಯ ಬೃಹತ್‌ಗರ್ಭದಲ್ಲಿ ಅಂತರ್ಗತವಾಗಿರುವ ಅಸಂಖ್ಯಾತ ವಸ್ತುಗಳ ವಿಮರ್ಶನ ಮಾಡುವುದು ತಾನೆ ಹೇಗೆ? ಶಿವತತ್ವಜ್ಞಾನವು ಯಾವ ಶಿವಯೋಗಿಗೆ ಅಳವಟ್ಟಿದೆಯೋ ಆ ಮಹಾತ್ಮ

ಶಿವತತ್ವಜ್ಞಾನೇನ ಸರ್ವವಿಜ್ಞಾನಂ ಸಿದ್ಧಿರಿತಿ ಸಿದ್ಧಂ ||

ಅಂದರೆ ಪರಿಪೂರ್ಣಾ ಹಂತದಲ್ಲಿ ನಿಷ್ಣಾತನಾದ ಶಿವಯೋಗಿಗೆ, ಪ್ರಕೃತಿಯ ವಿಜ್ಞಾನದ ಮಹಾ ಗರ್ಭದಲ್ಲಿ ಅಂತರ್ಗತವಾಗಿರುವ ಅತ್ಯಮೂಲ್ಯ ರಹಸ್ಯಗಳೆಲ್ಲಾ ತಾವಾಗಿಯೇ ಇತನ ದಿವ್ಯ ಚಿತ್ತಕ್ಕೆ ವೇದ್ಯವಾಗುವುದೆಂದು ಶೃತಿವಾಣಿಯಿಂದ ತಿಳಿದುಬಂದಿದೆ ಈ ಅಂಶ ಗಮನಾರ್ಹವಿರುತ್ತೆ.

ನಾವು ಕೋಟಿ ಕೋಟಿ ಜನ್ಮಗಳಲ್ಲಿ ಮಾಡಿದ ಪುಣ್ಯ ಮತ್ತು ಪಾಪರಾಶಿಗಳು ಸಂಸ್ಕಾರರೂಪದಲ್ಲಿ ನಮ್ಮ ಮನಸ್ಸೆಂಬ ಭಾಂಡದಲ್ಲಿ ಭರಿತವಾಗಿವೆ. ಶಿವ ಪಂಚಾಕ್ಷರೀ ಮಂತ್ರವನ್ನು ಪ್ರಣವಸಹಿತ ಜಪಿಸಿ ಅನುಸಂಧಾನ ಮಾಡುತ್ತಾ

ಆ ಮಂತ್ರಾರ್ಥದಲ್ಲಿ ಮಗ್ನರಾದರೆ ಕ್ರಮೇಣ ಪಾಪ ಕ್ಷೀಣಿಸಿ ಪುಣ್ಯಾಧಿಕದಿಂದ ಶಿವಪಿಂಡವೆನಿಸಿ, ಜ್ಞಾನದಿಂದ ಶಿವಯೋಗಿ ಯೆನಿಸುವನು. ಒಟ್ಟಿನಲ್ಲಿ ಹೇಳುವುದೇನೆಂದರೆ ,ಅಸಂಖ್ಯಾತ ಬ್ರಹಾಂಡಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಪರಮ ಆಧಾರವೆನಿಸಿದ ಯಾವ ಸ್ಫುರಣ ಮಯ ವಿಮರ್ಶಾಶಕ್ತಿ ರೂಪ ಜ್ಞಾನವಿಶೇಷವುಂಟೋ, ಅದೇ ಪಿಂಡಸ್ಥಲವೆಂದು ಶ್ರೀಮದಾಚಾರ್ಯ ರೇಣುಕರು ಅಪ್ಪಣೆ ಕೊಡಿಸಿರುವರು. ಪರಾಹಂತವೆಂದರೆ ಜಗದಾಧಾರವೂ, ಮಹಾ ಜ್ಞಾನಪ್ರಕಾಶವೂ, ಪರಶಿವನ ವಿಮರ್ಶನಾಮಕ ಜ್ಞಾನವಿಶೇಷವನ್ನು ಪರಾಹಂತಸ್ವರೂಪವೆನ್ನಲಾಗಿದೆ. ಅಹಂಪದ ವಾಚ್ಯ ಪರಮಾತ್ಮನ ಅಸಾಧಾರಣ ಮತ್ತು ಅಸದೃಶ ಧರ್ಮವೇ ಪರಾಹಂತವೆನಿಸಿದೆ.

---

ಶ್ರೀಮಹಾಬಲ ಶೈಲವಾಸಿನಿ ಸೋಮಧರ ಶುದ್ಧಾಂತಭಾಮಿನಿ ।
ಕಾಮಸಂಜೀವಿನಿ ಮೃಡಾನಿ ಗಣೇಶ ಗುಹಜನನಿ ॥

ವಾಮದೇವವಿಲಾಸಿನೀ ಸುಪ್ರೇಮಪೂರಿತ ಹೃದ್ಭವಾನಿ ।
ಸೋಮಜೋತ್ತಮಗಾಮಿನೀ ಕೃಪೆದೋರಿ ಪಾಲಿಸು ನೀ ॥

ಲಲಿತೆ ತುಹಿನ ಗಿರೀಂದ್ರಜಾತೇ ವಿಲಾಸದಿಂದಕಳಾವಿರಾಜಿತೆ ।
ಜಲಜಸನ್ನಿಭ ನೇತ್ರಶೋಭಿತೆ ವಿಭೂದ ರಾಜಹಿತೇ ॥

ಬಲವದಮರಾರಾತಿ ಮಂಡಲ ದಳನಕಾರ್ಯಖ್ಯಾತೇ ಪೂತೇ ।
ಸಲಹುವುದು ನಮ್ಮಿಷ್ಟಸಿದ್ಧಿಯ ಕರುಣಿಸುತೆ ಮಾತೇ ॥

ಮಾತಾ ಮರಕತಶ್ಯಾಮಾ ಮಾತಂಗೀ ಮದಶಾಲಿನೀ ।
ಕುರ್ಯಾತ್ಕಟಾಕ್ಷಂ ಕಲ್ಯಾಣೀ ಕದಂಬವನವಾಸಿನೀ ॥

ಜಯ ಮಾತಂಗತನಯೇ ಜಯ ನೀಲೋತ್ಪಲದ್ಯುತೇ ।
ಜಯ ಸಂಗೀತರಸಿಕೇ ಜಯ ಲೀಲಾಶುಕಪ್ರಿಯೇ ॥

---

## ಲಿಂಗಸ್ಥಲ ೫೩

## ಭಾಜನಸ್ಥಲ (ಪ. ೨೦)

ಸಮಸ್ತ ಜಗದಂಡಾನಾಂ ಸರ್ಗಸ್ಥಿತ್ಯಂತ ಕಾರಣಂ ।
ವಿಮರ್ಶೋ ಭಾಸತೇ ಯತ್ರತದ್ಭಾಜನಮಿಹೋಚ್ಯತೇ ॥

ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಂ ॥

ಯಥಾ ಚಾಂದ್ರೀ ಸ್ಥಿರಾಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾಶಕ್ತಿ ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥

ವೃಕ್ಷಸ್ಥಂ ಪತ್ರಪುಷ್ಪಾದಿ ವಟಬೀಜ ಸ್ಥಿತಂ ಯಥಾ ।
ತಥಾ ಹೃದಯ ಬೀಜಸ್ಥಂ ವಿಶ್ವಮೇ ತತ್ಪರಾತ್ಮನಃ ॥

ಅಕಾರಃ ಶಿವ ಆಖ್ಯಾತೋ ಹಂಕಾರಃ ಶಕ್ತಿರುಚ್ಯತೆ ।
ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕ ಮಹಂಪದೇ ॥

ಅಹಂ ತಾಂ ಪರಮಾಂ ಪ್ರಾಪ್ಯ ಶಿವಶಕ್ತಿಮಯೀಂ ಸ್ಥಿರಾಂ ।
ಬ್ರಹ್ಮಭೂಯಂ ಗತೋ ಯೋಗೀ ವಿಶ್ವಾತ್ಮಾ ಪ್ರತಿಭಾಸತೇ ॥

ಅಂತಃಕರಣ ರೂಪೇಣ ಜಗದಂಕುರರೂಪತಃ ।
ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥

(ಶ್ಲೋ. ೩೦, ೩೧, ೩೨, ೩೩, ೩೪, ೩೫, ೩೭)

ಭಾಂಡಸ್ಥಲ ಮತ್ತೂ ಭಾಜನಸ್ಥಲಗಳು ಬಂಗಾರ ನಾಣ್ಯದ (ಸವರನ್ನಿನ) ಎರಡು ಮುಖಗಳಿದ್ದಂತೆ. ಸಜಾತೀಯ ವಿಜಾತೀಯ ಸ್ವಗತ, ವಿಗತ, ಭೇದರಹಿತಃ, ಎಂಬಂತೆ ಅದ್ವಿತೀಯವಾಗಿ ವಿರಾಜಿಸುವ, ಶಿವಶಕ್ತಿ ತತ್ವಗಳ ವಿಕಾಸವೇ ಭಾಜನ ಭಾಂಡ ಸ್ಥಲಗಳೆನಿಸಿವೆ. ಇವು ಸಚ್ಚಿದಾನಂದ ನಿತ್ಯ ಪರಿಪೂರ್ಣಾಖಂಡಾ ದ್ವಿತೀಯ ಸ್ವರೂಪವುಳ್ಳ, ಕ್ರಿಯಾ ಜ್ಞಾನಮುಚ್ಛ್ರಾಯ ಭಾವದಿಂ ಪ್ರಕಾಶಿತವಾಗಿವೆ ಶಿವಶಕ್ತಿ ಸಂಪುಟಗಳಂತೆ ಭಾಂಡ ಭಾಜನಸ್ಥಲಗಳು

ಮಂಪರಲ್ಲೊಂದು ಪೂರಕವೆನಿಸಿ, ಸರ್ವತಂತ್ರಸ್ವತಂತ್ರವೆನಿಸಿವೆ. ವಿಶ್ವದ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಮೂಲಸ್ಥಾನವೆನಿಸಿ, ಕುಂಡಲಿನಿ ಶಕ್ತಿ ನಾಮಕ ವಿಮರ್ಶಾ ಶಕ್ತಿಯಲ್ಲಿ ನೆಲಸಿ ಮೈದೋರಿ ವಿಜೃಂಭಿಸುವ ಆ ತಿರೋಧಾನವೇ ಭಾಜನ ಸ್ಥಲವೆಂದು ಭಗವತ್ಪಾದ ಶ್ರೀ ಜ|| ರೇಣುಕಾಚಾರ್ಯರು, ಆದಿ ಅಗಸ್ತ್ಯ ಮುನಿಪುಂಗವನಿಗೆ ಮನವರಿಕೆಯಾಗುವಂತೆ ಬೋಧಿಸಿರುವರು. ವಿಶ್ವೋತ್ತರೋತ್ತರ ವಿಚಿತ್ರ ಮಾನಕರವಾದ ವಿಮರ್ಶಶಕ್ತಿ ರೂಪ ಜ್ಞಾನ ವಿಶೇಷವು ಯಾವ ಪರಶಿವಬ್ರಹ್ಮದಲ್ಲಿ ಪ್ರಕಾಶಿಸುತ್ತಲಿರುವುದೋ ಆ ದೇದೀಪ್ಯಮಾನವಾದ ಪರಾತ್ಪರ ಪರಶಿವಬ್ರಹ್ಮವೇ ಭಾಜನವೆಂದು ಕರೆಯಲಾಗಿದೆ.

ವಿಮರ್ಶಾಶಕ್ತಿಯ ಪ್ರಭಾವದಿಂದ ಕೂಡಲೇ ಎಲ್ಲೆಲ್ಲಿಯೂ—

**ತಿರಶ್ಚೀನೋ ವಿತತೋ ರಶ್ಮಿರೇಷಾಮಧಃ ।**
**ಸ್ವಿದಾಸೀದು ಪರಿಸ್ವಿದಾಸೀತ್ ।**
**ರೇತೋಧಾ ಆಸನ್ ಮಹಿಮಾನ ಆಸನ್ ।**
**ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್ ॥**

(ಋಗ್ವೇದ, ದಶಮ ಮಂಡಲ ನಾಸಾದಿಯ ಸೂಕ್ತ, ಮಂತ್ರ ೫)

ಅಂದರೆ, ಸ್ಫುರಣಮಯ ವಿಮರ್ಶಾಶಕ್ತಿಯು ಸೃಷ್ಟಿ ಗುನ್ಮುಖವಾಗುತ್ತಲೇ

**ಹರಡಿದುದು ಸೃಷ್ಟಿಕ್ರಿಯಾರಶ್ಮಿ ಎತ್ತಲುಂ ।**
**ಹರಡಿದುದು ಮೇಲ್ಗಡೆಗೆ ಕೆಳಗಡೆಗೇ ವಿಸ್ತೃತಂ ॥**

**ಹರಡಿದದು ಬಿಡವೊಡನೆ ಮಿಗಿಲಡ್ಡಲಾಗಿಯುಂ**
**ಉರೆ ಶ್ರೇಷ್ಟಬೋಕ್ತೃವೆನೆ ಭೋಗ್ಯ ವರ್ಗಕಂ ।**

**ಹೊರಹೊಮ್ಮಿದವು ಮಹಾಂತ ಭೋಗ್ಯವರ್ಗಗಳ್ ।**
**ನೆರೆಬೀಜ ಭೂತ ಕರ್ಮದ ಕರ್ತೃ ಭೋಕ್ತೃಗಳ್ ॥**

ಈ ಪ್ರಕಾರ ವಿಮರ್ಶಾಶಕ್ತಿಯ ಪ್ರಕಾರ ವಿಮರ್ಶಾಶಕ್ತಿಯ ಪ್ರಭಾವದಿಂದ ಜಗತ್ತಿನ ಜೀವಕೋಟಿಗಳು ಕ್ರಮೇಣ ಉದ್ಭವಿಸಿದವು.

**"ಸ್ವಧ್ವಾ ಅವಸ್ತಾತ್ । ಪ್ರಯತಿಃ ಪರಸ್ತಾತ್"** ಎಂದರೆ ; ಸ್ವಧಾ–ಅನ್ನರೂಪದ ಭಕ್ಷ್ಯ ಭೋಜ್ಯಾದಿ ಭೋಗವಸ್ತುಗಳು ಹಾಗೂ ಇವುಗಳನ್ನು ಅನುಭವಿಸುವ ಭೋಕ್ತೃಗಳೂ ಶಿವನ ಬೃಹದ್ ಗರ್ಭದಲ್ಲಿ ಸದಾಶಿವಾಂಶದಿಂದ ಅಂತರ್ಯಾಮಿಯಾಗಿರುವುವು. ಇದು ವಿಮರ್ಶಾ ಶಕ್ತಿಯ ಕಾರ್ಯವೆನಿಸಿದೆ. ಚಂದ್ರನನ್ನು ಬಿಟ್ಟು ಚಂದ್ರಿಕೆ ಹೇಗೆ ಇರಲು ಸಾಧ್ಯವಿಲ್ಲವೋ, ವಿಶ್ವವನ್ನು ಬೆಳಗುವ ಬೆಳದಿಂಗಳು ಚಂದ್ರನಲ್ಲಿ ತೆರಹಿಲ್ಲದಿರ್ಪಂತೆ, ಚಿತ್‌ಕ್ರಿಯಾರೂಪ ವಿಮರ್ಶಾತ್ಮಕ ಶಕ್ತಿಯು ಶಿವನಲ್ಲಿರ್ದು ಸರ್ವತ್ರ ತಾನೇ ತಾನಾಗಿ ಹಬ್ಬಿಹುದು —

**ಪ್ರಣಮ್ಯ ಪ್ರಕೃತಿಂ ನಿತ್ಯಂ ಪರಮಾತ್ಮ ಸ್ವರೂಪಿಣೀಂ ।**
**ವೃಕ್ಷಸ್ಥಂ ಪತ್ರಪುಷ್ಪಾದಿ ವಟಬೀಜ ಸ್ಥಿತಂ ಯಥಾ ।**
**ತಥಾ ಹೃದಯ ಬೀಜಸ್ಥಂ ವಿಶ್ವಮೇತತ್ಸಚರಾತ್ಮನಃ ॥**

ಬೃಹದಾಕಾರವಾಗಿ ಬೆಳೆದು ವಿಶಾಲವಾಗಿ ಹಬ್ಬಿನಿಂತಿರುವ ವಟವೃಕ್ಷ (ಆಲದಮರ) ದ ಅನಂತಾನಂತ ಕೊಂಬೆಗಳೂ, ಎಲೆ, ಹೂವು, ಕಾಯಿ ಹಣ್ಣುಗಳೂ, ಆಲದ ಬೀಜದಲ್ಲಿ ಹೇಗೆ ಅತಿ ಸೂಕ್ಷ್ಮರೂಪದಿಂದ ಅಡಗಿವೆಯೋ. ಅದರಂತೆ, ದೃಶ್ಯಾದೃಶ್ಯವಾದ ಚರಾಚರಾತ್ಮಕ (ಸ್ಥಾವರ ಜಂಗಮಾತ್ಮಕ) ವಾದೀ ಅಖಂಡ ವಿಶ್ವ, ಪರಶಿವನ **"ಸನ್‌ಹೃದಯ ಪ್ರಕಾಶಃ"** ಎಂಬ ಉಪನಿಷದ್ವಾಣಿಯಂತೆ, ಹೃದಯರೂಪ ಬೀಜದಲ್ಲಿ ಅರ್ಥಾತ್ ವಿಮರ್ಶಾತ್ಮಕ ಮಹಾಶಕ್ತಿಯಲ್ಲಿ, ಅತ್ಯಂತ ಸೂಕ್ಷ್ಮರೂಪದಲ್ಲಿ ಅಂತರ್ಗತವಾಗಿ ಪ್ರಕಾಶಿತವಾಗಿಹುದು ಸ್ಫುರಣಮಯ ವಿಮರ್ಶಾಶಕ್ತಿಯ ಅತ್ಯದ್ಭುತ ಲೀಲಾವಿನೋದವಿದು.

**ಅ ಕಾರಃ ಶಿವ ಅಖ್ಯಾತೋ ।**
**ಹಂ ಕಾರಃ ಶಕ್ತಿಮಯಂ ।**
**ಸ್ಥಿತಮೇಕ ಮಹಂಪದೇ ॥**

ಸ್ವರಾಕ್ಷರಗಳಲ್ಲಿ ಅಗ್ರಸ್ಥಾನದಿಂ ಪೂಜಿತವಾದ "ಅ" ಕಾರವು, **"ಅಕ್ಷರಂ ಬ್ರಹ್ಮಪರಮಂ"** ಎಂಬಂತೆ ಶಾಶ್ವತವಾದ ಪರಶಿವಬ್ರಹ್ಮ ಸ್ವರೂಪವೆನಿಸಿದೆ.

ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಸ್ವಾಮಿ, **"ಅಕ್ಷರಾಣಾಂ ಅಕಾರೋಸ್ಮಿ"** ಅಂದರೆ, ಅಕ್ಷರಗಳಲ್ಲಿ ನಾನು "ಅ" ಕಾರಸ್ವರೂಪಿಯೆಂದು ಘೋಷಿಸಿರುವನು.

**ಅಕಾರಃ ಸರ್ವ ಶಾಸ್ತ್ರಾನಾಂ । ರತ್ನಾನಾಮಿವ ಸಾಗರಂ ॥**

ಸಮುದ್ರದ ಗರ್ಭದಲ್ಲಿನ ಐಶ್ವರ್ಯಗಳಲ್ಲಿ ನವರತ್ನಗಳು ಹೇಗೆ ಪ್ರಮುಖವೆನಿಸಿರುವವೋ, ಅದರಂತೆ ವರ್ಣಗಳ ಮಾಲಿಕೆಯಲ್ಲಿ ಪ್ರಪ್ರಥಮ ಪೂಜ್ಯಸ್ಥಾನ ಅಕಾರವಿರುತ್ತೆ. ವಾತುಲಾಗಮದಲ್ಲಿ—

**ಪ್ರಣವಃ ಸರ್ವವರ್ಣಾನಾಂ । ಬೀಜಮಿತಿ ಸ್ಮೃತಂ ॥**

ಅಕಾರಾದಿ ಅಕ್ಷರಗಳಿಗೆಲ್ಲಾ ಓಂಕಾರ ಪ್ರಣವವು ಬೀಜವೆನ್ನಲಾಗಿದೆ. "**ಪ್ರಣವಃ ಸರ್ವವೇದೇಷು**" ಚತುರ್ವೇದಗಳಿಗೆ ಪ್ರಣವವು ಹೇಗೆ ಆದಿಯೋ ಅದರಂತೆ ಓಂ ಪ್ರಣವದಲ್ಲಿನ **ಅಕಾರ ಉಕಾರ** ಮಕಾರಗಳಲ್ಲಿ, ಅಕಾರವು ಪ್ರಥಮಾಕ್ಷರವೆನಿಸಿದೆ. ಇಂತಪ್ಪ ಅಕಾರವು "**ಅಕಾರಃ ಶಿವ ಅಖ್ಯಾತಃ**" ಸಾಕ್ಷಾತ್ ಶಿವಸ್ವರೂಪವುಳ್ಳದ್ದೆಂದೂ ಮತ್ತೂ "**ಹಂಕಾರ**" ವೇ ಪರಾಶಕ್ತಿಯುತವೆನಿಸಿದೆ ಎಂದು ವಾತೂಲಾಗಮದಲ್ಲಿ ವಿಸ್ತಾರವಾಗಿ ಉಲ್ಲಿಖಿತವಾಗಿರುತ್ತೆ. ಅಂದ ಬಳಿಕ "**ಅಹಂ**" ಎಂದೊಡನೆ, ಶಕ್ತಿವಿಶಿಷ್ಟಾದ್ವೈತ. ಇದು ಅಹಂ ಪದದ ಚಿದ್ವಿಮರ್ಶಾ ವೈಶಿಷ್ಟ್ಯವೆಂಬರ್ಥ ಸ್ಪಷ್ಟವಿರುತ್ತೆ.

ಇದು ಕಾರಣ, ಶಿವಶಕ್ತಿಮಯವಾದ "ಅಹಂ" ಎಂಬ ರೂಪವೇ ತಾನಾದ ಪರಶಿವ ಬ್ರಹ್ಮದಲ್ಲಿ ಪರವಶನಾದ ಐಕ್ಯಸ್ಥಲದ ಪರಮ ಐಕ್ಯನು ವಿಶ್ವಾತ್ಮಕನಾಗಿ ರಾರಾಜಿತನಾಗಿರ್ಪನು. ಚಿಚ್ಛಕ್ತಿಯು, ಮೂಲಾಹಂಕಾರ ರೂಪದಿಂದಲೂ, ಸೂಕ್ಷ್ಮ ಜಗದ್ರೂಪದಿಂದಲೂ ಯಾವಾತನಲ್ಲಿ ಸತತ ಪ್ರಕಾಶಿಸುತ್ತಲಿರುವುದೋ, ಆ ಮಹಾಶಿವಯೋಗಿಯೇ ಪರಶಿವಸ್ವರೂಪನೆಂದು, ಶಕ್ತಿ ವಿಕಾಸವುಳ್ಳ ಹಾಗೂ ಪ್ರಕಾಶದಿಂದ ಬೆಳಗುವ, ಭಾಜನಸ್ಥಲದ ಸಾಮ್ರಾಟ್ ಎಂದು ಸ್ತುತ್ಯನಿಹನು.

ಶಿವಶರಣನ ಪವಿತ್ರವಾದ ಲಿಂಗಕಾಯವೇ ಭಾಂಡವೆನಿಸಿರಲು, ಅದರಲ್ಲಿನ ಮನವೆಂಬ ಪದಾರ್ಥವನ್ನು ಶಿವಜ್ಞಾನಾಗ್ನಿಯಿಂದ ಹದವಾಗಿ ಅಟ್ಟು ಅನ್ನವ ಮಾಡಿ, ಶಿವಾನುಭವದಿಂದ ಪ್ರಸಾದವಾಗಿಸಿ; ಭಕ್ತಿಯಿಂದ ಲಿಂಗಾರ್ಪಿತಮಾಡಬಲ್ಲೊಡೆ ಇದುವೇ ಭಾಜನಸ್ಥಲ ಸಿದ್ಧಿಯೆಂದು ಜಗದಾಚಾರ್ಯವರೇಣ್ಯ ಶ್ರೀರೇಣುಕ ಪರಂಜ್ಯೋತಿ ಬೋಧಿಸಿರುವರು.

ಶಿವ ತಾಂಡವ ನೃತ್ಯ—

ಸೃಷ್ಟಿಯ ಸುಂದರ ವಿಶ್ವದ ರಂಗದಿ ।
ಶಿವ ತಾಂಡವ ಮೊದಲಾಗುತಿದೆ ।
ಲೀಲಾ ಲೋಲನು ಆ ನಟರಾಜನ ।
ಆತ್ಮಾನಂದವು ಚಿಮ್ಮುತಿದೆ ॥
ರವಿ, ಶಶಿ, ತಾರಾಗಣಗಳು ಹಿಗ್ಗಿ ।
ಹೆಜ್ಜೆಗೆ ಹೆಜ್ಜೆಯ ಹಾಕುತಿವೆ ।
ಗ್ರಹಗತಿಗಳ ಸ್ವರಸಮ್ಮೇಳನದೊಳು ।
ಜಡದಲಿ ಚೇತನ ಮೂಡುತಿದೆ ॥
ಹೆಜ್ಜೆಯ ತುಳಿತಕೆ ಹಳೆಯದು ಅಳಿದು ।
ಹೊಸ ಬಾಳಿನ ಹೂವರಳುತಿದೆ ।
ಗೆಜ್ಜೆಯ ಮೊಲುದನಿ ಗಗನವ ತುಂಬಿರೆ ।
ಶಿವಭಾವದಿ ಜಗ ಮೆರೆಯುತಿದೆ ॥
ಸುರಾಸುರ ಸಕಲಾತ್ಮರುಗಳು।
ಎಲ್ಲಾ ಈ ಕುಣಿತಕೆ ಅಣಿಯಾಗುತಿರೆ ।
ಶಿವಶಕ್ತಿಯು ಈ ನೃತ್ಯೋನ್ಮಾದದಿ ।
ವಿಶ್ವವೇ ಭಕ್ತಿಗೆ ಕರಗುತಿದೆ ॥
ಕ್ರೀಡಾಶೇಖರ ನೃತ್ಯ ಭಯಂಕರ ।
ಕರುಣಿಸು ವಿಶ್ವಕೆ ಶಾಂತಿಯನು ।
ಭವಹರ ಶಂಕರ ಶುಭಕಾರ ಶ್ರೀಗುರು ।
ತೊಲಗಿಸು ಬಾಳಿನ ಭ್ರಾಂತಿಯನು ॥

(ವೇದಾಂತ ಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿ ಕರಡಿ ಗಾರ್ಡನ್, ಬಿಜಾಪುರ.)

## ಲಿಂಗಸ್ಥಲಂ ೫೪

## ಅಂಗಾಲೇಪಸ್ಥಲಂ (ಪರಿ. ೨೦)

ದಿಕ್ಕಾಲಾದ್ಯನವಚ್ಛಿನ್ನಂ ಚಿದಾನಂದಮಯಂ ಮಹತ್ ।
ಯಸ್ಯ ರೂಪ ಮಿದಂ ಖ್ಯಾತಂ ಸೋಂಗಾಲೇಪ ಇಹೋಚ್ಯತೇ॥

ಸಮಸ್ತ ಜಗದಾತ್ಮಾಪಿ ಸಂವಿದ್ರೂಪೋ ಮಹಾಮತಿಃ ।
ಲಿಪ್ಯತೇ ನೈವ ಸಂಸಾರೈರ್ಯಥಾ ಧೂಮಾದಿಭಿರ್ನಭಃ ॥

ನ ದೇವತ್ವಂ ನ ಮಾನುಷ್ಯಂ ನ ತಿರ್ಯಕ್ತ್ವಂ ನ ಚಾನ್ಯಥಾ ।
ಸರ್ವಾಕಾರತ್ವ ಮಾಖ್ಯಾತಂ ಜೀವನ್ಮುಕ್ತಸ್ಯ ಯೋಗಿನಃ ॥

ಅನಶ್ವರ ಮನಿರ್ದೇಶ್ಯಂ ಯಥಾವ್ಯೋಮ ಪ್ರಕಾಶತೇ ।
ತಥಾ ಬ್ರಹ್ಮಾಪಿ ಚೈತನ್ಯಮತ್ರ ನೈಶೇಷಿಕೀ ಕಲಾ ॥

ಘಟಾಧಿಷು ಪೃಥಗ್ಭೂತಂ ಯಥಾಕಾಶಂ ನ ಭಿದ್ಯತೇ ।
ತಥೋಪಾಧಿಗತಂ ಬ್ರಹ್ಮ ನಾನಾ ರೂಪಂ ನ ಭಿದ್ಯತೇ ॥

(ಶ್ಲೋ. ೩೭, ೩೮, ೩೯, ೪೧, ೪೨)

ಅಂಗವೆಂದರೆ ಪಾಂಚಭೌತಿಕ ದೇಹ. ದೇಹ ಜನನ ಮರಣಗಳಿಂದ ಕೂಡಿದ್ದು ಅನಿತ್ಯವೆನಿಸಿದೆ. ಸುಖ ದುಃಖಗಳಿಗೆ ದೇಹ ಆಗರ. ಅಂಗ, ಪ್ರಕೃತಿ ಸಂಬಂಧದಿಂದ ಗುಣಮಯ. ವಿಷಯಾದಿಗಳ ಬೆನ್ನಟ್ಟಿ, ಹೊರ ಪ್ರಪಂಚದ ಆಕರ್ಷಣೆಗೆ ಆಹುತಿಯಾಗಿದೆ. ರೋಗಾದಿಗಳಿಗೆ ತವರು. ಮಲತ್ರಯಗಳ ಭಾಂಡ ಈ ಅಂಗ. ಕರ್ಮಾಧೀನವಾದೀ ದೇಹ, ಶೈಶವ, ಕೌಮಾರ, ಬಾಲ್ಯ, ಯವ್ವನ ಮುಪ್ಪು, ಮರಣ ಧರ್ಮವುಳ್ಳದ್ದು. ಲಿಂಗರೂಪಿ ಆತ್ಮಶ್ರೀ, ಮೇಲ್ಕಂಡ ಕ್ಷಣಿಕ ಧರ್ಮಗಳಿಗೆ ವಿರುದ್ಧವೂ, ಅತೀತವೂ, ನಿರ್ಮಲವೂ ಆಗಿ, ಅಂಗಾಲೇಪ ಕಿಂಚಿತ್ತೂ ಇಲ್ಲದ, ನಿತ್ಯ ಸತ್ಯ ಸುಂದರ ಪರಾತ್ಪರ ವಸ್ತುವೆನಿಸಿ, ಪ್ರಕೃತಿ ಧರ್ಮಕ್ಕೆ ಆಶ್ರಯವಾಗಿದ್ದರೂ, "ಪ್ರಕೃತೇ ಪರಃ"ಪ್ರಕೃತಿ ಧರ್ಮಕ್ಕೆ ಅತೀತ ವೆನಿಸಿದೆ. ಇತ್ಯಾದಿ ಕಾರಣಗಳಿಂದ ಭಾಜನ ಸ್ಥಲದ ಪರಂಜ್ಯೋತಿಮಯ

ಆತ್ಮಂಗೆ ಭೌತಿಕಾಂಗದ ಬಂಧನವಿಲ್ಲ. ಆ ಬಗೆಗೆ ಮೋಹವಾಗಲಿ, ಅಭಿಮಾನ ವಾಗಲಿ, ಕಿಂಚಿತ್ತೂ ಇರುವುದಿಲ್ಲ.

**ನಾಸತೋ ವಿದ್ಯತೇ ಭಾವೋ ।**
**ನಾ ಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಂತಸ್ತ್ವ ।**
**ನಯೋಸ್ತತ್ವ ದರ್ಶಿಭಿಃ ॥**

(ಗೀ. ಅ. ೨, ಶ್ಲೋ. ೧೬)

ಅಂದರೆ ಅಸದ್ವಸ್ತುಗಳಲ್ಲಿ ಸತ್ಯತ್ವವನ್ನೂ, ಸತ್ಯವಸ್ತುವಿನಲ್ಲಿ ಅಸತ್ಯತ್ವ ವನ್ನು ಕಾಣಲು ಹೇಗೆ ಸಾಧ್ಯವಾದೀತು, ಅಸದ್ರೂಪ ಜಗತ್ತೆಲ್ಲಾ.

**ವಾಚಾರಂಭಣಂ ವಿಕಾರೋ ನಾಮಧೇಯಂ ॥**

(ಉಪನಿಷತ್)

ವಿಕಾರದಿಂದ ಕೂಡಿ ವಾಚಾರಂಭಣದಲ್ಲಿ ಪರ್ಯವಸಾನ ಹೊಂದುವುವು ಸದ್ವಸ್ತುವಾದರೋ—

**ಸರ್ವಂ ಖಲ್ವಿದಂ ಬ್ರಹ್ಮ । ದೇಹನಾ ನಾಸ್ತಿ ಕಿಂಚನ ॥**

ಬ್ರಹ್ಮ ಒಂದೇ ನಿತ್ಯ ನಿರಂತರ ಸತ್ಯವಹುದು. ಈ ಉಭಯ ವಸ್ತು ಗಳಲ್ಲಿನ ಸತ್ಯಾಂಶವನ್ನು ಮುಮುಕ್ಷುಗಳೂ, ಮುನಿಗಳೂ ಅರಿತಿರುವರು. ಲಿಂಗೈ ಕ್ಯನ ಅಂಗ ಚಿದಾನಂದಮಯ. ಆದ್ದರಿಂದ ಇಂತಪ್ಪ ದಿವ್ಯಾಂಗದ ಮೇಲೆ ದಿಕ್ಕಾಲಂಗಳ ಧಾಳಿಯಿಲ್ಲ ಹಾಗೂ ಆತ್ಮಂಗೆ ಭೌತಿಕಾಂಗ ಬಂಧನ ಕಿಂಚಿತ್ತೂ ಇಲ್ಲ. ಇಂತಾಗಿ ಶರೀರ ಸಂಬಂಧ ಕರ್ಮರಹಿತ, ಚಿದಾನಂದಸ್ವರೂಪಿ ಶಿವ ಯೋಗಿ ಅಂಗಾಲೇಪಸ್ಥಲದವನೆಂದು ಪ್ರಸಿದ್ಧನಿರುವನು. ಈ ಮಹನೀಯನಿಗೆ ಸಂಸಾರದ ಸಂಬಂಧವಿಲ್ಲ. ಧೂಳುದುಮ್ಮಾಗಳಿಂದ ಮುಸುಕಿಲ್ಲದ, ಮುಗಿಲಿನಂತೆ ಶುದ್ಧವಾಗಿರ್ಪನು. ಇಂತಪ್ಪ ಮಹಾತ್ಮನಿಗೆ, ವಿಧಿ ನಿಷೇಧಂಗಳಿಲ್ಲ; ಸಂಕಲ್ಪ ವಿಕಲ್ಪಂಗಳಿಲ್ಲ. ಪೂರ್ವ ಜನ್ಮಗಳ ವಾಸನಾ ಸಂಸ್ಕಾರಗಳೂ ಇಲ್ಲ ಶುದ್ಧ ಸ್ಫಟಿಕದಂತಾ ತೇಜೋನ್ಮಯ ಈತ. ಮಹಾತ್ಮನಿಗೆ ಪುಣ್ಯದ ಫಲವಾಗಿ ಲಭಿ ಸುವ ದೇವತ್ವವಿಲ್ಲ, ಪುಣ್ಯಾಪಾಪಗಳ ಮಿಶ್ರದಿಂದಾಗಿ ಲಭಿಸುವ ಮಾನವ

ದೇಹವೂ ಇಲ್ಲ. ಪಾಪದ ಫಲವಾಗಿ ದೊರಕುವ ಮೃಗ, ವಿಹಂಗವಾದಿ ಕನಿಷ್ಠ ದೇಹಂಗಳೂ ಈತನಿಗಿಲ್ಲ. ಯಾವ ಬಂಧವೂ ಇಲ್ಲದ ಸರ್ವಾತ್ಮನಾಗಿ ತಾನಿರ್ಪನು. ಆಕಾಶವು ನಾಶರಹಿತವಾಗಿ ಪರಿದಾಟವಿಲ್ಲದ ಮಹಾ ತತ್ವವಾಗಿರುವಂತೆ, ಪರಾಕಾಶರೂಪ ಬ್ರಹ್ಮಾತ್ಮನಿಗೆ ನಾಶ ನಿರ್ದೇಶಂಗಳಿಲ್ಲ. ಭೂತಾಕಾಶ ಜಡ,ಪರಾ ಕಾಶ ಅಜಡ, ಅಂದರೆ ಚಿನ್ಮಯ ಚೈತನ್ಯವಿರುವುದು. ಭೂತಾಕಾಶ ಸರ್ವವ್ಯಾಪಿಯಾಗಿ ಘಟ ಮಠಾದಿಗಳನ್ನು ಆವರಿಸುವುದು ಸರಿಯಷ್ಟೆ. ಘಟಮಠ ಗಳ ಒಳಗೂ ಹೊರಗೂ ಆಕಾಶ ವ್ಯಾಪಕವಾಗಿದ್ದರೂ, ಘಟಮಠಗಳು ಒಡೆದು ಚೂರಾದರೂ ಆಕಾಶ ತತ್ವಕ್ಕೆ ಕಿಂಚಿತ್ತೂ ಲೋಪವೇರ್ಪಡುವುದಿಲ್ಲ. ಆಕಾಶ ಸರ್ವದಾ ಅಲಿಪ್ತವಾಗಿರ್ಪುದು. ಭೂತಾಕಾಶವು ಉಪಾದಿ ಸಂಬಂಧದಿಂದ ಘಟಾಕಾಶ ಮಠಾಕಾಶವೆಂದೂ ಹೆಸರು ಪಡೆದರೂ, ಘಟಮಠಗಳಲ್ಲಿನ ಆಕಾಶ ಭಿನ್ನ ಭಿನ್ನವಾಗಿ ತೋರಿದರೂ, ಆಕಾಶ ತನ್ನ ಪೂರ್ಣತ್ವದಿಂದ ಅಭಿನ್ನವಾಗಿ ತೋರುವುದೋ ಅದರಂತೆ ಬ್ರಹ್ಮವು ಮನುಷ್ಯ ಮೃಗಾದಿಯಾಗಿ ಪ್ರಾಣಿ ಗಳೆಲ್ಲೆಲ್ಲಾ ವ್ಯಾಪಕವಾಗಿ ಸರ್ವಾಂತರ್ಯಾಮಿ ಎನಿಸಿದ್ದರೂ, ಭಿನ್ನಕ್ಕೆಡೆಇಲ್ಲದೆ ಪರಿಪೂರ್ಣವೆನಿಸಿ ಅಲಿಪ್ತವಾಗಿರುವುದರಿಂದ ಅಂಗಾ ಲೇಪ ಸ್ಥಲವೆಂದು ಪ್ರಸಿದ್ಧ ವಿರುತ್ತೆ.

---

## ಲಿಂಗಸ್ಥಲ ೫೫

## ಸ್ವಪರಾಜ್ಞಸ್ಥಲಂ (ಪರಿ. ೨೦)

ದಿಕ್ಕಾಲಾದ್ಯ ನವಚಿನ್ನ ತೇಜೋರೂಪ ಸಮಾಶ್ರಯಾತ್ ।
ಸ್ವಪರ ಜ್ಞಾನ ವಿರಹಾತ್ ಸ್ವಪರಾಜ್ಞ ಸ್ಥಲಂ ವಿದುಃ ॥

ಅಪ್ರಮೇಯೇ ಚಿದಾಕಾರೇ ಬ್ರಹ್ಮಣ್ಯದ್ವೈತ ವೈಭವೇ ।
ವಿಲೀನಃ ಕಿಂ ನು ಜಾನಾತಿ ಸ್ವಾತ್ಮಾನಂ ಪರಮೇವವಾ ॥

ನ ಬಂಧೋ ನ ಚ ಮುಕ್ತಿಶ್ಚ ನ ದೇವಾದ್ಯಭಿಮಾನಿತಾ ।
ನ ಸುಖಂ ನೈವ ದುಃಖಂ ಚ ನಾ ಜ್ಞಾನಂ ಜ್ಞಾನಮೇವ ವಾ ॥

**ಸರ್ವಾಕಾರೇ ಚಿದಾನಂದೇ ಸತ್ಯರೂಪಿಣಿ ಶಾಶ್ವತೇ ।**
**ಪರಾಕಾಶಮಯೇ ತಸ್ಮಿನ್ ಪರಬ್ರಹ್ಮಣಿ ನಿರ್ಮಲೇ ॥**

**ಏಕೀಭಾವಮುಪೇತಾನಾಂ ಯೋಗಿನಾಂ ಪರಮಾತ್ಮನಾಂ ।**
**ಪರಾಪರಪರಿಜ್ಞಾನ ಪರಿಹಾಸ ಕಥಾಕುತಃ ॥**

(ಶ್ಲೋ. ೪೩, ೪೪, ೪೬, ೪೮, ೪೯)

ಜೀವಂತ ನದಿಗಳಾದ ತುಂಗ, ಭದ್ರಾ, ಕಾವೇರಿ, ಕೃಷ್ಣಾ, ಗಂಗಾ, ಯಮುನ ಇತ್ಯಾದಿ ಪುಣ್ಯ ನದಿಗಳು, ಮಹಾ ಸಾಗರದಲ್ಲಿ ಸಂಗಮವಾದ ಬಳಿಕ, ಆ ಮಹಾ ಜಲಾಶಯದಲ್ಲಿ ಗಂಗಾ ತೀರ್ಥ ಯಾವುದು ಯಮುನೆ, ಕೃಷ್ಣಾ, ಕಾವೇರಿ, ತುಂಗಭದ್ರಾ ನದಿಗಳ ಜಲಾಂಶಗಳಾವುವೆಂದು ಹೆಸರಿಸಲು ಎಂತು ಸಾಧ್ಯ ?, ಸಾಗರತರಂಗ ಭಂಗಿ ನ್ಯಾಯಾನುಸಾರ ಅನಂತಾನಂತ ತರಂಗ ಗಳಿಂದ ಸಾಗರವೋ ಅಥವಾ ಸಾಗರದಿಂದ ತರಂಗಗಳೋ ಎಂಬಂಶ ವನ್ನು ಹೇಗೆ ವಿಷದೀಕರಿಸಲು ಸಾಧ್ಯ. ಇದರಂತೆ, ಅಂಗಲಿಂಗಗಳ ಸಂಬಂಧ ಜಲತರಂಗಗಳಂಥಾ ಸ್ವರೂಪ ಸಂಬಂಧ ಇದರಂತೆ ಅಂಗನು ಅರ್ಥಾತ್ ಶುದ್ಧಾತ್ಮನು ಆತ್ಮ ಸಾಕ್ಷಾತ್ಕಾರ ಮುಖೇನ ಸ್ವಾತ್ಮನಲ್ಲಿ ವಿಲೀನನಾಗಿ, ಶಕ್ತಿ ಸೌಂದರ್ಯ ಸಂಪರ್ಕದಿಂದ ತಾನೇ ತಾನಾಗಿ ರಂಜಿಸಿ,

**ಸ್ವಸ್ವರೂಪೈಕ ಚಿಚ್ಛಕ್ತಿಯಿಂ ಸ್ಫುರಿಸುತಿರ್ದುದ**
**ದ್ವೈತ ಪರಮಾತ್ಮ ತತ್ವಂ ॥**

ಇಂತು ಜೀವಬ್ರಹ್ಮೈಕ್ಯಾನಂದ ಸಮರಸ ಸಂಯೋಗದಲ್ಲಿ ನಿರಂತರ ತಲ್ಲೀನ ನಾಗಿರ್ಪ ಬ್ರಹ್ಮವಿತ್ (ಶಿವಶರಣ) ತಾನಾರು ತನಗನ್ಯರಾವ ಪರರಾರೆಂದು ಕಾಂಬನೇ. ಸಕಲವೂ ಶಿವಾದ್ವೈತ ಸಿದ್ಧಾಂತ ಸಾಗರ ಸ್ವರೂಪವೆಂದು ಭಾವಿಸಿ ಶಿವಾನಂದ ಸಾಗರದಲ್ಲಿ ಜಲತರಂಗಗಳಂಥಾ ಸ್ವರೂಪ ಸಂಬಂಧದಿಂದ ತಾನೇ ತಾನಾಗಿ, ಸತ್ ಚಿತ್ ಆನಂದ ನಿತ್ಯ ಪರಿಪೂರ್ಣ ಅಖಂಡಾ ದ್ವಿತೀಯನೆಂದೆನಿಸಿ **"ನಿಜಪದಂ ಕರಬಿಲ್ವ ಫಲಂ"** ಎಂಬಂತೆ ಅದ್ವಿತೀಯ ಸ್ವಸ್ವರೂಪಾನಂದದಲ್ಲಿ ವಿರಾಜಿತನಾಗಿರ್ಪನು. ಇಂತಪ್ಪ ಅಮೋಘ ಸ್ಥಿತಿ, **ಸ್ವಪರಾಜ್ಞ ಸ್ಥಲವೆನಿಸಿದೆ.** ಮೇಲುಕ್ತವಾದಂತೆ ಬ್ರಾಹ್ಮೀ ಸ್ಥಿತಿಯಲ್ಲಿ ಮಗ್ನನಾಗಿ ಶಿವಾನಂದದಲ್ಲಿ ರಮಿಸು

ತ್ತಿರುವ ಶಿವಶರಣನಿಗೆ ಅಂದರೆ, ಪರಶಿವ ಬ್ರಹ್ಮದಲ್ಲಿ ಬೆರೆದು ಬೇರಿಲ್ಲದಂತಿರ್ಪ ಪರಮೈಕ್ಯಂಗೆ ತಾನು, ತನ್ನವರು, ಅನ್ಯರೆಂಬ; ಹಿರಿಕಿರಿದೆಂಬ, ಹಾಗೂ ಒಳ ಹೊರಗೆಂಬ ಭಾವವೆಲ್ಲಿಯದು. ಇಂತಪ್ಪ ಮಹಾನುಭಾವನು ಭೇದ ಶೂನ್ಯನು, ದ್ವಂದ್ವಾತೀತನು, ಸಂಯೋಗ ವಿಯೋಗವೆಂಬ ಚಿತ್ತ ಭ್ರಮಣೆ ಇಲ್ಲ. ಬಂಧ ಮುಕ್ತಿಗಳಿಲ್ಲ. ಈತಂಗೆ ಸುಖದುಃಖಂಗಳಿಲ್ಲ ದೇಹಾಭಿಮಾನ ಮೊದಲೇ ಇಲ್ಲ. ಸಚ್ಚಿದಾನಂದಮಯ ಸ್ವಯಂಜ್ಯೋತಿಯಲ್ಲಿ ತನ್ಮಯನಾದ ಬಳಿಕ ತನಗನ್ಯವಾದ ಇನ್ನೇನನ್ನು ಅವನರಿಯ ಮಹಾಶಿವಯೋಗಿ.

ಸ್ವಪರಾಜ್ಞ ಸ್ಥಲದ ಸಾರಾಂಶವೇನೆಂದರೆ, ಚರಾಚರ ಪ್ರಪಂಚ ಸ್ವರೂಪವೂ, ಚಿತ್ಸ್ವರೂಪವೂ, ಆನಂದ ಸ್ವರೂಪವೂ, ನಿತ್ಯ ಸುಂದರ, ಶಾಶ್ವತ ಹಾಗೂ ನಿರ್ಮಲವೂ, ಚಿತ್ರಕಾಶಸ್ವರೂಪವೂ ಆದ ಪರಾಕಾಶ ಚಿದಾಕಾಶದಲ್ಲಿ ಸಮರಸ ದಿಂದ ಸಾಮರಸ್ಯ ಹೊಂದಿದ ಶಿವಯೋಗಿಗೆ ಆತ್ಮಾನಂದ ಸ್ವರೂಪಂಗೆ, ತಾನು ಮತ್ತೂ ತನಗನ್ಯವಾದ ವಸ್ತುಗಳಿಲ್ಲವೆಂಬ ಭಾವ ಪರಿಪಕ್ವಕ್ಕೆ ಯೆಡೆಮಾಡಿ ಕೊಡುವುದೆಂದರಿಯಬೇಕು. ಇದುವೇ **ಸ್ವಪರಾಜ್ಞ ಸ್ಥಲ.**

**ಹೃದಾಕಾಶೇ ಚಿದಾದಿತ್ಯಃ । ಸದಾ ಭಾಸಾತಿ ಭಾಸತೀ ।**
**ಉದಯಾಸ್ತಮಾನೌ ನಾಸ್ತಿ । ಕುತಃ ಸಂಧ್ಯಾ ವಿಧೀಯತೇ ॥**

---

**ಸುಖವೇ ಸುಖಾಭಿವೃದ್ಧಿಯೇ ।**
**ಸುಖೋನ್ನತಿಯೇ ಸುಖ ಪರಿಪೂರ್ತಿಯೇ ।**
**ಸುಖಕಳಾಕೃತಿಯೇ ಸುಖಚಕ್ರವರ್ತಿಯೇ ॥**

**ಸುಖಮುಖಬಂಧುವೇ ಸುಖರಸಾಮೃತಸಿಂಧುವೇ ।**
**ನಿನ್ನವರ್ಗೆ ನೀಂ ಸುಖವನೆ ಮಾಳ್ಪುದಯ್ಯಾ ।**
**ಪರಮ ಪ್ರಭುವೇ ಮಹದೈಪುರೀಶ್ವರಾ ॥**

**ಶಿವ, ಶಿವೇತಿ, ಶಿವೇತಿ, ಶಿವೇತಿ ವಾ ।**
**ಭವ, ಭವೇತಿ ಭವೇತಿ ಭವೇತಿ ವಾ ॥**

**ಹರ, ಹರೇತಿ ಹರೇತಿ ಹರೇತಿ ವಾ ।**
**ಭಜಮನ ಶಿವಮೇವ ನಿರಂತರಂ ॥**

## ಲಿಂಗಸ್ಥಲಂ ೫೬

## ಭಾವಾಭಾವಲಯಸ್ಥಲಂ (ಪರಿ. ೨೦)

**ಪ್ರತೀಯಮಾನೌ ವಿದ್ಯೇತೇ ಭಾವಾಭಾವೌ ನ ಕುತ್ರಚಿತ್ ।**
**ಲಿಂಗೈಕ್ಯೇ ಸತಿ ಯತ್ತಸ್ಮಾದ್ಭಾವಾಭಾವಲಯಸ್ಥಲಂ ॥**

**ಅಹಂ ಭಾವಸ್ಯ ಶೂನ್ಯತ್ವಾದ ಭಾವಸ್ಯ ಕಥಾತ್ಮನಃ ।**
**ಭಾವಾಭಾವವಿನಿರ್ಮುಕ್ತೋ ಜೀವನ್ಮುಕ್ತಃ ಪ್ರಕಾಶತೇ ॥**

**ಸುಖ ದುಃಖಾದಿ ಯೋಗೇಷು ನಾ ಭಾವೋ ಭಾವ ಏವವಾ ।**
**ವಿದ್ಯತೇ ಚಿತ್ಸ್ವರೂಪಸ್ಯ ನಿರ್ಲೇಪಸ್ಯ ಮಹಾತ್ಮನಃ ॥**

**ಸ್ವಂತಾ, ಹಂತಾ, ವಿನಿರ್ಮುಕ್ತೇ ನಿರ್ವಿಕಲ್ಪೇ ಚಿದಂಬರೇ ।**
**ಏಕೀಭೂತಸ್ಯ ಸಿದ್ಧಸ್ಯ ಭಾವಾಭಾವಕಥಾ ಕುತಃ ॥**

(ಶ್ಲೋ. ೫೦–೫೩)

ಸಚ್ಚಿದಾನಂದ ಪರಿಪೂರ್ಣ ಆತ್ಮಾನಂದದಲ್ಲಿ ಮಗ್ನನಾದ ಶಿವಯೋಗಿಗೆ, ತನಗನ್ಯವಾದುದು ಬೇರೊಂದಿಲ್ಲವಾಗಿ, ನಾನು, ನೀನು, ಅವನು, ಎಂಬ ಭಾವಕ್ಕೆ ಎಡೆ ಎಲ್ಲಿಯದು. ಅಂದಬಳಿಕ ನೀನು ನಾನೆಂಬುದಿಲ್ಲ. ಏನೇನೆಂಬುದಿಲ್ಲ ಶಿವಜ್ಞಾನಾನಂದದಲ್ಲಿ ಇಂಬುಗೊಂಡಿರುವ ಸಿದ್ಧರಿಗೆ ಕಿಂಚಿತ್ತೂ ಭಾವವು ಇಲ್ಲ ಅಭಾವ ಸಹಾ ಇಲ್ಲವೇ ಇಲ್ಲ. ಅಂಗ, ಲಿಂಗ, ಭಾವ, ಅಹಂಭಾವ, ನಿರಹಂ ಭಾವ, ಪರಂಭಾವ, ಅಭಾವ ಎಂಬೀ ಸ್ಥಿತಿಗಳು ಮನಸ್ಸಿನಿಂದ ಉದ್ಭವಿಸುವವು. ಭಾವಪೂರ್ಣದಿಂದ ಮಾಡುವ ಸೇವೆ ಅವಶ್ಯವಿರುವುದು. ಭಾವಾವೇಶ ಮತ್ತೂ ಅಭಿನಿವೇಶಗಳು ಕೂಡದು. ಇದರಂತೆ ಅಹಂಭಾವ, ಅಹಂಕಾರಗಳು ವರ್ಜಿತವಿರುವುವು. ನಿರಹಂಭಾವ ಹಾಗೂ ಪರಂಭಾವಗಳು ಶಿವಾನುಗ್ರಹಕ್ಕೆ ನಾಂದಿಯೆನಿಸಿವೆ. ಭಾವ ಪರಿಶುದ್ಧವಾದಲ್ಲಿ ಎಲ್ಲವೂ ಶಿವಮಯವೆನಿಸುವವು.

ಸದ್ಭಾವದಲ್ಲಿ ಸದಾಶಿವನು ನೆಲಸಿರುವುದು ಕಂಡುಬಂದಿದೆ. ಭಾವರಹಿತ ನಾದರೆ ಸುಖವಿಲ್ಲ. ಕೊರತೆಯನ್ನು ಸೂಚಿಸುವುದು ಅಭಾವ, ಈ ಸ್ಥಿತಿಯಲ್ಲಿ ಮನಸ್ಸಿಗೆ ಅಶಾಂತಿ, ಅತೃಪ್ತಿ ಚಂಚಲ ಅಭಾವ ಸ್ಥಿತಿಯಿಂದಾಗಿ—

**ಜೀವೇ ವಾರಿ ತರಂಗ ಚಂಚಲತರೇ ।**
**ಶಾಂತಿಃ ಕುತಃ ಪ್ರಾಣಿನಃ ॥**

ಎಂಬಂತೆ ಅಶಾಂತಿಯ ಅಲೆಗಳಿಂದ ಅಪ್ಪಳಿಸಲ್ಪಟ್ಟು ಮಾನವ ಜರ್ಝರಿತನಾಗುವನು. ಮಾನವರು ಭಾವಾಭಾವಗಳ ಹೋರಾಟದಲ್ಲಿ ಸಿಕ್ಕಿ ತತ್ತಳಿಸುತ್ತಿಹರು. ಭಾವ, ಅಭಾವಗಳ ಬಂಧನಕ್ಕೆ ಸಿಗದ ಭಾಗ್ಯವಂತನು, ಹೃನ್ಮಂದಿರದ ಚಿಜ್ಜ್ಯೋತಿಯಲ್ಲಿ ಸದ್ರೂಪವಾಗಲಿ, ಅಸದ್ರೂಪ ಭಾವವಾಗಲಿ ಕಾಣದೆ, ತಾನೇ ತಾನಾಗಿರ್ಪನು. ನಾನೆಂಬ, ತನಗನ್ಯವಾದ ಭಾವವ ತಾಳದೆ, ಆತ್ಮನೇ ಇಲ್ಲೆಂಬ ಅಭಾವವನ್ನು ತಾಳದೆ, ನಿಶ್ಚಿಂತಿತವಾದ ಪರಮಸ್ಥಿತಿ, ನಿಜಕ್ಕೂ ಭಾವಭಾವಲಯ ಸ್ಥಲವೆನಿಸಿದೆ.

ನಿರ್ಲೇಪನಾಗಿ ಚಿದ್ರೂಪನಾಗಿ ಸಕಲ ದ್ವಂದ್ವಧರ್ಮಗಳಿಗೆ ಅತೀತನಾದ ಮಹಾಪುರುಷನಿಗೆ ಸುಖದುಃಖಗಳಿಲ್ಲ, ಆಸಕ್ತಿ ಅನಾಸಕ್ತಿಗಳಿಲ್ಲ. ವಿವಿಧ ಭೋಗಂಗಳ ಆಸಕ್ತಿಯಾಗಲಿ ಅನಾಸಕ್ತಿಯಾಗಲಿ ಸರ್ವಥಾ ಇಲ್ಲ. ಯಾವ ಭಾವವೂ ಇಲ್ಲ, ಅಭಾವವೂ ಇಲ್ಲ. ಭಾವಸಾಗರದಲ್ಲಿ ಬಿದ್ದು ತವಕಿಸುವ ನರರಿಗೆ ತೋರುವ ಭಾವ ಅಭಾಂಗಳು ನಿಜೇಷ್ಟಲಿಂಗದಲ್ಲಿ ತನ್ಮಯನಾದ ಆತ್ಮಂಗೆ, ತನಗನ್ಯವಾದ ಯಾವುದು ಕಾಣದಾದುದರಿಂದ, ಭಾವಲಯ ಸ್ಥಲದವನೆಂದು ಪ್ರಸಿದ್ಧನಿರುವನು. ಅರ್ಥಾತ್, ಜೀವನ್ಮುಕ್ತನಾದ ಶಿವಯೋಗಿಯು ತಾನು ಇದ್ದೇನೆಂಬ ಭಾವದಿಂದಲೂ ತಾನು ಇರುವುದಿಲ್ಲವೆಂಬ ಭಾವದಿಂದಲೂ ದೂರನಾಗಿರುವುದರಿಂದ ಈತ ಭಾವಾಭಾವಗಳಿಂದ ಮುಕ್ತನಾಗಿ ಪ್ರಕಾಶಿಸುವನೆಂದರ್ಥ.

**"ಅಯಮಾತ್ಮಾ ಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ, ಸೋಽಹಂ, ಶಿವೋಽಹಂ,"** ಎಂಬುದೆಲ್ಲಾ ಹಮ್ಮಿನ ಮಾಲೆ, **"ನಿಶ್ಶಬ್ದಂ ಬ್ರಹ್ಮ ಮುಚ್ಯತೇ".** ಭಾವವೇ ಘನಲಿಂಗಾಕಾರವಾದ ಪರಮಸ್ಥಿತಿ ಭಾವಲಿಂಗವೆನಿಸಿದೆ. ಭಾವಲಿಂಗ, ಅದೂ ಚಿಜ್ಜ್ಯೋತಿ ಚಿನ್ಮಯಸ್ವರೂಪ. ಆಜ್ಞಾಚಕ್ರದಲ್ಲಿ ಇಷ್ಟ, ಪ್ರಾಣಲಿಂಗಗಳ ಚಿನ್ಮುದ್ರೆಯನ್ನು ಗರ್ಭೀಕರಿಸಿಕೊಂಡು, ನಭೋಮಂಡಲದಲ್ಲಿ ಮನಮೋಹಕವಾಗಿ ತೋರುವ ವರ್ಣರಂಜಿತ ಕಾಮನಬಿಲ್ಲಿನಂಥಾ ಆಕರ್ಷಣೀಯ ಶಕ್ತಿ ಭಾವಲಿಂಗ. ಇದು ಚಿಚ್ಛಕ್ತಿ ಚಿನ್ಮಯಸ್ವರೂಪವುಳ್ಳದ್ದು. ಭಾವವೇ ಲಿಂಗಾಕಾರವಾಗಿ ಪರಿಣಮಿಸಿ, ಅನಿರ್ವಚನೀಯ ಅಪ್ರಮೇಯ

ವೆನಿಸಿರಲು ; ಘನ ಮನ ಮಹಾಲಿಂಗದಲ್ಲಿ ಐಕ್ಯವಾಗಿರಲು, ಭಾವಾಭಾವವೆಂಬ ಭೇದವೆಲ್ಲಿಯದು. ಎಲ್ಲವೂ ಅಜ್ಞಾನಗ್ರಂಥಿಗಳು ತನ್ನೊಳಗಿನ ಶಿವನನ್ನು ಕಾಣಗೊಳಿಸುವುದಿಲ್ಲ.

**ಅಜ್ಞಾನೇನಾವೃತಂ ಜ್ಞಾನಂ।**
**ತೇನ ಮುಹ್ಯಂತಿ ಜಂತವಃ ॥**

ತನ್ನೊಳಗೆ ಅಂತರ್ಯಾಮಿಯಾಗಿರುವ ಶಿವನನ್ನು ಈ ಜನ್ಮದಲ್ಲಿ ಕಾಣದವನು, ಅನ್ಯರಲ್ಲಿ ಶಿವನಿರುವುದನ್ನು ಕಾಣಲಾರನು. ಇಂಥವನು ತನ್ನ ದೇಹದಲ್ಲಿನ ದೇಹಿಯೆನಿಸಿದ ಶಿವನನ್ನು ಕಂಡನುಭವಿಸಿ ಆ ದಿವ್ಯ ಶಿವಪ್ರಕಾಶದಲ್ಲಿ ಬೆರೆತು ತಾನೂ ಸಹ ಆ ಪ್ರಕಾಶಸ್ವರೂಪಿಯೆಂದರಿತು ಆನಂದಿಸಲಾರದವ, ಮತ್ತೆಲ್ಲೂ ಶಿವನ ಕಾಣಲಾರನು. ಮಲತ್ರಯ, ತಾಪತ್ರಯಗಳಿಂದ ನಿರ್ಲೇಪವಾದ ಭಾವ, ನಿರ್ಭಾವ, ಪರಂಭಾವನೆನಿಸಿದೆ. ಶ್ರೀ ವೇದವ್ಯಾಸಾಚಾರ್ಯರು ತಮ್ಮ ಬ್ರಹ್ಮ ಸೂತ್ರಗಳಲ್ಲಿ **"ಶಿವೋಽಹಂ"** ಭಾವನೆಯಿಂದ ಭಾವಲಿಂಗವನ್ನು, ಮಾನಸಿಕವಾಗಿ ಧ್ಯಾನಿಸುತ್ತಲಿರಬೇಕೆಂದು ಸ್ಪಷ್ಟಪಡಿಸಿ ಇವರ ನಿತ್ಯಾನುಸಂಧಾನದಿಂದ.

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮ।**
**ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ॥**

ಎಂದು ಕಠದಲ್ಲಿಯ ಆಧಾರದೊಂದಿಗೆ—

**ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್ ॥**

ಎಂಬ ಬ್ರಹ್ಮಸೂತ್ರದಲ್ಲಿ ಮನುಷ್ಯನ ಅಂಗುಷ್ಟ ಪ್ರಮಾಣದ ಹೃದಯ ಕುಹರದೊಳಗೆ, ಸಣ್ಣ ಸೂಜಿಯ ಕಣ್ಣಿಗಿಂತಲೂ ಅತ್ಯಂತ ಸೂಕ್ಷ್ಮವಾದ ರಂಧ್ರದ ಮಧ್ಯೆ, ಹಿರಣ್ಮಯಕರ ಉಜ್ವಲ ತೇಜಸ್ಸಿನಿಂದ ಪ್ರಜ್ವಲಿಸಿ **"ಸನ್‌ಹೃದಯ ಪ್ರಕಾಶಃ"** ಹೊಂಬಣ್ಣದ ಹವಳ ಕಾಂತಿಯಿಂದ ಥಳಥಳಿಸುವ ತನ್ನಾತ್ಮ ತೇಜಸ್ಸನ್ನು ಒಳಗಣ್ಣಿನಿಂದ ಕಂಡಾನಂದಿಸುವ ದಿವ್ಯ ಸ್ಥಿತಿ **ಭಾವಾಭಾವಲಯ ಸ್ಥಲವೆಂದು** ಪ್ರಸಿದ್ಧವರುತ್ತೆ. ಮನಕ್ಕೆ ಸದ್ವಿವೇಕವತೋರಿ, ಅಂತಪ್ಪ ಸುಮನಸ್ಸಿನಿಂದ ತನ್ನ ನಿಜಸ್ಥಲವೇ, ಆತ್ಮಶ್ರೀಯ ಪರಶಿವಬ್ರಹ್ಮವೆಂದು ಅರಿತು ಶಿವಭಾವದಲಿ ನೆಲೆಗೊಂಡು ಪ್ರಜ್ವಲಿಸುತ್ತಾ ತನ್ನಂಗವೆಲ್ಲಾ ಲಿಂಗವೆಂದರಿತ ಶರಣ ಭೋಗೋಪ ಲಿಂಗ ಭೋಗಿಯಾಗಿ—

ಸ್ವಾನುಭೂತ್ಯೇಕಮಾನಾಯ |
ನಮಃ ಶಾಂತಾಯ ತೇಜಸೇ ||

ಎಂಬಂತೆ ಲಿಂಗಾಂಗಸಮರಸ ಸಂಯೋಗದಲ್ಲಿ ಪೂರ್ಣ, ತಲ್ಲೀನನಾಗಿರುವುದರಿಂದ, ಅಂಗಲಿಂಗಗಳೆಂಬ ಭೇದವಳಿದು, ಮಹಾಲಿಂಗವೇ ತಾನಾಗಿ ರಂಜಿಸುವ ಮಹಾತ್ಮನು, ಭಾವಾಭಾವಲಯ ಸ್ಥಲದವನೆನಿಸುವನು. ಇಂತು ಲಿಂಗಾಂಗಸಂಬಂಧಿಯಾದ ಶಿವಯೋಗಿಯ ತನು, ಮನ, ಭಾವ, ಜ್ಞಾನಂಗಳೆಲ್ಲಾ ಪರಂಜ್ಯೋತಿರ್ಲಿಂಗದಲ್ಲಿ ವಿಲೀನವಾಗಿ ಮಹಾ ಲಿಂಗವೇ ತಾನಾದ ಬಳಿಕ, ಭಾವಾಭಾವಗಳ ಉಲುಹು ಅಡಗಿ "ನಿಶ್ಶಬ್ದಂ ಬ್ರಹ್ಮಮುಚ್ಯತೆ" ಎಂಬಂತೆ ನಿಶ್ಶಬ್ಧ ಬ್ರಹ್ಮ ಸ್ಥಿತಿಯಲ್ಲಿ ಭಾವಾಭಾವ, ಲಯಗೊಂಡಿರುವುವು.

ಕಲ್ಪನೆಗೆ ಬಾರದೆಇದ್ದ ಮಹಾ ಘನಲಿಂಗವೇ, ದಿಟವಾಗಿ ತನ್ನ ನಿಜನೆಂದರಿದಲ್ಲಿ, ತಾನೆಂಬ ಅಹಂಭಾವವಳಿದು ಭಾವ ನಿರ್ಭಾವವಾಯಿತು ಪರಂಭಾವವಾಯಿತ್ತು, ಈ ಪರಮೋತ್ಕೃಷ್ಟವಾದ ಪರಮ ಪರಾತ್ಪರ ದಿವ್ಯ ಸ್ಥಿತಿ, ಭಾವಾಭಾವಲಯ ಸ್ಥಲವೆಂದು ಶ್ರೀ ಭಗವತ್ಪಾದ ಜ|| ರೇಣುಕಾಚಾರ್ಯರು ಕೃಪೆಯಿಂದ ಮುನಿಚಂದ್ರ ಆದಿ ಶ್ರೀ ಅಗಸ್ತ್ಯಮಹರ್ಷಿಗಳಿಗೆ ಅವರ ಪ್ರಶಾಂತವಾದ ಋಷ್ಯಾಶ್ರಮದ ಉದ್ಯಾನದ, ಉನ್ನತಾಸನದಲ್ಲಿ ಮಂಡಿಸಿ ಸುಮುಖಿಗಳಾಗಿ ಪ್ರಸನ್ನ ಭಾವದಿಂದ ಮನಂಬುಗುವಂತೆ ಬೋಧಿಸಿದರು.

---

ಓಂಕಾರಬಿಂದು ಸಂಯುಕ್ತಂ | ನಿತ್ಯಂ ಧ್ಯಾಯಂತಿ ಯೋಗಿನಃ |
ಕಾಮದಂ ಮೋಕ್ಷದಂ ತಸ್ಮಾತ್ | ಓಂಕಾರಾಯ ನಮೋ ನಮಃ ||

ಓಂಕಾರ ಪಂಜರ ಶುಕೀಂ | ಉಪನಿಷದುದ್ಯಾನ ಕೇಳಿ ಕಲಕಂಠೀಂ |
ಆಗಮ ವಿಪಿನ ಮಯೂರೀಂ| ಆರ್ಯಾಂ ಅಂತರ್ಭಾವಯೇ ಗೌರೀಂ||

ಪರಬ್ರಹ್ಮ ಪರಂಧಾಮ ಪವಿತ್ರಂ | ಪರಮಂ ಭವಾನ್ |
ಪುರುಷಂ ಶಾಶ್ವತಂ ದಿವ್ಯಂ ಆದಿದೇವಮಜಂ ವಿಭುಂ ||

ಹೃತ್ಪದ್ಮಂ ಶಿವಧರ್ಮ ಕಂದಸಹಿತಂ ಸುಜ್ಞಾನನಾಳಂ ತಥಾ |
ನಿತ್ಯೈಶ್ವರ್ಯದಳಾಷ್ಟಕಂ ಶಶಿನಿಭಂ ವೈರಾಗ್ಯ ಸತ್ಕರ್ಣಿಕಂ ||

ಶ್ರೀ ರುದ್ರೇಶ್ವರ ಕೇಸರಾನ್ವಿತಮಿದಂ ಸಂಚಿಂತ್ಯ ತನ್ಮಧ್ಯಮೇ ।
ಸೂರ್ಯೇಂದೂಜ್ವಲವಹ್ನಿ ಮಂಡಲಗತಂ ಧ್ಯಾಯೇಚ್ಛಿವಂ
ಚಿನ್ಮಯಂ ॥

---

## ಲಿಂಗಸ್ಥಲ ೫೭

## ಜ್ಞಾನಶೂನ್ಯಸ್ಥಲಂ (ಪರಿ. ೨೦)

ಪರಸ್ಪರ ಸಮಾಪೇಕ್ಷ ಭಾವಾಭಾವವಿವೇಚನಂ ।
ಜ್ಞಾನಂ ಬ್ರಹ್ಮಣಿಯನ್ನಾಸ್ತಿ ಜ್ಞಾನಶೂನ್ಯಸ್ಥಲಂ ವಿದುಃ ॥

ಸರ್ವಾತ್ಮನಿ ಪರೇತತ್ವೇ ಭೇದಶಂಕಾವಿವರ್ಜಿತೇ ।
ಜ್ಞಾತೃತ್ವಾದಿವ್ಯವಹಾರೋತ್ಥಂ ಕುತೋ ಜ್ಞಾನಂವಿಭಾವ್ಯತೇ ॥

ನಿರ್ವಿಕಾರಂ ನಿರಾಕಾರಂ ನಿತ್ಯಂ ಸೀಮಾ ವಿವರ್ಜಿತಂ ।
ವ್ಯೋಮವತ್ಸರಮಂ ಬ್ರಹ್ಮ ನಿರ್ವಿಕಲ್ಪತಯಾ ಸ್ಥಿತಂ ॥

ಕೇವಲಂ ಸಚ್ಚಿದಾನಂದ ಪ್ರಕಾಶಾದ್ವಯ ಲಕ್ಷಣಂ ।
ನಿರ್ವಿಕಲ್ಪಂ ಪರಾಕಾಶಂ ಪರಬ್ರಹ್ಮ ಪ್ರಕಾಶತೇ ॥

(ಶ್ಲೋ. ೫೪,೫೫,೫೬,೫೯)

ಜ್ಞಾನಶೂನ್ಯಸ್ಥಲ ಪಿಂಡಸ್ಥಲದಿಂದ ನೂರೊಂದನೆ (೧೦೧) ಸ್ಥಲ. ಮನೋಮಂಡಲ, ಬುದ್ಧಿ ಪಟಲಗಳ ಮಧ್ಯೇ, ಪರಸ್ಪರಾಪೇಕ್ಷೆಯಿಂದ ಕೂಡಿದ ಅಸ್ತಿ ನಾಸ್ತಿ ರೂಪ ಭಾವಾಭಾವಗಳ ವಿವೇಚನೆಯುಳ್ಳ, ಯಾವ ಭೇದಜ್ಞಾನವು, ಪರಶಿವಸ್ವರೂಪಿಯಾದ ಶಿವಯೋಗಿಯಲ್ಲಿರುವುದಿಲ್ಲವೋ, ಅಂಥಹ ಭೇದ ಶೂನ್ಯತೆ ಯನ್ನು ಪ್ರತಿಪಾದಿಸುವ ಸ್ಥಲವನ್ನು, ಜ್ಞಾನಿಗಳು ಜ್ಞಾನಶೂನ್ಯಸ್ಥಲವೆಂದು ಹೆಸರಿಸಿರುವರು. "ಜ್ಞಾನಂ ಬಂಧಃ" ಎಂಬ ಶಿವಸೂತ್ರದಲ್ಲಿರುವ "ಜ್ಞಾನ ಪದಕ್ಕೆ ಭೇದಜ್ಞಾನವೆಂದು ತಿಳಿಯುವಂತೆ, ಇಲ್ಲಿಯೂ "ಜ್ಞಾನಶೂನ್ಯಸ್ಥಲ"

ಎಂಬ ಪದಕ್ಕೆ ಭೇದಜ್ಞಾನ ಶೂನ್ಯ ಸ್ಥಲವೆಂದರಿಯಬೇಕು. ಜ್ಞಾನ, ಭಾವಾಭಾವ ವಿವೇಚನಕ್ಕೆ ಸಾಧನವಾಗಿಹುದು. ಇಂತಪ್ಪ ಜ್ಞಾನವು ಭಾವಾಭಾವಂಗಳನ್ನು ಲಯಗೊಳಿಸಿ, ಪರಶಿವಬ್ರಹ್ಮವೇ ತಾನಾದ ಪರಮ ಐಕ್ಯನಲ್ಲಿ ನಾನು ಎಂಬುದಿಲ್ಲ ಇದು ಕಾರಣ ಭಿನ್ನ ಜ್ಞಾನಶೂನ್ಯ ತಾನು.

ಚರಾಚರಾತ್ಮಕವಾದೀ ಜಗತ್ತು ಎಲ್ಲಿ ಹುಟ್ಟಿ ಸ್ಥಿತಿಗೊಂಡು ವರ್ಧಿಸಿ ಮತ್ತೆಲ್ಲಿ ಲಯವಾಗುವುದೋ ಆ ಮಹಾ ಸ್ವಯಂ ತತ್ವವನ್ನು ಸ್ಥಲವೆಂದು ಜಗದಾಚಾರ್ಯರು ಪ್ರತಿಪಾದಿಸಿರುವರು.

**ಸ್ಥಲಂ ನಾಮ ಪರಂ ತತ್ವಂ । ಶಿವರುದ್ರಾದಿ ಸಂಜ್ಞಕಂ ।**
**ಉಪಾಸ್ಯೋಪಾಸಕತ್ವೇನ ಸ್ವಯಮೇವ ದ್ವಿಧಾಭವೇತ್ ।**
**ಲಿಂಗಸ್ಥಲಮುಪಾಸ್ಯಃ । ಸ್ಯಾದಂಗಸ್ಥಲಂ ಮುಪಾಸಕಂ ॥**

ಶಿವನು ರುದ್ರನು ಮಹಾದೇವನು ಮುಂತಾದ ನಾಮಗಳಿಂದ ಸ್ತುತ್ಯವಾದ ಮಹಾ ತತ್ವವು ಸ್ವೇಚ್ಛೆಯಿಂದ ಉಪಾಸ್ಯ ಭಕ್ತಿಪೂರ್ವಕ ಪೂಜಿಸಿ ಧ್ಯಾನಿಸಲು ಪೂಜ್ಯ ಪರವಸ್ತುವೆಂದೂ, ಇದನ್ನು ಪೂಜಿಸಿ ಸೇವಿಸುವಾತ ಉಪಾಸಕನೆಂದೂ ಹೀಗೆ ಆ ಪರ ವಸ್ತು ಎರಡಾಗಿ ಭಿನ್ನವಾಯಿತು. ಸಾಮವೇದಾಂತರ್ಗತವಾದ ಮಹಾವಾಕ್ಯ "ತತ್ವಮಸಿ" ತ್ರಿಪುಟೀ ಮಂತ್ರಮಯವಾದೀ ಮಹಾ ವಾಕ್ಯ "ತತ್ + ತ್ವಂ + ಅಸಿ" ಎಂಬೀ ಮೂರು ರೂಪಗಳಿಂದ ಪ್ರತಿಫಲಿಸಿ ವಿರಾಜಿತವಾಗಿದೆ. "ತತ್" ಶಬ್ದ ಲಿಂಗರೂಪಿ ಪರಶಿವನನ್ನೂ, "ತ್ವಂ" ಪದವು ಜೀವಾತ್ಮ (ಅಂಗ) ನನ್ನೂ ಸೂಚಿಸಿ, "ಅಸಿ" ಶಬ್ದವು, ಶಿವಜೀವರ ಸಮರಸ ಸಾಮರಸ್ಯದ ಗೂಢವಾದ ರಹಸ್ಯವನ್ನೂ ಹೊರಸೂಸುತ್ತಲಿವೆ. ಲಿಂಗಾಂಗಗಳ ಅವಿನಾಭಾವಸ್ವರೂಪ ಸಂಬಂಧ, ಜಲತರಂಗಗಳಂಥಾ ನಿಕಟ ಸ್ವರೂಪ ಸಂಬಂಧವೆಂದು ಪರಮಾಚಾರ್ಯರು ವ್ಯಕ್ತಗೊಳಿಸಿರುವರು. ಮಹಾಚಾರ್ಯರು ಈ ತತ್ವವನ್ನು ಹೃದಯಂಗಮವಾಗಿ ಪ್ರತಿಪಾದಿಸುತ್ತಾ, ಹೇ ಮಹಾಮುನೇ—

**ತತ್ರಾಧಿಕ ಭಾವಾಪನ್ನ ಸ್ವಪ್ರಕಾಶತಾಯಾಂ ।**
**ಪ್ರತಿಸ್ಫುರಣಗತ್ಯಾ ಪ್ರವಿಷ್ಟ ।**
**ಮೂಲ ಪ್ರಣವರೂಪ ಶಿವಚೈತನ್ಯಮೇವ ಲಿಂಗತತ್ವಂ ಭವತಿ ॥**

**ನ್ಯೂನೀಭೂತ ಸ್ವಪ್ರಕಾಶತಾಯಾಂ ।**

**ತಥೈವ ಪ್ರವಿಷ್ಟ ಶಿವಚೈತನ್ಯಮೇವ ಅಂಗತತ್ವಂ ಭವತಿ ॥**

ಏನೆಂದರೆ, ಅತ್ಯಂತ ಸಮರಸದ ಅಧಿಕ ಭಾವಾಪನ್ನದಿಂ, ಸ್ವತಂತ್ರ ಸ್ವಪ್ರಕಾಶತ್ವಾಂಶದಲ್ಲಿ, ಪ್ರತಿಫಲನ ಕ್ರಮದಿಂದ ಪ್ರವೇಶಿಸಿ, **ಸ್ಫುರಿಸುತ್ತಿರುವ ಮೂಲ ಪ್ರಣವಾತ್ಮಕ ಶಿವಚೈತನ್ಯ, "ಲಿಂಗತತ್ವವೆಂದೂ"** ಮತ್ತನೇ ಚೈತನ್ಯ ತನ್ನ ವಿನೋದಕ್ಕಾಗಿ, **"ಸ್ವಶಕ್ತಿ ಕ್ಷೋಭಮಾತ್ರೇಣ ಯತ್ಕಿಂಚಿತ್ ನ್ಯೂನೀಭಾವಂ"** ಅಂದರೆ ಕ್ಷೋಭೆಯಿಂದ ಕೂಡಿದ ಭಾವೇನ, ಸ್ವಪ್ರಕಾಶತ್ವಾಂಶದಲ್ಲಿ ಪ್ರತಿಫಲಿಸಿ ಸ್ಫುರಿಸುತ್ತಿರುವ ಮತ್ತದೇ **ಶಿವಚೈತನ್ಯ ಅಂಗತತ್ವವೆನಿಸಿದೆ.** ಇಂತು ಲಿಂಗಾಂಗಗಳ ಸಾಮರಸ್ಯ; **"ತತ್ವಮಸಿ"** ಮಹಾ ವಾಕ್ಯದಲ್ಲಿ ಗೂಢವಾಗಿ ಎಣೆಯಲ್ಪಟ್ಟು, ಏಕವೂ ಅದ್ವಿತೀಯವೂ ಆಗಿ ಸ್ವಯಂ ರಂಜಿತವಾಗಿರುವುದರಿಂದ, ಶಿವೋಕ್ತ ಆಗಮಾಮ್ನಾಯಾದಿಗಳು ;

**ಅಗಂ ತ್ವಂ ಪದಮಾತ್ಮ ರೂಪ ಮಮಲಂ ।**
**ಲಿಂಗಂ ಶಿವಂ ತತ್ಪದಂ ಸಂಗಂ ಸತ್ಯಮಸಿ ಪ್ರಸಿದ್ಧ ಪದಮೆಂಬೀ॥**
**ತತ್ವಮಸ್ಯರ್ಥದಿಂ ಲಿಂಗಾಂಗೈಕ್ಯವಿಶಿಷ್ಟ ಜೀವ ।**
**ಪರಮೈಕ್ಯಾಭಿನ್ನ ಭಾವ ಪ್ರಸಾದಾಂಗೀಕಾರ ।**
**ಮದಕ್ಕೆ ನಿನ್ನ ಕೃಪೆಯಿಂದೆನ್ನೋಳ್ ಶಿವಾವಲ್ಲಭಾ ॥**

ಎಂದು ಉಗ್ಗಡಿಸಿವೆ.

**"ಜ್ಞಾನಶೂನ್ಯ"** ಎಂಬ ಶಬ್ಧ ಸಾಮಾನ್ಯವಾಗಿ ಜ್ಞಾನಹೀನ ಅಥವಾ ಹುಚ್ಚ ಎಂದು ಭಾವಿಸಲಾಗಿದೆ. ಜ್ಞಾನಿಗಳೂ, ಅವಧೂತ ಮಹಾಪುರುಷರೂ, ಕೆಲವು ಸಮಯಗಳಲ್ಲಿ ಹುಚ್ಚರಂತೆ ಅತ್ಮಾರಾಮರಾಗಿ ಬೀದಿಗಳಲ್ಲಿ ತಿರುಗಾಡುತ್ತಾ ; ಆಗಾಗ ತಮ್ಮಷ್ಟಕ್ಕೆ ತಾವೇ ಏನನ್ನೋ ಮಾತನಾಡುತ್ತಾ ನಗುವರು, ಕೋಪಿಸಿಕೊಂಡು ಸ್ವಲ್ಪ ದೂರ ಓಡುವರು, ಪುನಃ ಸುಮ್ಮನೇ ಬಂದು ಸ್ಥಳದಲ್ಲಿ ಚಲಿಸದೆ ನಿಲ್ಲುವರು. ಏನು ಕೊಟ್ಟರೂ ತಿನ್ನರು ಉಣ್ಣರು, ದುಡ್ಡು ಕೊಟ್ಟರೆ ಬಿಸುಡುವರು. ಆದರೂ ಅಂತರಾತ್ಮದಲ್ಲಿ ನಿಷ್ಠೆಯುಳ್ಳವರಾಗಿರ್ಪರು ಪರಮ ವೈರಾಗ್ಯಮೂರ್ತಿಗಳು. ಶರಣರ ಲೀಲೆಗಳೆಲ್ಲಾ ಶಿವಲೀಲೆ ಎಂಬುದನ್ನು ಅಜ್ಞರಾದ ಲೌಕಿಕರಿಗೆ ಅರ್ಥವಾಗುವುದಿಲ್ಲ.

ಭಗವತ್ಪಾದ ಶ್ರೀಜಗದ್ಗುರು ರೇಣುಕಾಚಾರ್ಯರು ಒಮ್ಮೆ ತಮಿಳು ನಾಡಿನ ಕಾಂಚಿಪುರದ ವಿಷ್ಣು ಕಂಚಿಯ ಬೀದಿಗಳಲ್ಲಿ ಶಿವಧ್ಯಾನದೊಂದಿಗೆ ಸಂಚರಿಸುತ್ತಿರುವಾಗ ಯಾರೋ ಪುಂಡರು ಶ್ರೀಗಳನ್ನು ನೋಡಿ ಈತನಾರೋ ಜ್ಞಾನ ಶೂನ್ಯ ಹುಚ್ಚನೆಂದು ಹತ್ತಿರ ಹೋಗಿ ಮಾತನಾಡಲು ಹೆದರಿ ಅವರಿಗೆ ಕಲ್ಲೆಸೆದು ಪೀಡಿಸಿದರು, ಮತ್ತೆ ಕೆಲವರು ತಣ್ಣೀರೆಸೆದು ಆಗಗ ಪುಂಡಾಟನೆಸಗುತ್ತಲಿದ್ದರು ಬಹು ಶೀಘ್ರದಲ್ಲಿ ಇದರ ದುಷ್ಪರಿಣಾಮವನ್ನನುಭವಿಸಬೇಕಾಯಿತು. ವಿಷ್ಣು ಕಂಚಿಯ ಶ್ರೀ ವರದರಾಜಸ್ವಾಮಿಯ ಶಿರಸ್ಸು ಕಂಪನದಿಂದ ಚಲಿಸುತ್ತಿರುವುದನ್ನು ಅರ್ಚಕರು ಹಾಗೂ ದೇವಾಲಯದ ಸದಸ್ಯರೂ ಕಂಡು ಅತ್ಯಂತ ಭೀತಿಗೊಂಡರು. ಎರಡೆರಡು ದಿವಸಗಳಲ್ಲಿ ಪುರಜನರೂ ಹಾಗೂ ಚೋಳ ಮಹಾರಾಜನೂ ಇದನ್ನು ಕಂಡು ಮುಂದೇನುಗತಿ ಎಂದು ಹೆದರಿದರು. ಇದಕ್ಕೆ ಕಾರಣವೇನೆಂದು ಭೂಪಾಲನು ವಿಚಾರಿಸಿದಾಗ, ನಗರಕ್ಕೆ ಮಹಾತ್ಮರೊಬ್ಬರು ಬಂದಿದ್ದಾರೆ ಇವರನ್ನು ಪುಂಡಜನರು ಪೀಡಿಸಿ ಅಪಚಾರ ಮಾಡಿರುವ ವಿಷಯ ತಿಳಿದು ಚೋಳ ಭೂಪಾಲನು ಶ್ರೀರೇಣುಕರನ್ನು ಸಂದರ್ಶಿಸಿ, ಕ್ಷಮಾಪಣೆ ಬೇಡಿ ಶ್ರೀಗಳನ್ನು ದೇವಸ್ಥಾನಕ್ಕೆ ಬಿಜಯಂಗೈಸಿಕೊಂಡು ಬಂದರು. ಸರ್ವರ ಪ್ರಾರ್ಥನೆಯಂತೆ ಶ್ರೀರೇಣುಕಾಚಾರ್ಯರು ಗರ್ಭಗುಡಿಯೊಳಗೆ ಪ್ರವೇಶಿಸಿ ವರದರಾಜನ ಚಲಿಸುವ ಮಸ್ತಕದಮೇಲೆ ತಮ್ಮ ಅಮೃತಹಸ್ತವಿಡಲು, ಶ್ರೀ ವರದರಾಜನ ಶಿರಸ್ಸು ಸ್ಥಿರವಾಗಿ ನಿಂತಿತು. ಚಕಿತನಾದ ರಾಜನು ಭಕ್ತಿಭಾವದಿಂದ ಶ್ರೀ ಜ|| ರೇಣುಕರ ಶ್ರೀಪಾದಕಮಲಗಳಲ್ಲಿ ಶರಣಾಗತನಾಗಿ ಅಂದಿನಿಂದ ಶ್ರೀಜಗದಾಚಾರ್ಯರ ಪರಮ ಶಿಷ್ಯನಾದನು. ಇದೇ ಸಂದರ್ಭದಲ್ಲಿ ಶ್ರೀರೇಣುಕಾಚಾರ್ಯರು ಶಿವಕಂಚಿಯ ಶ್ರೀ ಏಕಾಂಬ್ರೇಶ್ವರ ಲಿಂಗದ ಸನ್ನಿಧಿಯಲ್ಲಿ ಧ್ಯಾನಾರೂಢರಾಗಿ ಶಿವನ ಪ್ರೇರಣೆಯಂತೆ ಕೂತ ಸ್ಥಲದಲ್ಲಿ **ಭೂಗರ್ಭದಿಂದ ಜನಿಸಿದ ಭೂಜಾತ** ತಮ್ಮ ಮಹಾ ವೀರಸಿಂಹಾಸನ ಪೀಠಕ್ಕೆ ಉತ್ತರಾಧಿಕಾರಿ **ಶ್ರೀರುದ್ರಮುನಿ ಶಿವಾಚಾರ್ಯರನ್ನು** ಪಡೆದು ಅಲ್ಲಿಂದ ಶ್ರೀರಂಭಾಪುರಿಗೆ ಹಿಂದಿರುಗಿದರು.

ಜ್ಞಾನಶೂನ್ಯ ಸ್ಥಲ ವಿಚಾರಾರ್ಹವಾದ ವಿಷಯ, ಶೂನ್ಯವೆಂದು ಕರೆಯುವ ಶಿವಾದ್ವೈತವು ಸಚ್ಚಿದಾನಂದ ಪ್ರಕಾಶಮಯ. ಕೇವಲ ಸಚ್ಚಿದಾನಂದಪೂರ್ಣ ಲಕ್ಷಣವುಳ್ಳ ಶಿವಾದ್ವೈತದಲ್ಲಿ, ನೀನು ನಾನು, ಅವರು ಇವರೆಂಬ ಭಿನ್ನ ಜ್ಞಾನಕ್ಕೆ ಅವಕಾಶವಿಲ್ಲವಷ್ಟೇ. ಇದರಿಂದ ಭಿನ್ನ ಜ್ಞಾನಶೂನ್ಯ ಸ್ಥಿತಿ, **ಜ್ಞಾನಶೂನ್ಯಸ್ಥಲ**

ವೆನಿಸಿದೆ. ಶಿವಜ್ಞಾನವೇ ತನ್ಮಯವಾಗಿ ಶೋಭಿಸುತ್ತಿರಲು, ಅಖಂಡಾದ್ವಿತೀಯವಾದೀ ಜ್ಞಾನಕ್ಕೆ ಭಿನ್ನವಾದುದೇನೂ ಇಲ್ಲವಾದ್ದರಿಂದ, ಭಿನ್ನಜ್ಞಾನಶೂನ್ಯವೆಂಬುದು ಅರ್ಥಗರ್ಭಿತವಿರುವುದು. ಅರಿಯುವವನು, ಅರಿಯತಕ್ಕದು. ಅರಿವು, ಎಂಬ ತ್ರಿಪುಟಿಶೂನ್ಯಸ್ಥಲವಿದು. ಇಚ್ಛಾ, ಜ್ಞಾನ, ಕ್ರಿಯಾದಿ ಗುಣ ಶೂನ್ಯವೂ ಆಹುದು. ಅದ್ವಿತೀಯವಾದೀ ಸ್ಥಿತಿ, ಆದಿಮಧ್ಯಾಂತ ಶೂನ್ಯವೆನಿಸಿದೆ ಅಂದರೆ, ಸರ್ವದಾ ಸರ್ವತ್ರ ತನಗನ್ಯವಾದ ದ್ವಿತೀಯ ಪದಾರ್ಥ ಶೂನ್ಯವೆಂಬುದೇ ಸಾರಾಂಶ. ಸಜಾತೀಯ ವಿಜಾತೀಯ ಸ್ವಗತ ವಿಗತ ಭೇದ ರಹಿತಃ, ಸರ್ವಾತ್ಮಕ ಪರಶಿವ ತತ್ವದಲ್ಲಿ, ಜ್ಞಾತೃ, ಜ್ಞಾನ, ಜ್ಞೇಯ ಎಂಬ ತ್ರಿಪುಟಿ ಭೇದಕ್ಕೆ ಅವಕಾಶವಿಲ್ಲದ ಉಚ್ಚಾಶ್ರಯಸ್ಥಿತಿ ಜ್ಞಾನಶೂನ್ಯಸ್ಥಲವೆಂದರಿಯಬೇಕು.

"ಇಷ್ಟಲಿಂಗಂತು ಶಾಂಕರಿ":— ನಿತ್ಯತ್ವ ಅನಂತತ್ವಗಳ ಪ್ರಭಾವ ವಲಯದಿಂ ಪ್ರಜ್ವಲಿಸುವ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಚಿಚ್ಛಕ್ತಿಯ **ಸಹಜ ಸಂಪರ್ಕದ ಸಮರಸ ಸಂಯೋಗದಿಂದ** ತನಗೆ ತಾನೇ ಆಗಿ ಲೋಕ ಕಲ್ಯಾಣಾರ್ಥ ಜಗಸ್ಮಂಗಳ ರೂಪದಲ್ಲಿ **ಜ್ಯೋತಿರ್ಲಿಂಗ ಆವಿರ್ಭವಿಸಿತು. ಇದುವೇ ಮಹಾದೇವನಾದ ಮಹಾಲಿಂಗ, ನಮ್ಮಿಷ್ಟ ಲಿಂಗವೂ ಇದುವೇ.**



**ಶಾಂತಂ ಪದ್ಮಾಸನಸ್ಥಂ । ಶಶಧರ ಮಕುಟಂ ।**
**ಪಂಚವಕ್ತ್ರಂ ತ್ರಿಣೇತ್ರಂ । ಶೂಲಂ ವಜ್ರಂಚ ಖಡ್ಗಂ ॥**
**ಪರಶುಮಭಯದಂ । ದಕ್ಷಭಾಗೇ ವಹಂತಂ ।**
**ನಾಗಂ ಪಾಶಂಚ ಘಂಟಾಂ । ಪ್ರಳಯ ಹುತವಹಂ ॥**

**ಸಾಂಕುಶಂ ವಾಮಭಾಗೇ । ನಾನಾಲಂಕಾರ ದೀಪ್ತಂ ।**
**ಸ್ಫಟಿಕಮಣಿ ನಿಭಂ । ಪಾರ್ವತೀಶಂ ನಮಾಮಿ ॥**

**ಹರ ಶಂಭೋ ಮಹಾದೇವ । ವಿರೂಪಾಕ್ಷ ತ್ರಿಲೋಚನಃ ।**
**ದಯಾಸಿಂಧೋ ದೀನಬಂಧೋ । ರಕ್ಷ ರಕ್ಷ ಮಹೇಶ್ವರ ॥**

## ಲಿಂಗಸ್ಥಲ ೫೭

## ಜ್ಞಾನಶೂನ್ಯಸ್ಥಲಂ (ಪರಿ. ೨೦)

ಜಲೇ ಜಲಮಿವನ್ಯಸ್ತಂ ವಹ್ನೌ ವಹ್ನಿ ರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥

ಏತಾವದುಕ್ತ್ವಾ ಪರಮುಪ್ರಬೋಧ ।
ಮುದದ್ವೈತಮಾನಂದ ಶಿವಪ್ರಕಾಶಂ ॥

ದೇವ್ಯೈ ಪುರಾಭಾಷಿತಮಿಶಾಕ್ಷರೇಣ ।
ತೂಷ್ಣೀಮ ಭೂದ್ಧ್ಯಾ ಸ ಪರೋಗಣೇಂದ್ರಃ ॥

ಏವ ಮುಕ್ತ್ವಾ ಸಮಾಸೀನಂ ಶಿವಯೋಗಪರಾಯಣಂ ।
ರೇಣುಕಂ ತಂ ಸಮಾಲೋಕ್ಯ ಬಭಾಷೇ ಪ್ರಾಂಜಲಿರ್ಮುನಿಃ ॥

(ಶ್ಲೋ. ೬೧, ೬೨, ೬೩,)

ಪರಮ ಪವಿತ್ರ ಗಂಗಾ ಯಮುನ, ತುಂಗಭದ್ರ, ಕೃಷ್ಣಾ ಕಾವೇರಿ ಮೊದಲಾದ ಜೀವನದಿಗಳು, "ಸಿಂಧೋ ಸರಿದ್ವಲ್ಲಭಂ ಯಂಬಂತೆ" ತಮ್ಮ ಪತಿ ಸಮುದ್ರರಾಜನೊಂದಿಗೆ "ನದೀನಾಂ ಸಾಗರೋ ಗತಿಃ" ಎಲ್ಲ ನದಿಗಳು ಸಮುದ್ರಾಭಿಮುಖವಾಗಿ ಪ್ರವಹಿಸಿ ಅಂತ್ಯದಲ್ಲಿ ಸಾಗರದ ಮಹಾ ಜಲಾಶಯ ದಲ್ಲಿ ಸಂಗಮವಾದ ನಂತರ ವಿವಿಧ ನದಿಗಳು ತಮ್ಮ ನಾಮರೂಪಗಳನ್ನು ಕಳೆದುಕೊಂಡು ಜಲವು ಮಹಾ ಜಲದಲ್ಲಿ ಕೂಡಿ ಜಲ ತರಂಗಸ್ವರೂಪ ಸಂಬಂಧ ದಲ್ಲಿ ವಿಲೀನವಾಗುವುವು. ಇದರಂತೆ ಶಿವನ ಅಂಶವೇ ಅನಂತ ಜೀವಕೋಟಿ ಗಳಾಗಿ ಪರಿಣಮಿಸಿವೆ. ಈ ಅಂಶವನ್ನು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೊರ ಸೂಸುತ್ತಾ—

ಮಮೈವಾಂಶೋ ಜೀವಲೋಕೇ ।
ಜೀವಭೂತಃ ಸನಾತನಃ ॥

ಎಂದು ಸ್ಪಷ್ಟಪಡಿಸಿರುವನು. ಇದೇ ಅಂಶವನ್ನು ಮುಂಡಕೋಪನಿಷತ್ತಿನಲ್ಲೂ ಪ್ರತಿಪಾದಿಸುತ್ತಾ—

**ಯಥಾ ಸುದೀಪ್ತಾತ್ | ಪಾವಕಾದ್ವಿಸ್ಫು ಲಿಂಗಾಃ |**
**ಸಹಸ್ರಶಃ ಪ್ರಭವಂತೇ ಸ ರೂಪಾಃ ||**

**ತಥಾಕ್ಷರಾದ್ ವಿವಿಧಾಃ ಸೋವ್ಯ್ಯಭಾವಾಃ |**
**ಪ್ರಜಾಯಂತೇ ತತ್ರ ಚೈವಾಪಿಯಂತಿ ||**

ಅಂದರೆ, ಹೇಗೆ ಪ್ರಜ್ವಲಿಸುವ ಅಗ್ನಿಕುಂಡದಿಂದ ಸಹಸ್ರಾರು, ವಿಸ್ಫುಲಿಂಗಾಃ ನಿಗಿನಿಗಿ ಎಂಬ ಕಿಡಿಗಳು ಪುಟಿ ಹಾರುವುವೋ ಅದರಂತೆ ಪರಶಿವಬ್ರಹ್ಮದಿಂದ ವಿವಿಧ ಜೀವಕೋಟಿಗಳು ಪರಮಾತ್ಮನ ಸಂಕಲ್ಪಮಾತ್ರೇಣ ಆವಿರ್ಭವಿಸುವು ವೆಂದು ಶೃತಿವಾಣಿ ಘೋಷಿಸುತ್ತಲಿದೆ. ಅಂದ ಬಳಿಕ ಭಿನ್ನ ಭಿನ್ನವಾಗಿ ತೋರುವ ಜೀವಕೋಟಿಗಳೆಲ್ಲಾ—

**ಸರ್ವ ಭೂತಾಂತರಾತ್ಮ | ಭೂತೇ ಭೂತೇ ವ್ಯವಸ್ಥಿತಃ ||**

ಎಂಬಂತೆ ಎಲ್ಲರೂ ಪರಶಿವನಿಂದ ಆವೃತರಾಗಿ ಶಿವಮಯವಾಗಿ ಪ್ರಕಾಶಿಸುವುದ ರಿಂದ ಭಿನ್ನ ಜ್ಞಾನಶೂನ್ಯವೆನಿಸಿದೆ.

ಕಠೋಪನಿಷತ್ತಿನಲ್ಲಿ—

**ಯಥಾ ಘೃತಂ ಘೃತೇನ್ಯಸ್ತಂ | ಕ್ಷೀರಂ ಕ್ಷೀರೇ ಯಥೈವಚ |**
**ಕೇವಲತ್ವಂ ತಥಾ ಪ್ರಾಪ್ತಂ | ನ ಕಿಂಚದಪಿ ತದ್ಭವೇತ್ ||**

ತುಪ್ಪದೊಳಗೆ ಎರೆಯಲ್ಪಟ್ಟ ತುಪ್ಪವು ಹೇಗೆ ತುಪ್ಪವೇ ಆಗಿದೆಯೋ, ಹಾಲಿನೊಳಗೆ ಎರೆಯಲ್ಪಟ್ಟ ಹಾಲು ಹೇಗೆ ಹಾಲೇ ಅಹುದೋ ಅದರಂತೆ, ಸರ್ವವ್ಯಾಪಿ ಸರ್ವಾಂತರ್ಯಾಮಿಯಾದ ಸರ್ವೇಶ್ವರನ ಬೃಹದ್‌ಗರ್ಭದಿಂದ ಉದಿಸಿದ ಜೀವಾತ್ಮರು ಪರಶಿವನ ಅಂಶ ಸ್ವರೂಪಿಗಳಿರುವರು. ಚಿತ್ಪ್ರಕಾಶದಿಂದ ಅವರೆಲ್ಲರೂ ಅಖಂಡಾನಂದಾಕಾರದಲ್ಲಿ ತನ್ಮಯರೆನಿಸಿರುವುದರಿಂದ ಪೂರ್ವ ಸ್ಥಿತಿಯ ಭಿನ್ನ ಜ್ಞಾನ ಶೂನ್ಯರಿರುವರು. ಚಿನ್ಮಯಲಿಂಗವೇ ತನ್ನ ನಿಜಸ್ವರೂಪ

ವೆಂದರಿದು, ಲಿಂಗವನೆ ಧರಿಸಿ ಭಜಿಸಿ, ಧ್ಯಾನಿಸಿ, ಪೂಜಿಸಿ, ದೇಹತ್ರಯಂಗಳಲ್ಲಿನ ಲಿಂಗತ್ರಯಂಗಳನ್ನು ಭಕ್ತಿಯಿಂದ ಆರಾಧಿಸಿ, ತನ್ನಿಷ್ಟಲಿಂಗದೊಳಗೆ ಆತ್ಮಾಂಗವ, ತೈಲಧಾರೆಯಂತೆ ಸಂಧಿಸಿ, ಕೂಡಿ ಬೆರೆದು ಭಿನ್ನವಳಿದು, ನಿರವಯಲ ಲಿಂಗವೇ ತಾನಾಗಿ, ಶಿಖಿ ಕರ್ಪೂರವತ್ ಲಿಂಗೈಕ್ಯನಾದ ಬಳಿಕ, ಅಭೇದ, ಅಭಿನ್ನ, ಸಮ ರಸದ ಉಚ್ಚಾಶ್ರಯ ಸ್ಥಿತಿಯು ಲಿಂಗಾಂಗಸಾಮರಸ್ಯದ ಹೊನಲಿನಲ್ಲಿ, ಭಿನ್ನ ಭಾವಕ್ಕೆ ಎಡೆಯಿಲ್ಲವಾದ್ದರಿಂದ, ಆ ಗಂಭೀರ ಸ್ಥಿತಿಯನ್ನು ಜ್ಞಾನಶೂನ್ಯಸ್ಥಲ ವೆಂದು ಪ್ರಸಿದ್ಧವಿರುತ್ತೆ. ಚಿಚ್ಛಕ್ತಿಯು ಒಂದಂಶವಾದ ಪರಾಭಕ್ತಿ, ಅವ್ಯಭಿ ಚಾರಿಣಿ ಭಕ್ತಿಯೋಗದ ಪ್ರಭಾವದಿಂದ, ಆತ್ಮಂಗೆ ಪರವ ಸಾಧಿಸಿಕೊಡುವ ಸ್ವರೂಪವುಳ್ಳದ್ದು. ಇವರ ಅನುಸಂಧಾನದಿಂದ ಮಹಾ ಘನಲಿಂಗದ ಪದವನರಿತು ಆ ಪರಮಪದವೇ ತನ್ನ ನಿಜ ಚೈತನ್ಯವೆಂದರಿತು, ದೇಹೋಹಂಭಾವವಳಿದು, ತನ್ನ ಆತ್ಮಾಂಗ ದೇಹ ಕರಣಂಗಳೆಲ್ಲಾ ಲಿಂಗವೆಂದು ಘನಲಿಂಗಕ್ಕೆ ಅರ್ಪಿಸಿ ಆ ಲಿಂಗದಲಿ ಬೆರೆದು ಮಹಾಲಿಂಗವಪ್ಪ ಲಿಂಗಾಂಗ ಸಂಯೋಗದ ಶಿವಾನಂದದಲ್ಲಿ ಸಮರಸವಾಗಿರ್ಪ ಮಹಾತ್ಮಂಗೆ ಅಂದರೆ ಲಿಂಗೈಕ್ಯಂಗೆ, ತನಗನ್ಯ ವಸ್ತುವಿರು ವಿಕೆಯ ಪರಿಮಿಯೇ ಸಂಪೂರ್ಣವಿಲ್ಲವಾಗಿ, ಇದನ್ನೇ ಜ್ಞಾನಶೂನ್ಯಸ್ಥಲವೆಂದು ತಿಳಿಯಲಾಗಿದೆ. ಇಂತಪ್ಪ ಅದ್ವಿತೀಯ ಪರಮ ಸ್ಥಿತಿಯನ್ನು, ಹೃದಯಂಗಮ ವಾಗಿ ಮನಗಾಣಲು, ಇದೇ ಅಂಶಗಳಿಂದ ರಾರಾಜಿಸುವ ಮಹತತ್ತ್ವವನ್ನು ಪುನಃ ಸಂದರ್ಭಾನುಸಾರ ಪ್ರತಿಪಾದಿಸಲು ಛಕ್ತ್ಯಾ ಪ್ರಯತ್ನಿಸಿರುವುದರಿಂದ ಪುನರುಕ್ತಿ ದೋಷಕ್ಕೆಡೆ ಇಲ್ಲ. ಪ್ರಣವಮಯ ಭಗವಂತನ ತತ್ವ ವರ್ಣಿಸಿದಷ್ಟೂ, ಮರಳು ಭೂಮಿಯ ಊಟೆಗಳಲ್ಲಿ ತೋಡಿದಷ್ಟೂ, ಶುದ್ಧ ಜಲ ನಿರಂತರ ಉಕ್ಕಿ ನವನವೋಲ್ಲಾಸವನ್ನುಂಟುಮಾಡುವ ತೆರದಲ್ಲಿ ಪರಮಾತ್ಮನ ಅಗಣಿತ ಗುಣಗಣ ಗಳ ವೈಶಿಷ್ಟ್ಯ ಕಲ್ಯಾಣದಾಯಕವಾದ್ದರಿಂದ, ಮೇಲಿಂದ ಮೇಲೆ ಅನನ್ಯ ಭಕ್ತಿ ಭಾವದಿಂದ ವರ್ಣಿಸಿ ಪುಳುಕಿತನಾದಷ್ಟೂ, ದುರಿತದೂರನಾಗಿ ಮಹಾದೇವನ ಕರುಣೆಗೆ ಮಾನವ ಪಾತ್ರನಾಗುವುದರಿಂದ ಪುನರುಕ್ತಿ ದೋಷಕ್ಕೆಡೆಯಿಲ್ಲ ಯೆಂದು.

**ಲಿಂಗದೇಹೀ ಶಿವಾತ್ಮಾಯಂ ಲಿಂಗಾಚಾರೋ ನ ಲೌಕಿಕಃ |**
**ಸರ್ವಂ ಲಿಂಗಮಯಂ ರೂಪಂ ಲಿಂಗೇನ ಸಮಮುಶ್ನುತೇ ||**

**ಸರ್ವಾಂಗಲಿಂಗಮೇವಸ್ಯಾತ್ ಅನ್ನಪಾನಾದ್ಯಮರ್ಪಿತಂ |**
**ಪ್ರಸಾದಸ್ತೃಪ್ತಿರೇವಸ್ಯಾತ್ ಸರ್ವಂ ಲಿಂಗಮಯತ್ವತಂ ||**

**ಲಿಂಗದೊಳಿರ್ದು ಲಿಂಗಮನೆತ್ತಾಳ್ದು ನಿರಂತರ ಲಿಂಗಪೂಜೆಯಂ ।**
**ಲಿಂಗದಿ ನೊಲ್ದು ವಿಸ್ತರಿಸಿ ಲಿಂಗಕ್ಕೆ ಲಿಂಗಮನರ್ಪಿಸುತ್ತ ॥**

**ಮಾಲಿಂಗ ಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ ।**
**ಲಿಂಗನಿಜೈಕ್ಯನಯ್ಯಾ ಪರಮಪ್ರಭುವೇ ಮಹದೈಪುರೀಶ್ವರಾ ॥**

ಇಂತು ಲಿಂಗಸ್ಥಲದ ನಿಜೈಕ್ಯನು, ತನಗಿಂತಲೂ ಭಿನ್ನವಾದ ವಸ್ತು ಮತ್ತೊಂದಿದೆ ಎಂಬುವನ್ನು ಅರಿಯನಾದ ಕಾರಣ, ಈ ಮಹಾಪುರುಷ ಜ್ಞಾನ ಶೂನ್ಯಸ್ಥಲದವನೆನಿಸಿಹನು. ಸಚ್ಚಿದಾನಂದಮಯ ಪರಿಪೂರ್ಣ ಅದ್ವಿತೀಯ ಸ್ವರೂಪಂಗೆ ಬೇರೆ ಮಿಗಿಲಿಲ್ಲದ ವಸ್ತುವಿಲ್ಲವಾದ್ದರಿಂದ, **"ಸತ್ಯಂ ಜ್ಞಾನಮನಂತಂ ಬ್ರಹ್ಮ"**ನೆಂಬ ಮಹಾ ತತ್ವದಲ್ಲಿ ಏಕೀಭವಿಸಿದಾತಂಗೆ ಭಿನ್ನ ಜ್ಞಾನವಿರಲಿಕ್ಕೆ ಸಾಧ್ಯವಿಲ್ಲ.

ಶಿವಲಿಂಗಾವಿರ್ಭೂತ ಅಖಂಡ ಚಿನ್ಮಯಸ್ವರೂಪಿ, ಶೈವಾಗಮಾಂಬುಜ ಭಾಸ್ಕರ. ಸದ್ಯೋಜಾತ ಮುಖಸಂಭೂತ, ಜಗದಾದಿ ಪರಮ ಜಗದ್ಗುರು ಸಾರ್ವಭೌಮ, ಶ್ರೀರೇಣುಕಾಚಾರ್ಯರು, ತ್ರಿಲೋಕಸಂಚಾರಿ ತ್ರಿಕಾಲಜ್ಞಾನಿ ಕುಂಭಸಂಭವನೆನಿಸಿದ ಆದಿ ಅಗಸ್ತ್ಯಮಹರ್ಷಿಗೆ ಪ್ರಸನ್ನಭಾವದಿಂದ ಬೋಧಿಸಿದ ೧೦೧ ಏಕೋತ್ತರ ಶತಸ್ಥಲ ಸಿದ್ಧಾಂತ ಚಿರಕಾಲ ಭೂಮಂಡಲದಲ್ಲಿ ಹಚ್ಚ ಹಸುರಾಗಿ ಪ್ರವರ್ಧಿಸುವಂಥಾ ಸರ್ವೋದಯ ಸಿದ್ಧಾಂತವಿದು. ಮಹಾಚಾರ್ಯರು ಮುನಿಚಂದ್ರನನ್ನು ಕರುಣಾಕಟಾಕ್ಷದಿಂದ ವೀಕ್ಷಿಸುತ್ತಾ ಹೇ ಮುನೇ! ಇಲ್ಲಿಯ ವರೆಗೆ ಸಾಂಬಶಿವಾನುಗ್ರಹದಿಂದ ನಿನಗೆ ಸುಪ್ರಸನ್ನಭಾವದಿಂದ ಬೋಧಿಸಿದ ತತ್ವಾಮೃತ ಶಿವಾದ್ವೈತಸಿದ್ಧಾಂತವೆನಿಸಿ, ತ್ರಿಭುವನಂಗಳಲ್ಲಿನ ಸಮಸ್ತ ಆಧ್ಯಾತ್ಮಿಕ ಸಿದ್ಧಾಂತಗಳಿಗೆ ಶಿರೋರತ್ನಪ್ರಾಯವಾದ ಶಿವಾಮೃತ ಶಿವಾದ್ವೈತಸಿದ್ಧಾಂತವಿದು

**ಸರ್ವಾಗಮೇಷು ಸರ್ವೇಷು ।**
**ಪುರಾಣೇಷ್ವಖಿಲೇಷು ಚ ।**
**ಪುರಾ ದೇವೇನ ಕಥಿತಂ ।**
**ದೇವ್ಯೈ ತನ್ನಂದನಾಯ ಚ ॥**

ಅಖಿಲ ಶಿವಾಗಮೋಪನಿಷದಾದಿಗಳ ಹಾಗೂ ಸರ್ವ ಪುರಾಣಾದಿ ಸಚ್ಛಾಸ್ತ್ರ

ಗಳಲ್ಲಿ ಪ್ರೋಕ್ತವಾದ ನಿಗಮಾಗಮಗಳ ಸಾರಾಮೃತವನ್ನು ಶಿವನು ಅಪರಾತಿಶಯಗಳಿಂದ ತನ್ನ ಅರ್ಧಾಂಗಿ, ಲೋಕಮಾತೆ, ಶ್ರೀ ಗಿರಿಜೆಗೆ ಜಗದಾದಿಯಲ್ಲಿ ಬೋಧಿಸಿದನು. ಜೀವಿತ ಕಾಲದಲ್ಲೇ ಜೀವನು ಶಿವನಾಗುವ ರತ್ನಪ್ರಾಯವಾದ ಜೀವಂತ ಅಮೃತಮಯ ಶಿವಾದ್ವೈತ ಸಿದ್ಧಾಂತದ ಸಾರಾಮೃತ ಶಾಸ್ತ್ರ ಶ್ರವಣದಿಂದ ಸುಪ್ರಸನ್ನಳಾದ ಜಗದಾಂಬೆ, ತನ್ನ ಸುಕುಮಾರ, ಜ್ಞಾನಪಂಡಿತ ಸ್ವಾಮಿಯೂ ಶಿವಾಕ್ಷಿಸಂಭವನೂ ಆದ ಶ್ರೀ ಷಣ್ಮುಖನಿಗೆ ದೇವಿ ಪ್ರೀತಿಯಿಂದ ಬೋಧಿಸಿದ ಘನ ಸಿದ್ಧಾಂತವಿದು. ಶಿವೋಕ್ತಿಯಂತೆ—

**ತತ್ಸಂಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ ।**
**ಗಣೇಶ್ವರೇಣ ಕಥಿತ ಮಗಸ್ತ್ಯಾಯ ಪುನಃ ಕ್ಷಿತೌ ॥**

ಈ ಶಿವಶಕ್ತಿ ಸಂಪುಟಕ್ಕೆ ಸೇರಿದ ನಾನು, ಶಿವನಾಣತಿಯಂತೆ ಹೇ ಮುನೇ! ಏಕೋತ್ತರ ಶತಸ್ಥಲಾತ್ಮಕ ಅಮೋಘವಾದ ಶಿವಾದ್ವೈತಸಿದ್ಧಾಂತದಸಾರ ಸರ್ವಸ್ವವನ್ನು ಭುವಿಯಲ್ಲಿ ನಿನಗೆ ಪರಮಾದರದಿಂದ ಬೋಧಿಸಿರುವೆನು. ಶಿವಾನಂದ ಪ್ರಕಾಶವೂ, ಪರಮ ಸ್ವಸ್ವರೂಪ ಜ್ಞಾನಾನುಸಂಧಾನದಿಂದ "**ರಸೋವೈ ಬ್ರಹ್ಮ**" ಎಂಬಂತೆ ರಸವತ್ತಾದ ಅಧ್ಯಾತ್ಮಿಕ ಸಂಪತ್ತು "**ರಸೋವೈ ರಸೋತ್ತಮಃ**" ಚಿದ್ರಸಭರಿತ ತೇಜಸ್ಸಿನಿಂದ ಪ್ರಫುಲ್ಲಿತವಾದ ಪಿಂಡಸ್ಥಲಾದಿ ಜ್ಞಾನಶೂನ್ಯಾಂತ ೧೦೧ ಸ್ಥಲಗಳಿಂದೊಡಗೂಡಿದ ಸಮರಸ ಸನ್ಮಾರ್ಗದ ಹೊಂಬೆಳಕಿನಲ್ಲಿ ರಂಜಿಸುವ ಲಿಂಗಾಂಗಸಾಮರಸ್ಯ ರೂಪ ಸಾಯುಜ್ಯ ಮೋಕ್ಷಪ್ರದವೆನಿಸಿದ ಶಿವಾದ್ವೈತಸಿದ್ಧಾಂತವನ್ನು ಶ್ರವಣಮಾಡಿದ ಭಾಗ್ಯವಂತ ನೀನು ಎಂದುಸುರಿ, ಅಂತರ್ಮುಖಿಗಳಾಗಿ ಪರಶಿವನ ಚಿಂತನೆಯಲ್ಲಿ ಮುಳುಗಿ—

**ಧ್ಯಾತ್ವಾ ಕ್ಷಣಂ ಮಹಾದೇವಂ ।**
**ಸಾಂಬ ಮಾಹ ಸಮಾಹಿತಃ ॥**

ಕ್ಷಣ ಕಾಲ ಏಕಾಗ್ರಚಿತ್ತದಿಂದ ಅರ್ಧನಾರೀಶ್ವರನಾದ ಪರಶಿವಬ್ರಹ್ಮವನ್ನು ಅಂತರಂಗದಲ್ಲಿ ಧ್ಯಾನಿಸುತ್ತಾ, ಸ್ವಸ್ವರೂಪದಲ್ಲಿ ಮಗ್ನರಾಗಿ ಮೌನ ಮುದ್ರೆಯಿಂದ ವಿಭೂಷಿತರಾಗಿ ಮಹಾಗುರು ಶ್ರೀರೇಣುಕಾಚಾರ್ಯರು ವಿರಾಜಿಸಿದರು.

# ಲಿಂಗಸ್ಥಲ ೫೭

## ಜ್ಞಾನಶೂನ್ಯಸ್ಥಲಂ (ಪರಿ. ೨೦)

॥ ಅಗಸ್ತ್ಯ ಉವಾಚ ॥

ಶಿವಯೋಗ ವಿಶೇಷಜ್ಞಃ ಶಿವಜ್ಞಾನಸಮುದ್ಭವಃ ।
ಸಮಸ್ತ ವೇದಶಾಸ್ತ್ರಾದಿ ವ್ಯವಹಾರ ಧುರಂಧರ ॥

ಅವತೀರ್ಣ ಮಿದಂ ಶಾಸ್ತ್ರ ಮನವದ್ಯಂ ತ್ವದಾನನಾತ್ ।
ಶ್ರುತ್ವಾಮೇ ಮೋದತೇ ಚಿತ್ತಂ ಜ್ಯೋತಿಃ ಪಶ್ಯಚ್ಛಿವಾಭಿದಂ ॥

ಅದ್ಯ ಮೇ ಸಫಲಂ ಜನ್ಮ ಗತೋ ಮೇ ಚಿತ್ತ ವಿಭ್ರಮಃ ।
ಸಂಜಾತಾ ಪಾಶವಿಚ್ಛಿತ್ತಿಸ್ತ ಪಾಂಸಿ ಫಲಿತಾನಿ ಮೇ ॥

ಶಾಸ್ತ್ರಂ ತವ ಮುಖೋದ್ಗೀರ್ಣಂ ಶಿವಾದ್ವೈತ ಪರಂ ವರಂ ।
ಮಾಂ ವಿನಾಕಸ್ಯ ಲೋಕೇಷು ಶ್ರೋತು ಮಸ್ತಿ ತಪಃ ಶುಭಂ ॥

ತಪಸಃ ಪರಿಪಾಕೇನ ಶಂಕರಸ್ಯ ಪ್ರಸಾದತಃ ।
ಆಗ ತಸ್ತ್ವಂ ಮಹಾಭಾಗ ಮಾಂ ಕೃತಾರ್ಥಯಿತುಂ ಗಿರಾ ॥

ಇತಿಸ್ತುವಂ ತಂ ವಿನಯಾದಗಸ್ತ್ಯಂ ಮುನಿಪುಂಗವಂ ।
ಆಲೋಕ್ಯ ಕರುಣಾದೃಷ್ಟ್ಯಾ ಬಭಾಷೇ ಸ ಗಣೇಶ್ವರಃ ॥

(ಶ್ಲೋ. ೬೪,೬೬,೬೭,೬೯,೭೦,೭೧)

ಭೋ ಭೋ ಗುರೂಣಾಂ ಗುರುವೇ! ಶಿವಯೋಗ ರಹಸ್ಯವನ್ನು ಪೂರ್ಣ ಬಲ್ಲವನೂ, ಶಿವಜ್ಞಾನ ಸಮುದ್ರನೂ. ಅಖಿಲ ನಿಗಮಾಗಮ ಶಾಸ್ತ್ರಕೋವಿದನೂ, ಶ್ರೀಗುರುದೇವಾ! ನಿನ್ನ ಕೃಪಾಕಟಾಕ್ಷವೀಕ್ಷಣ್ಯಮಾತ್ರದಿಂದ ಭಕ್ತರನ್ನು ಸಂಸಾರಬಂಧನದಿಂದ ಉದ್ಧರಿಸುವವನೂ, ಸ್ವೇಚ್ಛಾ ಲೀಲೋಲ್ಲಾಸನೂ, ಸ್ವಪ್ರಕಾಶದಿಂದ ಪ್ರಜ್ವಲಿಸುವವನೂ, ಆದ ಪರಮಗುರುವೇ! ನಿನ್ನ ಮುಖ ಕಮಲದಿಂದ ಹೊರಹೊಮ್ಮಿದ, ಮೋಕ್ಷಪ್ರದವಾದ, ಶಿವಾದ್ವೈತಾತ್ಮಕ

ವೀರಶೈವ ಮಹಾಶಾಸ್ತ್ರವನ್ನು ಶ್ರವಣಮಾಡುವ ಭಾಗ್ಯದಿಂದ ನಾನು ಕೃತಾರ್ಥನಾಗಿದ್ದೇನೆ. ಭೋ ಜಗದ್ಗುರುವರೇಣ್ಯ! ಚತುರ್ದಶ ಭುವನಂಗಳ್ಗೆ ಗುರುಸಾರ್ವಭೌಮ ನೀನಾಗಿರುವೆ. ಈ ಭುವಿಯಲ್ಲಿ ಶಿವಸಮಯ ಸಂಸ್ಥಾಪಕನಾಗಿ ದೇಶಿಕೇಂದ್ರ ನೀನಾದೆ. ಷಟ್ಸ್ಥಲ ಸಿದ್ಧಾಂತದ ಸಾರಾಮೃತವನ್ನು ತ್ರಿಭುವನಂಗಳಲ್ಲಿ ಸ್ವಚ್ಛಂಧವಾಗಿ ಜಗವರಿಯೆ ಬೋಧಿಸಿದೆಯಯ್ಯಾ. ಕಾಮಿಕಾದಿ ವಾತುಲ ಪರ್ಯಂತ ದೀಪ್ತಿಯಿಂ ಪ್ರತಿಪಾದಿತವಾದ, ಲಿಂಗಾಂಗಸಾಮರಸ್ಯದ ಅನಂತ ಸುಖಸಾರಾಮೃತವ ಸೂರೆಗೊಂಡೆಯಯ್ಯಾ; ದೇವಾದಿದೇವಾ ಮಹಾದೇವಾ! ಶ್ರೀಗುರುದೇವಾ! ನಿನ್ನ ಅಮೃತವಾಣಿಯಿಂದ,

**ಶ್ರುತ್ವಾ ಮೇ ಮೋದತೇ ಚಿತ್ತಂ।**
**ಜ್ಯೋತಿಃ ಪಶ್ಯಚ್ಛಿವಾಭಿಧಂ॥**

ಜೀವ ಶಿವನಾಗುವ, ಜೀವಬ್ರಹ್ಮೈಕ್ಯ ಅಥವಾ, ಲಿಂಗಾಂಗಸಾಮರಸ್ಯವೆಂಬ ಸಾಯುಜ್ಯ ಮೋಕ್ಷಾನಂದ ಪರಶಿವ ತತ್ವದ ಕೆನೆಯು, ಕೆನೆಯನ್ನು ನಾನು ಏಕಾಗ್ರಚಿತ್ತದಿಂದ ಶ್ರವಣ ಮಾಡಿದ ಫಲವಾಗಿ. **"ಮೋದತೇ ಮೇ ಚಿತ್ತಂ"** ನನ್ನ ಚಿತ್ತವು ದೇವಾಮೃತ ಸಾಗರದಲ್ಲಿ ಮಿಂದು ಮೋದದಿಂ ಅತುಲಾನಂದ ತುಂದಿಲ ಹೃದಯಾಂತ ಭರಿತನಾಗಿ, (ತುಂದಿಲ ಹೃದಯ ಸ್ವಾಂತಭರಿತನಾಗಿ) **"ಜ್ಯೋತಿಃಪಶ್ಯ ಚ್ಛಿವಾಭಿದಂ"**,ಅಂಗುಷ್ಟ ಮಾತ್ರ ಗಾತ್ರದ ನನ್ನ ಹೃನ್ಮಂದಿರದಲ್ಲಿ ಹಿರಣ್ಮಯದ ದೇದೀಪ್ಯ ಕಾಂತಿಯಿಂ,ತಾನೇ ತಾನಾಗಿ ಉಜ್ವಲದಿಂ ಪ್ರಜ್ವಲಿಸುವ ಆತ್ಮಜ್ಯೋತಿಯನ್ನು **"ಸಸ್ವರೂಪೈಕ ಚಿಚ್ಛಕ್ತಿಯಿಂ ಸ್ಫುರಿಸುತಿರ್ದ ದ್ವೈತ ಪರಮಾತ್ಮತತ್ವಂ"** ಆತ್ಮಶ್ರೀಯನ್ನು ಅಂದರೆ **"ಸನ್‌ಹೃದಯ ಪ್ರಕಾಶಃ"**ಎಂಬ ಸ್ವಯಂಜ್ಯೋತಿ. ಪರಂಜ್ಯೋತಿ, ಹಾಗೂ **"ಜ್ಯೋತಿಷಾಂ ಜ್ಯೋತಿ"** ಎಂದು ನಿಗಮಾಗಮಗಳಲ್ಲಿ ಪ್ರಸಿದ್ಧವಾಗಿ ಸ್ತುತ್ಯವಾದ ಶಿವಂಕರವೆನಿಸಿದ ಶಿವಜ್ಯೋತಿಯನ್ನು, ಭೋ ಗುರುದೇವಾ, ನಿನ್ನ ಕರುಣೆಯಿಂದ **"ಪಶ್ಯಾಮಿ"** ನನ್ನ ಹೃದಯ ಮಂದಿರದಲ್ಲಿ ನೋಡುತ್ತಲಿದ್ದೇನೆ, ಇದು ನನ್ನ **"ನಿಜ ಪದಂ ಕರ ಬಿಲ್ವಫಲಂ ಶಿವಾಥವಾ"**.

ಎನ್ನ ಮನ ನಿನ್ನ ಶಿವಕಾಂತಿಯ ಕಂಡು ಕೃತಾರ್ಥವಾಗಿದೆ. ಎನ್ನ ನೇತ್ರಂಗಳು ನಿನ್ನ ಮಣಿ ಕಾಂತಿಯಿಂದ ಜ್ವಲಂತವಾಗಿವೆ. ಎನ್ನ ಜನ್ಮ ಸಫಲವಾಗಿದೆ.

ಎನ್ನ ಚಿತ್ತದ ಭ್ರಮೆ ನಿವಾರಣೆಯಾಗಿ ಪಾಶಜಾಲದಿಂದ ಮುಕ್ತನಾಗಿದ್ದೇನೆ. ಶ್ರೀರೇಣುಕ ಗುರುವೇ! ನಿನ್ನ ಪುಣ್ಯ ದರ್ಶನ ಹಾಗೂ ಷಟ್ಸ್ಥಲ ಸಿದ್ಧಾಂತದ ದಿವ್ಯೋಪದೇಶದಿಂದ ನನ್ನ ತಪಸ್ಸಿನ ಫಲ ಸಿದ್ಧಿಸಿದೆ. ಇದರಿಂದಾಗಿ ಮೂರು ಲೋಕಗಳಲ್ಲೂ ನಿನಗೆ ಸಮಾನರಿಲ್ಲ. ಓ ಮಹಾ ಗುರುವೇ ನಿನ್ನ ಮುಖಕಮಲ ದಿಂದ ಬೋಧಿಸಿದ ತತ್ವದಿಂ ನನ್ನನ್ನುದ್ಧರಿಸಲು ಬಂದೆ, ಶಿವಾದ್ವೈತ ಅರ್ಥಾತ್ ಶಕ್ತಿವಿಶಿಷ್ಟಾದ್ವೈತ ಪರ ಅದ್ವಿತೀಯ ಶಾಸ್ತ್ರವ ಕೇಳಿ ಪವಿತ್ರಾತ್ಮನಾಗಿದ್ದೇನೆ, ತೇಜಸ್ಸಂಪನ್ನನಾಗಿದ್ದೇನೆ. ಭೋ ಗುರುವೇ ಈ ಭುವನದಲ್ಲಿ ನನ್ನ ತಪವು ಹಣ್ಣಾಗಿ ಮನವು ಹೊನ್ನಾಗಿ ಶಿವನ ದಿವ್ಯಾನುಗ್ರಹಕ್ಕೆ ಪಾತ್ರನಾಗಿದ್ದೇನೆ. ದಯಾಳೋ ದೀನಬಂಧೋ ಕರುಣಾಸಿಂಧೋ! ವೇದಾಂತ ಸಿದ್ಧಾಂತ ಗರ್ಭಿತ, ದಿವ್ಯವಾಕ್ಯೋ ಪದೇಶಗಳಿಂದ ನೀವು ಕೃಪೆಯಾ ಅತಿ ಗಹನವಾದ ಷಟ್‌ಸ್ಥಲ ಸಿದ್ಧಾಂತಸಾರಾ ಮೃತವನ್ನು ನನಗೆ ಆತ್ಮೀಯವಾಗಿ ಬೋಧಿಸಿ ಉದ್ಧರಿಸಿರುವಿರಿ. ನಾನು ಧನ್ಯ ಧನ್ಯನೆಂದೆದ್ದು ಶಿರಸಾಷ್ಟಾಂಗ ಪೂರ್ವಕ ಶ್ರೀಗುರುವನ್ನು ನಮಸ್ಕರಿಸಿ ಮೌನತಾಳಿದನು.

|| ಶ್ರೀರೇಣುಕ ಉವಾಚ ||

**ಅಗಸ್ತ್ಯಮುನಿಶಾರ್ದೂಲ ತಪಃ ಸ್ಸಿದ್ಧಮಾನೋ ರಥ ।**
**ತ್ವಾಂ ವಿನಾ ಶಿವ ಶಾಸ್ತ್ರಸ್ಯ ಕಃ ಶ್ರೋತುಮಧಿಕಾರವಾನ್ ॥**

**ಪಾತ್ರಂ ಶಿವಪ್ರಸಾದಸ್ಯ ಭವಾನೇ ಕೋ ನ ಚಾ ಪರಃ ।**
**ಇತಿ ನಿಶ್ಚಿತ್ಯ ಕಥಿತಂ ಮಯಾ ತೇ ತಂತ್ರಮೀದೃಶಂ ॥**

**ಸ್ಥಾಪ್ಯತಾಂ ಸರ್ವಲೋಕೇಷು ತಂತ್ರಮೇ ತತ್ತ್ವಯಾ ಮುನೇ।**
**ಈದೃಶಂ ಶಿವ ಬೋಧಸ್ಯ ಸಾಧನಂ ನಾಸ್ತಿ ಕುತ್ರಚಿತ್ ॥**

**ರಹಸ್ಯಮೇತತ್ ಸರ್ವಜ್ಞಃ ಸರ್ವಾನುಗ್ರಾಹಕಃ ಶಿವಃ ।**
**ಅವಾದೀತ್ ಸರ್ವಲೋಕಾನಾಂ ಸಿದ್ಧಯೇ ಪಾರ್ವತೀಪತಿಃ ॥**

**ತದಿಥಂ ಸರ್ವ ಸಿದ್ಧಾಂತ ಸಾರಾಣಾಂ ಮುತ್ತಮೋತ್ತಮಂ ।**
**ವೇದವೇದಾಂತ ಸರ್ವಸ್ವಂ ವಿದ್ಯಾಚಾರಪ್ರಕಾಶಕಂ ॥**

ವೀರಮಾಹೇಶ್ವರ ಗ್ರಾಹ್ಯಂ ಶಿವಾದ್ವೈತಪ್ರಕಾಶಕಂ ।
ಪರೀಕ್ಷಿತೇಭ್ಯೋ ದಾತವ್ಯಂ ಶಿಷ್ಯೇಭ್ಯೋ ನಾನ್ಯಥಾಕ್ವಚಿತ್ ॥

ಏತಚ್ಛ್ರವಣ ಮಾತ್ರೇಣ ಸರ್ವೇಷಾಂ ಪಾಪಸಂಕ್ಷಯಃ ।
ಅವತೀರ್ಣಂ ಮಯಾಭೂಮೌ ಶಾಸ್ತ್ರಸ್ಯಾಸ್ಯ ಪ್ರವೃತ್ತಯೇ ॥

ಪ್ರವರ್ತಯ ಶಿವಾದ್ವೈತಂ ತ್ವಮಪಿ ಜ್ಞಾನಮೀದೃಶಂ ।
ಇತ್ಯುಕ್ತ್ವಾ ಪಶ್ಯತಸ್ತಸ್ಯ ಪುರಸ್ತಾ ದೇವ ರೇಣುಕಃ ॥

ಅಂತರ್ದಧೇ ಮಹಾದೇವಂ ಚಿಂತಯನ್ನಂತರಾತ್ಮನಾ ।
ಅಂತರ್ಹಿತೇ ತದಾ ತಸ್ಮಿನ್ ಮುನಿರಾಶ್ಚರ್ಯ ಸಂಕುಲಃ ।
ತಚ್ಛಾಸ್ತ್ರಪ್ರವಣೋ ಭೂತ್ವಾ ಸಮವರ್ತತ ಸಂಯಮೀ ॥

(ಶ್ಲೋ. ೭೨,೭೩,೭೪,೭೫,೭೬,೭೭,೭೮,೭೯

ತ್ರಿಕಾಲಜ್ಞಾನಿಯೂ, ತ್ರಿಲೋಕಸಂಚಾರಿಯೂ, ಮುನಿಚಂದ್ರನೂ, ತಪಃ ಸಿದ್ಧ ಮನೋರಥನೂ ಆದ ಅಗಸ್ತ್ಯಮಹಾಮುನೇ! ಏಕೋತ್ತರಶತಸ್ಥಲಗಳಿಂದ ವಿರಾಜಿತವಾದ ಶಿವಾದ್ವೈತಸಿದ್ಧಾಂತ ಶಾಸ್ತ್ರವನ್ನು ಭಕ್ತಿಭಾವದಿಂದ ಶ್ರವಣಮಾಡುವ ಭಾಗ್ಯ ನಿನಗಲ್ಲದೆ ಭುವಿಯಲ್ಲಿ ಯಾವನೂ ಅಧಿಕಾರಿಯಾಗಲಾರನು. ಇಂತಪ್ಪ ಶ್ರೇಷ್ಠತರವಾದ ಶಿವಾನುಗ್ರಹಕ್ಕೆ ನೀನೊಬ್ಬನೇ ಸತ್ಪಾತ್ರನೆಂದು ಜ್ಞಾನದೃಷ್ಟಿಯಿಂದ ಅರಿತು,

ಕೊಲ್ಲಿಪಾಕ್ಯಭಿದೇಪುರೇ ಸುವಿಮಲೇ ।
ಸೋಮೇಶ ಲಿಂಗಾಚ್ಛುಭಾತ್ ।
ಆವಿರ್ಭೂಯ ತತೋ ಗತೋ ಗಗನತೋ ।
ಅಗಸ್ತ್ಯಾಶ್ರಮಂ ಪಾವಯನ್ ॥

ಯಸ್ತಸ್ಮೈ ವಿನತಾಯ ವೇದವಿಹಿತಂ ।
ಸಿದ್ಧಾಂತ ಮಾಬೋಧಯತ್ ।
ಸ ಶ್ರೀರೇಣುಕ ಯೋಗಿರಾಟ್ ।
ವಿತನುತಾಂ ಸಾನಂದ ಮುರ್ವೀ ತಲಂ ॥

ಕೊಲನುಪಾಕಿ ಶ್ರೀ ಸೋಮನಾಥಲಿಂಗ ಮುಖದಿಂದ ಆವಿರ್ಭವಿಸಿ. ದೊಡನೆಯೇ ಆಕಾಶಮಾರ್ಗವಾಗಿ—

**ಉತ್ಥಾಯ ವ್ಯೋಮ ಮಾರ್ಗೇಣ ।**
**ಮಲಯಾದ್ರಿ ಮುಪಾಗಮತ್ ॥**

ನಿನ್ನ ಮಲಯಾಚಲ ಪುಣ್ಯ ಪ್ರದೇಶದಲ್ಲಿನ ಸಿದ್ಧಾಶ್ರಮವನ್ನುದ್ದೇಶಿಸಿ ಬಂದಿರುತ್ತೇನೆ. ಓ ಅಗಸ್ತ್ಯಮುನಿ ಶಾರ್ದೂಲ, ಸಕಲ ಶಿವಾಗಮಲೋಲ. ಜಗಜ್ಜನನಿ ಮತ್ತು ಜ್ಞಾನ ಪಂಡಿತ ಶಿವಸ್ವಾಮಿ ಶ್ರೀ ಷಣ್ಮುಖರೂ ಯಾವ ಷಟ್ಸ್ಥಲ ಸಿದ್ಧಾಂತವನ್ನು ಪರಮೇಶ್ವರನ ಶ್ರೀಮುಖ ಕಮಲದಿಂದ ಶ್ರವಣ ಮಾಡಿ ಸಂತೃಪ್ತರಾಗಿರುವರೋ, ಅಂತಪ್ಪ ಏಕೋತ್ತರ ಶತಸ್ಥಲ ಮಹಾ ಸಿದ್ಧಾಂತವನ್ನು ಬೋಧಿಸಲು, ಸ್ವಾತ್ಮ ಪ್ರೀತಿಪುರಸ್ಸರಭಾವದಿಂದ ನಿನ್ನಾಶ್ರಮಕ್ಕೆ ಬಂದಿರುವೆನು. ನಿನ್ನಾಶ್ರಮದ ಸುತ್ತಲ ಮಂಗಳಕರ ವಾತಾವರಣ, ರಮ್ಯ ಉದ್ಯಾನವನ ಹಾಗೂ ಭದ್ರತರ ಭದ್ರಾತೀರ ಹಾಗೂ ಋಷಿವೃಂದದಿಂದ ಅನ್ವಿತರಾದ, ಮಹಾ ಸಾಧ್ವಿ ಲೋಪಾಮುದ್ರಾದೇವಿಯಿಂದೊಡಗೂಡಿದ ನಿಮ್ಮ ಅನನ್ಯ ಭಕ್ತಿಭಾವದ ಸ್ವಾಗತದಿಂದ ಸಂತುಷ್ಟನಾದ ನಾನು ನಿಮಗೆ ಶಿವೋಕ್ತ ಶಿವಾದ್ವೈತ ಘನಸಿದ್ಧಾಂತವನ್ನು ಬೋಧಿಸಲು ಬಂದಿರುವುದರಿಂದ, ನಿಮ್ಮ ಭಾಗ್ಯಕ್ಕೆಣೆಯುಂಟೇ? ಶಿವಪ್ರಸಾದಕ್ಕೆ ಸತಿಪತಿಗಳಾದ ನೀವಲ್ಲದೆ ಬೇರೆಯವರಿಗೆ ಲಭ್ಯವೇ ? ಇದನ್ನರಿತು ನಿಮಗೆ ಅಷ್ಟಾವರಣ ಪಂಚಾಚಾರ ಯುಕ್ತ ಷಟ್ಸ್ಥಲ ಮಹಾ ಸಿದ್ಧಾಂತವನ್ನು ಅರ್ಥವತ್ತಾಗಿ ಬೋಧಿಸಿರುತ್ತೇನೆ ಹೇ ಮುನಿಸತ್ತಮ,

**ಷಟ್ಸ್ಥಲ ಜ್ಞಾನವಾನೇವ ! ಸರ್ವೋತ್ಕೃಷ್ಟಂಚ ॥**

ಎಂದಿದೆ ಶೃತಿವಾಣಿ. ಇದರಿಂದಾಗಿ ನಿಮ್ಮ ಭಾಗ್ಯಕ್ಕೆಣೆಯುಂಟೇ!

ಸರ್ವಜ್ಞ, ಸರ್ವಾನುಗ್ರಹಕರನಾದ ಶಿವನು ಗಿರಿಜೆಗೆ ಪೇಳಿದ ಈ ರಹಸ್ಯವನ್ನು. ನೀನು ಪರಮಾದರದಿಂದ,

**ಸ್ಥಾಪ್ಯತಾಂ ಸರ್ವಲೋಕೇಷು ತಂತ್ರಮೋ ತತ್ತ್ವಯಾಮುನೇ ।**
**ಈದೃಶಂ ಶಿವಬೋಧಸ್ಯ ಸಾಧನಂ ನಾಸ್ತಿ ಕುತ್ರಚಿತ್ ॥**

ಎಲ್ಲಾ ಲೋಕಂಗಳಲ್ಲೂ ಸಹೃದಯರಿಗೆ ಯಾವಜ್ಜೀವವೂ ತ್ರಿಕರಣ ಪೂರ್ವಕ ಬೋಧಿಸಿ, ಸರ್ವತ್ರ ಸ್ಥಾಪಿಸಿ ವಿಶ್ವಾದ್ಯಂತ ಈ ಘನ ವಿಶ್ವಧರ್ಮವನ್ನು ಸ್ವಚ್ಛಂದದಿಂದ ಲೋಕೋದ್ಧಾರಾರ್ಥ ಪ್ರಚಾರ ಮಾಡುತ್ತಿರುವುದೆಂದು ಅಗಸ್ತ್ಯರಿಗೆ ಶ್ರೀಗುರು ರೇಣುಕರು ಕಟ್ಟಾಜ್ಞೆ ಮಾಡಿರುವರು. ಅಂದಬಳಿಕ ಶ್ರೀ ಮಹಾಚಾರ್ಯರ ಆಜ್ಞೆ ಶಿವನಾಜ್ಞೆ. ಈ ಆಜ್ಞೆ ಸಮಸ್ತ ಲಿಂಗಾಂಗಿ ವಿಪ್ರಜ್ಞನರಿಗೂ ಶಿವಾನುಭಾವಿಗಳಿಗೂ ಅಖಿಲ ವಿರಕ್ತ, ಗುರುವರ್ಗದ ಸ್ವಾಮಿಗಳಿಗೂ ಶಿವಾಚಾರ್ಯರುಗಳಿಗೂ ಅನ್ವಯಿಸುವ ಈಶಾಜ್ಞೆ ಇದು ಎಂದರಿತು, ಯಾವ ಜ್ಜೀವವೂ ಶಿವನರಿತಂತೆ ಶ್ರೀಪಂಚಾಚಾರ್ಯರು ನಲಿದೊಲಿಯುವಂತೆ, ಬೋಧಕರಾದ ತಾವು ಈ ಪರತರ ಸಿದ್ಧಾಂತದ ಸಾರಾಮೃತವನ್ನು ಮನನೀಯವಾಗಿ ರಕ್ತಗತ ಅಸ್ಥಿಗತ ಮಾಡಿಕೊಂಡು, ನಿವೃತ್ತಿ ಕಳಾ ಪ್ರತಿಷ್ಠಾ ಕಳಾಪೇತ ಆಚಾರವಿಚಾರಸಂಪನ್ನರಾಗಿ, ನಿತ್ಯ ದ್ವಿಸಂಧ್ಯಾಕಾಲಗಳಲ್ಲಿ, ಪ್ರಸನ್ನ ವಾತಾವರಣವನ್ನು ಕಲ್ಪಿಸಿಕೊಂಡು ಕ್ಲಿಪ್ತಕಾಲವಲ್ಲಿ-ಪಿಂಡಸ್ಥಲಾದಿ ಜ್ಞಾನಶೂನ್ಯ ಸ್ಥಲಾಂತ ನೂರೊಂದು ಸ್ಥಲಗಳ ಅನುವಾದವನ್ನು, ಒಂದೊಂದಾಗಿ ವಿಸ್ತರಿಸಿ ವ್ಯಾಖ್ಯಾನ ಮಾಡುತ್ತಾ, ಪಾದರಸದಂತೆ ಶಿವತತ್ವ ಬೋಧಕ ವ್ರತಧಾರಿಗಳಾಗಿ, ಯಾವ ಜ್ಜೀವವೂ ಸಹಸ್ರಾರು ಬಾರಿ, ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ತಮ್ಮ ಜೀವಿತದಲ್ಲಿ ಮೆಲುಕಾಡುತ್ತಾ ಶ್ರೀ ಜ|| ರೇಣುಕಾಚಾರ್ಯರ ಮಹಾ ಪ್ರಾಣವೆನಿಸಿದ ಸಿದ್ಧಾಂತ ಶಿಖಾಮಣಿ ಸಾರಾಮೃತವನ್ನು ತಮ್ಮ ಪ್ರಾಣದೊಂದಿಗೆ, ದೇದೀಪ್ಯಮಾನವಾಗಿ ಅಳವಡಿಸಿಕೊಂಡು ಷಟ್ಸ್ಥಲ ಸಾರಾಮೃತವೇ ತಮ್ಮ ಆತ್ಮಶ್ರೀ ಎಂದು ಸಕಲರ ಅನುಭವಕ್ಕೆ ತಂದುಕೊಡುವ ಹೊಣೆಗಾರಿಕೆ, ಶಿವಾದ್ವೈತ ವಿದ್ವಾಂಸರ ನೆತ್ತಿಯಮೇಲಿರುವ ಮಹಾ ಗುರುವಿನ ಜೀವಂತನಾದ ಆಜ್ಞೆ ಇದು. ಗಂಗಾ ಯಮುನಾ ನದಿಗಳ ಪ್ರವಾಹದಂತೆ ಭಕ್ತರ ಹೃದಯ ಭೂಮಿಕೆಯಲ್ಲಿ ಈ ಸುಧಾರಸ ಪ್ರವಹಿಸುವಂತೆ ಮಾಡುವ ಹೊಣೆಗಾರಿಕೆ ಮಣಿಹ ಗುರುವರ್ಗದವರ ಮೇಲೆ ಅತ್ಯಧಿಕವಿರುತ್ತೆ. ಇದು ಈಶೋಕ್ತಿ. ಗುರುವಿನ ಅಧಿಕೃತ ಮಹಾ ಆಜ್ಞೆಯೂ ಹೌದು.

ಜಗತ್ತಿನಲ್ಲಿ ಯಾರು ಏಕೋತ್ತರ ಶತಸ್ಥಲಾಂತರ್ಗತವಾದ ಲಿಂಗಾಂಗ ಸಾಮರಸ್ಯ ಸಿದ್ಧಾಂತವನ್ನೊಳಗೊಂಡ ಶಿವಾದ್ವೈತವನ್ನು ಕುರಿತು ಸರ್ವ ಕಾಲ ಅಖಂಡವಾಗಿ ಚಿಂತಿಸಿ ಧ್ಯಾನಿಸುತ್ತಾ, ಆಚಾರವಂತರಾಗಿರ್ಪರೋ ಅಂತಹ

ಮರ್ತ್ಯರು, ಅಸುರರಾಗಿ ಮೋಕ್ಷಾನುಗ್ರಹಕ್ಕೆ ಪಾತ್ರರಾಗುವರು. **ಹೇ ಮುನಿವರ್ಯ!** ಶಿವನಾಣತಿಯಂತೆ, ಷಟ್ಸ್ಥಲಸಿದ್ಧಾಂತ ಶಾಸ್ತ್ರ ಪ್ರಚಾರಕ್ಕಾಗಿ, ಭುವಿಗಿಳಿದು ಬಂದು, ಶಿವಲಿಂಗ ಮುಖದಿಂದ ಅವತರಿಸಿರುವೆನು. ಶಿವನಿತ್ತ ಮಣಿಹವ ನೆರವೇರಿಸಿರುವೆನು. ನೀನು ಇಳೆಯಲ್ಲಿ ಈ ಶಾಸ್ತ್ರವನ್ನು, ಸರ್ವತ್ರ ಪ್ರಬಲವಾಗಿ ಹಬ್ಬಿ, ಹರಡಿ, ಹರಸೊಲುಮೆಗೆ ಪಾತ್ರನಾಗು. **ಇದು ಶಿವನಪ್ಪಣೆ. ಎನ್ನ ಮನೋರಥವೂ ಇದೇ ಆಗಿದೆ.** ಇಂತು ಕುಂಭಸಂಭವನನ್ನು ವ್ಯಾಜವಾಗಿ ಮುಂದಿಟ್ಟುಕೊಂಡು, ಮಹಾಗುರು ರೇಣುಕರು, **ಶಿವಾದ್ವೈತವಿದ್ವಾಂಸರೂ ವೀರಮಾಹೇಶ್ವರ ಗುರು ಗೋತ್ರ ಸಂಪನ್ನರಿಗೆ ಇತ್ತ ಕಟ್ಟಾಜ್ಞೆ, ಶಿವನಾಜ್ಞೆ.** ಇಂತು ಆಜ್ಞೆಯನ್ನಿತ್ತ ಮಹಾ ಗುರು ಶ್ರೀ ರೇಣುಕಾಚಾರ್ಯರು, ಅಗಸ್ತ್ಯ, ಲೋಪಾಮುದ್ರಾದೇವಿ ಹಾಗೂ ಆ ಋಷ್ಯಾಶ್ರಮದಲ್ಲಿ ಬದ್ಧಾಂಜಲಿ ಪುಟರಾಗಿ ಭಕ್ತಿಭಾವಭರಿತರಾಗಿ ನಿಂತಿದ್ದ ಮುನಿವೃಂದ ನೋಡುತ್ತಿದ್ದಂತೆ—

**ಇತ್ಯುಕ್ತ್ವಾ ಪಶ್ಯತಸ್ತಸ್ಯ ಪುರಸ್ತಾತ್ ದೇವ ರೇಣುಕಃ ।**
**ಅಂತರ್ದಧೇ ಮಹಾದೇವಂ ಚಿಂತಯನ್ನಂತರಾತ್ಮನಾ ॥**

**ಅಂತರ್ಹಿತೇ ತದಾ ತಸ್ಮಿನ್ ಮುನಿರಾಶ್ಚರ್ಯಸಂಕುಲಃ ।**
**ಸಚ್ಛಾಸ್ತ್ರಪ್ರವಣೋ ಭೂತ್ವಾ ಸಮವರ್ತತ ಸಂಯಮೀ ॥**

ಮಹಾಮುನೇ! ಸಾಯುಜ್ಯಮೋಕ್ಷಪ್ರದವಾದ ಶಿವಾದ್ವೈತ ಸಿದ್ಧಾಂತವನ್ನು ಭೂಮಿಯಲ್ಲಿ ಪ್ರಕಾಶಗೊಳಿಸಲಿಕ್ಕಾಗಿ ನಾನು ಅವತರಿಸಿರುವೆನು. ನೀನಾದರೂ ಶಿವೋಕ್ತವಾದೀ ಪಾವನವಾದ ಶಾಸ್ತ್ರವನ್ನು ಭುವನತ್ರಯಂಗಳಲ್ಲಿ ಪ್ರಭಾವಾನ್ವಿತವಾಗಿ ಸತತ ಪ್ರಚಾರಮಾಡಿ ಸ್ಥಿರವಾಗಿ ಸ್ಥಾಪಿಸು ಎಂದು ಆಜ್ಞೆಯಿತ್ತು, ಸರ್ವರು ನೋಡುತ್ತಿದ್ದಂತೆ ಶ್ರೀರೇಣುಕ ಗುರು ಸಾರ್ವಭೌಮರು, ಶಿವಸ್ಮರಣೆಯೊಂದಿಗೆ ಓಂಕಾರ ಮಂತ್ರವ ಜಪಿಸುತ್ತಾ, ಪ್ರಣವಮಯ ಮಹಾತೇಜಸ್ಸಿನಿಂದ ಅಂತರ್ಮುಖಿಗಳಾಗಿ ನಭೋಮಂಡಲದೆತ್ತರಕ್ಕೆ ಧಾವಿಸಿ ಅಂತರ್ಧಾನರಾದರು. ಈ ಕೌತುಕವನ್ನು ಕಣ್ಣಾರೆ ಕಂಡ ಲೋಪಾಮುದ್ರಾದೇವಿ ಹಾಗೂ ಅಗಸ್ತ್ಯಾದಿ ಋಷಿ ಮಹರ್ಷಿಗಳು ಭಕ್ತ್ಯುದ್ರೇಕದಿಂದ, **ಶಂಭೋ ಹರಹರ ಮಹಾದೇವ, ಶ್ರೀಗುರುದೇವ, ಭೋ ಭೋ ರೇಣುಕೇಂದ್ರ**–

**ಗುರೂಣಾಂ ಗುರುವೇ, ಶ್ರೀದಕ್ಷಿಣಮೂರ್ತಿ ಸದೃಶ ರೇಣುಕ ಪರಂಜ್ಯೋತಿ;** ಸಂಸಾರನಾಮಕ ಸರ್ಪದಿಂದ ಕಚ್ಚಲ್ಪಟ್ಟ ವಿಷದಿಂದ ಆಸಾಪಾಶ ದಿಂದ ಮೂರ್ಛಿತರಾದ ನಮ್ಮನ್ನು ಉದ್ಧರಿಸಲಿಕ್ಕಾಗಿ ಶ್ರೀಮತ್ಕೈಲಾಸದಿಂದ ಭುವಿಗಿಳಿದ ಭೋ ಗುರುವೇ!—

**ಭೋ ಕಲ್ಯಾಣ ಮಹಾಭಾಗ ಶಿವಾಜ್ಞಾನ ಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷಮಾಂ ಭವರೋಗಿಣಂ ॥**

ಎಂದು ಸ್ತುತಿಸಿ ಆನಂದತುಂದಿಲ ಹೃದಯುಸ್ವಾಂತರಾಗಿ ಅವ್ಯಭಿಚಾರಿಣೀ ಭಕ್ತಿಭಾವದಿಂದ ಪುಳುಕಾಂಕಿತರಾಗಿ ಪುನಃ ಪುನಃ ಮಹಾಚಾರ್ಯರನ್ನು ನಮಸ್ಕರಿಸಿ ವಂದಿಸಿ ಸ್ಮರಿಸಿ ಕೊಂಡಾಡಿದರು. **ಇವರಲ್ಲವಾ ಭಾಗ್ಯವಂತರು.**

ಸಿದ್ಧಾಂತಶಿಖಾಮಣಿಯನ್ನು ನಿತ್ಯ ದ್ವಿಸಂಧ್ಯಾಕಾಲಗಳಲ್ಲಿ ಸಾಮೂಹಿಕ ಪಾರಾಯಣ ಹಾಗೂ ಶಿಷ್ಯವೃಂದದ ಮಧ್ಯೇ ಪಾಠಪ್ರವಚನ ಸಕ್ರಮವರಿತು ಪ್ರತಿ ಮಠ ಮಂದಿರಗಳಲ್ಲಿ ಗುರುವರ್ಗದವರು ತಪಸ್ಸಿನಂತೆ ಆಚರಿಸುತ್ತಾ; ಗೃಹಸ್ಥರು ಸಹ ಎಚ್ಚೆತ್ತುಕೊಳ್ಳುವಂತೆ, ಆದರಪೂರ್ವಕ, ಸೂರ್ಯಚಂದ್ರರು ಜಗತ್ತನ್ನು ಬೆಳಗುವಪರಿವಿಗೂ, ಗಂಗಾ ಪ್ರವಾಹದಂತೆ ಸದ್ಧರ್ಮ ಪ್ರಚಾರ ವ್ರತವನ್ನು ಅವ್ಯಾಹತವಾಗಿ ನೆರವೇರಿಸುತ್ತಾ,

**ಸರ್ವೇಜನಾಃ ಸುಖಿನೋಭವಂತು ।**
**ಲೋಕಾ ಸಮಸ್ತಾಸನ್ಮಂಗಳಾನಿಭವಂತು ॥**

ಎಂಬ ಶ್ರೇಷ್ಠ ಧ್ಯೇಯದೊಂದಿಗೆ, ನಮ್ಮ ಮನಸ್ಸಾಕ್ಷಿಗೆ ಆಪ್ಯಾಯನಕರವಾಗು ವಂತೆ ಶ್ರೀ ಜ|| ಪಂಚಾಚಾರ್ಯರು ನಲಿದೊಲಿಯುವಂತೆ, ಶಿವನು ಸಂಪ್ರೀತ ನಾಗುವಂತೆ, ಬೋಧಕರೂ ಬೋಧ್ಯರಾದ ಸುಕೃತಶಾಲಿಗಳೂ ಅಮೃತಸ್ವರೂಪ ರಾಗುವ, ಏಕೈಕ ಉದ್ದೇಶದಿಂದ, ಈ ಸಚ್ಛಾಸ್ತ್ರದಲ್ಲಿ ಅದ್ವಿತೀಯ ಪರಿಣತರಾದ ಶಿವಾಚಾರ್ಯರೂ,ಸಂಯಮಿಗಳೂ, ಸುಜ್ಞಾನಿಗಳಾದ ಸದ್ಗೃಹಸ್ಥರೂ ಸಿದ್ಧಾಂತ ಶಿಖಾಮಣಿಯ ಇಪ್ಪತ್ತೊಂದು ಪರಿಚ್ಛೇದಗಳಿಂದ ಕೂಡಿರುವ **೧೩೩೦ಶ್ಲೋಕ ಗಳನ್ನು ಕಂಠಪಾಠಮಾಡಿಕೊಂಡು** ಸುಂದರವಾಗಿಹಾಗೂ ಅರ್ಥಗರ್ಭಿತವಾಗಿ ವ್ಯಾಖ್ಯಾನ ಮಾಡುತ್ತ ಸಂಕೀರ್ತಿಸುತ್ತಾ ಜನಸಾಮಾನ್ಯರನ್ನು ಈ ಷಟ್ಸ್ಥಲ

ಸಿದ್ಧಾಂತದಲ್ಲಿ ಪರಿಣತರನ್ನಾಗಿ ಮಾಡುವ, ವ್ರತನಿಷ್ಠರಾಗಿ ಶ್ರಮಿಸಿದರೆ, ಆಗ ಸರ್ವರ ಜನ್ಮ ಸಾರ್ಥಕವಾಗುವುದು. ಶ್ರೀ ಜ॥ ಪಂಚಾಚಾರ್ಯರು ಸಂಪ್ರೀತರಾಗುವರು. ಮಹಾಚಾರ್ಯರ ಆಜ್ಞೆ **"ಸ್ಥಾಪ್ಯತಾಂ ಸರ್ವಲೋಕೇಷು"** ಎಂಬ ಅವರ ಹೃದಯಾಂತರಾಳದಿಂದ ಘುಮ್ಮಿಕ್ಕಿದ ಅಧಿಕೃತ ಕಟ್ಟಾಜ್ಞೆಯನ್ನು ಕಿಂಚಿತ್ ಆಚರಿಸಿದಂತಾಗುತ್ತೆ. ಈ ಹಿಂದೆ, ಶಿವನು ತನ್ನ ಒಡ್ಡೋಲಗದಲ್ಲಿ ರೇಣುಕರಿಗೆ ಆಜ್ಞೆ ಈಯುವಾಗ **"....ಸ್ಥಾಪಯಿಷ್ಯಸಿ ಭೂಲೋಕೇ"** ಎಂಬುದು ಸೌಮ್ಯರೀತಿಯದು. ಆದರೆ ಆಚಾರ್ಯರದು ಅಧಿಕೃತವಾಣಿ ಎಂಬುದು ಸ್ಪಷ್ಟವಿರುತ್ತೆ, ಇತ್ಯಾಧಿ ಕಾರಣಗಳಿಂದ ನಮ್ಮ ಪರಮಾಚಾರ್ಯರ ಆದೇಶವನ್ನು ನಾವು ಅಷ್ಟೇ ತೀವ್ರ ಭಾವದಿಂದ ಮನಸ್ಕರಿಸಿ, ಆಚರಿಸಿ ಮಹಾಚಾರ್ಯರ ದಿವ್ಯ ಕೃಪಾನುಗ್ರಹಕ್ಕೆ ಪಾತ್ರರಾಗಬೇಕು. ಇದು **ನಮ್ಮ ಕರ್ತವ್ಯವಿರುತ್ತೆ.**

**ಶಿವಜ್ಞಾನಾಮೃತಂ ಪೀತ್ವಾ ಭಕ್ತ್ಯಾಪರವಶಂ ಗತಃ।**
**ಅಂತರ್ನಿವಿಷ್ಟಚಿತ್ತಸ್ಯ ಕರ್ಮಣಾ ತಸ್ಯ ಕಿಂ ಭವೇತ್ ॥**

**ಪರಿತ್ಯಜ್ಯಾಥ ಮಹತಾ ಹಂಕಾರಂ ಸ ಶಿವೋ ಭವೇತ್ ।**
**ಊರ್ಮಿವರ್ಗಂ ಭಯಂ ಯಸ್ಯ ನ ಸ ಮುಕ್ತೋ ನ ಸಂಶಯಃ ॥**

(ಸೂಕ್ಷ್ಮ; ಪಾರಮೇಶ್ವರಾಗಮಗಳು)

ಲಂಕಾಧಿಪನಾದ, ದಶಕಂಠ ಶ್ರೀ ರಾವಣೇಶ್ವರನು ಶ್ರೀರಾಮಬಾಣಕ್ಕೆ ತತ್ತರಿಸಿ ನೆಲಕ್ಕುರುಳಿದನು. ಮಹಾ ಶಿವಭಕ್ತನಾದ ರಾವಣಾಸುರನನ್ನು ಕೊಲ್ಲಲು ಶ್ರೀರಾಮನಿಂದ ಸಾಧ್ಯನಾಗಲಿಲ್ಲ. ಇದಕ್ಕೆ ಕಾರಣವೇನೆಂದು ಶ್ರೀರಾಮ ವಿಭೀಷಣನನ್ನು ಪ್ರಶ್ನಿಸಲು, ವಿಭೀಷಣನು ನಮ್ಮಣ್ಣನು ಶಿವಪೂಜಾ ದುರಂಧರ. ಇವನ ಶಿವಭಕ್ತಿಗೆ ಶಿವಪೂಜಾ ದುರಂಧರ ಶ್ರೀ ರಾವಣೇಶ್ವರ, ಇವನ ಶಿವಭಕ್ತಿಗೆ ಮೆಚ್ಚಿದ ಶಿವನು, ಅವನ ಹೃದಯದಲ್ಲಿ, ಬಂಗಾರದ ಅಮೃತ ಕಳಸವನ್ನು ಸ್ಥಾಪಿಸಿರುವ ಅಂಶವನ್ನರುಹಿದನು. ವಜ್ರದಷ್ಟು ಕಠಿಣವಾಗಿರುವ ಅವನ ಎದೆಯನ್ನು ಸೀಳಿ, ಅಮೃತ ಕಳಸವನ್ನು ಹೊರ ತೆಗೆದರೆ ಸುಲಭವಾಗಿ ದಶಕಂಠನನ್ನು ಸಂಹರಿಸಬಹುದು ಎಂದು ವಿಭೀಷಣನು ತಿಳಿಸಿದನು. ಇದು ಸುಲಭದ ಕೆಲಸವಲ್ಲ ವೆಂಬ ವಾರ್ತೆಯನ್ನು ಕೇಳಿ ಶ್ರೀರಾಮ ಮತ್ತಷ್ಟು ವ್ಯಥೆಯಿಂದ,

**ತತೋ ಯುದ್ಧ ಪರಿಶ್ರಾಂತಂ ಸಮರೇ ಚಿಂತಾಯಾಸ್ಥಿತಂ।**
**ರಾವಣಂ ಚಾಗ್ರತೋ ದೃಷ್ಟ್ವಾ ಯುದ್ಧಾಯ ಸಮುಪಸ್ಥಿತಂ॥**

ಇಂತು ಚಿಂತಾಕ್ರಾಂತನಾದ ಶ್ರೀರಾಮ ಶಿವನನ್ನು ಭಕ್ತ್ಯಾ ಪ್ರಾರ್ಥಿಸಲು; ಶ್ರೀ ಅಗಸ್ತ್ಯಮಹರ್ಷಿಗಳು ಆಕಾಶದಲ್ಲಿ ದರ್ಶನವಿತ್ತು—

**ರಾಮರಾಮ ಮಹಾ ಬಾಹೋ ಶ್ರುಣುಗುಹ್ಯಂ ಸನಾತನಂ ।**
**ಆದಿತ್ಯ ಹೃದಯಂ ಪುಣ್ಯಂ ಸರ್ವ ಶತೃ ವಿನಾಶನಂ ।**
**ಜಯಾವಹಂ ಜಪೇ ನಿತ್ಯಮಕ್ಷಯ್ಯಂ ಪರಮಂ ಶಿವಂ ॥**

ಶ್ರೀರಾಮನ ಪ್ರಾರ್ಥನಾನುಸಾರ ಶ್ರೀ ಅಗಸ್ತ್ಯಮಹರ್ಷಿಗಳು **"ಆದಿತ್ಯ ಹೃದಯ"** ವೆಂಬ ಮಹಾ ಶಿವಮಂತ್ರವನ್ನು, ತಮ್ಮ ಆದಿಗುರು ಸಾರ್ವಭೌಮ ಶ್ರೀ ಜಗದ್ಗುರು ರೇಣುಕಾಚಾರ್ಯರ ಶ್ರೀಪಾದಸ್ಮರಣೆಯೊಂದಿಗೆ, ಶ್ರೀರಾಮನಿಗೆ ರಣರಂಗದಲ್ಲಿ ಬೋಧಿಸಿ, ಹೇ ರಾಮಾ! ಈ ಮಂತ್ರವನ್ನು ನೀನು ಭಕ್ತ್ಯಾ ವಿಧಿವತ್ತಾಗಿ ಉಚ್ಚರಿಸುವುದರಿಂದ ಆಧಿತ್ಯಮಂಡಲ ಮಧ್ಯಾಂತರ್ವರ್ತಿಯಾದ ಪರಶಿವನ ಅನುಗ್ರಹದಿಂದ ನಿನ್ನ ಶತೃನಾಶವಾಗಿ ಜಯವೇರ್ಪಡುವುದೆಂದು ಆಶೀರ್ವದಿಸಿದರು. ಶೃತಿಗಳು ಸೂರ್ಯಮಂಡಲದ ಮಧ್ಯಾಂತರ್ವರ್ತಿ, ಯಾರೆಂಬ ಬಗೆಗೆ—

**ಯ ಏಷಾಂತರಾದಿತ್ಯೇ । ಹಿರಣ್ಮಯಃ ಪುರುಷೋ ದೃಶ್ಯತೇ ॥**

ಆದಿತ್ಯನ ಹೃನ್ಮಂಡಲದಲ್ಲಿ, ತ್ರಿಮೂರ್ತ್ಯಾತ್ಮಕನಾಗಿ ಪ್ರಜ್ವಲಿಸುವ ಮಾರ್ತಾಂಡನನ್ನು, **"ಪರಶಿವನೆಂದು"** ಶೃತಿಗಳು ಸ್ತುತಿಸುತ್ತಲಿವೆ. ಮತ್ತೀದೆ ವಿಷಯವನ್ನು **ಶ್ರೀಪತಿಪಂಡಿತರು** ತಮ್ಮ ಘನ **"ಶ್ರೀಕರಭಾಷ್ಯದಲ್ಲಿ"**, ಪ್ರಫುಲ್ಲಿತಭಾವದಿಂದ ಚರ್ಚಿಸಿ, ಅನುವಾದಿಸಿ, ಸಂದೇಹಕ್ಕೆಡೆಇಲ್ಲದಂತೆ **"ಹಿರಣ್ಮಯಃ ಪುರುಷೋ ದೃಶ್ಯತೇ"** ಯೆಂಬ **ಮಂತ್ರಕ್ಕೆ ತ್ರ್ಯಂಬಕನಾದ ಮಹಾ ರುದ್ರಾಂಶಪೂರಿತನಾದ ಪರಶಿವನೆಂದು, ಸುಸ್ಪಷ್ಟವಾಗಿ** ಬಂಧುರವಾಗಿ ಸ್ಥಿರಪಡಿಸಿರುವರು.

ಶ್ರೀ ವೈಷ್ಣವರು ಸೂರ್ಯಮಂಡಲ ಮಧ್ಯಾಂತರ್ವರ್ತಿ, ಶ್ರೀಮನ್ನಾರಾಯಣನೆಂದು ಹೇಳುತ್ತಲಿದ್ದಾರೆ. ನಾರಾಯಣ ಲೋಕಸಂರಕ್ಷಕಮೂರ್ತಿ. ಸತ್ವಗುಣ

ವಿಶಿಷ್ಟಶೋಭಿತ. ನಾರಾಯಣನು ಜನನ ಮರಣಗಳಿಂದ ದಶಾವತಾರಕ್ಕೆ ಒಳಗಾಗಿದ್ದಾನೆ. ವಿಷ್ಣು ಕ್ಷತ್ರಿಯನಿರುವನು ಇದರಂತಲ್ಲದೆ ಮಹಾರುದ್ರಾಂಶದಿಂದ ಪ್ರಜ್ವಲಿಸುವ ಹಿರಣ್ಮಯ ಮಹಾ ಪುರುಷ ತ್ರಿಮೂರ್ತಿಗಳಿಗೆ ಅತೀತನಾದ, ಮಾರ್ತಾಂಡನೆನಿಸಿದ ತ್ರ್ಯಂಬಕ, **ಪರಶಿವನೆನಿಸಿದ ಪರಬ್ರಹ್ಮ** ಮಹಾ ರುದ್ರ ಬ್ರಾಹ್ಮಣನೆಂದು ಶೃತಿ ಘೋಷಿಸುತ್ತಲಿದೆ. ಸೂರ್ಯಮಂಡಲ ಮಧ್ಯಾಂತವರ್ತಿಯೆಂದು, ಆಗಮಾಮ್ನಾಯಾದಿಗಳು ಘೋಶಿಸುತ್ತಲಿವೆ.

ಆದಿತ್ಯ ಹೃದಯ ಮಂತ್ರ ಪುನಶ್ಚರಣೆಯಿಂದಾಗಿ, ಶ್ರೀರಾಮ, ಮಾರನೆ ದಿವಸ ಮಹಾಯುದ್ಧದಲ್ಲಿ ರಾಮನಾಮಾಂಕಿತ ಬಾಣಪ್ರಯೋಗದಿಂದ ದಶಕಂಠ ರಾವಣನನ್ನು ನೆಲಕ್ಕುರುಳಿಸಿದನು.

---

## ವಿಭೀಷಣಾಭೀಷ್ಟ ವರಪ್ರದಾನಂ (ಸಿ.ಶಿ.ಪರಿ. ೨೧)

ರಣರಂಗದಲ್ಲಿ ಕಂಠಗತ ಪ್ರಾಣದಿಂದ ಬಿದ್ದಿರುವ ರಾವಣಾಸುರನನ್ನು ಪತ್ನಿ, ಪತಿವ್ರತೆಯರ ಶ್ರೇಣಿಯಲ್ಲಿ ಚಿರಸ್ಮರಣೀಯಳಾದ ಮಂಡೋದರಿ, ದುಃಖ ತಪ್ತಳಾಗಿ ಪತಿಯನ್ನು ಶೈತ್ಯೋಪಚಾರಗಳಿಂದ ಉಪಚರಿಸುತ್ತಿರುವಾಗ ರಾವಣನು ಶ್ರೀರಾಮರ ಹಿಂಬದಿಯಲ್ಲಿ ನಿಂತಿರುವ, ತಮ್ಮ ವಿಭೀಷಣನನ್ನು ಸಮಿಪಕ್ಕೆ ಕರೆದು,

**ಸ ತು ರಾಮ ಶರಾವಿದ್ಧಃ ಕಂಠಸ್ಖಲಿತ ಜೀವಿತಃ ।**
**ಅವಶಿಷ್ಟಂ ಸಮಾಲೋಕ್ಯ ಮಾಮುವಾದೀತ್ ಸುದುಃಖಿತಃ ॥**

**ವಿಭೀಷಣ ವಿಶೇಷಜ್ಞಃ ಮಹಾಬುದ್ಧೇ ಸುಧಾರ್ಮಿಕ ।**
**ಅವಶಿಷ್ಟೋಽಸಿ ವಂಶಸ್ಯ ರಕ್ಷಸಾಂ, ಭಾಗ್ಯಗೌರವಾತ್ ॥**

**ನವಕಂ ಲಿಂಗಕೋಟೀನಾಂ ಪ್ರತಿಷ್ಠಾಪ್ಯ ಮಹಿಸ್ಥಲೇ ।**
**ಇತಿ ಸಂಕಲ್ಪಿತಂ ಪೂರ್ವಂ ಮಯಾ ತದವಶಿಷ್ಯತೇ ॥**

**ಕೋಟಿಷಟ್ಕಂತು ಲಿಂಗಾನಾಂ ಮಯಾ ಸಾಧು ಪ್ರತಿಷ್ಠಿತಂ ।**
**ಕೋಟಿತ್ರಯಂ ತು ಲಿಂಗಾನಾಂ ಸ್ಥಾಪನೀಯ ಮತಸ್ತ್ವಯಾ॥**

(ಶ್ಲೋ. ೨೧,೨೨,೨೪,೨೫)

ಒಡಹುಟ್ಟಿದ ತಮ್ಮನ ಕೈಹಿಡಿದು ನಾನು ಸ್ಥಾಪಿಸಿ ಮುಗಿಸಬೇಕಾದ

ಉಳಿದ ಮೂರು ಕೋಟಿ ಶಿವಲಿಂಗಗಳನ್ನು ಲಂಕೆಯಲ್ಲಿ ಸ್ಥಾಪಿಸುವವನಾಗಿ ದುಸುರಿ, "ಶಿವ ಶಿವ ಓಂ ನಮಃ ಶಿವಾಯ" ಮಂತ್ರೋಚ್ಛಾರಣೆಯೊಂದಿಗೆ ಶಿವೈಕ್ಯನಾದನು. ರಾಜ ಮಹಾರಾಜರೂ, ಚಕ್ರವರ್ತಿಗಳೂ ಅಂತ್ಯದಲ್ಲಿ ಮೃತ್ಯುವಿಗೆ ತುತ್ತಾಗಿ ಹಿಡಿ ಬೂದಿಯಾಗಿರುವುದು ಲೋಕ ತಿಳಿದ ವಿಷಯ. "ಮೃತ್ಯುಃ ದೇಹೇನ ಸಹಜಾಯತೇ" ಶಿಶು ಭೂಪತನವಾಗುತ್ತಲೇ ಅದರ ಹೆಗಲೇರಿ ಮೃತ್ಯು ಸಹ ಜನಿಸುತ್ತೆ, ಹೆಬ್ಬುಲಿಯಂತೆ ಹೆಗಲೇರಿರುವ ಮೃತ್ಯು, ಯಾವಾಗ ಅವನ ಮೇಲೆ ಹೌ ಹಾರಿ ನುಂಗುತ್ತೋ ತಿಳಿಯದು. ಆದ್ದರಿಂದ ಮಾನವ ಎಚ್ಚೆತ್ತು ಧಾರ್ಮಿಕ ವೃತ್ತಿಯನ್ನು ಕ್ರಮೇಣ ಬೆಳಸುತ್ತಾ, ದಾನ ಧರ್ಮ ಪರೋಪಕಾರಗಳೊಂದಿಗೆ, ಶ್ರೀಗುರು ಪಾದಸೇವೆ, ಹರಪೂಜೆ, ನಿತ್ಯ ದ್ವಿಸಂಧ್ಯಾಕಾಲಗಳಲ್ಲಿ, ತನ್ನ ಅಂಗದ ಮೇಲಿರುವ ಇಷ್ಟಲಿಂಗಾರಾಧನೆಗಳಲ್ಲಿ ತತ್ಪರನಾಗಿರಬೇಕು. ಯಾಕೆಂದರೆ—

**ಯಮಸ್ಯ ಕರುಣಂ ನಾಸ್ತಿ । ತಸ್ಮಾತ್ ಜಾಗ್ರತ ಜಾಗ್ರತಃ ॥**

ಎಂದು ಶ್ರುತಿವಾಣಿ ನಮ್ಮನ್ನು ಎಚ್ಚರಿಸುತ್ತಲಿದೆ.

ಕೆಲವು ವರ್ಷಗಳಾದನಂತರ ವಿಭೀಷಣ ಚಕ್ರವರ್ತಿಗೆ ಅಣ್ಣನ ಪ್ರತಿಜ್ಞೆ ನೆರವೇರಿಸುವುದೆಂದು? ಎಂಬ ಮನೋವ್ಯಥೆ ಸರ್ವತಾಕಾರವಾಗಿ ಬೆಳೆಯುತ್ತಿತ್ತು. ಅಣ್ಣನು ಶಿವಭಕ್ತಾಗ್ರೇಸರನಾದ್ದರಿಂದ ಲೀಲಾಜಾಲವಾಗಿ ತನ್ನ ರಾಜಧಾನಿಯಲ್ಲಿ ಆರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಿರುವನು. ನನ್ನಲ್ಲಿ ಅಂಥಾ ಶಿವಭಕ್ತಿ ಇಲ್ಲವಲ್ಲಾ ಏನುಮಾಡುವುದೆಂದು ಹಗಲಿರುಳು ಶಿವನನ್ನು ಧ್ಯಾನಿಸುತ್ತಲಿದ್ದನು.

ಅಣ್ಣನ ವಾಕ್ಯ ಪರಿಪಾಲನಾರ್ಥ ಮೂರು ಕೋಟಿ ಲಿಂಗವನ್ನು ತನ್ನ ರಾಜಧಾನಿಯಲ್ಲಿ ಪ್ರತಿಷ್ಠಿಸುವ ಬಗೆಗೆ ಶಿವನನ್ನು ಕುರಿತು ಅನೇಕ ವಿಧವಾಗಿ ಪ್ರಾರ್ಥಿಸುತ್ತಿದ್ದನು.

ಇದೇ ಚಿಂತನೆಯಿಂದಾಗಿ ನಿದ್ರೆಬಾರದೆ, ಒಂದುದಿವಸ ಮಧ್ಯರಾತ್ರಿ ಎದ್ದು ಅರಮನೆಯ ಮಹಡಿಯ ಹೊರಾಂಗಣದಲ್ಲಿ ಅಡ್ಡಾಡುತ್ತಾ ಶಿವನೇ ಕೃಪೆತೋರಿ ರಾವಣೇಶ್ವರನ ಸತ್ಸಂಕಲ್ಪವನ್ನು, ನನ್ನಿಂದ ಈಡೇರಿಸುವಂತೆ ಅನುಗ್ರಹಿಸು, ಭಕ್ತಾಭೀಷ್ಟ ವರಪ್ರದ ನೀನಲ್ಲವೇ ! ದಯಾನಿಧೇ ನನ್ನಭೀಷ್ಟವನ್ನು ನೆರವೇರಿಸೆಂದು, ವಿವಿಧ ರೀತಿಯಲ್ಲಿ ಆ ನಿಶೆಯಲ್ಲಿ ಗಾಢ ಭಕ್ತಿಪೂರ್ವಕ ಶಿವನನ್ನು ಪ್ರಾರ್ಥಿಸಿದನು,

**ಚಿಂತಾಮಣಿಃ ಪ್ರಸನ್ನಾನ್ನಾಂ । ಶ್ರೀಕಂಠಃ ಪರಮೇಶ್ವರಃ ॥**

ಎಂಬಂತೆ, ಅಂದಿನ ಬ್ರಾಹ್ಮೀ ಮುಹೂರ್ತದಲ್ಲಿ ನಭೋಮಂಡಲದಲ್ಲಿ ಅಪೂರ್ವತರ ತೇಜಸೊಂದನ್ನು ವಿಭೀಷಣನು ಕಂಡನು. ಸುಜ್ಞಾನಿ, ವಿದ್ಯಾವಂತನಾದ ವಿಭೀಷಣನು ಸಹಜವಾಗಿಯೇ, ಧರ್ಮಜ್ಞನೂ, ಭಾವಜ್ಞನೂ, ಕೃತಜ್ಞನೂ ಆದ್ದರಿಂದ,ಅದು"ಶಿವಜ್ಯೋತಿ"ದರ್ಶನವಾಯಿತೆಂದು ಹರ್ಷಿಸಿ,ಸ್ತುತಿಸಿ,ಭೋ! ದೇವಾದಿದೇವ, ಕೃಪೆದೋರಿ ದರ್ಶನವೀಯಬೇಕೆಂದು ಬದ್ಧಾಂಜಲಿ ಪುಟದಿಂದ ಶಿರದಲ್ಲಿಟ್ಟ ಕರಗಳಿಂದ ನಮಸ್ಕರಿಸಲು, ಕೃಪಾನಿಧಿ, ಆ ಪರಂಜ್ಯೋತಿ ಮಂಡಲದಿಂದ ಮಹಾ ಗುರು, ಶ್ರೀರೇಣುಕಾಚಾರ್ಯರು ದಿವ್ಯ ಮಂತ್ರಮಯ ದೇಹಧಾರಿ ರೂಪದಿಂದ ಅಂತರಿಕ್ಷದಿಂದಲೇ ದರ್ಶನವಿತ್ತು, ವಿಭೀಷಣನನ್ನು ಅನುಗ್ರಹಿಸಿದರು.

ಭಾವಜ್ಞನೂ ಕೃತಜ್ಞನೂ ಆದ ವಿಭೀಷಣ ಚಕ್ರವರ್ತಿಯ ಪ್ರಾರ್ಥನಾನುಸಾರ ಭಕ್ತಾಭೀಷ್ಟವರಪ್ರದರಾದ ಶ್ರೀ ಜ|| ರೇಣುಕಾಚಾರ್ಯರು, ಕೃಪೆಯಾ ಭುವಿಗಿಳಿಯಲು ಸಂಪ್ರೀತನಾದ ಲಂಕೇಶನು, ಸಮಸ್ತ ರಾಜಮರ್ಯಾದೆಗಳೊಂದಿಗೆ ಭಕ್ತಿಪೂರ್ವಕ ತನ್ನ ಅರಮನೆಗೆ ಬರಮಾಡಿಕೊಂಡನು.

**ಸ್ವಚ್ಛಂದಾಚಾರ ರಸಿಕಃ ಸ್ವೇಚ್ಛಾ ನಿರ್ಮಿತ ವಿಗ್ರಹಃ ।**
**ಆಸಸಾದ ಪುರೀಂ ಲಂಕಾಂ ರೇಣುಕೋ ಗಣನಾಯಕಃ ॥**

**ಸಮಾಗತಂ ಮಹಾಭಾಗಂ ಸರ್ವಾಗಮ ವಿಶಾರದಂ ।**
**ವಿಭೀಷಣಃ ಸಮಾಲೋಕ್ಯ ಸೌಧಂ ಪ್ರಾವೇಶಯನ್ನಿಜಂ ॥**

(ಶ್ಲೋ. ೧, ೨)

ಮಹಾಚಾರ್ಯರು ಅರಮನೆಯೊಳಗೆ ಮಂದಗಮನದಿಂದ ಮುನ್ನಡೆಯುತ್ತಾ, ಸುತ್ತಲೂ ಕರಜೋಡಿಸಿ ಕೈಮುಗಿಯುತ್ತಾ ಜಯಕಾರದೊಂದಿಗೆ ಭಕ್ತವೃಂದ ಸ್ವಾಗತಿಸಲು, ಸುತ್ತಲೂ ತಮ್ಮ ದಿವ್ಯ ಕಟಾಕ್ಷವನ್ನು ಬೀರಿ, ಅಭಯಹಸ್ತದಿಂದ ಆಶೀರ್ವದಿಸಿದರು. ವಿಭೀಷಣನು ವಿನಯಾನ್ವಿತನಾಗಿ ಮಹಾಚಾರ್ಯರಿಗೆ–

**ಭದ್ರಾಸನೇ ಮಹಾರಮ್ಯೇ ನಿವೇಶ್ಯ ಗಣನಾಯಕಂ ।**
**ಅರ್ಘ್ಯಪಾದ್ಯಾದಿಭಿಃ ಸರ್ವೈರುಪಚಾರೈರ ಪೂಜಯತ್॥**

ತನ್ನ ಒಡ್ಡೋಲಗದಲ್ಲಿ ನವರತ್ನ ಖಚಿತವಾದ ಬಂಗಾರದ ಭದ್ರಾಸನಾಸೀನರಾದ ಮಹಾಚಾರ್ಯರನ್ನು ಅನನ್ಯ ಭಕ್ತಿಭಾವದಿಂದ ನಮಸ್ಕರಿಸಿದನು. ಅರ್ಘ್ಯಪಾದ್ಯಾದಿಗಳಿಂದ ವಿಭೀಷಣ ಚಕ್ರವರ್ತಿ ಪತ್ನೀ ಸಮೇತ ಮಹಾಚಾರ್ಯರ

ಶ್ರೀಪಾದಪೂಜೆಯನ್ನು ವಿಧಿವತ್ತಾಗಿ ನೆರವೇರಿಸಿ, ಅತ್ಯಂತ ಭಕ್ತಿಭಾವದಿಂದ ಕೈಜೋಡಿಸಿ ಮುಗಿಯುತ್ತಾ ಶಿರಭಾಗಿ ನಮ್ರಭಾವದಿಂದ ಮಹಾ ಆಚಾರ್ಯರ ಪದತಲದಲ್ಲಿ ನಿಂತನು.

**ಪೂಜಿತೇನ ಪ್ರಸನ್ನೇನ ರೇಣುಕೇನ ನಿರೂಪಿತಃ ।**
**ನಿಷಸಾದ ತದಭ್ಯಾಶೇ ಸ ನಿಜಾಸನಮಾಶ್ರಿತಃ ॥**

ಮಹಾಚಾರ್ಯರಿಂದ ಆಜ್ಞಾಪಿತನಾದ ವಿಭೀಷಣನು ಉಚಿತಾಸನದಲ್ಲಿ ಕುಳಿತನು; ಶ್ರೀಲಂಕೆಗೆ ಶಿವನೇ ಮಹಾಚಾರ್ಯರ ರೂಪದಲ್ಲಿ ಕರುಣೆಯಿಂದ ದಯಮಾಡಿದ್ದರಿಂದ ನಾವೆಲ್ಲಾ ಧನ್ಯರಾದೆವು. ಲಂಕೆಯೂ ಸಹ ಪವಿತ್ರವಾಯಿತು. ರಾವಣಾಸುರನ ಅಂತ್ಯದಭೀಷ್ಟ ಹಾಗೂ ನನ್ನ ಪ್ರಾರ್ಥನೆ ಶ್ರೀಗಳಿಂದ ನೆರವೇರುವುದೆಂಬ ವಿಶ್ವಾಸ ವಿಭೀಷಣನಿಗೆ ಉಂಟಾಯಿತು. ಆಗ ಪ್ರಸನ್ನ ಮುಖದಿಂದ ಮಂಡಿಸಿರುವ ಗುರುದೇವನಿಗೆ ಮತ್ತೊಮ್ಮೆ ನಮಸ್ಕರಿಸಿ ಬಿನ್ನೈಸಿಕೊಳ್ಳುತ್ತಾ ಭೋ ಆಚಾರ್ಯವರ್ಯ!—

**ಸುಕೃತೇ ಪರಿಪಕ್ವೇಹಿ । ಸ್ವಯಂ ಸಿದ್ಧ್ಯತಿ ವಾಂಛಿತಂ ॥**

ಸುಕೃತ ಹಣ್ಣಾದಾಗ, ಇಷ್ಟಾರ್ಥಗಳು ಸಿದ್ಧಿಸುವುವು. ಅದರಂತೆ ತಮ್ಮ ಆಗಮನದಿಂದ ನನ್ನ ಎಲ್ಲಾ ಅಭೀಷ್ಟಗಳು ಹೂವಿನಮಾಲೆ ಯೆತ್ತಿದಹಾಗೆ ನೆರವೇರುವುವು ಎಂದು ನುಡಿದು ದೇವಾ !

**ರಾವಣೋ ಹಿ ಮಮ ಭ್ರಾತಾ । ಶಿವಭಕ್ತ ಶಿಖಾಮಣಿಃ ॥**

ನನ್ನ ಅಣ್ಣ ರಾವಣಾಸುರನು ಶಿವಪೂಜೆಯಲ್ಲಿ ದುರಂಧರನು. ಅಪ್ರತಿಹತ ಪರಾಕ್ರಮಿ ಹೀಗಿದ್ದರೂ ಸ್ವಚಾರಿತ್ರ್ಯವಿಪರ್ಯಾಸದಿಂದ. ಶ್ರೀರಾಮಚಂದ್ರನ ಬಾಣಕ್ಕೆ ತುತ್ತಾದನು. ಲಂಕೆಯ ರಣರಂಗದಲ್ಲಿ ಅಸು ನೀಗುವುದಕ್ಕೆ ಮೊದಲು ನನ್ನನ್ನು ಹತ್ತಿರಕ್ಕೆ ಕರೆದು ನನ್ನ ಕರ ಹಿಡಿದು ಎದೆಯ ಮೇಲಿರಿಸಿ, ಧರ್ಮಿಷ್ಠನಾದ ತಮ್ಮ ; ನಮ್ಮ ರಾಕ್ಷಸವಂಶಕ್ಕೆ ನೀನೊಬ್ಬ ಉಳಿದಿರುವುದು ತುಂಬ ಸಂತೋಷವಿರುತ್ತೆ. ನನ್ನ ಅಂತ್ಯಕಾಲದ ಮನೋ ಇಂಗಿತವನ್ನು ನಿನಗೆ ಈಗ ತಿಳಿಸುತ್ತೇನೆ. ನೀನು ಅದನ್ನು ನೆರವೇರಿಸುವುದು. ಮರಣಶಯ್ಯೆಯಲ್ಲಿ ಮಲಗಿದ್ದ ದಶಕಂಠ ರಾವಣ ಇಂತೆಂದನು.

ವಿಭೀಷಣ ವಿಶೇಷಜ್ಞಃ ಮಹಾಬುದ್ಧೇ, ಸುಧಾರ್ಮಿಕಃ ॥

ಕೇಳು, ನನ್ನ ಸ್ವಯಂಕೃತಾಪರಾಧದಿಂದ ವಿಧಿ ನನ್ನನ್ನು ಈ ಸ್ಥಿತಿಗೆ ಗುರಿ ಮಾಡಿದೆ.

ನವಕಂ ಲಿಂಗಕೋಟೀನಾಂ । ಪ್ರತಿಷ್ಠಾಪ್ಯಮಿಹಸ್ಥಲೇ ।
ಇತಿ ಸಂಕಲ್ಪಿತಂ ಪೂರ್ವಂ । ಮಯಾ ತದವಶಿಷ್ಯತೇ ॥
ಕೋಟಿಷಟ್ಕಂ ತು ಲಿಂಗಾನಾಂ । ಮಯಾ ಸಾಧು ಪ್ರತಿಷ್ಠಿತಂ।
ಕೋಟಿತ್ರಯಂ ತು ಲಿಂಗಾನಾಂ | ಸ್ಥಾಪನೀಯ ಮತಸ್ತ್ವಯಾ ॥

ಧರ್ಮಾಚಾರ್ಯನೇ ಧರ್ಮನಿಷ್ಠಾಗರಿಷ್ಠನೇ ! ತಮ್ಮಾ ವಿಭೀಷಣಾ! ನನ್ನ ಸುಕೃತದ ಫಲವಾಗಿ ಶ್ರೀಲಂಕೆಯಲ್ಲಿ ಒಂಭತ್ತು ಕೋಟಿ ಶಿವಲಿಂಗಗಳನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿ, ಇಲ್ಲಿಯವರೆವಿಗೆ ಆರುಕೋಟಿ ಶಿವಲಿಂಗಗಳನ್ನು ವಿಧಿವತ್ತಾಗಿ ಸ್ಥಾಪಿಸಿರುವೆನು. ಇನ್ನುಳಿದ ಮೂರು ಕೋಟಿ ಶಿವಲಿಂಗಗಳನ್ನು ನೀನು ಸ್ಥಾಪಿಸಿ ನನ್ನ ಪವಿತ್ರವಾದ ಸಂಕಲ್ಪವನ್ನು ಈಡೇರಿಸಬೇಕೆಂದು ತಿಳಿಸಲು, ಅದಕ್ಕೆ ನಾನು ಹಾಗೇ ಆಗಲಿ ಎಂದು ಮಾತು ಕೊಟ್ಟ ಬಳಿಕ, ಅಣ್ಣನು ಶಾಂತನಾಗಿ "ಶಿವ ಶಿವ" ಎಂದು ಶಿವಲಿಂಗ ಸ್ಮರಣೆಯೊಂದಿಗೇ ಶಿವ ಸಾಯುಜ್ಯದ ಮೋಕ್ಷವನ್ನು ಪಡೆದನು. ನಾನು ರಾಮಭಕ್ತನಾದ್ದರಿಂದ ಅಣ್ಣನಷ್ಟು ಶಿವಭಕ್ತಿ ನನ್ನಲ್ಲಿಲ್ಲ. ಶಿವಸ್ವರೂಪಿಗಳಾದ ತಾವು ಕೃಪೆಯಿಂದ ನನ್ನ ಪ್ರಾರ್ಥನೆಯನ್ನು ಲಾಲಿಸಿ ನೆರವೇರಿಸಿ ಆಶೀರ್ವದಿಸಬೇಕೆಂದು ಬಿನ್ನೈಸಿಕೊಂಡನು.

"ಏಕಕಾಲದಲ್ಲಿ ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪಿಸುವ ಆಚಾರ್ಯರು ಇಹದಲ್ಲಿ ಯಾರಿರುವರು? ಈ ಕಾರ್ಯ ಹೇಗೆ ನೆರವೇರಲು ಸಾಧ್ಯ ಎಂಬ ಮನೋವ್ಯಥೆಯಿಂದ ಬಹಳ ನೊಂದೆನು. ನನ್ನ ಸತತ ಪ್ರಾರ್ಥನೆಯಿಂದಾಗಿ ಶಿವನೇ ನಿಮ್ಮ ರೂಪದಲ್ಲಿ ಪ್ರತ್ಯಕ್ಷರಾಗಿರುವುದರಿಂದ ; ಮೂರು ಕೋಟಿ ಶಿವಲಿಂಗಗಳನ್ನು ಏಕಕಾಲದಲ್ಲಿ ಸಂಕಲ್ಪ ಮಾತ್ರೇಣ ಸ್ಥಾಪಿಸುವ ಶಕ್ತಿಮಾನ್ ಪ್ರಭುಗಳು ನೀವಾಗಿರುವಿರೆಂದು ನನ್ನ ಮನಸ್ಸಿಗೆ ಸ್ಫಟಿಕದಂತೆ

ಹೊಳೆಯುತ್ತಲಿದೆ, ಎಂಬುದಾಗಿ ಲಂಕಾಧಿಪತಿ ಶ್ರೀಗುರುಸಾರ್ವಭೌಮರಲ್ಲಿ ಮೃದುಮಧುರ ವಾಣಿಯಿಂದ ನಿವೇದಿಸಿಕೊಂಡನು.

ರಾವಣಾಸುರನ ಅಂತ್ಯ ಸಂಕಲ್ಪ ಅವನನ್ನು ಘೋರ ಪಾಪಾದಿಗಳಿಂದ ದೂರಮಾಡಿ, ಪವಿತ್ರಾತ್ಮನನ್ನಾಗಿಸಿ, ಶಿವಸಾಯುಜ್ಯ ಮೋಕ್ಷಕ್ಕೆ ಅರ್ಹನನ್ನಾಗಿ ಮಾಡಿತು. ಯೆಂಥಾ ಪಾಪಿಯಾಗಿದ್ದರೂ ಸರಿಯೇ, ಅಂತ್ಯಕಾಲದಲ್ಲಿ ಶಿವಸ್ಮರಣೆಯಿಂದ—

ಕ್ಷಿಪ್ರಂ ಭವತಿ ಧರ್ಮಾತ್ಮ । ಶಶ್ವಚ್ಛಾಂತಿಂ ನಿಗಚ್ಛತಿ ॥

ಎಂಬ ಶ್ರೀಕೃಷ್ಣನ ವಾಣಿ ಸ್ಪಷ್ಟವಿರುತ್ತೆ. ಮಾನವ ಜೀವಿತ ಕಾಲದಲ್ಲಿ ತನ್ನ ಆತ್ಮೋದ್ಧಾರಾರ್ಥ ಏನು ಮಾಡಿದನು? ಎಂಬುದು ಮುಖ್ಯವಿರುತ್ತೆ. ಶಿವಭಕ್ತಿ, ಶಿವವ್ರತ ಶಿವಪೂಜೆ, ಶಿವಮಂತ್ರ ಜಪ, ಶಿವಧ್ಯಾನಾದಿಗಳಲ್ಲಿ ಆಸಕ್ತನಾಗದಿದ್ದರೆ ಹಾಗೂ ಸಾಮಾನ್ಯ ಧರ್ಮವೆನಿಸಿದ, ದಾನ ಧರ್ಮ ಪರೋಪಕಾರಾದಿಗಳನ್ನು, ಹರಪೂಜೆ ಗುರುಸೇವೆ, ಗುರುಜಂಗಮರಿಗೆ ಅನಾಥರಿಗೆ ಅನ್ನದಾನ ಅಡಿಗಡಿಗೆ ತನ್ನ ಮನೆಯಲ್ಲಿ ಮನವೊಲಿದು ಮಾಡದಿದ್ದವರು,

ಪರೋಪಕೃತಿಗೈಯ್ಯದೆ । ಸತ್ತವರ್ ಪುಟ್ಟಿದರೇಂ ।
ಪುಟ್ಟವೇ ಸಾಯವೇ ಜಗದೊಳ್ ।
ಅತ್ತಿಯ ಪಣ್ಣೊಳ್ ಎನಿತ್ತೋ ಜಂತುಗಳ್ ॥

ಜನ್ಮ ಅತ್ತಿಹಣ್ಣಿನಂತಾಗಬಾರದು, ಮರಣಕಾಲದಲ್ಲಿ "ಶಿವ ಶಿವ"ಎಂಬ ಮಂತ್ರೋಚ್ಚಾರಣೆ ಸ್ವಾಭಾವಿಕವಾಗಿ ಚಿತ್ತದಲ್ಲಿ ಅಂಕುರಿಸುವಂತಾಗಬೇಕು, ಅವನೇ ಸುಕೃತಶಾಲಿ. ರಾವಣೇಶ್ವರನು ಅಂತ್ಯ ಕಾಲದಲ್ಲಿ ಮೂರುಕೋಟಿ ಶಿವಲಿಂಗಗಳ ಸ್ಮರಣೆಯೊಂದಿಗೆ "ಶಿವ ಶಿವ"ಎಂಬ ಮಂತ್ರೋಚ್ಚಾರಣೆಯೊಂದಿಗೆ ಆಸುನೀಗಿದ್ದಾನೆ. ಎದುರಿಗೆ ನಿಂತಿರುವ ಶ್ರೀವಿಷ್ಣುವಿನ ಅವತಾರಿ ಶ್ರೀರಾಮನ" ನೋಡುತ್ತಾ ರಾಮಬಾಣಕ್ಕೆ ಮೃತನಾದ ರಾವಣೇಶ್ವರನ ಭಾಗ್ಯಕ್ಕೆಣೆಯುಂಟೆ?

ಶ್ರೀ ಜ॥ ರೇಣುಕರಲ್ಲಿ ವಿಭೀಷಣನು ಪ್ರಾರ್ಥಿಸಿಕೊಳ್ಳುತ್ತಾ,—

ಶಿವಶಾಸ್ತ್ರ ವಿಶೇಷಜ್ಞಃ । ಶಿವಜ್ಞಾನ ನಿಧಿರ್ಭವಾನ್ ।
ಆಚಾರ್ಯ ಭಾವಮಾಸಾದ್ಯ । ಮಮ ಪೂರಯ ವಾಂಛಿತಂ ॥

ಭೋ ವಿಶ್ವಾಚಾರ್ಯವರೇಣ್ಯ! ಅಖಿಲಾಗಮಾದಿ ಶಿವಶಾಸ್ತ್ರಕೋವಿದನೂ, ಶಿವಜ್ಞಾನ ಸಮುದ್ರನೂ ಆದ ಗುರುವೇ, ನೀನು ಮೂರು ಕೋಟಿ ಲಿಂಗಗಳನ್ನು ಹಾಗೂ ಗುರುರೂಪವನ್ನು ತಾಳಿ, ನನ್ನ ಮನೋರಥವನ್ನು ನೆರವೇರಿಸಬೇಕೆಂದು ಬಿನ್ನವಿಸಿದನು. ಆಗ ಕೃಪಾಸಮುದ್ರನಾದ ಆಚಾರ್ಯ ಮಹಾದೇವನು ರಾಕ್ಷಸೇಶ್ವರನ ಕೋರಿಕೆಯಂತೆ—

ತತ್ರ ಸಂತುಷ್ಟಚಿತ್ತಸ್ಯ । ಪೌಲಸ್ತ್ಯಸ್ಯೇಷ್ಟ ಸಿದ್ಧಯೇ ।
ಕೋಟಿತ್ರಯಂತು ಲಿಂಗಾನಾಂ । ಯಥಾಶಾಸ್ತ್ರಂ ಯಥಾವಿಧಿ ।
ಶ್ರಿಕೋಟ್ಯಾಚಾರ್ಯ ರೂಪೇಣ । ಸ್ಥಾಪಿತಂ ತೇನ ತತ್‌ಕ್ಷಣೇ ॥

ಸಂತುಷ್ಟಚಿತ್ತನಾದ ಭಗವಾನ್ ಶ್ರೀರೇಣುಕ ಪರಂಜ್ಯೋತಿ, ವಿಭೀಷಣನ ಇಷ್ಟಾರ್ಥಸಿದ್ಧಿಗಾಗಿ, "ಇಚ್ಛಾಮಾತ್ರ ಪ್ರಭೋ ಸೃಷ್ಟಿಃ" ಎಂಬಂತೆ, ಮಹಾದೇವನನ್ನು ಮನಸ್ಸಿನಲ್ಲಿ ಧ್ಯಾನಿಸಿ, ಲಂಕಾಧಿಪನ ಅರಮನೆಯ ವಿಶಾಲವಾದ ಅಂಗಳದಲ್ಲಿ ಸಂಕಲ್ಪ ಮಾತ್ರದಿಂದ ಮೂರು ಕೋಟಿ ಗುರುರೂಪ ಧರಿಸಿ, ತಕ್ಷಣ ಮೂರು ಕೋಟಿ ಶಿವಲಿಂಗಗಳನ್ನು ವಿಧಿವತ್ತಾಗಿ ಸ್ಥಾಪಿಸಿ ಆಚಾರ್ಯರು ಪ್ರತಿ ಲಿಂಗದೆದುರು ಪದ್ಮಾಸನಾ ಸೀನರಾಗಿ, ಗಂಗಾಜಲದಿಂದ ರುದ್ರಾಭಿಷೇಕವನ್ನು ರುದ್ರಮಂತ್ರೋಚ್ಚಾರಣ ಪೂರ್ವಕ ಸಾಂಗವಾಗಿ ನೆರವೇರಿಸಿ, ಪತ್ರಪುಷ್ಪಾದಿಗಳಿಂದ ಅಲಂಕರಿಸಿ, ಧೂಪ ದೀಪ ನೈವೇದ್ಯಾರಾಧನೆಗಳಿಂದ ಪೂಜಿಸಿ ರಾಜೋಪಚಾರ ಮಂತ್ರ ಪಠನೆ ಮಾಡುತ್ತಿರುವಾಗ, ವಿಭೀಷಣಾದಿ ಪ್ರಮುಖರು ಭಕ್ತ್ಯಾಶ್ಚರ್ಯ ಸ್ತಂಭೀಭೂತರಾಗಿ ಆ ಮಂಗಳ ದೃಶ್ಯದಲ್ಲಿ ತಲ್ಲೀನರಾಗಿದ್ದರು. ವಿಭೀಷಣನ ಆನಂದಕ್ಕೆ ಪಾರವೇ ಇಲ್ಲವಾಗಿತ್ತು. ಆಚಾರ್ಯರ ಲಿಂಗಲೀಲಾ ವಿನೋದದಿಂದ ಬೆರಗಾದ ವಿಭೀಷಣ ಚಕ್ರವರ್ತಿ ಅತ್ಯಾನಂದದಿಂದ ಪುರಿದುಂಬಿತನಾಗಿ ಮಹಾಗುರುವಿನ ಅಡಿದಾವರೆಗಳಲ್ಲಿ, ಅವ್ಯಭಿಚಾರಿಣೀ ಭಕ್ತಿಭಾವದಿಂದ ಶಿರಸಾಷ್ಟಾಂಗ ಪ್ರಣಾಮಗಳನ್ನು ಪುನಃ ಪುನಃ ಭಾಷ್ಪಾಂಜಲಿಗಳೊಂದಿಗೆ ಅರ್ಪಿಸುತ್ತಾ, ಬದ್ಧಕಿಂಕರನಾಗಿ ಶಿರಬಾಗಿ ಕೈ ಮುಗಿಯುತ್ತಾ ಮುಗ್ಧಭಾವದಿಂದ ನಿಂತನು. ಆಗ ದಯಾಮಯರಾದ ಶ್ರೀರೇಣುಕಶಿವಾಚಾರ್ಯರು,

ಎಲೈ ವಿಭೀಷಣ! ಹೃದಯದಲ್ಲಿ ನೀನಾವಭಾವವ
ನೋಂತೆಯೋ ಕೇಳ್! ಅದುವೇ ನಿನ್ನೆದುರು ಮೈದೋರಿರು

**ವುದು । ವಿಸ್ಮಯುವೇಕೆ ? ನಿನಗಿಂದೊದವಿ ಕೈಸೇರಿತ್ತು ।**
**ಪರಶಿವ ಭಕ್ತಿ ಸಾಮ್ರಾಜ್ಯಂ ॥**

ಎಂದರುಹಿ. ಪರಮ ವೀರಶೈವ ವಿಶ್ವಧರ್ಮ ಮಹಾ ಸಿದ್ಧಾಂತವನ್ನು, ಲಿಂಗಪೂಜಾವಿಧಾನ ಪ್ರಯೋಜನ ಫಲಗಳನ್ನು ಅದರಿಂದೇರ್ಪಡುವ ನಿತ್ಯ ಸುಖ ಶಾಂತಿ ತೃಪ್ತಿಗಳನ್ನು ಅಖಂಡವಾಗಿ ಮೃದು ಮಧುರ ವಚನಗಳಿಂದ ಬೋಧಿಸಿ ಆಚರಿಸಿ ತೋರಿಸಿದರು. ಇಂತು ಶರಣಾಗತನಾದ ಲಂಕಾಧಿಪತಿಗೆ, ಶ್ರೀ ಶ್ರೀಭುವನ ಗುರುಸಾರ್ವಭೌಮರು ಪ್ರೀತಿಪೂರ್ವಕ, ಏಕೋತ್ತರ ಶತಸ್ಥಲಾತ್ಮಕ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ಸಿದ್ಧಾಂತದ ರಸಾಮೃತವನ್ನು ತೃಪ್ತ್ಯೈ ಉಣಬಡಿಸಿದಾಗ, ಆತ್ಮವಿಚಾರಕ್ಕಧಿಕಾರಿ ಏಕಾಗ್ರಚಿತ್ತದಿಂದ ಶ್ರವಣಮಾಡಿ, ಲಿಂಗಿ ಧರ್ಮದಲ್ಲೂ ಪ್ರಬುದ್ಧನಾದನು. **"ಸುಖತರಮಾರಾಧ್ಯಃ ವಿಶೇಷಜ್ಞಃ॥"** ಎಂಬ ಭರ್ತೃಹರಿ ವಚನದಂತೆ ಏಕಸಂಧಿಗ್ರಾಹಿ ಶ್ರೀ ವಿಭೀಷಣ ಮಹಾ ಆಚಾರ್ಯರ ಬೋಧಾಮೃತವನ್ನು ಪಾನಮಾಡಿ ಸಂತುಷ್ಟನಾದನು.

ಆಗ ಶ್ರೀ ಜ॥ ರೇಣುಕಾಚಾರ್ಯರು,

**ವಿಭೀಷಣೋಽಪಿ ಹೃಷ್ಟಾತ್ಮಾ । ರೇಣುಕಸ್ಯ ಪ್ರಸಾದತಃ ।**
**ಶಿವಭಕ್ತಿ ರಸಾಸಕ್ತಃ । ಸ್ಥಿರಂ ರಾಜ್ಯಮಪಾಲಯತ್ ॥**

ಹೇ ವಿಭೀಷಣಾ ! ನೀನು ಸದಾ ಶಿವಭಕ್ತಿ ಸಾಮ್ರಾಜ್ಯದಿಂದ ರಸಾಸಕ್ತನಾಗಿ, ಸ್ಥಿರಕಾಲ ಸುಖದಿಂದ ರಾಜ್ಯ ಪರಿಪಾಲನೆ ಮಾಡುತ್ತಾ, ಧರ್ಮಜಾಗೃತನಾಗಿರೆಂದು ಹರಸಿ

**ಪ್ರಣತಂ ವಿನಯೋಪೇತಂ । ಪ್ರಹೃಷ್ಟಂ ರಾಕ್ಷಸೇಶ್ವರಂ ॥**
**ಅನುಗೃಹ್ಯ ಸ್ವ ಮಾಹಾತ್ಮ್ಯೈ ।**
**ದ್ರೇಣುಕೋಂತರ್ಹಿತೋ ಭವತ್ ॥**

ತಮ್ಮ ಶಿವಯೋಗ ಬಲದಿಂದ ಅಂತರಿಕ್ಷದಲ್ಲೇರಿ ಜಾಜ್ವಲ್ಯಮಾನವಾಗಿ ಬೆಳಗಿ ಆ ಬೆಳಕಿನ ಅಮೋಘತರ ಕಾಂತಿಯಲ್ಲಿ ಅಂತರ್ಧಾನರಾದರು.

ಶ್ರೀ ವಿಭೀಷಣನೇ ಮೊದಲಾದ ಅಸಂಖ್ಯಾತ ಭಕ್ತಸ್ತೋಮ ಶಿರದಲ್ಲಿಟ್ಟ





ಶ್ರೀ ಜ|| ರೇಣುಕಾಚಾರ್ಯರು ವಿಭೀಷಣನ ಪ್ರಾರ್ಥನೆಯಂತೆ
ಮೂರು ಕೋಟಿ ಗುರುರೂಪವ ಧರಿಸಿ ;
ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದ,
ಸನ್ನಿವೇಶ ಮನೋಹರ ದೃಶ್ಯ.

"ದೀಪೋ ದೀಪಃ ಪ್ರದೀಪನ್ನಃ"

"God's ways are always mysterious."

ಬದ್ಧಾಂಜಲಿ ಭಾವದಿಂದ ಕರಗಳ ಜೋಡಿಸಿ, ಆನಂದಾಶ್ರುಗಳ ಮಧ್ಯೇ ಮಹಾಗುರು ರೇಣುಕರಿಸಿದ ಲಿಂಗಲೀಲಾ ವಿಲಾಸದ ವೈಭವವನ್ನೂ ಶಿವಭಕ್ತಿಯ ಮಾಹಾತ್ಮ್ಯೆಯನ್ನೂ ಅಖಂಡವಾಗಿ, ಸ್ಮರಿಸಿ, ಕೃತಜ್ಞತಾಭಾವದಿಂದ ಅಣ್ಣನಿಗೆ ಕೊಟ್ಟ ಭಾಷೆಯನ್ನು ಅಕ್ಷರಶಃ ನೆರವೇರಿಸಿದ್ದಕ್ಕೆ ತಾನು ಕೃತಕೃತ್ಯನಾದನೆಂದು ಹರ್ಷಿಸಿದನು.

ಶ್ರೀವೈಷ್ಣವರು, ವಿಭೀಷಣನನ್ನು ಆಳ್ವಾರಾದಿಗಳಲ್ಲೊಬ್ಬ ಮಹಾಪುರುಷನೆಂದು ಸ್ಮರಿಸಿ ಪೂಜಿಸುತ್ತಲಿಹರು. ಚಿರಂಜೀವಿ ಮಹಾಪುರುಷರುಗಳಲ್ಲಿ, ಶ್ರೀವಿಭೀಷಣನೊಬ್ಬ ಮಹಾತ್ಮನೆಂದು ನಿತ್ಯ ಪೂಜಿತನಾಗಿಹನು.

---

ಪ್ರಾತಃ ಸ್ಮರಾಮಿ ಭವಭೀತಿ ಹರಂ ಸುರೇಶಂ ।
ಗಂಗಾಧರಂ ವೃಷಭವಾಹನಮಂಬಿಕೇಶಂ ॥

ಖಟ್ವಾಂಗಶೂಲ ವರದಾಭಯ ಹಸ್ತಮೀಶಂ ।
ಸಂಸಾರರೋಗಹರಮೌಷಧ ಮದ್ವಿತೀಯಂ ॥

ಭೋ ಕಲ್ಯಾಣ ಮಹಾಭಾಗ ಶಿವಜ್ಞಾನ ಮಹೋದಧೇ ।
ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷಮಾಂ ಭವರೋಗಿಣಂ ॥

---

## ಮಂಗಳಂ (ಭಾಗ ೧)

**ಮಧುರ ಮಧುರ ಮೇತನ್ ಮಂಗಳಂ ಮಂಗಳಾನಾಂ ॥**

ಅಂದರೆ ಮಧುರವಾದ ಪದಾರ್ಥಗಳಿಗೆಲ್ಲಾ ಅಖಂಡ ಮಾಧುರ್ಯವನ್ನು ನೀಡುವ, ಹಾಗೂ ಮಂಗಳಗಳಿಗೆಲ್ಲಾ ಸರ್ವಮಂಗಳಮಯರೂ ಆದ, ಜಗನ್ಮಂಗಳಮೂರ್ತಿ ತ್ರಿಭುವನಾಚಾರ್ಯವರೇಣ್ಯರಾದ, ಶ್ರೀ ಆದಿ ಜ॥ ರೇಣುಕಾಚಾರ್ಯರಾದಿ ಪಂಚಾಚಾರ್ಯರು, ಅನನ್ಯಭಾವೇನ ಶರಣಾಗತರಾದ ಭಕ್ತರನ್ನು

ಶಿವಜ್ಞಾನ ಬೋಧಸುಧಾರಸದಿಂದ ತೃಪ್ತರನ್ನಾಗಿ ಮಾಡುತ್ತಿದ್ದರು ಇಂತು ಭುವನಾಚಾರ್ಯರಲ್ಲಿ ಅನನ್ಯಭಾವೇನ ಶರಣಾಗತರಾದ ಪುಣ್ಯವಂತರಿಗೆ,

**ಅಕ್ಷಯಂ ಫಲಮಾಪ್ನೋತಿ । ಪ್ರಸನ್ನಃ ಪರಮೇಶ್ವರಂ ॥**

ಎಂಬಂತೆ, ಅಕ್ಷಯವಾದ ಫಲವನ್ನೂ ಅನಂತ ಮಂಗಳವನ್ನೂ ದಯಾಮಯ ನಾದ ಪರಮಾತ್ಮನು ಅನುಗ್ರಹಿಸುವನು. ಶ್ರೀ ಜ॥ ಪಂಚಾಚಾರ್ಯರ ಕೃಪಾ ಶೀರ್ವಾದಂಗಳಿಗೂ ಅರ್ಹರೆನಿಸಿ ಲೋಕೋತ್ತರ ಸುಖ ಸಂಪತ್ತುಗಳಿಗೆ ಭಾಗಿ ಗಳಾಗಿ, ನಿರತಿಶಯಾನಂದವನ್ನು ಪಡೆಯುವರು.

**ಸಕಲ ನಿಗಮವಲ್ಲೀ । ಸತ್ಫಲಂ ಚಿತ್ಸ್ವರೂಪಂ ॥**

ಸಕಲ ವೇದಾಗಮಗಳೆಂಬ ಬಳ್ಳಿಯಲ್ಲಿ ಉದ್ಭವಿಸಿದ, ಚಿಚ್ಛೈತನ್ಯ ಚಿದಾತ್ಮಕವಾದ ರಸಭರಿತ ಫಲ ಶ್ರೀಸಿದ್ಧಾಂತಶಿಖಾಮಣಿಯೆಂದರಿತು ಮಂಗಳವ ಪಾಡುವೆನು. ಇದರ ಕರ್ತೃ ಸದಾ

**ಕೂಜಂತಂ ಶಿವ ಶಿವೇತೀ ಮಧುರಂ ಮಧುರಾಕ್ಷರಂ ।**
**ಆರುಹ್ಯ ಕವಿತಾಶಾಖಾಂ ವಂದೇ ಶಿವಯೋಗಿಶಿವಾಚಾರ್ಯ ಕೋಕಿಲಂ॥**

ಶ್ರೀರೇಣುಕಾಗಸ್ತ್ಯ ಸಂವಾದ ರೂಪ ಷಟ್ಸ್ಥಲ ಸಿದ್ಧಾಂತದ ಸಾರಾಮೃತ ವನ್ನು ಶಿವಯೋಗಿಶಿವಾಚಾರ್ಯರು ತಾವು ಮನದಣಿಯುವಂತೆ ಪಾನಮಾಡಿ ನಿತ್ಯ ತೃಪ್ತರಾಗಿ, ಜಗತ್ತಿನ ಮಾನವಕುಲದ ಉದ್ಧಾರಾರ್ಥ ಶ್ರೀ ಶಿವಸಿದ್ಧಾಂತ ಶಿಖಾಮಣಿಯನ್ನು, ಪದ ಲಾಲಿತ್ಯದಿಂದ ಗಂಭೀರವಾದ ಅರ್ಥಗರ್ಭಿತ ಶೈಲಿಯಲ್ಲಿ ರಮಣೀಯ ಸಂಸ್ಕೃತ ಶ್ಲೋಕಗಳಿಂದ ಹಾಡಿ ರಚಿಸಿರುವರು. ವೀರಶೈವ ಪ್ರಪಂಚ ಈ ಗ್ರಂಥಕರ್ತರಿಗೆ ಚಿರಋಣಿಯಿರುತ್ತೆ. **ಜಯೀ ವಿಜಯೀ ಭವ.**

ಇಂತಪ್ಪ ಮಹಾನುಭಾವರು ಇದ್ದ ಕಾಲವಾವುದು ? ದ್ವಾಪರ ಯುಗಾ ರಂಭ ಕಾಲದಲ್ಲಿ ಶ್ರೀ ಅಗಸ್ತ್ಯರಿಗೆ ಶ್ರೀ ಜ॥ ರೇಣುಕಾಚಾರ್ಯರು ಬೋಧಿಸ ಲನುವಾದ ವಿಷಯವನ್ನು, ರನ್ನಿಂಗ್ ಕಾಮೆಂಟರಿ ರೂಪದಲ್ಲಿ ಕಲಿಯುಗದಲ್ಲಿ ಶಿವಯೋಗಿಶಿವಾಚಾರ್ಯರು, ಶ್ರೀ ರೇಣುಕಾಗಸ್ತ್ಯರ ಮಧ್ಯೇ ನಡೆಯಿತೆನ್ನ ಲಾದ ಶ್ರೀ ರೇಣುಕ ಗೀತೆಯನ್ನು ಅಕಳಂಕಭಾವದಿಂದ ರೆಸವತ್ತರವಾಗಿ ಬರೆಯಲು ಹೇಗೆ ಸಾಧ್ಯವಾಯಿತೆಂಬ ಎಂಬ ಅಂಶಗಳು ಗಮನಾರ್ಹವೆನಿಸಿವೆ.

**ಗುರೋಃ ಕಟಾಕ್ಷ ಸಂಸಿದ್ಧೇ । ಕೋವಾ ಲೋಕೇಷು ದುರ್ಲಭಃ ॥**

ಮಹಾ ಗುರುವಿನ ಕಟಾಕ್ಷ ಪಡೆದಿದ್ದರೆ, ಈ ಲೋಕದಲ್ಲಿ ಯಾವುದು ತಾನೇ ದುರ್ಲಭವೆನಿಸೀತು.

ನನ್ನಿಂದ ಶ್ರೀರೇಣುಕರ ಪ್ರೇರಣೆಯಂತೆ ೧೯೭೫-೭೬ರಲ್ಲಿ ರಚಿಸಿರುವ "ಶ್ರೀರತ್ನಗರ್ಭ ಗಣಪತಿ ಮತ್ತು ಶ್ರೀಚಂದ್ರಮೌಳೀಶ್ವರಲಿಂಗ "ಗ್ರಂಥ ಪುಟ ೩೭೦, ಬೆಲೆ ; ರೂ. ೫೫–೦೦ ಇದನ್ನು ಅವಶ್ಯ ತರಿಸಿಕೊಂಡು ಓದಿದಾಗ ಸತ್ಯಾಂಶ ಭಾನುಕೋಟಿ ಪ್ರಕಾಶಮಾನವಾಗಿ ಓದುಗರ ಚಿತ್ತಕ್ಕೆ ವೇದ್ಯ ವಾಗುತ್ತೆ. ಇದರಿಂದ ನಾವು ಶ್ರೀ ಶಿವಯೋಗಿಶಿವಾಚಾರ್ಯರ ಪಂಚವಿಶಂತಿ ಶತಮಾನೋತ್ಸವವನ್ನು ಭಕ್ತ್ಯ ಕೊಂಡಾಡಬೇಕು. ಶ್ರೀಶಿವಯೋಗಿಶಿವಾ ಚಾರ್ಯರ ಪುತ್ರ ಶ್ರೀ ಸಿದ್ಧನಾಥಶಿವಾಚಾರ್ಯರು ಮಹಾ ಪಂಡಿತ, ತನ್ನಿಂದ ಸಂಸ್ಕೃತದಲ್ಲಿ ಪಾಂಡಿತ್ಯ ಪೂರ್ಣವಾಗಿ ರಚಿಸಿರುವ "ಶ್ರೀರೇಣುಕವಿಜಯ ಪುರಾಣದಲ್ಲಿ" ಶ್ರೀ ರತ್ನಗರ್ಭ ಗಣಪತಿ ಮತ್ತು ಶ್ರೀಚಂದ್ರಮೌಳೀಶ್ವರ ಲಿಂಗ ವೆಂಬ ಶ್ರೇಷ್ಠ ಗ್ರಂಥವಲ್ಲಿ, ಶ್ರೀಸಿದ್ಧನಾಥಶಿವಾಚಾರ್ಯರು, ಶ್ರೀಶ್ರೀಶ್ರೀರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಆದಿ ಜ॥ ರೇವಣಸಿದ್ಧರು ಶ್ರೀಶೃಂಗೇರಿ ಆದಿ ಶಂಕರಾಚಾರ್ಯರಿಗೆ ಶ್ರೀಚಂದ್ರಮೌಳೀಶ್ವರ ಲಿಂಗ ಪ್ರಧಾನ ವಿಷಯವನ್ನು ಕೂಲಂಕಶವಾಗಿ ವಿವರಿಸಿರುವರು.

ಈ ಸಿದ್ಧಾಂತಶಿಖಾಮಣಿ ಕರ್ತೃ ಆದಿ ಶ್ರೀಶಿವಯೋಗಿಶಿವಾಚಾರ್ಯರು ಕೃಪೆಯಿಂ **ಸಿದ್ಧಾಂತಶಿಖಾಮಣಿಗೆ** ಗಂಭೀರವಾದ ಭಾಷ್ಯ ಒಂದನ್ನು ರಚಿಸಿ ಮಾರ್ಗದರ್ಶನ ನೀಡಿದ್ದರೆ ಲೋಕೋಪಕಾರವಾಗುತ್ತಿತ್ತು. ಪ್ರಾಯಶಃ ಅವರ ಕಾಲದಲ್ಲಿ, ಪ್ರಸ್ಥಾನತ್ರಯಗಳಿಗೆ ವೀರಶೈವ ಪರವಾದ ಘನಗಂಭೀರವಾದ ಭಾಷ್ಯಗಳನ್ನು ಶ್ರೀ ಜ॥ ರೇಣುಕಾದಿ ಪಂಚಾಚಾರ್ಯರು ರಚಿಸಿದ್ದ ದಿವ್ಯ ಕೃತಿಗಳು ಇದ್ದಿರಬೇಕು. ಅವುಗಳ ಆಧಾರವನ್ನೊಳಗೊಂಡಂತೆ ಶ್ರೀ ಶಿವಯೋಗಿ ಶಿವಾಚಾರ್ಯರು ಅಥವಾ ಅವರ ಧೀಮಂತ ಪುತ್ರ, ಶ್ರೀ ಸಿದ್ಧನಾಥಶಿವಾಚಾರ್ಯ ರಾಗಲಿ ರಸವತ್ತಾದ ವಿಶ್ವಧರ್ಮ ಪ್ರತಿಪಾದಕ ಭಾಷ್ಯವನ್ನು ರಚಿಸಿ ಬೆಳಕಿಗೆ ತಂದಿದ್ದರೆ ಚಿರಸ್ಮರಣೀಯವಿರುತ್ತಿತ್ತು. ವೀರಶೈವ ಅದ್ವಿತೀಯ ದರ್ಶನ ಗ್ರಂಥ ವೆಂದು ಬೆಳಗುತ್ತಿತ್ತು.

## ಮಂಗಳಂ (ಭಾಗ ೨)

ತನುವಿನ್ನೆಲ್ಲೆಡೆ ಹಾವುಗಳ ಕಟ್ಟಿ ಮೆರೆಯುತಿಹ ।
ಘನಮಹಿಮ ಮಲ್ಲಿನಾಥಗೆ ಮಂಗಲಂ ॥
ಅನವರತ ವಾತಸರ್ಧಾಂಗದೊಳು ಮರೆಯುತಿಹ ।
ಮುನಿವಂದ್ಯೆ ಶ್ರೀ ಭ್ರಮರಾಂಬೆಗೂ ಮಂಗಲಂ ॥

ಮಂಗಲವು ರೇಣುಕಗೆ ।
ಮಂಗಲವು ದಾರುಕಗೇ

ಮಂಗಲವು ಧೇನುಕರ್ಣಗೆ ಮಂಗಲಂ॥
ಮಂಗಲವು ವಿಶ್ವಕರ್ಣಗೆ ವಿಶ್ವವಂದ್ಯನಿಗೆ ।
ಮಂಗಲವು ಘಂಟಾಕರ್ಣರಿಂಗೆ ॥

ರೇಣುಕಾಗಸ್ತ್ಯಸಂವಾದಂ । ಶ್ರೀ ಸಿದ್ಧಾಂತಶಿಖಾಮಣಿಂ ।
ನಿಗಮಾಗಮ ತತ್ತ್ವಾರ್ಥ ಭೂಷಿತಂ ಭಾವಗರ್ಭಿತಂ ॥

ಸಂಸಾರಸಾಗರಂ ಘೋರಂ । ತರ್ತುಮಿಚ್ಛತಿ ಯೋ ನರಃ ।
ಗೀತಾನಾವ ಸಮಾಸಾದ್ಯ । ಪಾರಂ ಯಾತಿ ಸುಖೇನ ಸಃ ॥

ಶ್ರೀ ರೇಣುಕ ಗೀತೆ ಗೀತೆಯೂ ಹೌದು ಸಿದ್ಧಾಂತವೂ ಹೌದು. ಇದು ಅಖಿಲ ಸಿದ್ಧಾಂತಗಳ ಶ್ರೇಣಿಯಲ್ಲಿ ಮುಕುಟಪ್ರಾಯವೆನಿಸಿದೆ. ಜೀವಂತ ಅನರ್ಘ್ಯ ರತ್ನ, ಚಿಂತಾಮಣಿ ಶ್ರೀ ಸ್ಯಾಮಂತಕಮಣಿ ಶ್ರೀ ಸಿದ್ಧಾಂತ ಶಿಖಾಮಣಿ.

ರೇ ಜಿಹ್ವೇ ! ರಸ ಸಾರಜ್ಞೇ ಸರ್ವದಾ ಮಧುರಪ್ರಿಯೇ ।
ಶ್ರೀಮದ್ರೇಣುಕಾಖ್ಯಾನ ಪೀಯೂಷಂ ।
ಪಿಬ, ಪಿಬ, ಸತತಂ । ಜಿಹ್ವೇ ! ನಿರಂತರಂ ॥

ಹೇ ನಾಲಿಗೆಯೇ! ನೀನು ಸಹಜವಾಗಿ ಕೋಮಲ ರಮಣೀಯಳಾದ್ದರಿಂದ, ರುಚಿಗಾತಿ. ಷಡ್ರಸಗಳನ್ನು ಗುರ್ತಿಸುವಲ್ಲಿ ಬಹು ಚತುರೆ. ನಿನ್ನ ಜಿಹ್ವ ಸಿಂಹಾಸನಾಗ್ರದಲ್ಲಿ, ಅಧ್ಯಾತ್ಮ ವಿದ್ಯಾಮಯಳಾದ ಶ್ರೀಶಾರದಾಂಬೆ ಅಲಂಕೃತ

ಳಾಗಿಹಳು. ಇದು ಕಾರಣ, ಕ್ಷಣಿಕ ಸುಖಕ್ಕೆ ವೃಥಾ ಬಲಿಯಾಗದೇ, ನೀನು ಶ್ರೀಮದ್ರೇಣುಕಾಖ್ಯಾನವೆಂಬ ದಿವ್ಯಾಮೃತವನ್ನು ಸದಾ ಭಕ್ತಿಯಿಂ ಕುಡಿದು ಆ ರಸಾಸ್ವಾದನೆಯಿಂದ ಪ್ರಫುಲ್ಲಿತಳಾಗು. ಹೇ ನಾಲಿಗೆಯೇ ಸುಖೀಭವ ನಿನಗೆ ಮಂಗಲವಾಗಲಿ.

ಮಾನವ ಸಂಸಾರ ಸಾಗರವನ್ನು ಅನಾಯಾಸವಾಗಿ ದಾಟಬೇಕಾದರೆ ರೇಣುಕ ಗೀತಾ ನಾಮಕ, ಸುಭದ್ರನಾವೆಯಲ್ಲಿ ಕುಳಿತು, ಷಟ್ಸ್ಥಲ ಜ್ಞಾನ ದೊಂದಿಗೆ ಮುಂದುವರಿದರೆ ಲಿಂಗಾಂಗ ಸಾಮರಸ್ಯ ರೂಪ ಸಾಯುಜ್ಯ ಮೋಕ್ಷ ವನ್ನು ಹೊಂದಬಹುದು. ಋಷಿ ಮುನಿಗಳೂ, ಮಹರ್ಷಿಗಳೂ ಹಾಗೂ ಅಸಂಖ್ಯಾತ ಶಿವಶರಣರು, ಈ ಮಾರ್ಗವನ್ನು ನಂಬಿ, ಅನುಷ್ಠಿಸಿ, ಪರಮಾದರ ದಿಂದ ನಿತ್ಯ ಮಂಗಲವನ್ನೈದಿರುವರು. ಇದು ತ್ರಿಸತ್ಯವಿರುತ್ತೆ. ಅಸ್ತು.

ದ್ವಾಪರಾಂತ್ಯ, ಕುರುಕ್ಷೇತ್ರದ ರಣರಂಗದಲ್ಲಿ ಕ್ಷತ್ರಿಯ ಧರ್ಮದಿಂದ ಪತಿತನಾದ, ಅರ್ಜುನನನ್ನು ಉದ್ಧರಿಸಲು ಶ್ರೀಕೃಷ್ಣನಿಂದ ಪ್ರೋಕ್ತವಾದ ಶ್ರೀಮದ್ಭಗವದ್ಗೀತೆ ೭೦೦ ಶ್ಲೋಕಗಳಿಂದ ವಿರಾಜಿತವಾಗಿದೆ. ಭುವಿಯಲ್ಲಿ ಅದು ಸದ್ಯ ಏಳನೂರು ಭಾಷೆಗಳಲ್ಲಿ ಪ್ರಕಟವಾಗಿ ವಿಶ್ವಾದ್ಯಂತ ವ್ಯಾಪಕವಾಗಿ ಪ್ರಾಜ್ಞ ರಲ್ಲಿ ಪರಿಚಿತ ಶಾಸ್ತ್ರವಾಗಿದೆ. ಗೀತಾ ಶಾಸ್ತ್ರ ಜನತೆಯ ಮಧ್ಯೇ ಇಷ್ಟೊಂದು ಪ್ರೀತಿಗಳಿಸಲು ಕಾರಣವೇನೆಂದರೆ, ಪ್ರತಿ ಶ್ಲೋಕಗಳಲ್ಲಿನ ಸಂಸ್ಕೃತ ಶಬ್ದಗಳಿಗೆ ಪ್ರಾದೇಶಿಕ ಭಾಷೆಗಳಲ್ಲಿ ಅರ್ಥ ಬರೆದು, ಪ್ರತಿ ಶ್ಲೋಕದ ಅಭಿಪ್ರಾಯವನ್ನು ಆ ಆ ಶ್ಲೋಕದ ಅಡಿಯಲ್ಲಿ ಸುಲಿದ ಬಾಳೆಯ ಹಣ್ಣಿನಂದದಿ ವ್ಯಾಖ್ಯಾನ ಮಾಡಿರು ವುದರಿಂದ, ಜನತೆ ಆಸಕ್ತಿಯಿಂದ ಓದಿ ಅರ್ಥಮಾಡಿಕೊಳ್ಳಲು ಅನುವಾಗಿದೆ. ಎರಡನೆಯದಾಗಿ ಸಹಸ್ರಾರು ಸನ್ಯಾಸಿಗಳೂ, ಮಠಾಧಿಪತಿಗಳೂ, ಶ್ರೀರಾಮ ಕೃಷ್ಣ ಮಿಷನ್, ಬ್ರಹ್ಮಸಮಾಜ, ಆರ್ಯಸಮಾಜ ಮೊದಲಾದ ನೂರಾರು ಸಂಘ ಸಂಸ್ಥೆಯವರೂ, ಕೆಲವು ನ್ಯಾಯಾಧೀಶರೂ, ಗೃಹಸ್ಥರಲ್ಲಿ ಅನುಭವಿ ಗಳಾದ ಕೋವಿದರೂ, ವಿವಿಧ ಭಾಷೆಗಳಲ್ಲಿ ಧಾರ್ಮಿಕ, ಸಾಮಾಜಿಕ ರಾಜಕೀಯ ಕ್ಷೇತ್ರಗಳಿಗೆಉಪಯುಕ್ತವಾಗುವ ಹಾಗೂ ಗಂಭೀರವಾದ ಭಾಷ್ಯಾಮೃತಗಳನ್ನು ವ್ಯಾಪಕವಾಗಿ ರಚಿಸಿ, ಪ್ರಕಟಿಸಿ, ವಿಶ್ವಾದ್ಯಂತ ನಿತ್ಯ ಜೀವನದ ಬಳಕೆಗೆ ಬರುವಂತೆ ಶ್ರಮಿಸಿ, ಸತತ ಅಖಂಡ ಪ್ರಚಾರ ಜಗತ್ತಿನ ಮೂಲೆ ಮೂಲೆಗಳಲ್ಲಿ ಉತ್ಸುಕತೆಯಿಂದ ಜರುಗುತ್ತಲಿರುವ ವಿಷಯ ಭಾರತಾದ್ಯಂತ ಸರ್ವರಿಗೂ

ವೇದ್ಯವಿರುವ ವಿಷಯವಿರುತ್ತೆ. ಸಾವಿರಾರು ಬ್ರಹ್ಮಚಾರಿಗಳೂ ಸ್ತ್ರೀಪುರುಷರೂ ನಿತ್ಯ ಗೀತಾ ಪಾರಾಯಣ, ಸಾಮೂಹಿಕ ಪಾರಾಯಣ ಪದ್ಧತಿಯಿಂದಾಗಿ, ೧೮ ಅಧ್ಯಾಯಗಳ ೭೦೦ ಶ್ಲೋಕಗಳನ್ನು ಕಂಠಪಾಠ ಮಾಡಿ, ನಮ್ಮವರು ತ್ರಿಕಾಂಡ ಅಮರಕೋಶವನ್ನು ಕಂಠಪಾಠ ಮಾಡಿರುವಂತೆ ಹೃದ್ಗತ ಗೊಳಿಸಿಕೊಂಡು ವ್ಯಾಖ್ಯಾನ ಮಾಡುತ್ತಲಿದ್ದಾರೆ. ನಗರದ ನಾನಾ ಬಡಾವಣೆಗಳಲ್ಲಿ ವಾರವಾರ ಭಗವದ್ಗೀತಾ ಪಾರಾಯಣ ಪ್ರವಚನಗಳಿಗಾಗಿ ನೂರಾರು ಸಂಘಗಳು ಏರ್ಪಟ್ಟಿವೆ.

ಶ್ರೀರೇಣುಕ ಗೀತೆ ದ್ವಾಪರಯುಗಾರಂಭದ ಪರ್ವಕಾಲದಲ್ಲಿ ಋಷ್ಯಾಶ್ರಮ ದಲ್ಲಿ ಋಷ್ಯಾಶ್ರಮದ ಪುಣ್ಯ ಭದ್ರಾತೀರದ ಮನೋಹರವಾದ ಶಾಂತಿ ತಪೋ ವನದ ಮಧ್ಯೇ ಶ್ರೀ ಜ॥ ರೇಣುಕಾಚಾರ್ಯರು ಸುಮಂಗಲ ವಾತಾವರಣದಲ್ಲಿ, ತಪಃ ಸಿದ್ಧ ಮನೋರಥನಾದ ತ್ರಿಕಾಲಜ್ಞಾನಿ ಆದಿ ಅಗಸ್ತ್ಯ ಮಹರ್ಷಿಗಳಿಗೆ, ಅವರ ಕೋರಿಕೆಯಂತೆ, ಅಷ್ಟಾವರಣ, ಪಂಚಾಚಾರ ಮತ್ತು ಷಟ್ಸ್ಥಲಾತ್ಮಕ ೧೦೧ ಸ್ಥಲಗಳಿಂದ ವಿರಾಜಿಸುವ, ಲಿಂಗಾಂಗ ಸಾಮರಸ್ಯ ಸಾಯುಜ್ಯಪ್ರದವಾದ ಶಿವಾದ್ವೈತ ಸಿದ್ಧಾಂತವನ್ನು ಪ್ರಸನ್ನಭಾವದಿಂದ ಉಪದೇಶಿಸಿರುವರು. ಇಂಥಾ ಅಮೃತಮಯ ಸಿದ್ಧಾಂತವನ್ನು ನಿತ್ಯ ಭಕ್ತ್ಯಾ ಪಾರಾಯಣಮಾಡಿ ಈ ಶಾಸ್ತ್ರಾರ್ಥವನ್ನು ಶ್ರೀಗುರು ಮುಖದಿಂದ ಶ್ರವಣಮಾಡುವುದರಿಂದ,

**ಏಕೇನ ಜನ್ಮನಾಮುಕ್ತಿ। ರ್ವೀರಶೈವಾಂತು ಮಹೇಶ್ವರಿ ॥** ಎಂಬತೆ ಜೀವಂತನಾಗಿರುವಾಗಲೇ, ಮೋಕ್ಷಾನಂದವನ್ನು ಸುಲಭವಾಗಿ ಪಡೆಯಲು ಸಾಧ್ಯವಿರುತ್ತೆ. ಇಂಥಾ ಶಾಸ್ತ್ರವನ್ನು ನಮ್ಮವರು ಊಟಕ್ಕೆ ಉಪ್ಪಿನಕಾಯಿ ಯನ್ನು ನೆಂಚಿಕೊಳ್ಳುವಂತೆ ಬಳಸುತ್ತಲಿದ್ದಾರೆ. ಇದು ಶೋಚನೀಯವಿರುತ್ತೆ. ಪ್ರಧಾನ ಅನ್ನದಂತೆ ಶ್ರೀ ಸಿದ್ಧಾಂತಶಿಖಾಮಣಿ ತತ್ವವನ್ನು ನಾವು ಬಳಸಿ ಶಿವಸ್ವರೂಪಿಗಳಾಗಬೇಕು.

**ವ್ಯಾಖ್ಯಾನಕ್ಕು ಭಾಷ್ಯಕ್ಕು** ಅಜಗಜಾಂತರ ವ್ಯತ್ಯಾಸವಿದೆ. ಕೆರೆಯ ಬದಿಯಲ್ಲಿ ಕುಳಿತು ಗಾಳಬೀಸಿ ಮೀನು ಹಿಡಿಯುವಂತೆ ಶಬ್ದಾರ್ಥಗಳ ವಿಷಯ ಸಂಗ್ರಹವಂತೆ ವ್ಯಾಖ್ಯಾನ ರಚನೆ. ಸಮುದ್ರರಾಜನಿಗೆ ರತ್ನಾಕರನೆಂದು ಹೆಸರು. ಸಮುದ್ರದ ಗರ್ಭದಲ್ಲಿ ನವರತ್ನಗಳೂ ಮುತ್ತು ಹವಳಗಳು ರಾಶಿರಾಶಿಯಾಗಿ ಬಿದ್ದಿವೆ. ಇವುಗಳನ್ನು ಮೇಲೆತ್ತಲು ದಮ್ ಕಟ್ಟಿ ಸಾಗರದಲ್ಲಿಳಿದು ನಾಲ್ಕಾರು

ಸಲ ಮುಳಿಗೆದ್ದು ಕೊನೆಯಲ್ಲಿ ದಿಢೀರೆಂದು ಆಳವಾಗಿ ಇಳಿದ ಕಸರತ್ತಿನ ಈಜು ಗಾರರು ಕೈಗೆ ಸಿಕ್ಕಷ್ಟು ನವರತ್ನಗಳನ್ನು ಬಾಚಿಕೊಂಡು ಮೇಲೆ ಬರುವರು. ಇವರಂತೆ ಮೂಲ ಶ್ಲೋಕಗಳಲ್ಲಿರುವ ಶಬ್ದಾರ್ಥದಲ್ಲಿ ಅಡಗಿರುವ ತತ್ವಪ್ರಕಾಶನ ವನ್ನು, ಶ್ರೀ ಗುರುವಿನನುಗ್ರಹದಿಂದ ಮನದಲ್ಲಿ ಆಳವಾಗಿಳಿದು, ಅಂತರ್ಮುಖಿ ಗಳಾಗಿ ಚಿಂತನ ಮಂಥನ ಪೂರ್ವಕ, ಕಡೆಯಲು, ಅಲ್ಲಿಂದ ಮೇಲುದ್ಭವಿಸುವ ಭಾವಸ್ಯೈಕರ ನವನೀತದಂಥಾ ಜ್ಞಾನಾಮೃತವನ್ನು ಮನಗಂಡು ಹರ್ಷಿಸಿ, ಆ ಅಪೂರ್ವ ಶಿವಜ್ಞಾನದ ಭಂಡಾರದ ನಿಧಿಯನ್ನು ಕಂಡಂತೆ ರಚಿಸುವುದು **ಭಾಷ್ಯವೆನಿಸಿದೆ.**

ಶ್ರೀ ಸಿದ್ಧಾಂತಶಿಖಾಮಣಿಗೆ ಬಲ್ಲವರು ಈಶ್ವರಾರ್ಪಿತ ಬುದ್ಧಿಯಿಂದ ಗಂಭೀರವಾದ ಹಾಗೂ ಸರ್ವ ಧರ್ಮ ಸಹಿಷ್ಣುತಾಭಾವೇನ, ವಿಶ್ವಧರ್ಮ ಪ್ರತಿಪಾದಕ ಭಾಷ್ಯವನ್ನು ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿ ರಚಿಸಿ, ಶ್ರೀಮಂತರ ಧನ ಸಹಾಯದಿಂದ ಅಲ್ಲಲ್ಲೇ ಪ್ರಿಂಟು ಮಾಡಿಸಿ ವಿಶ್ವಾದ್ಯಂತ ಪ್ರಚಾರ ಮಾಡಲು ಕಂಕಣಬದ್ಧರಾಗಬೇಕು ಶ್ರೀಮದ್ಭಗವದ್ಗೀತಾ ಶಾಸ್ತ್ರದಂತೆ ಶ್ರೀ ಸಿದ್ಧಾಂತಶಿಖಾಮಣಿ ಶ್ರೀ ರೇಣುಕಾಗಸ್ತ್ಯ ಸಂವಾದ ಶಾಸ್ತ್ರ ಸರ್ವತ್ರ ಪ್ರಚಾರ ಹಾಗೂ ಆಚಾರಕ್ಕೆ ಬರುವಂತೆ ಮಾಡಬೇಕು. ಯಾಕೆಂದರೆ ಪರಮ ವೀರಶೈವ ಧರ್ಮ ಆಚಾರ ಪ್ರಧಾನವಾದುದು ಸ್ವಧರ್ಮವನ್ನು ಭಕ್ತ್ಯಾ—

**ಸ್ವಲ್ಪಮಪ್ಯಸ್ಯ ಧರ್ಮಸ್ಯ । ತ್ರಾಯತೇ ಮಹತೋ ಭಯಾತ್ ॥**

ಸ್ವಲ್ಪ ಶ್ರದ್ಧೆಯಾ ಆಚರಿಸಿದ್ದಲ್ಲಿ, ಜನನ ಮರಣ ರೂಪ ಘೋರ ವ್ಯಾಧಿಯ ಭಯದಿಂದ ಪಾರಾಗಬಹುದು. ಎರಡನೆಯದಾಗಿ ಸಿದ್ಧಾಂತಶಿಖಾಮಣಿಯ ಮೂಲ ಶ್ಲೋಕಗಳುಳ್ಳ ಪಾಕೆಟ್ ಸೈಜು ಕಿರುಹೊತ್ತಿಗೆಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಿಸಿ, ಸಂಸ್ಕೃತ ಶಬ್ದಗಳಿಗೆ, ಕನ್ನಡ ಇತ್ಯಾದಿ ಭಾಷೆಗಳಲ್ಲಿ ಶಬ್ದಾರ್ಥಗಳನ್ನು ಬರೆದು ಪ್ರತಿ ಶ್ಲೋಕದ ಕೆಳಗೆ ಆ ಶ್ಲೋಕಾರ್ಥವುಳ್ಳ, ಸಹಸ್ರಾರು ಪ್ರತಿಗಳನ್ನು ಮುದ್ರಿಸಿ, ಈ ಪ್ರತಿಗಳು ಭಾರತಾದ್ಯಂತ ಜನತೆಗೆ ಕ್ರಯಕ್ಕೆ ಸಿಗುವಂಥಾ ವ್ಯವಸ್ಥೆ ಮಾಡಬೇಕು. ಇದು ಬಹು ಮುಖ್ಯವಿರುತ್ತೆ. ಪ್ರತಿಯೊಂದು ಊರುಗಳಪುಸ್ತಕ ವ್ಯಾಪಾರಿಗಳಲ್ಲಿ ನಮ್ಮ ಮಠಮಂದಿರಗಳಲ್ಲಿ ಸಂಘ ಸಂಸ್ಥೆಗಳಲ್ಲಿ ಸಿದ್ಧಾಂತಶಿಖಾಮಣಿ ಪ್ಯಾಕೇಟ್ ಸೈಜ್ ಪುಸ್ತಕಗಳು

ವೇದ್ಯವಿರುವ ವಿಷಯವಿರುತ್ತೆ. ಸಾವಿರಾರು ಬ್ರಹ್ಮಚಾರಿಗಳೂ ಸ್ತ್ರೀಪುರುಷರೂ ನಿತ್ಯ ಗೀತಾ ಪಾರಾಯಣ, ಸಾಮೂಹಿಕ ಪಾರಾಯಣ ಪದ್ಧತಿಯಿಂದಾಗಿ, ೧೮ ಅಧ್ಯಾಯಗಳ ೭೦೦ ಶ್ಲೋಕಗಳನ್ನು ಕಂಠಪಾಠ ಮಾಡಿ, ನಮ್ಮವರು ತ್ರಿಕಾಂಡ ಅಮರಕೋಶವನ್ನು ಕಂಠಪಾಠ ಮಾಡಿರುವಂತೆ ಹೃದ್ಗತ ಗೊಳಿಸಿಕೊಂಡು ವ್ಯಾಖ್ಯಾನ ಮಾಡುತ್ತಲಿದ್ದಾರೆ. ನಗರದ ನಾನಾ ಬಡಾವಣೆಗಳಲ್ಲಿ ವಾರವಾರ ಭಗವದ್ಗೀತಾ ಪಾರಾಯಣ ಪ್ರವಚನಗಳಿಗಾಗಿ ನೂರಾರು ಸಂಘಗಳು ಏರ್ಪಟ್ಟಿವೆ.

ಶ್ರೀರೇಣುಕ ಗೀತೆ ದ್ವಾಪರಯುಗಾರಂಭದ ಪರ್ವಕಾಲದಲ್ಲಿ ಋಷ್ಯಾಶ್ರಮ ಪಲ್ಲಿ ಋಷ್ಯಾಶ್ರಮದ ಪುಣ್ಯ ಭದ್ರಾತೀರದ ಮನೋಹರವಾದ ಶಾಂತಿ ತಪೋ ವನದ ಮಧ್ಯೇ ಶ್ರೀ ಜ|| ರೇಣುಕಾಚಾರ್ಯರು ಸುಮಂಗಲ ವಾತಾವರಣದಲ್ಲಿ, ತಪಃ ಸಿದ್ಧ ಮನೋರಥನಾದ ತ್ರಿಕಾಲಜ್ಞಾನಿ ಆದಿ ಅಗಸ್ತ್ಯ ಮಹರ್ಷಿಗಳಿಗೆ, ಅವರ ಕೋರಿಕೆಯಂತೆ, ಅಷ್ಟಾವರಣ, ಪಂಚಾಚಾರ ಮತ್ತು ಷಟ್ಸ್ಥಲಾತ್ಮಕ ೧೦೧ ಸ್ಥಲಗಳಿಂದ ವಿರಾಜಿಸುವ, ಲಿಂಗಾಂಗ ಸಾಮರಸ್ಯ ಸಾಯುಜ್ಯಪ್ರದವಾದ ಶಿವಾದ್ವೈತ ಸಿದ್ಧಾಂತವನ್ನು ಪ್ರಸನ್ನಭಾವದಿಂದ ಉಪದೇಶಿಸಿರುವರು. ಇಂಥಾ ಅಮೃತಮಯ ಸಿದ್ಧಾಂತವನ್ನು ನಿತ್ಯ ಭಕ್ತ್ಯಾ ಪಾರಾಯಣಮಾಡಿ ಈ ಶಾಸ್ತ್ರಾರ್ಥವನ್ನು ಶ್ರೀಗುರು ಮುಖದಿಂದ ಶ್ರವಣಮಾಡುವುದರಿಂದ,

**ಏಕೇನ ಜನ್ಮನಾಮುಕ್ತಿ। ರ್ವೀರಾಣಾಂತು ಮಹೇಶ್ವರಿ ||** ಎಂಬತೆ ಜೀವಂತನಾಗಿರುವಾಗಲೇ, ಮೋಕ್ಷಾನಂದವನ್ನು ಸುಲಭವಾಗಿ ಪಡೆಯಲು ಸಾಧ್ಯವಿರುತ್ತೆ. ಇಂಥಾ ಶಾಸ್ತ್ರವನ್ನು ನಮ್ಮವರು ಊಟಕ್ಕೆ ಉಪ್ಪಿನಕಾಯಿ ಯನ್ನು ನೆಂಚಿಕೊಳ್ಳುವಂತೆ ಬಳಸುತ್ತಲಿದ್ದಾರೆ. ಇದು ಶೋಚನೀಯವಿರುತ್ತೆ. ಪ್ರಧಾನ ಅನ್ನದಂತೆ ಶ್ರೀ ಸಿದ್ಧಾಂತಶಿಖಾಮಣಿ ತತ್ವವನ್ನು ನಾವು ಬಳಸಿ ಶಿವಸ್ವರೂಪಿಗಳಾಗಬೇಕು.

ವ್ಯಾಖ್ಯಾನಕ್ಕು ಭಾಷ್ಯಕ್ಕು ಅಜಗಜಾಂತರ ವ್ಯತ್ಯಾಸವಿದೆ. ಕೆರೆಯ ಬದಿಯಲ್ಲಿ ಕುಳಿತು ಗಾಳಬೀಸಿ ಮೀನು ಹಿಡಿಯುವಂತೆ ಶಬ್ದಾರ್ಥಗಳ ವಿಷಯ ಸಂಗ್ರಹದಂತೆ ವ್ಯಾಖ್ಯಾನ ರಚನೆ. ಸಮುದ್ರರಾಜನಿಗೆ ರತ್ನಾಕರನೆಂದು ಹೆಸರು. ಸಮುದ್ರದ ಗರ್ಭದಲ್ಲಿ ನವರತ್ನಗಳೂ ಮುತ್ತು ಪವಳಗಳು ರಾಶಿರಾಶಿಯಾಗಿ ಬಿದ್ದಿವೆ. ಇವುಗಳನ್ನು ಮೇಲೆತ್ತಲು ದಮ್ ಕಟ್ಟಿ ಸಾಗರದಲ್ಲಿಳಿದು ನಾಲ್ಕಾರು

ಸಲ ಮುಳಿಗೆದ್ದು ಕೊನೆಯಲ್ಲಿ ದಿಢೀರೆಂದು ಆಳವಾಗಿ ಇಳಿದ ಕಸರತ್ತಿನ ಈಜು ಗಾರರು ಕೈಗೆ ಸಿಕ್ಕಷ್ಟು ನವರತ್ನಗಳನ್ನು ಬಾಚಿಕೊಂಡು ಮೇಲೆ ಬರುವರು. ಇವರಂತೆ ಮೂಲ ಶ್ಲೋಕಗಳಲ್ಲಿರುವ ಶಬ್ದಾರ್ಥದಲ್ಲಿ ಅಡಗಿರುವ ತತ್ವಪ್ರಕಾಶನ ವನ್ನು, ಶ್ರೀ ಗುರುವಿನನುಗ್ರಹದಿಂದ ಮನದಲ್ಲಿ ಆಳವಾಗಿಳಿದು, ಅಂತರ್ಮುಖಿ ಗಳಾಗಿ ಚಿಂತನ ಮಂಥನ ಪೂರ್ವಕ, ಕಡೆಯಲು, ಅಲ್ಲಿಂದ ಮೇಲುದ್ಭವಿಸುವ ಭಾವಳ್ಯಕರ ನವನೀತದಂಥಾ ಜ್ಞಾನಾಮೃತವನ್ನು ಮನಗಂಡು ಹರ್ಷಿಸಿ, ಆ ಅಪೂರ್ವ ಶಿವಜ್ಞಾನ ಭಂಡಾರದ ನಿಧಿಯನ್ನು ಕಂಡಂತೆ ರಚಿಸುವುದು ಭಾಷ್ಯವೆನಿಸಿದೆ.

ಶ್ರೀ ಸಿದ್ಧಾಂತಶಿಖಾಮಣಿಗೆ ಬಲ್ಲವರು ಈಶ್ವರಾರ್ಪಿತ ಬುದ್ಧಿಯಿಂದ ಗಂಭೀರವಾದ ಹಾಗೂ ಸರ್ವ ಧರ್ಮ ಸಹಿಷ್ಣುತಾಭಾವೇನ, ವಿಶ್ವಧರ್ಮ ಪ್ರತಿಪಾದಕ ಭಾಷ್ಯವನ್ನು ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿ ರಚಿಸಿ, ಶ್ರೀಮಂತರ ಧನ ಸಹಾಯದಿಂದ ಅಲ್ಲಲ್ಲೇ ಪ್ರಿಂಟು ಮಾಡಿಸಿ ವಿಶ್ವಾದ್ಯಂತ ಪ್ರಚಾರ ಮಾಡಲು ಕಂಕಣಬದ್ಧರಾಗಬೇಕು ಶ್ರೀಮದ್ಭಗವದ್ಗೀತಾ ಶಾಸ್ತ್ರದಂತೆ ಶ್ರೀ ಸಿದ್ಧಾಂತಶಿಖಾಮಣಿ ಶ್ರೀ ರೇಣುಕಾಗಸ್ತ್ಯ ಸಂವಾದ ಶಾಸ್ತ್ರ ಸರ್ವತ್ರ ಪ್ರಚಾರ ಹಾಗೂ ಆಚಾರಕ್ಕೆ ಬರುವಂತೆ ಮಾಡಬೇಕು. ಯಾಕೆಂದರೆ ಪರಮ ವೀರಶೈವ ಧರ್ಮ ಆಚಾರ ಪ್ರಧಾನವಾದುದು ಸ್ವಧರ್ಮವನ್ನು ಭಕ್ತ್ಯಾ—

**ಸ್ವಲ್ಪಮಪ್ಯಸ್ಯ ಧರ್ಮಸ್ಯ । ತ್ರಾಯತೇ ಮಹತೋ ಭಯಾತ್ ॥**

ಸ್ವಲ್ಪ ಶ್ರದ್ಧೆಯಿಂದ ಆಚರಿಸಿದ್ದಲ್ಲಿ, ಜನನ ಮರಣ ರೂಪ ಘೋರ ವ್ಯಾಧಿಯ ಭಯದಿಂದ ಪಾರಾಗಬಹುದು. ಎರಡನೆಯದಾಗಿ ಸಿದ್ಧಾಂತಶಿಖಾಮಣಿಯ ಮೂಲ ಶ್ಲೋಕಗಳುಳ್ಳ ಪಾಕಿಟ್ ಸೈಜು ಕಿರುಹೊತ್ತಿಗೆಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಿಸಿ, ಸಂಸ್ಕೃತ ಶಬ್ದಗಳಿಗೆ, ಕನ್ನಡ ಇತ್ಯಾದಿ ಭಾಷೆಗಳಲ್ಲಿ ಶಬ್ದಾರ್ಥಗಳನ್ನು ಬರೆದು ಪ್ರತಿ ಶ್ಲೋಕದ ಕೆಳಗೆ ಆ ಶ್ಲೋಕಾರ್ಥವುಳ್ಳ, ಸಹಸ್ರಾರು ಪ್ರತಿಗಳನ್ನು ಮುದ್ರಿಸಿ, ಈ ಪ್ರತಿಗಳು ಭಾರತಾದ್ಯಂತ ಜನತೆಗೆ ಕ್ರಯಕ್ಕೆ ಸಿಗುವಂಥಾ ವ್ಯವಸ್ಥೆ ಮಾಡಬೇಕು. ಇದು ಬಹು ಮುಖ್ಯವಿರುತ್ತೆ. ಪ್ರತಿಯೊಂದು ಊರುಗಳಪುಸ್ತಕ ವ್ಯಾಪಾರಿಗಳಲ್ಲಿ ನಮ್ಮ ಮಠಮಂದಿರಗಳಲ್ಲಿ ಸಂಘ ಸಂಸ್ಥೆಗಳಲ್ಲಿ **ಸಿದ್ಧಾಂತಶಿಖಾಮಣಿ ಪ್ಯಾಕೇಟ್ ಸೈಜ್ ಪುಸ್ತಕಗಳು**

ಸಾಕಷ್ಟು ಸ್ಟಾಕಿನಲ್ಲಿ ಇಲ್ಲದೆಇದ್ದರೆ, ಪ್ರಚಾರ ಕಾರ್ಯಕ್ಕೆ ಭಂಗವುಂಟಾಗುವುದು. ಈ ಕಿರು ಕೃತಿಗಳು ಪ್ರತಿಯೊಂದು ಮನೆ, ಮನಗಳಲ್ಲಿ ನೆಲಸಿರುವಂತೆ ಗುರು ವರ್ಗದವರು ತಪಸ್ಸಿನಂತೆ ಶ್ರಮಿಸಿ ನೋಡಿಕೊಳ್ಳಬೇಕು. ವಿಶೇಷತಃ ಕರ್ನಾಟಕಾದ್ಯಂತ ಸದರಿ ಕೃತಿಗಳು ಮುದ್ರಣವಾಗಿ ಸರ್ವತ್ರ ಕ್ರಯಕ್ಕೆ ಸುಲಭವಾಗಿ ಸಿಗುವಂತೆ ನೋಡಿ ಕೊಳ್ಳಬೇಕು. (೨) ನಗರದ ನಾನಾ ಬಡಾವಣೆಗಳಲ್ಲಿ ನಿಯಮಿತ ಕಾಲಗಳಲ್ಲಿ ಪಾರಾಯಣ, ಪಾತ ಪ್ರವಚನಾದಿಗಳು ಕ್ರಮವರಿತು ಜರುಗುವಂತಾಗಬೇಕು. (೩) "ಸರ್ವೇಷಾಂ ಹಿತಕಾರಕಂ" ಎಂಬ ಈಶೋಕ್ತಿಯ ತಳಹದಿಯ ಮೇಲೆ ಸಕಲ ಕಾರ್ಯ ಚಟುವಟಿಕೆಗಳನ್ನು ರೂಪಿಸಿಕೊಂಡು ಅತ್ಮೀಯ ಭಾವದಿಂದ ಇದೊಂದು ತಪಸ್ಸೆಂದು ಭಕ್ತ್ಯಾದರಗಳಿಂದ ದಿನಂಪ್ರತಿ ಪ್ರಸಾರ ನಿರ್ವಹಿಸುತ್ತಿರಬೇಕು.

ಸಿದ್ಧಾಂತಶಿಖಾಮಣಿಯ ಆಯಿದಯಿದು ಇಪ್ಪತ್ತೈದು ಪ್ರತಿಗಳನ್ನು ಆ ಆ ಪೀಠದ ಯೋಗದಂಡದ ಅಗ್ರಸ್ಥಾನದಲ್ಲಿ ಬೆಳಗುವ ಕಂತೆಗಳ ವರ್ಣಗಳನುಸಾರ ಶಿಲ್ಕ್ ಅಥವಾ ದಮಾಷ್ ಬಟ್ಟೆಗಳಲ್ಲಿ ಬೈಂಡು ಮಾಡಿಸಿ ಶ್ರೀ ಜ॥ ಪಂಚಾಚಾರ್ಯರ ಉತ್ಸವ ಕಾಲದಲ್ಲಿ ೫ ವರ್ಣಗಳ ಒಂದು ಸೆಟ್ ಪುಸ್ತಕಗಳು ೫ ಪಲ್ಲಕ್ಕಿಗಳಲ್ಲೂ ಶ್ರೀ ಜ॥ ಮಹಾಸನ್ನಿಧಿಯವರ ಬಲಭಾಗದಲ್ಲಿ ಎತ್ತರದಲ್ಲಿಟ್ಟು ಕಾಣುವಂತೆ ಅಲಂಕರಿಸಿ ಪೂಜಿಸಿರಬೇಕು. ಶ್ರೀ ಜ॥ ಪಂಚಾಚಾರ್ಯರ ಜಯಂತಿ ಉತ್ಸವಗಳನ್ನು ಆಚರಿಸುವ ಸ್ಥಳಗಳಲ್ಲೆಲ್ಲಾ ಮೇಲ್ಕಂಡಂತೆ ೫ ಪುಸ್ತಕಗಳನ್ನಿಟ್ಟು ಅಲಂಕರಿಸಿ ಪೂಜಿಸಿ, ರಾಜೋಪಚಾರಗಳಿಂದ ಭಕ್ತ್ಯ ಮೆರವಣಿಗೆ ಮಾಡಬೇಕು. ಶ್ರೀಗುರುನಾನಕ್ ಧರ್ಮ ಗ್ರಂಥಗಳನ್ನು, ಶ್ರೀತುಕಾರಾಂರವರ ಅಭಂಗ ಗ್ರಂಥಗಳನ್ನು, ಶ್ರೀಭಾಗವತ ಗ್ರಂಥಗಳನ್ನೂ ಅವರವರು ವಿಶೇಷ ದಿವಸಗಳಲ್ಲಿ ರಾಜಬೀದಿಗಳಲ್ಲಿ ಉತ್ಸವ ಮೆರವಣಿಗೆಗಳನ್ನು ಪಲ್ಲಕ್ಕಿಯಲ್ಲಿಟ್ಟು ಅತ್ಯಂತ ವಿಜೃಂಭಣೆಯಿಂದ ನೆರವೇರಿಸುತ್ತಲಿರುವುದು ವಿದಿತವಿರುತ್ತೆ. ಇದರಂತೆ—

**ಶ್ರೀ ವೇದಾಗಮ ವೀರಶೈವ ಸರಣೀಂ ।**
**ಗೋಪ್ಯ ಚಿಂತಾಮಣಿಂ ॥**

ಎಂಬ ಜಗದ್‌ವಿಖ್ಯಾತವಾದ, ವಿಶ್ವಧರ್ಮ ಪ್ರತಿಪಾದಕ ಮಹಾನ್ ಕೃತಿ ಸಿದ್ಧಾಂತಶಿಖಾಮಣಿ ಗ್ರಂಥವನ್ನು, ಹಸಿರು, ಕೆಂಪು, ನೀಲಿ, ಬಿಳಿ, ಹಳದಿ

ದಮಾಸ್ ಬಟ್ಟೆಗಳಲ್ಲಿ ಬೈಂಡಿಂಗ್ ಮಾಡಿಸಿ, ಅಡ್ಡಪಲ್ಲಕ್ಕಿ ಉತ್ಸವ ಕಾಲದಲ್ಲಿ ಈ ಕೃತಿಗಳನ್ನು ಇಟ್ಟು ಅಲಂಕರಿಸುವುದು ಅತ್ಯಂತ ಸ್ತುತ್ಯವಿರುತ್ತೆ.

ಶ್ರೀಸಿದ್ಧಾಂತಶಿಖಾಮಣಿ ಪ್ರೋಕ್ತ ೧೦೧ ಸ್ಥಲಗಳ ಬಹು ಸಂಕ್ಷಿಪ್ತ ವ್ಯಾಖ್ಯಾನ, ಶ್ರೀ ರಂಭಾಪುರೀ ವೀರಸಿಂಹಾಸನಾಧೀಶ್ವರ ಜ|| ಲಿಂ|| ವೀರಗಂಗಾಧರಶಿವಾಚಾರ್ಯ ಮಹಾಸ್ವಾಮಿಗಳ ಕೃಪಾಶೀರ್ವಾದದ ಫಲವಾಗಿ ಮತ್ತು ಶ್ರೀ ಜ|| ರೇಣುಕಾಚಾರ್ಯರ ದಿವ್ಯ ಪ್ರೇರಣೆಯಂತೆ ನಾನು ರಚಿಸಿರುತ್ತೇನೆ.

**ಭಕ್ತಿಃ ಕಿಂ ನ ಕರೋತ್ಯಹೋ ।**

**ವನಚರೋಽಪಿ ಭಕ್ತಾವ ತಂ ಸಾಯತೇ ॥** ಯೆಂಬಂತೆ

ಬರೆದವ ನಾನಾದರೂ ಬರಸಿದವ ಅಂತರ್ಯಾಮಿಯಾದ ಸರ್ವೇಶ್ವರನು. ಸಾಗರದಲ್ಲಿ ಒಂದು ಹನಿಯಷ್ಟು ರಚಿಸಲಾಗಿದೆ. ಒಂದು ಹನಿ ಅಮೃತ ಪಾನ ಮಾಡಿದ ಮಾತ್ರಕ್ಕೆ ಜೀವಾತ್ಮನು ಅಮೃತಸ್ವರೂಪಿಯಾಗುವನು. ಅಂದ ಬಳಿಕ ಈ ಮಧುರ ಕಿರು ವ್ಯಾಖ್ಯಾನದ ಪ್ರಭಾವದಿಂದಾಗಿ ನನ್ನ ಅನಂತ ಜನ್ಮಗಳಲ್ಲಿ ನಾನು ಮಾಡಿದ ಘೋರ ಪಾತಕರಾಶಿ ಭಸ್ಮೀಭೂತವಾಗಿ ನಾನು ಶುದ್ಧ ಸ್ಫಟಿಕದಂತೆ **ಪವಿತ್ರಾತ್ಮನಾಗಿದ್ದಾನೆ,ಧನ್ಯನಾಗಿದ್ದಾನೆ** ಇಂಥಾ ಮಂಗಲ ವೇಳೆಯಲ್ಲಿ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ೧೦೦೮ ಜ|| ಶ್ರೀಶ್ರೀಶ್ರೀ ವೀರ ಸೋಮೇಶ್ವರ ರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳಿಗೂ ಹಾಗೂ ಉಳಿದ ಜ|| ಚತುರಾಚಾರ್ಯರುಗಳ ಶ್ರೀ ಪಾದಕಮಲಗಳಲ್ಲಿ ನನ್ನ ಅನಂತ ಶಿರಸಾಷ್ಟಾಂಗ ಪ್ರಣಾಮುಗಳನ್ನು ಭಕ್ತ್ಯಾ ಅರ್ಪಿಸಿ ನನ್ನಿಷ್ಟ ದೇವತಾ ಸಾರ್ವಭೌಮರಾದ ಶ್ರೀ ಉಮಾಮಹೇಶ್ವರರ ದಿವ್ಯ ಅಡಿದಾವರೆಗಳಲ್ಲಿ ಶಿವಸ್ಮರಣೆಯೊಂದಿಗೆ ಶರಣಾಗತನಾಗಿದ್ದೇನೆ. ನನ್ನ ೮೭ ನೇ ವರ್ಷದ ಸವಿ ನೆನಪಿಗಾಗಿ ಶಿವಸ್ಮರಣಪೂರ್ವಕ, ಶಿವಾದ್ವೈತ ಸಿದ್ಧಾಂತವೆಂಬ ಕ್ಷೀರ ಸಾಗರದಲ್ಲಿ ಮಿಂದು ಮಡಿಯುಟ್ಟು ಪರಶಿವಬ್ರಹ್ಮದಲ್ಲಿ ಧ್ಯಾನಮಗ್ನನಾಗಿದ್ದೇನೆ. ಇದರಂತೆ ದಿವ್ಯ ಕೃತಿಯನ್ನು ಓದುವವರು ಶ್ರೀಗುರು ಮತ್ತು ಶಿವಾನುಗ್ರಹಕ್ಕೆ ಪಾತ್ರರಾಗಿ ಅಮೃತಸ್ವರೂಪಿಗಳಾಗಲೆಂದು ಹಾರೈಸುತ್ತೇನೆ.

**॥ ಶಿವಂ ಶಾಂತಂ ॥**

ಶ್ರೀ ವೇದಾಗಮ ವೀರಶೈವಸರಣಿಂ ।
ಶ್ರೀ ಷಟ್ಸ್ಥಲೋದ್ಯನ್ಮಣಿಂ ।
ಶ್ರೀ ಜೀವೇಶ್ವರ ಯೋಗಪದ್ಮತರಣಿಂ ।
ಶ್ರೀ ಗೋಪ್ಯ ಚಿಂತಾಮಣಿಂ ॥

ಶ್ರೀ ಸಿದ್ಧಾಂತಶಿಖಾಮಣಿಂ ।
ಲಿಖತಿಯಸ್ತಂ ಲೇಖಯತ್ಯಾದರಾತ್ ।
ಶ್ರೋತಾ ಶ್ರಾವಯಿತಾ । ಸಯಾತಿ ವಿಮಲಾಂ ।
ಭುಕ್ತಿಂಚ ಮುಕ್ತಿಂ ಪರಾಂ ॥

ಬ್ರಹ್ಮಾಂಡವ್ಯಾಪ್ತ ದೇಹಾ ಭಸಿತ ಹಿಮರುಚಾ
ಭಾಸಮಾನಾ ಭುಜಂಗೈಃ ।
ಕಂಠೇ ಕಾಲಾಃ ಕಪರ್ದಾ ಕಲಿತ ಶಶಿಕಲಾಶ್ಚಂಡೆ
ಕೋದಂಡಹಸ್ತಾಃ ॥

ತ್ರ್ಯಕ್ಷಾ ರುದ್ರಾಕ್ಷಭೂಷಾ ।
ಸ್ಸುಲಲಿತ ವಿಭವಾಶ್ಯಾಂಭವಾ ಮೂರ್ತಿಭೇದಾ ।
ರುದ್ರಾಃ ಶ್ರೀ ರುದ್ರಸೂಕ್ತಃ ಪ್ರಕಟಿತ ವಿಭವಾ ನಃ
ಪ್ರಯಚ್ಛಂತು ಸೌಖ್ಯಂ ಸೌಖ್ಯಂ ॥

॥ ವಂದೇ ರೇಣುಕಂ ॥ ॥ ವಂದೇ ಮಾತರಂ ॥

"ಮಂಗಲಂ" (ಭಾಗ ೧ ಮತ್ತು ೨) ಸಮಾಪ್ತಿ

## ಸ್ತೋತ್ರಾವಳಿ

ನಮೋ ನಮಸ್ತೇಖಿಲ ಕಾರಣಾಯ ।
ನಿಷ್ಕಾರಣಾಯಾದ್ಭುತ ಕಾರಣಾಯ ॥
ಸರ್ವಾಗಮಾಮ್ನಾಯ ಮಹಾರ್ಣವಾಯ ।
ನಮೋಪವರ್ಗಾಯ ಪರಾಯಣಾಯ ॥೧॥

ನಮಸ್ತೇ ಭಕ್ತ ಸಂರಕ್ಷ ।
ನಮಸ್ತೇ ಪುರುಷೋತ್ತಮ ॥
ನಮಸ್ತೇ ಸರ್ವಲೋಕಾತ್ಮ ।
ನಮಸ್ತೇ ಪರಮೇಶ್ವರಾ ॥೨॥

ನಮಸ್ತೇ ನಮಸ್ತೇ ಮಹಾದೇವ ಶಂಭೋ ।
ನಮಸ್ತೇ ನಮಸ್ತೇ ಪ್ರಪನ್ನೈಕ ಬಂಧೋ ।
ನಮಸ್ತೇ ನಮಸ್ತೇ ದಯಾಸಾರ ಸಿಂಧೋ ।
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೩॥

ನಮಸ್ತೇ ನಮಸ್ತೇ ಮಹಾ ಮೃತ್ಯುಹಾರಿನ್ ।
ನಮಸ್ತೇ ನಮಸ್ತೇ ಮಹಾ ದುಃಖಹಾರಿನ್ ।
ನಮಸ್ತೇ ನಮಸ್ತೇ ಮಹಾಪಾಪ ಹಾರಿನ್ ।
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೪॥

ನಮಸ್ತೇ ನಮಸ್ತೇ ಜಗಜ್ಜನ್ಮ ಹೇತೋ ।
ನಮಸ್ತೇ ನಮಸ್ತೇ ವೃಷಾಧೀಶ ಕೇತೋ ।
ನಮಸ್ತೇ ನಮಸ್ತೇ ಮಹಾಪುಣ್ಯ ಕೇತೋ ।
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೫॥

ನಮಸ್ತೇ ನಮಸ್ತೇ ಸದಾಚಂದ್ರಮೌಳೇ ।
ನಮಸ್ತೇ ನಮಸ್ತೇ ಸದಾ ಶೂಲಪಾಣೇ ।
ನಮಸ್ತೇ ನಮಸ್ತೇ ಸದಾ ಶಾಸ್ತ್ರಯೋನೇ ।
ನಮಸ್ತೇ ನಮಸ್ತೇ ನಮಸ್ತೇ ಮಹೇಶ ॥೬॥

ನಮೋ ನಮಸ್ತೇ ಶಿವಭಕ್ತ ಪಕ್ಷ ।
ನಮೋ ನಮಸ್ತೇ ಸುಜನಾಲಿರಕ್ಷ ।
ನಮೋ ನಮಸ್ತೇ ಪರವಾದಿ ರೂಕ್ಷ ।
ನಮೋ ನಮಸ್ತೇ ವಿಜಿತಾಖಿಲಾಕ್ಷ ॥೭॥

ನಮೋ ನಮೋ ಮೋಕ್ಷ ವಿಚಾರದಕ್ಷ ।
ನಮೋ ನಮೋ ವೇದವಿಧಾನ ಶಿಕ್ಷ ।
ನಮೋ ನಮೋ ಪಾಪಕೃತಾಂ ವಿಪಕ್ಷ ।
ನಮೋ ನಮಃ ರೇವಣ ಕಲ್ಪವೃಕ್ಷ ॥೮॥

ಯಸ್ಯಸ್ವರೂಪಂ ನವಿದುಃ ಸುರಾಸುರಾಃ ।
ಯಸ್ಯ ಸ್ವರೂಪಂ ನವಿದುಃ ಮುನೀಶ್ವರಃ ।
ಯಸ್ಯ ಸ್ವರೂಪಂ ನವಿದುಃ ಯಮೇಶ್ವರಾಃ ।
ತಸ್ಸೈವ ನಿತ್ಯಂ । ಶಿವರೂಪಮೀಡೇ ॥೯॥

ತ್ರ್ಯಂಬಕಂ ಯಜಾಮಹೇ ।
ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ।
ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

॥ ಶಿವಂ ಭೂಯಾತ್ ॥

॥ ಶಿವಂ ಶಾಂತಂ ॥



ಭುವನ ಗುರು ನಿಜಪಾಣಿತಲದಿಂ ।
ದವನಿಯನು ನೆರೆಸೋಂಕಲಾ ।
ವಿರ್ಭವಿಸಿದನು ।
ಶ್ರೀ ರುದ್ರಮುನಿದೇವ ।
ಏಕಾಂಮ್ರೇಶ ನಾಲಯದೇ ||೧||

ಜಗಜಗಿಸೆ ಫಣಿಯೊಳಗೆ ಭಸ್ಮವು ।
ಸೊಗಯಿಸಲು ಕೊರಳೊಳಗೆ ।
ರುದ್ರಾಕ್ಷಿಗಳ ಸರವದು ।
ಕನಕದೀಪ್ತಿಯ ಜಡೆಗಳೊಪ್ಪಿರಲು । ||೨||

ಬಗೆಗೊಳಿಸೆ ಮಸ್ತಕದ ಲಿಂಗವು ।
ಪಗಲೆರೆಯನನು ಪಳಿವ ಪೊಗರದು ।
ಮಿಗಿಲೆನಿಸಿ ಬಸವಂದಮುಣ್ಮಿಸೆ ।
ಮಗುವು ಚೆಲ್ವಾಯ್ತು ||೩||

|| ಓಂ ಓಂ ಓಂಕಾರಾಯ ನಮೋ ನಮಃ ||

|| ಶುಭಮಸ್ತು ||

---

ಸೂಚನೆ :—ನನ್ನಿಂದ ರಚಿಸಿ ಪ್ರಕಟಿಸಿರುವ ಪುಸ್ತಕಗಳು, ಶ್ರೀ ಮಹಾಂತರಮಠ, ಚಿಕ್ಕಪೇಟೆ, ಬೆಂಗಳೂರು, ಇವರಲ್ಲಿ ಕ್ರಯಕ್ಕೆ ಸಿಗುತ್ತವೆ.

ಈ ಪುಸ್ತಕದಲ್ಲಿ ಕಾಣುವ ತಪ್ಪುಗಳನ್ನು ಓದುಗರು ಕೃಪಯಾ ಮನ್ನಿಸ ಬೇಕೆಂದು ವಿನಂತಿ.

ಶ್ರೀ ಜಗದ್ಗುರು ಪಂಚಾಚಾರ್ಯರ್ಾಃ ಪ್ರಸೀದಂತು

॥ ಓಂ ನಮೋ ಭಗವತೇ ಶ್ರೀ ಜ|| ರೇಣುಕಾಚಾರ್ಯರ್ಾಯ ॥

**" ಸತ್ಯಮೇವೋದ್ಧರಾಮ್ಯಹಂ "**

**ಆಧ್ಯಾತ್ಮಿಕ ಶಿರೋರತ್ನ**

## ಟಿ. ಬಿ. ಬಸವರಾಜಯ್ಯನವರ

# ವಂದನಾರ್ಪಣ ಭಾಷಣ



ಆಂಧ್ರಪ್ರದೇಶದ ಕೊಲ್ಲಿಪಾಕಿ ಶ್ರೀ ಸೋಮನಾಥ ಜ್ಯೋತಿರ್ಲಿಂಗ ಮುಖದಿಂದ,
ಈಶೋಕ್ತಿಯಂತೆ ಅವತರಿಸುತ್ತಿರುವ ತ್ರಿಭುವನಾಚಾರ್ಯವರೇಣ್ಯ
ಶ್ರೀ ಆದಿ ಜಗದ್ಗುರು ರೇಣುಕಾಚಾರ್ಯರು.

**॥ ನ ಭೂತಸಂಘ ಸಂಸ್ಥಾನೋ । ದೇವಸ್ಯ ಪರಮಾತ್ಮನಃ ॥**

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



॥ ನಮೋ ಶ್ರೀ ವಿಶ್ವೇಶ್ವರ ಪಾದಪಂಕಜಂ ॥

ಅನ್ನಪೂರ್ಣಾರ್ಥಂ ಪ್ರಪನ್ನಾನಾಂ । ಯಾ ಸು ವಿದ್ಯಾ ಪ್ರದಾಯಿನೀ।
ಅಹರ್ನಿಶಮಹಂ ವಂದೇ । ತಾ ಮೀಶಾನ ಮನೋರಮಾಂ ॥

ಶ್ರೀಮದ್‌ರಂಭಾಪುರೀ ವೀರಸಿಂಹಾಸನಾಧೀಶ್ವರ ೧೧೦ಲ ಶ್ರೀ ಜಗದ್ಗುರು ಶ್ರೀ ಶ್ರೀ ಶ್ರೀ ವೀರಸೋಮೇಶ್ವರ ರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ದಿವ್ಯ ಅಡಿದಾವರೆಗಳಲ್ಲಿ ಹಾಗೂ ಶ್ರೀಕಾಶೀ ವಿಶ್ವಾರಾಧ್ಯ ಜ್ಞಾನ ಸಿಂಹಾಸನಾಧೀಶ್ವರ ಪರಂಪರಾನುಗತ ೧೧೦ಲ ಶ್ರೀ ಜಗದ್ಗುರು ಶ್ರೀ ಶ್ರೀ ಶ್ರೀ ಡಾ॥ ಚಂದ್ರಶೇಖರ ಶಿವಾಚಾರ್ಯ ದೇಶಿಕೇಂದ್ರ ಮಹಾಸ್ವಾಮಿಗಳ ಉಭಯ ಜಗದ್ಗುರುಗಳ ಶ್ರೀ ಪಾದಪದ್ಮಂಗಳಲ್ಲಿ ನಾನು ಅನನ್ಯ ಭಕ್ತಿಭಾವದಿಂದ ಅನಂತ ಶಿರಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಮಹಾಸ್ವಾಮಿಗಳೇ !

ಈ ದೈವ ಮಹಾಸಭೆಯನ್ನು ಅಲಂಕರಿಸಿರುವ ಪರಮ ಪೂಜ್ಯ **ಶಿವಾಚಾರ್ಯರ, ಮತ್ತು ಶ್ರೀ ಶ್ರೀ ಹರಗುರು ಚರಮೂರ್ತಿಗಳ** ಪಾದಾರವಿಂದಗಳಲ್ಲಿ ಭಕ್ತಿಪೂರ್ವಕ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇನೆ ಹಾಗೂ ಈ ಮಹಾ ಸಭೆಯಲ್ಲಿ ಪರಿಶೋಭಿಸುವ ಗಣ್ಯ "**ಅತಿಥಿ ದೇವೋ ಭವ**" ರಂತೆಸೆವ ಮಹನೀಯರಿಗೂ ನನ್ನ ಶರಣು ಶರಣಾರ್ತಿಗಳು.

ಶ್ರೀ ಸಿದ್ಧಾಂತಶಿಖಾಮಣಿಯಲ್ಲಿನ ಕೆಲವು ಆಯ್ದ ಶ್ಲೋಕಗಳಿಗೆ ಕನ್ನಡದ ಲಘು ವ್ಯಾಖ್ಯಾನವನ್ನು ಶ್ರೀ ಜಗದ್ಗುರು ರೇಣುಕಾಚಾರ್ಯರ ದಿವ್ಯ ಪ್ರೇರಣೆಯಂತೆ ರಚಿಸಿ ಪ್ರಕಟಪಡಿಸಿರುವ ಪುಸ್ತಕದ ಇಂದಿನ ಬಿಡುಗಡೆ ಮಹೋತ್ಸವಕ್ಕೆ ಆಗಮಿಸಿ ಈ ಶಿವಜ್ಞಾನ ಮಹಾಯಜ್ಞದಲ್ಲಿ ಭಾಗಿಗಳಾಗಿರುವ ತಮ್ಮೆಲ್ಲರಿಗೂ ನಾನು ಭಕ್ತಿಪೂರ್ವಕ ನಮಸ್ಕರಿಸುತ್ತೇನೆ.

"**ಮದ್‌ಜಿಹ್ವ ಸಿಂಹಾಸನಾಗ್ರೇ । ಉಪನಯತು ಸೋಕ್ತಿ ಧಾರಾಮುದಾರಾ ॥ ಮದ್ ಶಿವಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯಃ ಪಾದಸ್ತುತಿ । ಸುಕೃತೋದಾರತಾ ಶಾರದಾಂಬಾ ॥ ಓ ಬ್ರಹ್ಮನ ರಾಣಿ ಕಲ್ಯಾಣಿ ವಾಕ್ ಸುಧಾಸರಣಿ ॥ ಸೂಕ್ಷ್ಮತ್ರಯ ಶುಚಯೋ ತಸ್ಮೈ ನಮೋ ವಾಕ್ ತತ್ವ ತಂತವೇ । ವಿಚಿತ್ರೋ ಯಸ್ಯ ವಿನ್ಯಾಸೋ ವಿಧದಾತಿ ಜಗತ್ಪಟಂ ॥**" ಯೆಂಬಂತೆ ವಿರಾಜಮಾನಳಾದ ಶ್ರೀ ವೀಣಾಪಾಣಿ, ಕೃಪೆ ತೋರಿ ನನ್ನ ನಾಲಿಗೆಯ ಕೊನೆಯ ಮೊನೆಯೆಂಬ ರತ್ನ ಸಿಂಹಾಸನಾರೋಹಣದಿಂ ಸತತ ಕಂಗೊಳಿಸುತ್ತಾ, ಪರಮಪರತರ ಶಿವಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯವರ್ಯರು ಬೋಧಿಸಿರುವ **"ಲಿಂಗಾಂಗಸಾಮರಸ್ಯ"** ತತ್ವವನ್ನೊಳಗೊಂಡ, ಮಹಾಶಿವಾಚಾರ್ಯರ ಪಾದ ಸ್ತುತಿಯನ್ನು **"ಗಂಗಾಸಾಗರ ಸಂಗಮ ಭಕ್ತಿ"** ತೈಲಧಾರೆಯಂತೆ ಉಕ್ಕೇರಿಸಲು ನೆರವಾಗಬೇಕೆಂದು ಪ್ರಾರ್ಥಿಸುತ್ತೇನೆ. ಆಧ್ಯಾತ್ಮ ವಿದ್ಯಾಮಯಳೇ ! ದೇವೀ !! ನಮಸ್ತೇ.

**ಆತ್ಮಬಂಧುಗಳೇ !**

ಶ್ರೀ ಜಗದ್ಗುರು ರೇಣುಕಾಚಾರ್ಯರು " **ಆತ್ಮ ಹೃದಯೇ ಸ್ಫುರತಿ ದೀಪವತ್**" ಎಂದು ಬೋಧಿಸಿದ್ದಾರೆ. ಶುದ್ಧ ಸ್ಫಟಿಕದಂತೆ ಹಾಗೂ ಹವಳದ ಕಾಂತಿಯಂತೆ ಹೊಳೆಯುವ ನಮ್ಮೆಲ್ಲರ ಹೃನ್ಮಂದಿರದ ಮಧ್ಯೇ, "**ಆತ್ಮ** ಸ್ವಯಂಜ್ಯೋತಿ ಪರಂಜ್ಯೋತಿಯ ಚಿತ್ಪ್ರಭೆಯಿಂದ ತಾನೇ ತಾನಾಗಿ ನಿರಂತರ

ದೇದೀಪ್ಯಮಾನವಾಗಿ ಪ್ರಜ್ವಲಿಸುತ್ತಲಿದೆ." ಹೀಗಿದ್ದರೂ ಸಹ ಮಾನವ ಇದನ್ನರಿಯದೆ ಆಣವಾದಿ ಮುಮ್ಮಲಗಳಲ್ಲಿ ತೋಯ್ದು **"ಸಂಸಾರವೇ ಸಾರವೆಂದು** ಭ್ರಮಿಸಿ", ಊರ್ಧ್ವಗತಿಯ ರಾಜಮಾರ್ಗವ ಕಾಣದೆ ತತ್ತಳಿಸುತ್ತಲಿದ್ದಾನೆ ಎಂದು ಮಹಾಚಾರ್ಯರು **ಅಜ್ಞಾನ ನಿದ್ರೆಯಲ್ಲಿರುವ** ನಮ್ಮನ್ನು ಎಚ್ಚರಿಸಿರುವರು.

ಋಗ್ವೇದದಲ್ಲಿ ಈ ಬಗೆಗೆ ಒಂದು ಮಂತ್ರವಿದೆ. **"ಹಿರಣ್ಮಯೇನ ಪಾತ್ರೇಣ ಸತ್ಯಸ್ಯ ಮುಖಮಪಿಹಿತಂ".** ಅಂದರೆ, **"ಸತ್ಯಸ್ಯ ಮುಖಂ"** ನಮ್ಮ ಹೃದಯಾಂತರಾಳದಲ್ಲಿ ಹವಳದ ಕಾಂತಿಯಿಂದ ಪ್ರಜ್ವಲಿಸುವ **"ಪ್ರಾಣಲಿಂಗ ಅರ್ಥಾತ್ ಆತ್ಮಲಿಂಗದ"** ಮುಖದರ್ಶನವನ್ನು ಕಾಣಗೊಳಿಸದಂತೆ, ಅಜ್ಞಾನ ಗ್ರಂಥಿಗಳು ಹಿರಣ್ಮಯ ಪಾತ್ರೆಯೆಂಬ ವಿಶ್ವೋತ್ತರೋತ್ತರ ವಿಚಿತ್ರವಾದ ಜಗತ್ತೆಂಬ ಬಾಂಢ (ಮುಚ್ಚಳ)ದಿಂದ ನಮ್ಮ **"ಸ್ವಸ್ವರೂಪ ದರ್ಶನ"** ನಮಗೆ ಕಾಣಗೊಳಿಸಿದೆ; ಕಾರ್ಮೋಡಗಳು ಸೂರ್ಯನನ್ನು ಮುಚ್ಚುವಂತೆ, ಆಶಾಪಾಶಾದಿ ಕಪ್ಪು ತೆರೆಗಳೆಂಬ ಪಾಂಚಭೌತಿಕ ಪ್ರಪಂಚದ ಮಾಯಾಜಾಲದಲ್ಲಿ ತೊಡಗಿಸಿ, **"ಹಿರಣ್ಮಯೇನ ಪಾತ್ರೇಣ"** ಸತಿ, ಸುತ, ಗೃಹಾರಾಮ, ಧನ, ಕನಕ, ವಸ್ತು ವಾಹನಾದಿಗಳ ಮೇಲಿನ ಮೋಹ ವ್ಯಾಮೋಹವೆಂಬ ತೆರೆಗಳು **"ಪರಶಿವಬ್ರಹ್ಮವನ್ನು, "ಅಪಿಹಿತಂ"** ಗಟ್ಟಿಯಾಗಿ ಕಿಂಚಿತ್ತೂ ಕಾಣದಂತೆ ಮುಚ್ಚಿವೆಯೆಂದು ಶ್ರೀ ಜ|| ರೇಣುಕಾಚಾರ್ಯರು ಬೋಧಿಸಿದ್ದಾರೆ. ಹಿರಣ್ಮಯ ವ್ಯಾಮೋಹ ಅಂದರೆ, ಬಂಗಾರದ ಜಿಂಕೆಯ ದರ್ಶನ, ಶ್ರೀ ಸೀತಾ ರಾಮರನ್ನೂ ಸಹ ಚಕಿತಗೊಳಿಸಿ ದುಃಖಕ್ಕೀಡು ಮಾಡಿತು. ಆದ್ದರಿಂದ—

**"ಉತ್ತಿಷ್ಠತಾ ಉತ್ತಿಷ್ಠತಾ । ಜಾಗ್ರತ ಜಾಗ್ರತ ಪ್ರಾಪ್ಯ ।**
**ವರಾನ್ನಿ ಬೋಧತಾ ॥"**

ಎಂದು ಕಠೋಪನಿಷತ್ತು ನಮ್ಮನ್ನು ಎಚ್ಚರಿಸುತ್ತಲಿದೆ.

"ವೇದಾಂತಜನ್ಯ ಯದ್‌ಜ್ಞಾನಂ । ವಿದ್ಯೇತಿ ಪರಿಗೀಯತೇ ॥"

ವೇದಾಂತ ಮತ್ತು ಸಿದ್ಧಾಂತಜ್ಞಾನವೇ ವಿದ್ಯೆಯೆಂದೂ, ಇದಕ್ಕನ್ಯವಾದುದೆಲ್ಲಾ ಅವಿದ್ಯೆಯೆಂದು ಶ್ರೀ ಜ॥ ರೇಣುಕ ಭಗವತ್ಪಾದರು ಅಪ್ಪಣೆ ಕೊಡಿಸಿರುವರು. ಇದೇ ಅಂಶವನ್ನು ಈಶಾವಾಸ್ಯೋಪನಿಷತ್ತು—

"ವಿದ್ಯಾಂಚಾ ಅವಿದ್ಯಾಂಚಾ ಯಸ್ತದ್ವೇದೋಭಯಂ ಸಹ ।
ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾ ಅಮೃತಮಶ್ನುತೇ ॥"

ಎಂದು ಘೋಷಿಸಿದೆ. ಕಾಮ, ಕ್ರೋಧ, ಲೋಭ, ಮೋಹಾದಿ ಅಜ್ಞಾನಂಧಕಾರ, ಮೃತ್ಯು ಸ್ವರೂಪದ ಅವಿದ್ಯೆಯೆನಿಸಿ, ಅಸುರೀ ಸಂಪತ್ತಿನ ನೆಲೆವೀಡಾಗಿದೆ. ಇಂತಪ್ಪ ಕರಡಿ ಮುಷ್ಟಿಯ ಹಿಡಿತದಿಂದ ಪಾರಾಗುವ ವಿಧಾನವೆ "ಮೃತ್ಯುಂ ತೀರ್ತ್ವಾ" ಯೆನಿಸಿದೆ. ಕಾಮ್ಯ ಕರ್ಮಗಳು ಮಾನವನನ್ನು ಬಂಧನಕ್ಕೊಳಪಡಿಸಿ ದುಃಖ ಹೇತುವೆನಿಸಿರುವುವು. ಆದ್ದರಿಂದ ಶಾಸ್ತ್ರ "ನಿಷ್ಕಾಮ ಕರ್ಮ ಯೋಗಾಭಿದಂ । ತದೂರ್ಧ್ವರೇತ್ಯ ಫಲಂ", ಅಂದರೆ ಆಶಾಪಾಶ ರಹಿತ, ಫಲಾಪೇಕ್ಷೆ ಕೋರದ ನಿಷ್ಕಾಮ ಕ್ರಿಯೆಯು ಫಲ ದೂರವಿರುವುದು, ಭಕ್ತಿಮಾರ್ಗ ಸುಲಭವಿರುತ್ತೆ. ತ್ವತ್ಪ್ರೇಮಾತ್ಮಕ ಭಕ್ತಿರೇವ ಸತತಂ । ಸ್ವಾಧೀ ಯಸೀ ಶ್ರೇಯಸೀ ॥ ಯೆಂಬಂತೆ ಭಕ್ತಿ ಶ್ರೇಯಸ್ಕರವಿರುತ್ತೆ. "ಯದ್ಯದ್ ಕರ್ಮ ಕರೋಮಿ ತತ್ತದಖಿಲಂ । ಶಂಭೋ ತವಾರಾಧನಂ ॥" ಎಂಬಂತೆ, ಶಿವನ ಪಾದಾರವಿಂದಗಳಲ್ಲಿ ಪೂಜಾ ವೇಳೆಯಲ್ಲಿ ಎಲ್ಲಾ ಕರ್ಮಗಳನ್ನೂ ಶಿವನಿಗೆ ಅರ್ಪಿಸುತ್ತಾ ಬಂದಲ್ಲಿ, ಅಂತಃಕರಣದಿಂದ ಅರಿಷಡ್ವರ್ಗಗಳು ಕ್ರಮೇಣ ನಿರ್ಮೂಲವಾಗಿ ತೊಲಗಿ ಮನಸ್ಸು ಸ್ಫಟಿಕದಂತೆ ಶುದ್ಧವಾಗುವುದು. ಶುದ್ಧ ಮನಸ್ಸಿನಲ್ಲಿ; ಶುಭ್ರವಾದ ಕನ್ನಡಿಯಲ್ಲಿ ಮುಖ ಕಾಣುವಂತೆ ಪರಿಶುದ್ಧವಾದ ಮನಸ್ಸಿನಲ್ಲಿ "ಆತ್ಮ ಪ್ರತಿಫಲತಿ". ನಮ್ಮ ಸ್ವಸ್ವರೂಪ ದರ್ಶನವನ್ನು ಅಲ್ಲಿ ಕಾಣಬಹುದು. ಕಂಡಾಗ "ಆ ವಿದ್ಯೆಯು

ಅಮೃತಮಶ್ನುತೇ". ಸರನು ಶಿವನಾಗುವನು. ಅಂಗನು ಲಿಂಗರೂಪ ದಿಂದ ಅಮೃತಮಯನಾಗುವನು. ಇದು ಸತ್ಯಸ್ಯ ಸತ್ಯವಿರುತ್ತೆ. ಆದುದರಿಂದ ಶ್ರೀ ರೇಣುಕಶಿವಾಚಾರ್ಯರು "ವಿದ್ಯಾಯಾಂ ಶಿವ ರೂಪಾಯಾಂ" ಎಂದು ಬೋಧಿಸಿರುವರು. ಅಂತರಂಗದ, "ಅಂತರ ಜ್ಯೋತಿ ರವೋಯ | ಮೋಕಮಮೃತಂ | ಶಿವಾಖ್ಯಮಾಪೀಯತಾಂ ತತ್ಸೀತ್ವಾಪರಮಾಷಥಂ ವಿತನುತೇ | ನಿರ್ವಾಣ ಮಾತ್ಯಂತಿಕಂ. ಅಂದರೆ ಪರಿಶುದ್ಧವಾದ ಮನಸ್ಸಿನಲ್ಲಿ ಬುದ್ಧಿ ಸ್ಥಿರವಾಗಿ ನಿಲ್ಲುವುದು. ಇದರಿಂದ ಹೃದಯದ ಪದರುಗಳ ಮೇಲೆ ಪ್ರೊಳ್ಳೀ ಪ್ರಭಾವ ಬೀರಿ, ಹೃನ್ಮಂದಿರದಲ್ಲಿ ರಂಜಿಸುತ್ತಿರುವ "ಪರಶಿವಬ್ರಹ್ಮದ" ಸಾಕ್ಷಾತ್ಕಾರದ, ದಿವ್ಯಾನುಭವದಿಂದ ಅಂಗನು ಲಿಂಗರೂಪದಿಂದ ಸತತ ರಂಜಿಸುವನು. ಸತತ ರಂಜಿಸುವ ತಾದಾತ್ಮ್ಯ ಭಾವದಿಂ "ಅಮೃತಮಯನಾಗುವನು". ಆದ್ದರಿಂದನಾವೆಲ್ಲರೂ "ಅಮೃತ ಪುತ್ರರಿರುವೆವು. ಮೃತಪ್ರಾಯರಲ್ಲ." "ಶಿವಾಖ್ಯ ಮಾಪೀಯತಾಂ" ಅಂತರ್ಜ್ಯೋತಿಯೆನಿಸಿದ, "ಶಿವ ಶಿವ" ಯೆಂಬ ನಾಮಾಮೃತವನ್ನು ಪಾನ ಮಾಡುತ್ತಾ, ಮಾನಸಿಕವಾಗಿ, ಈ ಮಹಾ ವಾಕ್ಯವನ್ನು ಭಕ್ತಿಯಿಂದ ಜಪಿಸುತ್ತ ಲಿರಬೇಕು. ಇಂತಪ್ಪ ಶಿವಾನುಭವ, "ದುರ್ಲಭಾಂ ಪಾಪಿನಾಂಲೋಕೇ ಸುಲಭಾಃ ಪುಣ್ಯ ಕರ್ಮಣಾಂ" ಎಂದು ಮಹಾಚಾರ್ಯರು ಎಚ್ಚರಿಸಿರು ವರು. "ದೇಹದೊಳಗಿನ ತ್ರಿಕೂಟಗಿರಿಯೋ ಶ್ರೀಶೈಲ ಮಲ್ಲಿಕಾರ್ಜುನ ಗಿರಿಯಕ್ಕುಂ". ಅಂಗನು (ಜೀವಾತ್ಮನು) ಲಿಂಗರೂಪಿ ಶಿವನಿಂದ ಹೊರ ಬಂದಿರುವುದರಿಂದ ಅವನಲ್ಲಿಯೇ "ಗಂಗಾತರಂಗ ಭಂಗಿ ನ್ಯಾಯದಂತೆ ವಿಲೀನನಾಗುವನೆಂದು ಶ್ರೀ ಸಿದ್ಧಾಂತಶಿಖಾಮಣಿ ಬೋಧಿಸುತ್ತಲಿದೆ. "ಯತ್ರ ಜೀವಃ ಸ್ತತ್ರ ಶಿವಃ" ಜೀವಾತ್ಮನಿರುವೆಡೆಯಲ್ಲಿ ಶಿವನಿರ್ಪನೆಂಬಂಶ ಪ್ರಸಿದ್ಧ ವಿರುತ್ತೆ. "ಜೀವೋ ಬ್ರಹ್ಮೈವ ನ ಪರಃ" ಯೆಂಬುಕ್ತಿಯಂತೆ, ಶಿವಜೀವರು ಅವಿನಾಭಾವ ಸಂಬಂಧದಿಂದ ಅಭಿನ್ನರಿರುವರು, "ಅಂ, ಗಚ್ಛಯ ಇತಿ

**ಅಂಗಃ"** ಎಂಬ ಶಿವಾಗಮೋಕ್ತಿ; ಅಂಗನು (ಜೀವಾತ್ಮನು) "**ಅಂ**" ಅಕ್ಷರ ಸ್ವರೂಪಿಯಾದ ಪರಶಿವನತ್ತ, ಶಿವಾಭಿಮುಖಿಯಾಗಿ ಧಾವಿಸಿ; ನದಿಗಳು ಸಮುದ್ರದಲ್ಲಿ ವೇಗವಾಗಿ ಸಂಗಮಗೊಂಡು ವಿಲೀನವಾಗುವಂತೆ ಲಿಂಗಾಂಗಗಳು "**ಶಿಖಿ ಕರ್ಪೂರವತ್**" ಸಮರಸಾನಂದದಲ್ಲಿ ವಿಲೀನಗೊಳ್ಳುವುವು. ಇಂತಪ್ಪ ಪರಮ ಶಿವಯೋಗದ ರಹಸ್ಯವನ್ನು ಹೊರಸೂಸುತ್ತಾ "**ನ ಚ ಪುನರಾ ವರ್ತತೇ ! ನ ಚ ಪುನರಾ ವರ್ತತೇ**" ಎಂದು ಉಪನಿಷದಾದಿಗಳು ಘೋಷಿಸುತ್ತಲಿವೆ. ಅಂದರೆ, ಅಂಗ ಮಹಾಸತಿ ಲಿಂಗ ಪತಿದೇವನೊಂದಿಗೆ ಒಂದಾಗಿ ಕೂಡಿ ಸಮರಸವಾದ ಬಳಿಕ, ಪುನರಪಿ ಅಗಲುವಿಕೆ ಯೆಂಬುದಿಲ್ಲ ವೆಂದರ್ಥ. "**ನ ತೇಷಾಂ ಪುನರಾವೃತ್ತಿ ಘೋರ ಸಂಸಾರ ಮಂಡಲೇ**".

ಇದುವೇ ಶ್ರೀ ಷಟ್ಸ್ಥಲ ಸಿದ್ಧಾಂತದ ತಿರುಳು. ಇದುವೇ ಶ್ರೀ ಸಿದ್ಧಾಂತ ಶಿಖಾಮಣಿಯ ಹೃದಯತರಂಗ. ಶ್ರೀ ರೇಣುಕ ಗೀತೆಯ ಅಂತರ್ವಾಣಿ. ಮತ್ತಿದುವೇ ಸರ್ವ ಶಿವಾಗಮೋಪನಿಷದಾದಿಗಳ ಸಾರ. ಹಾಗೂ **ಶ್ರೀ ಸಿದ್ಧಾಂತಾಗಮದ** ಸಾರ ಸರ್ವಸ್ವ. ಅಂದರೆ, ಪಂಚಾಮೃತದ ರಸಾಯನ ದೂಟದೌತಣ ಪ್ರಸಾದ. **ಶಿವಂ ಶಾಂತಂ.**

**ಮಹನೀಯರೇ !**

ಈ ದಿವ್ಯ ಕೃತಿಯ **5,000** ಪ್ರತಿಗಳನ್ನು ಕೃಪಯಾ ಸುಂದರವಾಗಿ ಅಚ್ಚು ಮಾಡಿಸಿ. ಶ್ರೀ ಸಿ. ಶಿ. ಯ ಪರಿ. ೨೦ ರ ಶ್ಲೋ. 74 ರಲ್ಲಿ ಕಂಡಂತೆ. ಶ್ರೀ ಜಗದಾಚಾರ್ಯರ ಪರಮ ಜೀವಂತ ಆದೇಶವನ್ನು ಭಕ್ತಿಪೂರ್ವಕ ಈಡೇರಿಸಲು, ಯಾರ ಮನವೊಲಿದು ಇಂತಪ್ಪ ಶಿವಯಜ್ಞದಲ್ಲಿ ಭಾಗಿಗಳಾಗು ವರೋ, ಹಾಗೂ ಈ ವಿಶ್ವಧರ್ಮವನ್ನು ವಿಶ್ವದ ಮಾನವಕೋಟಿಯ ಪ್ರಶಾಂತ ಮನೋಮಂಡಲದಲ್ಲಿ ಪವಿತ್ರ ಶ್ರೀ ಗಂಗಾ ಯಮುನಾ ನದಿಗಳ ಪ್ರವಾಹದಂತೆ ಉಕ್ಕೇರಿಸಲು ಯತ್ನಿಸುವರೋ ಅಂಥಾ ಪುಣ್ಯಾತ್ಮರಿಗೆ ಕೋಟಿ ಪುಣ್ಯ

ಲಭಿಸುವುದರೊಂದಿಗೆ ಶ್ರೀ ಜಗದಾಚಾರ್ಯರು ಆ ಭಕ್ತರನ್ನು ಸಂಪ್ರೀತರಾಗಿ ಹರಸುವರು. ಇದು ಸತ್ಯವಿರುತ್ತೆ.

ಕ್ಷಮಾವಿಭೂಷಿತರೇ !

ಪರಮ ವೀರಶೈವ ಧರ್ಮವನ್ನೊಳಗೊಂಡ ಇಂದಿನ ಮಹಾ ಗ್ರಂಥದ ಬಿಡುಗಡೆ ಮಹೋತ್ಸವವನ್ನು ಶ್ರೀ ಜ|| ಪಂಚಾಚಾರ್ಯರು ನಲಿಯುವಂತೆ ಶ್ರೀ ಮಹಾಂತರಮಠದ ಟ್ರಸ್ಟಿಗಳು ಕೃಪೆಯಾ, ವಿಜೃಂಭಣೆಯಿಂದ ನೆರವೇರಿ ಸಿದ್ಧಕ್ಕೆ, ಎಲ್ಲಾ ಮಹೋದಯರಿಗೂ ಸತತ ನಾನು ಚಿರಋಣಿಯೆಂದು ಹೃತ್ಪೂರ್ವಕ ಅವರನ್ನು ಅಭಿನಂಧಿಸುತ್ತೇನೆ. ಸರ್ವರಿಗೂ ಅನಂತ ಶರಣಾರ್ತಿಗಳು.

"ಸರ್ವೇಜನಾಃ ಸುಖಿನೋ ಭವಂತು ।
ಲೋಕಾ ಸ್ಸಮಸ್ತಾ ಸನ್ಮಂಗಳಾನಿ ಭವಂತು ॥"

" ಅಂತೇ ಯಾ ಮತಿಃ ಸ ಗತಿಃ "

"ಶ್ರೀಕಂಠನಾಥ ಜಗತಾಂ । ಕೃಪಯಾ ಕ್ಷಮಸ್ವ॥ "

ಟಿ. ಬಿ. ಬಸವರಾಜಯ್ಯ.

ತಾ.............................

॥ ವಂದೇ ರೇಣುಕಂ ॥ ॥ ವಂದೇ ಮಾತರಂ ॥

॥ ಶಿವಂ ಭೂಯಾತ್ ॥